# ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಕರ್ನಾಟಕ ದಲಿತ ಚಳುವಳಿ ಮತ್ತು ಸಾಹಿತ್ಯ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

ಎಚ್. ಟಿ. ವೆಂಕಟೇಶ ಮೂರ್ತಿ

ಮಾರ್ಗದರ್ಶಕರು

ಡಾ. ಕರೀಗೌಡ ಬೀಚನಹಳ್ಳಿ

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು

ಭಾಷಾಂತರ ವಿಭಾಗ, ಭಾಷಾನಿಕಾಯ






ಭಾಷಾನಿಕಾಯ

ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

೨೦೦೦

# ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಕರ್ನಾಟಕ ದಲಿತ ಚಳುವಳಿ ಮತ್ತು ಸಾಹಿತ್ಯ

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

ಎಚ್.ಟಿ. ವೆಂಕಟೇಶ ಮೂರ್ತಿ





ಮಾರ್ಗದರ್ಶಕರು

ಡಾ. ಕರೀಗೌಡ ಬೀಚನಹಳ್ಳಿ

ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು

ಭಾಷಾಂತರ ವಿಭಾಗ, ಭಾಷಾ ನಿಕಾಯ





ಭಾಷಾನಿಕಾಯ

ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

೨೦೦೦




## ಸಂಶೋಧಕರ ದೃಢೀಕರಣ ಪತ್ರ

ಶ್ರೀ ಎಚ್.ಟಿ. ವೆಂಕಟೇಶ ಮೂರ್ತಿ ಯಾದ ನಾನು ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಕರ್ನಾಟಕ ದಲಿತ ಚಳುವಳಿ ಮತ್ತು ಸಾಹಿತ್ಯ ಎಂಬ ಶೀರ್ಷಿಕೆಯ ಈ ಪಿಎಚ್.ಡಿ. ಮಹಾಪ್ರಬಂಧವನ್ನು ಪ್ರೊ. ಕರೀಗೌಡ ಬೀಚನಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಭಾಷಾ ನಿಕಾಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೫.೫.೨೦೦೦
ಸ್ಥಳ : ವಿದ್ಯಾರಣ್ಯ

ಎಚ್.ಟಿ. ವೆಂಕಟೇಶ ಮೂರ್ತಿ
ಸಂಶೋಧಕರು
ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಎಚ್.ಟಿ. ವೆಂಕಟೇಶ ಮೂರ್ತಿ ಇವರು **ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಕರ್ನಾಟಕ ದಲಿತ ಚಳುವಳಿ ಮತ್ತು ಸಾಹಿತ್ಯ** ಎಂಬ ಶೀರ್ಷಿಕೆಯ ಈ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೫.೫.೨೦೦೦
ಸ್ಥಳ : ವಿದ್ಯಾರಣ್ಯ


**ಡಾ. ಕರೀಗೌಡ ಬೀಚನಹಳ್ಳಿ**
ಮಾರ್ಗದರ್ಶಕರು
ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು
ಭಾಷಾಂತರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಕೃತಜ್ಞತೆಗಳು

ಉತ್ತರ ಕರ್ನಾಟಕದ ಅನುಭವ ನನಗೆ ತೀರಾ ಹೊಸದು. ಈ ಅನುಭವದೊಂದಿಗೆ ಇಲ್ಲಿನ ಭಿನ್ನ ಸಂಸ್ಕೃತಿಗಳನ್ನು ನೋಡುತ್ತಾ ೧೯೯೬-೯೭ನೇ ಇಸವಿಯಲ್ಲಿ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗಕ್ಕೆ ಪಿಎಚ್.ಡಿ ಆಂತರಿಕ ಅಭ್ಯರ್ಥಿಯಾಗಿ ಸೇರಿಕೊಂಡೆ. ಈ ನನ್ನ ಪಿಎಚ್.ಡಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಗಳಾದ ಡಾ.ಚಂದ್ರಶೇಖರ ಕಂಬಾರ ಅವರಿಗೆ ಮತ್ತು ಈಗಿನ ಕುಲಪತಿ ಡಾ.ಎಂ.ಎಂ.ಕಲಬುರ್ಗಿ ಅವರಿಗೆ ನನ್ನ ಮೊದಲ ಕೃತಜ್ಞತೆಗಳು ಸಲ್ಲುತ್ತವೆ.

ಈ ಮಹಾಪ್ರಬಂಧವನ್ನು ಸಿದ್ಧಪಡಿಸಲು ಮಾರ್ಗದರ್ಶನವನ್ನು ಮಾಡಿದ ಭಾಷಾಂತರ ವಿಭಾಗದ ಪ್ರಾಧ್ಯಾಪಕರು ಮತ್ತು ಪ್ರೀತಿಯ ಗುರುಗಳಾದ ಪ್ರೊ. ಕರೀಗೌಡ ಬೀಚನಹಳ್ಳಿಯವರಿಗೆ ನನ್ನ ಕೃತಜ್ಞತೆಗಳು. ನನ್ನ ಪಿಎಚ್.ಡಿ. ಅಧ್ಯಯನದ ನೋಂದಣಿಗೆ ಪೂರ್ವಭಾವಿಯಾಗಿ ಗುಣಾಂಕಗಳನ್ನು ಪಡೆಯಲು ನನಗೆ ಮೇಲ್ವಿಚಾರಕರಾಗಿದ್ದ ಪ್ರೊ.ಟಿ.ಎಸ್.ಸತ್ಯನಾಥ್ ಮತ್ತು ಡಾ.ರಹಮತ್ ತರೀಕೆರೆ ಅವರಿಗೆ ನನ್ನ ಕೃತಜ್ಞತೆಗಳು.

ಎಂ.ಎ. ಓದುವ ಹೊತ್ತಲ್ಲಿ ಪ್ರೊ. ಕಾಳೇಗೌಡ ನಾಗವಾರ ಅವರ ವೈಚಾರಿಕತೆಯು ಪ್ರಭಾವಿಸಿತು. ಅವರ ಪ್ರಭಾವವು ಸಾಹಿತ್ಯ, ಸಂಸ್ಕೃತಿ, ವಿಮರ್ಶೆ ಮತ್ತಿತರ ಚಟುವಟಿಕೆಗಳ ಬಗ್ಗೆ ತೊಡಗಿಕೊಳ್ಳಲು ನನಗೆ ಸಹಾಯಕವಾಯಿತು. ಈ ಸಂದರ್ಭದಲ್ಲಿ ಅವರನ್ನು ನೆನಸಿಕೊಳ್ಳುತ್ತೇನೆ.

ಸಂಶೋಧನೆ ಮಾಡಲು ಆಸಕ್ತಿ ಇದ್ದ ನನಗೆ ಕನ್ನಡ ವಿಶ್ವವಿದ್ಯಾಲಯವು ಪಿಎಚ್.ಡಿ. ಅಧ್ಯಯನ ಮಾಡಲು ಅವಕಾಶ ನೀಡಿತು. ಹಾಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕೃತಜ್ಞನಾಗಿದ್ದೇನೆ.

ಕನ್ನಡ ವಿಶ್ವವಿದ್ಯಾಲಯದ ದಿನಮಾತು, ಹೊಸಮಾತು, ಕಮ್ಮಟ, ವಿಚಾರ ಸಂಕಿರಣ ಹಾಗೆಯೇ ಇಲ್ಲಿಯ ಅಧ್ಯಾಪಕ ಮತ್ತು ಸಂಶೋಧಕರೊಂದಿಗಿನ ಮಾತುಕತೆ, ಚರ್ಚೆಗಳು ನನ್ನ ಆಲೋಚನೆ ಮತ್ತು ಚಿಂತನೆಯನ್ನು ಬೆಳಸಿವೆ; ಇದಕ್ಕೆ ಇಲ್ಲಿಯ ಬೌದ್ಧಿಕ ವಾತಾವರಣ ಹಾಗೂ ಹೊರಗಿನ ಪರಿಸರವೂ ಕಾರಣವಾಗಿದೆ.

ಹಾಗೆಯೇ ಪ್ರೊ.ಕೆ.ವಿ.ನಾರಾಯಣ, ಪ್ರೊ.ಹಿ.ಚಿ. ಬೋರಲಿಂಗಯ್ಯ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಪ್ರೊ.ಓ.ಎಲ್. ನಾಗಭೂಷಣಸ್ವಾಮಿ, ಪ್ರೊ. ಎಚ್.ಎಸ್. ರಾಘವೇಂದ್ರರಾವ್, ಡಾ. ಶಿವರಾಮ್ ಪಡಿಕ್ಕಲ್, ಶ್ರೀ ಬಾಲಸುಬ್ರಮಣ್ಯಂ ಇವರ ಪ್ರೀತಿ ವಿಶ್ವಾಸಗಳು ನನ್ನ ಬರವಣಿಗೆಯನ್ನು ರೂಪಿಸಿವೆ. ಇವರಿಗೆ ನಾನು ಆಭಾರಿಯಾಗಿರುತ್ತೇನೆ.

ನಾನು ಪಿಎಚ್.ಡಿ. ವಿದ್ಯಾರ್ಥಿಯಾಗಿ ಸೇರಿದ ಮೇಲೆ ಕನ್ನಡ ಭಾಷೆ ಮತ್ತು ಸಾಹಿತ್ಯ ವಿಭಾಗದ ಅಧ್ಯಾಪಕರಾದ ಡಾ.ಅಮರೇಶ ನುಗುಡೋಣಿ, ಡಾ.ಬಿ.ಎಂ.ಪುಟ್ಟಯ್ಯ, ಡಾ.ರಾ.ವೆಂಕಟೇಶ ಇಂದ್ವಾಡಿ, ಶ್ರೀ ಶಿವಾನಂದ ವಿರಕ್ತಮಠರು ನನ್ನನ್ನು ತಮ್ಮ ಮನೆಯ ಸದಸ್ಯನಂತೆ ಬಹಳ ಪ್ರೀತಿಯಿಂದ ನೋಡಿಕೊಂಡಿದ್ದಾರೆ. ಹಾಗೆಯೇ ನಾನು ಅವರಿಂದ ಕಲಿತದ್ದು ತುಂಬಾ ಇದೆ. ಅದು ನನ್ನಲ್ಲಿದ್ದ ಸಾಹಿತ್ಯಿಕ ಮತ್ತು ಸಂಶೋಧನಾತ್ಮಕ ಬರವಣಿಗೆಯನ್ನು ಅರಳಿಸಿದೆ.

ನನ್ನ ಗೆಳೆಯರು ನನ್ನ ತಿಳುವಳಿಕೆಯ ಒಂದು ಭಾಗವಾಗಿದ್ದಾರೆ. ಅವರು ಹರಿಶ್ಚಂದ್ರ ಎಸ್.ಡಿ, ಪ್ರಭಾಕರ, ತಿಪ್ಪೇಸ್ವಾಮಿ, ಪಟೇಲ್ರು, ರಾಜಕುಮಾರ, ಚಂದ್ರು, ಮ್ಯಾಗೇರಿ, ಒಡೆಯರ್, ಕೃಷ್ಣ, ಕುಮಾರ, ಎರ್ರಿಸ್ವಾಮಿ, ಬಸವರಾಜು ಮುಂತಾದ ಆತ್ಮೀಯರು. ಇವರು ಹಲವು ರೀತಿಯಲ್ಲಿ ಸಹಕಾರಿಯಾಗಿದ್ದಾರೆ.

ಈ ಮಹಾಪ್ರಬಂಧವನ್ನು ಕಂಪ್ಯೂಟರ್‌ಗೊಳಿಸಿದ ವಿಜಯೇಂದ್ರ ಎಸ್.ಕೆ. ಅವರಿಗೆ, ಕ.ವಿ.ವಿ. ಗ್ರಂಥಾಲಯದ ಯು.ಮಲ್ಲಿಕಾರ್ಜುನ ಮತ್ತು ಎಂ.ಸಿ.ಗುಡಿಮನಿ ಅವರಿಗೆ, ನನ್ನ ಅಧ್ಯಯನದ ಅವಧಿಯಲ್ಲಿ ನಮ್ಮ ವಿಭಾಗದಲ್ಲಿ ಚೆನ್ನಾಗಿ ನೋಡಿಕೊಂಡ ಜಿ. ಸತ್ಯನಾರಾಯಣ ಶೆಟ್ಟಿ, ಜಿ.ಕೆ. ಶಂಕರ್, ರೇಖಾಬೋಜಾಶೆಟ್ಟರ್ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ.

ಹತ್ತು ಹಲವು ಕಷ್ಟಗಳ ನಡುವೆ, ಆ ಕಷ್ಟಗಳನ್ನೆಲ್ಲಾ ತಮ್ಮ ಒಡಲಲ್ಲೇ ಇಟ್ಟುಕೊಂಡು ಶಿಕ್ಷಣವೇ ಮುಖ್ಯವೆಂದು ನನ್ನ ಓದು-ಬರಹವನ್ನು ಅದ್ಯಾವುದೋ ಮುಗ್ಧತೆಯಿಂದಲೋ, ಬೆರಗಿನಿಂದಲೇ ನೋಡಿದವರು ನನ್ನ ತಾಯಿ, ತಂದೆ ಮುಖ್ಯವಾಗಿದ್ದಾರೆ. ನನ್ನ ಈ ಸ್ಥಿತಿಗೆ ಅವರ ಕಾಣಿಕೆ ದೊಡ್ಡದು. ಅವರ ಬದುಕಿನ ಅನುಭವ, ಹಾಗೆಯೇ ನನ್ನ ತಂಗಿಯರ, ತಮ್ಮಂದಿರ ಪ್ರೀತಿಯು ಬಹಳ ದೊಡ್ಡದು. ಇವರು ನನಗೆ ಸ್ಫೂರ್ತಿ.

`ಏನೋ ಜಾಸ್ತಿ ಓದ್ತಾವುನಂತೆ! ಇನ್ನೂ ಕೆಲುಸಕ್ಕೆ ವೋಗಕ್ಕೆ ಎಷ್ಟೋದ್ಬೇಕು? ಇವುನೋದ್ತಿರದ್ಕೆ ದೊಡ್ಕೆಲುಸ ಸಿಕ್ತದಂತೆ! ಹೀಗೆ ಹಲವು ಪ್ರಶ್ನೆ, ಉತ್ತರ, ಕಲ್ಪನೆಯನ್ನು ಕಟ್ಟಿಕೊಂಡು ನನಗೊಂದು ಉತ್ತಮ ಸ್ಥಿತಿ ಸಿಗಲೆಂದು ಕಾಯುತ್ತಿರುವ ನನ್ನ ಮುಗ್ಧ ಸಂಬಂಧಿಕರನ್ನು, ಸಮುದಾಯದವರನ್ನು ಮನಸಾರೆ ನೆನೆಯುತ್ತೇನೆ.

**— ವೆಂಕಟೇಶ ಮೂರ್ತಿ ಎಚ್. ಟಿ.**

# ಪರಿವಿಡಿ

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

## ಅಧ್ಯಯನದ ಉದ್ದೇಶ

ಇದು ಬದಲಾಗುತ್ತಿರುವ ಇಂದಿನ ಸಾಂಸ್ಕೃತಿಕ ಸಂದರ್ಭವನ್ನು ಕುರಿತ ಅಧ್ಯಯನ. ಸಾಂಸ್ಕೃತಿಕ ಅಧ್ಯಯನದಲ್ಲಿ ಮಾನವನ ಜೀವನ ಕ್ರಮ ಹಾಗೂ ಜೀವನ ವಿಧಾನಗಳು ಕಂಡುಬರುತ್ತವೆ. ಅಂದರೆ ಈ ಹಿಂದೆ ಅವನಿಗೆ ಒಂದು ಜೀವನ ಕ್ರಮವಿದ್ದು, ಅದಕ್ಕೆ ಪೂರಕವಾದ ಜೀವನ ಇದ್ದದ್ದು ಕಂಡುಬರುತ್ತದೆ. ಅವು ನಂತರದ ಬೆಳವಣಿಗೆಯ ಹಂತದಲ್ಲಿ ಬದಲಾವಣೆಯು ಪ್ರಕ್ರಿಯೆಗನುಗುಣವಾಗಿ ಇವೆ. ಈ ಬದಲಾವಣೆಯು ಪರಿಸ್ಥಿತಿಗೆ ತಕ್ಕಂತೆ ವಿಭಿನ್ನ ಅಸ್ತಿತ್ವವನ್ನು ಪಡೆದುಕೊಳ್ಳುತ್ತವೆ. ಅವುಗಳನ್ನು ಮಾನವನ ಸಾಂಸ್ಕೃತಿಕ ಬದಲಾವಣೆಯ ಹಂತಗಳಲ್ಲಿ ಗುರ್ತಿಸಬಹುದು. ಹೀಗೆ ಗುರ್ತಿಸುವಲ್ಲಿ ಬದಲಾವಣೆಯ ಸಾಂಸ್ಕೃತಿಕ ಸಂದರ್ಭದ ಜೀವನ ಕ್ರಮ ಯಾರ? ಯಾರಿಗೆ? ಎಷ್ಟರ ಮಟ್ಟಿಗೆ ಸೂಕ್ತವಾಗಿ ಅನ್ವಯಿಸುತ್ತದೆ? ಎಂಬ ಪ್ರಶ್ನೆಗಳನ್ನು ಹಾಕಿಕೊಂಡು ಅಧ್ಯಯನದಲ್ಲಿ ವಿವರಿಸಲಾಗುವುದು. ಒಟ್ಟಿನಲ್ಲಿ ಈ ಅಧ್ಯಯನವನ್ನು 'ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭವನ್ನು ಕುರಿತ ಅಧ್ಯಯನ'ವೆಂದು ಹೇಳಬಹುದು. ಸಾಂಸ್ಕೃತಿಕ ಎಂಬ ಪದವನ್ನು ಸಾಮಾಜಿಕ, ಆರ್ಥಿಕ, ರಾಜಕೀಯ ಹಿನ್ನೆಲೆಗಳನ್ನೊಳಗೊಂಡ ಬದುಕನ್ನು ಕುರಿತಂತೆ ವಿವರಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಮಾನವನ ಬದುಕಿಗೆ ಒಂದು ದೊಡ್ಡ ಇತಿಹಾಸವೇ ಇದೆ. ಅವನ ಬೆಳವಣಿಗೆಗೆ ಮತ್ತು ಆ ಬೆಳವಣಿಗೆಯ ಹಂತಕ್ಕೆ ಮುಖ್ಯವಾಗಿ ಕಾರಣವಾದದ್ದು ಆತನ ಭೌತಿಕ ಚಟುವಟಿಕೆ. ಇದನ್ನು ಮಾನವನ ನಾಗರಿಕತೆಯ ಬೆಳವಣಿಗೆಯ ಹಂತದಿಂದ ಗುರ್ತಿಸಬಹುದು. ಈ ಭೌತಿಕ ಚಟುವಟಿಕೆ ಮಾನವನ ಲೋಪದೋಷಗಳನ್ನು ಹೆಕ್ಕಿ ಅವನ ಅರಿವಿನ ದಿಗಂತವನ್ನು ಹಿಗ್ಗಿಸಲೆತ್ನಿಸಿತು. ಹಾಗೆಯೇ ಅವನ ಬದುಕಿನ ಅನನ್ಯತೆಗೆ ಕಾರಣವಾಯಿತು. ಈ ಭೌತಿಕ ಚಟುವಟಿಕೆಯು ತನ್ನ ಬೆಳವಣಿಗೆಯ ಕಾಲಮಾನಗಳಲ್ಲಿ ವಿವಿಧ ಆಯಾಮಗಳನ್ನು, ವಿವಿಧ ಮಜಲುಗಳನ್ನು ಪಡೆದು ಹೊಸರೂಪವನ್ನು ಪಡೆಯಿತು. ಭಾರತದ ಸಂದರ್ಭದಲ್ಲಿ ಬ್ರಿಟೀಷರ ಆಗಮನದಿಂದ ದೇಶೀಯ ಅರಿವು ಹಲವು ದಿಕ್ಕುಗಳನ್ನು ರೂಪಿಸಿಕೊಂಡಿತು. ಈ ಸಂದರ್ಭದಲ್ಲಿ ಬ್ರಿಟೀಷರು ನಮ್ಮ ಸಮಾಜದ ಮೇಲೆ ಸಾಧಿಸಿದ ನಿಯಂತ್ರಣ ಮತ್ತು ಪ್ರಚಂಡ ರಾಜಕೀಯ ಶಕ್ತಿಯಿಂದ ದೇಶವನ್ನೇ ವಸಾಹತುವನ್ನಾಗಿಸಿಕೊಂಡು ಆಳ್ವಿಕೆ ನಡೆಸಿರುವುದು ಗಮನಾರ್ಹವಾಗಿದೆ.

ಭಾರತದಲ್ಲಿ ಬ್ರಿಟೀಷರ ಆಳ್ವಿಕೆಯನ್ನು ದೇಶೀಯರು ಪ್ರಶ್ನಿಸುವ ಹೊತ್ತಿಗೆ ಇಲ್ಲಿ ಸ್ಥಾಪನೆಗೊಂಡ ವಸಾಹತುಶಾಹಿ ಆಗಲೇ ಇನ್ನೂರು ವರ್ಷವನ್ನು ಮೀರಿತ್ತು. ಸಮಸ್ಯೆಯನ್ನು ಪ್ರಶ್ನಿಸುವ ಮತ್ತು ಯೋಚಿಸುವ ದಿನಗಳು ನಮ್ಮಲ್ಲಿ ತಡವಾಯಿತು. ಇದಕ್ಕೆ ಆಳುವ ವರ್ಗಗಳು, ಪುರೋಹಿತ ಹಾಗೂ ಊಳಿಗಮಾನ್ಯ ವ್ಯವಸ್ಥೆಯೇ ಕಾರಣ ಎನ್ನಬಹುದು. ಅಂದಿನ ಭಾರತದಲ್ಲಿದ್ದ ವಿಘಟಿತ ರಾಜಕೀಯ ವ್ಯವಸ್ಥೆ ಮತ್ತು ದೇಶೀಯ ಸಾಂಸ್ಕೃತಿಕ ವೈವಿಧ್ಯತೆಯೂ ಕಾರಣ ಎನ್ನಬಹುದು. ಸ್ವಾತಂತ್ರ್ಯ ಪೂರ್ವದಲ್ಲಿ ಇಂದಿನ ಭಾರತದ ನಕ್ಷೆಯು ಈಗಿನ ಸ್ವರೂಪದಲ್ಲಿ ಇರಲಿಲ್ಲ. ಹಾಗಾಗಿ ಇಲ್ಲಿ ಒಂದು ರಾಜಕೀಯ ವ್ಯವಸ್ಥೆಯಿಲ್ಲದೇ ದೇಶದ ತುಂಬಾ ಹಲವು ಭಾರತಗಳು ಇದ್ದವು. ಅವು ಇಂದಿನ ಚರಿತ್ರೆಯ ಪುಟಗಳಲ್ಲಿ ರಾಜರು, ಪಾಳೇಗಾರರು, ಜಮೀನ್ದಾರರು ಮುಂತಾದವರ ಆಳ್ವಿಕೆಯಲ್ಲಿ ಸೇರಿಕೊಂಡಿರುವುದು ಕಾಣಸಿಗುತ್ತವೆ.

ಈ ಸಂದರ್ಭದಲ್ಲಿ ದೇಶದ ನಾನಾ ಭಾಗಗಳಲ್ಲಿ ಹಲವು ರಾಜಮನೆತನಗಳು, ಪಾಳೇಗಾರರು, ಜಮೀನ್ದಾರರು ಮುಂತಾದವರು ಯಜಮಾನಿಕೆಯನ್ನು ನಡೆಸಿದ್ದನ್ನು ನೋಡುತ್ತೇವೆ. ಹಾಗೆಯೇ ಪ್ರಜೆ ಮತ್ತು ಪ್ರಭು, ಶೋಷಕ ಮತ್ತು ಶೋಷಿತರ ನಡುವಿನ ಅಂತರ ಕಾಪಾಡಿಕೊಂಡು ಬಂದಿದ್ದನ್ನು ಸಹ ನೋಡುತ್ತೇವೆ. ಇದಕ್ಕೆ ಆಳುವ ವರ್ಗಗಳು ರೂಪಿಸಿಕೊಂಡ ಸಾಮಾಜಿಕ, ರಾಜಕೀಯ ನೀತಿ ನಿಯಮಗಳು ಕಾರಣವಾಗುತ್ತವೆ. ಈ ಸಂದರ್ಭದಲ್ಲಿ ಕೆಳ ಸಮುದಾಯಗಳು ಪರರ ಹಿತಕ್ಕೆ ತಮಗೆ ಅರಿವಿಲ್ಲದಂತೆಯೇ ದುಡಿದವು. ಇವರು ಜಮೀನ್ದಾರರಿಂದ, ಮೇಲು ಜಾತಿಯವರಿಂದ ಹಾಗೂ ವಸಾಹತುಶಾಹಿಯ ಹಿಡಿತಕ್ಕೂ ಸಿಲುಕಿದರು. ಈ ಕೆಳ ಸಮುದಾಯಗಳು ಈ ಸಂದರ್ಭದಲ್ಲಿ ಪ್ರಜಾಪ್ರಭುತ್ವ ಹಾಗೂ ಆಧುನಿಕ ನಾಗರಿಕತೆಯ ಬದುಕಿಗೆ ಯೋಚಿಸದ ಸ್ಥಿತಿಯನ್ನು ತಲುಪಿದವು. ಈ ಕೆಳ ಸಮುದಾಯಗಳು ಅದರಲ್ಲೂ ದಲಿತ ಸಮುದಾಯಗಳು ಪ್ರಜಾಪ್ರಭುತ್ವದ ಸಂದರ್ಭದಲ್ಲಿ ಆಳುವ ವರ್ಗದವರಿಂದ ಮುಕ್ತಿಪಡೆಯಲು ನಡೆಸಿದ ಹೋರಾಟವನ್ನು ಇಲ್ಲಿನ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇವುಗಳ ಹಿನ್ನೆಲೆಯು ಔಪಚಾರಿಕ ಆಧುನಿಕ ಶಿಕ್ಷಣದಿಂದ ನಡೆದದ್ದು ಎಂದು ಹೇಳಬಹುದು.

ಮಾನವನ ಆರ್ಥಿಕ ಸ್ಥಿತಿ ಆಧಾರದ ಮೇಲೆ ಅವನ ಸಾಮಾಜಿಕ ವ್ಯವಸ್ಥೆ ರೂಪುಗೊಳ್ಳುತ್ತದೆ. ಇದು ವ್ಯಕ್ತಿಯ ಬದುಕಿನ ವಾಸ್ತವ ಸ್ಥಿತಿ. ಇದನ್ನು ಇಂದಿನ ಬದಲಾಗುತ್ತಿರುವ ಜೀವನ ವಿಧಾನದಲ್ಲಿ ನವನಾಗರಿಕತೆ ತಂದೊಡ್ಡುವ ಸವಾಲುಗಳ ಹಿನ್ನೆಲೆಯಲ್ಲಿ ಮನುಷ್ಯನ ಹುಡುಕಾಟವನ್ನು ನೋಡಲಾಗಿದೆ. ಅಂದರೆ ಅವನ ಮೂಲಭೂತ ಅವಶ್ಯಕತೆಗಳು ಇಲ್ಲಿ ಮುಖ್ಯವಾಗುತ್ತವೆ. ಏಕೆಂದರೆ ಬದಲಾವಣೆಯು ಜಗತ್ತಿನ ವೇಗದ ಚಲನೆಗೆ ಅನಿವಾರ್ಯವಾಗಿ ಒಳಗಾಗಿರುತ್ತದೆ. ವ್ಯಕ್ತಿ ಮೊದಲು ನೈಸರ್ಗಿಕ ಸಂಪನ್ಮೂಲಗಳ ಅಗತ್ಯ ವಸ್ತುವಿಗಾಗಿ ತೊಡಗುತ್ತಾನೆ. ಈ ಕ್ರಿಯೆ ವ್ಯಕ್ತಿಯ ಸಾಂಸ್ಕೃತಿಕ ಬದಲಾವಣೆಗೆ ತಕ್ಕಂತೆ ಹುಡುಕಾಟ ನಡೆಯುತ್ತದೆ. ಇದು ಪ್ರಪಂಚದ ವೈವಿಧ್ಯಮಯ ಜೀವನಕ್ಕೆ, ವ್ಯಕ್ತಿಯ ಸಮಕಾಲೀನ ಬೆಳವಣಿಗೆಗೆ ಅನುವು ಮಾಡಿಕೊಡುತ್ತದೆ. ಈ ವೈವಿಧ್ಯಮಯ ಬೆಳವಣಿಗೆಯ ಜೀವನ ಯಾರಿಗೆ ಸೂಕ್ತ? ಎಂಬುದು ಪ್ರಸ್ತುತದಲ್ಲಿ ಮುಖ್ಯವಾಗುತ್ತದೆ. ಇಂಥ ಕೆಲವು ಪ್ರಶ್ನೆಗಳನ್ನು ಎತ್ತಿಕೊಂಡು ಅಧ್ಯಯನದಲ್ಲಿ ವಿವರಿಸಲಾಗಿದೆ.

ಇಂಡಿಯಾವನ್ನು ಆಳಿದ ಸಾಮ್ರಾಜ್ಯಶಾಹಿ ರಾಷ್ಟ್ರಗಳು ಇಂದೂ ಕೂಡ ಭಾರತದಂತಹ ಮೂರನೇ ಜಗತ್ತಿನ ರಾಷ್ಟ್ರಗಳ ಮೇಲೆ ತಮ್ಮ ಹಿಡಿತವನ್ನು ಸಾಧಿಸಿಯೇ ಇವೆ. ಇದರಲ್ಲಿ ಒಂದು ವ್ಯತ್ಯಾಸವನ್ನು ಕಾಣಬಹುದು. ಸ್ವಾತಂತ್ರ್ಯ ಪೂರ್ವದಲ್ಲಿ ಒಪ್ಪಿಗೆ ಇಲ್ಲದೆಯೇ ಆಳಿದ ರಾಷ್ಟ್ರಗಳು ಸ್ವಾತಂತ್ರ್ಯಾನಂತರದಲ್ಲಿ ಅವರ ಒಪ್ಪಿಗೆಯ ಮೇರೆಗೆ, ಹಲವು ಪರತಂತ್ರಗಳನ್ನು

ಒಳಗೊಂಡು ಆಳ್ವಿಕೆ ನಡೆಸುತ್ತಿವೆ. ಲಾಭಗಳಿಸಲೆಂದೇ ಇರುವ ಸಾಮ್ರಾಜ್ಯಶಾಹಿ ರಾಷ್ಟ್ರಗಳು ಮೂರನೇ ಜಗತ್ತಿನ ರಾಷ್ಟ್ರಗಳೊಂದಿಗೆ ಅಂತರಾಷ್ಟ್ರೀಯ ಸಂಬಂಧವನ್ನು ಹೊಂದಿವೆ. ಇದು G.A.T.T, I.M.F, W.T.O. ಮುಂತಾದವುಗಳ ಅಡಿಯಲ್ಲಿ ವ್ಯಾಪಾರ ಸಂಬಂಧವು ನಡೆಯುತ್ತಿದೆ. ರಾಷ್ಟ್ರೀಯ ಒಡಂಬಡಿಕೆಯ ಸಂಬಂಧದ ಉದ್ದೇಶ ಬಹುಪಾಲು ಹೆಚ್ಚು ಜನ ವಾಸಮಾಡುವ ಹಾಗೂ ಹೆಚ್ಚು ನೈಸರ್ಗಿಕ ಸಂಪನ್ಮೂಲಗಳನ್ನು ಹೊಂದಿರುವ ರಾಷ್ಟ್ರವನ್ನು ಆಯ್ಕೆ ಮಾಡಿಕೊಂಡು ಹೆಚ್ಚು ಲಾಭ ಗಳಿಸುವುದಾಗಿರುತ್ತದೆ. ಇವುಗಳಿಗೆ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯನ್ನು ಹೊಂದಿರುವ ಭಾರತದಂಥಹ ರಾಷ್ಟ್ರಗಳು ಬಹು ಬೇಗ ಆಕರ್ಷಿತವಾಗುತ್ತವೆ.

ಇಂಥ ಅಂತಾರಾಷ್ಟ್ರೀಯ ಸಂಬಂಧಕ್ಕೆ ಸಾಮ್ರಾಜ್ಯಶಾಹಿ ರಾಷ್ಟ್ರಗಳ ಜಾಣ್ಮೆ ಮುಖ್ಯವಾಗುತ್ತದೆ. ಏಕೆಂದರೆ ಆಧುನಿಕ ಸಂದರ್ಭದಲ್ಲಿ ಮೂರನೇ ಜಗತ್ತಿನ ರಾಷ್ಟ್ರಗಳು ಸಂಕ್ರಮಣ ಸ್ಥಿತಿಯಲ್ಲಿ ಸಿಕ್ಕಿಕೊಂಡಿರುತ್ತವೆ. ಇದಕ್ಕೆ ಎರಡು ಕಾರಣಗಳನ್ನು ಕೊಡಬಹುದು. ಒಂದು ದೇಶೀಯ ರಾಜಕೀಯ ಶಕ್ತಿಯ ವೈಫಲ್ಯ. ಎರಡು ದೇಶವು ರೂಪಿಸಿಕೊಂಡ ಆರ್ಥಿಕ ಸ್ಥಿತಿಗತಿ. ಇದನ್ನು ದೇಶೀಯ ಸಾಂಸ್ಕೃತಿಕ ನೆಲೆಯಲ್ಲಿ ನೋಡಿದಾಗ ಇಲ್ಲಿಯ ಜನಸಾಮಾನ್ಯರ ವಸ್ತುಸ್ಥಿತಿ ಏನಾಗಿದೆ? ಎಂಬ ಪ್ರಶ್ನೆಯು ಹುಟ್ಟುತ್ತದೆ. ಇಂಥ ಪ್ರಶ್ನೆಗಳು ಈ ಅಧ್ಯಯನದಲ್ಲಿ ಚರ್ಚೆಗೆ ಒಳಪಟ್ಟಿವೆ. ಅಂದರೆ ಉದಾಹರಣೆಯಾಗಿ ನೋಡುವುದಾದರೆ ಯಾವುದೇ ರಾಷ್ಟ್ರಗಳ ನಡುವೆ ಯುದ್ಧ ನಡೆದರೆ; ಇಲ್ಲವೆ ಆಂತರಿಕ ಬಿಕ್ಕಟ್ಟುಗಳು ಸಂಭವಿಸಿದರೆ ಅಥವಾ ಇನ್ನಾವುದೋ ಘಟನೆ ಜರುಗಿದರೆ ಇನ್ನೆಲ್ಲೋ ಅದರ ಪರಿಣಾಮ ಮತ್ತೆ ಯಾವುದೋ ರೀತಿಯಲ್ಲಿ ತಲುಪುವ ಸಾಧ್ಯತೆಗಳು ಇವೆ. ಹೊಸ ಆರ್ಥಿಕ ನೀತಿಗಳು, ಆರ್ಥಿಕ ದಿಗ್ಬಂಧನಗಳು ತೃತೀಯ ಜಗತ್ತಿನ ರಾಷ್ಟ್ರಗಳ ಸುತ್ತ ಹೆಣೆದಿರುವ ಬಲೆಯಂತೆ ಸುತ್ತುವರೆದಿವೆ. ಈ ಬಲೆಯನ್ನು ಆಳುವ ಯಾವ್ಯಾವ ರಾಷ್ಟ್ರಗಳೋ ಹಿಡಿದುಕೊಂಡಿವೆ. ನವವಸಾಹತುಶಾಹಿಯ ಬಲೆಯೊಳಗಿನ ದೇಶಗಳು ಹೊರಗಿನ ಬಂಡವಾಳವನ್ನೇ ನಂಬಿಕೊಳ್ಳುವ ಹಿನ್ನೆಲೆಯಲ್ಲಿ ಇಲ್ಲಿಯ ಸಮಾಜದ ಅತ್ಯಂತ ಕಟ್ಟಕಡೆಯ ಮನುಷ್ಯನ ಬದುಕು ಅಸ್ತವ್ಯಸ್ತವಾಗಿದೆ. ಅಂದರೆ ಸಾಮ್ರಾಜ್ಯಶಾಹಿಗಳಿಗೆ ಹೆಚ್ಚು ಪರಿಣಾಮಕಾರಿಯಾದ ಲಾಭವನ್ನುಂಟುಮಾಡಿದೆ. ದೇಶವೇ ಸಂವಿಧಾನಬದ್ಧವಾಗಿ ದಾಸ್ಯಕ್ಕೆ ಈಡಾಗಿರುವಾಗ ಈ ಶ್ರೇಣಿಕೃತ ವ್ಯವಸ್ಥೆಯ ಅಂತ್ಯಜರ ಬದುಕು ಇನ್ನು ನಿಕೃಷ್ಟವಾಗಿರುವುದರಲ್ಲಿ ಯಾವ ಸಂಶಯವೂ ಇಲ್ಲ. ಇಂಥ ಪರಿಸ್ಥಿತಿಯೊಳಗೆ ದಲಿತರ ಬದುಕು, ಅವರ ಚಳುವಳಿ, ಅವರ ಸಾಹಿತ್ಯವನ್ನು ಮತ್ತು ಅವರ ನಿಯಂತ್ರಣವನ್ನು ಅಧ್ಯಯನಕ್ಕೆ ಒಳಪಡಿಸುವುದು ಇಲ್ಲಿಯ ಮುಖ್ಯ ಉದ್ದೇಶವಾಗಿದೆ.

ಕರ್ನಾಟಕ ಸಂದರ್ಭದಲ್ಲಿ ದಲಿತಪರ ಹೋರಾಟಗಳು ಹಾಗೂ ದಲಿತ ಹೋರಾಟಗಳು ಮತ್ತು ಅವುಗಳ ಪೂರಕ ಪ್ರೇರಕ ಹಿನ್ನೆಲೆಯನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ದಲಿತ ಚಳುವಳಿಯ ಪೂರ್ವಕ್ಕೂ, ದಲಿತ ಚಳುವಳಿಯ ನಿರಂತರತೆಯ ಸಂದರ್ಭಕ್ಕೂ ಹಲವಾರು ಬದಲಾವಣೆಗಳನ್ನು ಕಾಣುತ್ತೇವೆ. ಅದಕ್ಕೆ ಚಳುವಳಿಯ ಬೆಳವಣಿಗೆಯ ಸಮಕಾಲೀನತೆ ಮುಖ್ಯವಾಗುತ್ತದೆ. ಹಾಗೆಯೇ ಇಲ್ಲಿ ದಲಿತ ಚಳುವಳಿಯ ನಿರಂತರತೆಯನ್ನೂ ಇಲ್ಲಿ ನೋಡಲಾಗಿದೆ. ಇಲ್ಲಿ ಚಳುವಳಿ ಮತ್ತು ಸಾಹಿತ್ಯದ ಸ್ಥಿತ್ಯಂತರಗಳನ್ನು ಅಧ್ಯಯನ ಮಾಡಲಾಗಿದೆ. ಹಾಗೂ ಅವು ತಾಳಿದ ಭಿನ್ನತೆ ಹಾಗೂ ಭಿನ್ನ ಸ್ವರೂಪವು ಬಹಳ ಮುಖ್ಯವಾಗುತ್ತವೆ. ಇಲ್ಲಿ ಮೂರು ದಶಕಗಳ ದಲಿತ ಚಳುವಳಿಯನ್ನು ಅಧ್ಯಯನಕ್ಕೆ ಒಳಪಡಿಸುವಾಗ ದಲಿತ ಸಂಘಟನೆಗಳ ಅಂತರ್ ಮುಖಗಳು ಬಹು ಮುಖ್ಯವಾಗುತ್ತವೆ. ಅವುಗಳನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ದಲಿತ ಸಂಘರ್ಷ ಸಮಿತಿಯಲ್ಲಿ ಚಳುವಳಿಯ ಕಾರ್ಯಕರ್ತರು ವಿಭಿನ್ನವಾಗಿ ಒಡೆದು

ನಿಂತು, ಪ್ರತ್ಯೇಕ ಅಸ್ತಿತ್ವವನ್ನು ಪಡೆದುಕೊಂಡಿರುವುದು, ಪಡೆದುಕೊಳ್ಳುತ್ತಿರುವುದು ಕಂಡುಬರುತ್ತದೆ. ಇವೆಲ್ಲವನ್ನು ತಾತ್ವಿಕ ಚರ್ಚೆಗೆ ಎತ್ತಿಕೊಂಡು ಇಲ್ಲಿ ಚರ್ಚಿಸಲಾಗಿದೆ. ಇವು ಈ ಅಧ್ಯಯನದ ಮುಖ್ಯ ಉದ್ದೇಶ.

ಆರಂಭದಲ್ಲಿನ ಅಖಂಡ ದಲಿತ ಚಳುವಳಿ ಕ್ರಮೇಣ ಅನೇಕ ರಾಜಕೀಯ ಸಿದ್ಧಾಂತಗಳಿಗೆ ಪಕ್ಕಾಗಿ ಭಿನ್ನವಾಗುವ ಪ್ರಕ್ರಿಯೆ ಅತ್ಯಂತ ಕುತೂಹಲಕರವಾದದ್ದು. ದೇಶದ ರಾಜಕೀಯ ಹಿನ್ನೆಲೆಯಲ್ಲಿ ಈ ಸ್ಥಿತ್ಯಂತರಗಳು ಅತ್ಯಂತ ಪ್ರಮುಖವಾಗಿ ಕಂಡು ಬರುತ್ತವೆ. ಬದಲಾಗುತ್ತಿರುವ ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಬದಲಾಗುತ್ತಿರುವ ವೈಯಕ್ತಿಕ ನೆಲೆಗಳು, ಅವುಗಳನ್ನು ನಿಯಂತ್ರಿಸುತ್ತಿರುವ ವ್ಯವಸ್ಥೆಯನ್ನು ತಾತ್ವಿಕವಾಗಿ ಗ್ರಹಿಸಲಾಗಿದೆ. ಅವುಗಳನ್ನು ಇಲ್ಲಿ ಜಾಗತಿಕ ವಿದ್ಯಮಾನಗಳಿಂದಲೂ ಅರ್ಥಮಾಡಿಕೊಳ್ಳಲಾಗಿದೆ. ಈ ಸ್ಥಿತ್ಯಂತರಗಳನ್ನು, ಹಾಗೂ ಇವುಗಳ ನಡುವಿನ ಪೂರಕ ಸಂಬಂಧಗಳ ಬೆಸುಗೆಯನ್ನು ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನಕ್ಕೆ ಒಳಪಡಿಸುವುದು ಈ ಅಧ್ಯಯನದ ಉದ್ದೇಶವೂ ಹೌದು. ಆದ್ದರಿಂದ ರಾಷ್ಟ್ರೀಯ ಮಟ್ಟದಲ್ಲಿ ಉಂಟಾಗುವ ಎಲ್ಲಾ ಅವಘಡಗಳು ಅತ್ಯಂತ ಸಾಮಾನ್ಯ ಮನುಷ್ಯನನ್ನು ಕಲಕಿಬಿಡುತ್ತವೆ. ಈ ಹಿನ್ನೆಲೆಯಲ್ಲಿ ಇದರ ಅಧ್ಯಯನದ ಉದ್ದೇಶ ಪ್ರಸ್ತುತವಾಗುತ್ತದೆ.

ಈ ಹಿನ್ನೆಲೆಯಲ್ಲಿ ದಲಿತ ಬದುಕು, ಚಳುವಳಿ, ಸಾಹಿತ್ಯವನ್ನು ವಾಸ್ತವದ ಎಲ್ಲಾ ಬದಲಾವಣೆ ಸಂದರ್ಭದ ನೆಲೆಯಲ್ಲಿ ಗ್ರಹಿಸಲಾಗಿದೆ. ಒಟ್ಟಾರೆ ಈ ಮೇಲಿನ ಉದ್ದೇಶದಿಂದ ಕರ್ನಾಟಕ ದಲಿತ ಚಳುವಳಿ ಮತ್ತು ಸಾಹಿತ್ಯದ ಒಟ್ಟು ಸಂದರ್ಭವನ್ನು ವಿಶ್ಲೇಷಣಾತ್ಮಕವಾಗಿ ತಾತ್ವಿಕ ನೆಲೆಯಲ್ಲಿ ನಿರ್ವಹಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಸಾಂಸ್ಕೃತಿಕ ಅಧ್ಯಯನದ ವಿವಿಧ ಮಗ್ಗಲುಗಳಲ್ಲಿ ಬದುಕು, ಚಳುವಳಿ ಮತ್ತು ಸಾಹಿತ್ಯ ಸೇರಿಕೊಳ್ಳುತ್ತವೆ. ಇಲ್ಲಿ ದಲಿತ ಚಳುವಳಿಯ ಆಕರಗಳು ಹಾಗೂ ಅದಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಪ್ರಧಾನವಾಗಿ ಪರಿಗಣಿಸಲಾಗಿದೆ. ಹಾಗೆಯೇ ದಲಿತ ಬದುಕು ದಲಿತ ಸಾಹಿತ್ಯದ ಅಧ್ಯಯನಕ್ಕೆ ಒಳಪಡುವುದು.

ಈ ಶತಮಾನದಲ್ಲಿ ಭಾರತದಲ್ಲಿ ಆದ ಸಾಂಸ್ಕೃತಿಕ ಬದಲಾವಣೆಯು ಅಪಾರವಾದದ್ದು, ಅನನ್ಯವಾದದ್ದು. ಈ ಸಂದರ್ಭದಲ್ಲಿ ಲಿಖಿತ ಪರಂಪರೆಗೆ ಅಪಾರವಾದ ಮನ್ನಣೆ ದೊರೆಯಿತು. ಕಾರಣ ಅದಕ್ಕೆ ಮುಖ್ಯವಾಗಿ ಒಪ್ಪಿತ ಪ್ರಜಾಪ್ರಭುತ್ವ ಮಾದರಿಯ ವ್ಯವಸ್ಥೆ. ಇದು ಮಾನವನ ಬದುಕಿನ ಎಲ್ಲಾ ಅಂಗಗಳನ್ನು ಸ್ಪಂದಿಸಲು ಪ್ರಯತ್ನಿಸಿತು. ಅದರ ಪರಿಣಾಮವಾಗಿ ಮೌಖಿಕ ಪರಂಪರೆಯ ಸತ್ವ ಬರಹರೂಪದಲ್ಲಿ ಬರತೊಡಗಿತು. ಈ ಹಿನ್ನೆಲೆಯಲ್ಲಿ ಕಾರ್ಯನಿರ್ವಹಿಸಿದ ಅರಿವು ವ್ಯಕ್ತಿಗಳಲ್ಲಿ ಬಲವಾಯಿತು. ಅರಿವಿನ ಹಲವು ಮಜಲುಗಳ ಅಧ್ಯಯನ, ಬರಹಕ್ಕೆ ಬಾರದ ಮೌಖಿಕ ಸಾಹಿತ್ಯದ ಅಧ್ಯಯನವೂ ಸಹ ಹೊಸ ಆಲೋಚನೆಗೆ ಬುನಾದಿ ಹಾಕುವ ಕೆಲಸ ಮಾಡಿತು. ಈ ಅಧ್ಯಯನಗಳು ಗ್ರಂಥಸ್ಥ ಸಾಹಿತ್ಯ ಹಾಗೂ ಮೌಖಿಕ ಸಾಹಿತ್ಯವೆಂಬ ಪ್ರತ್ಯೇಕ ಅಂಗಗಳಾಗಿ ಅಧ್ಯಯನಕ್ಕೆ ಒಳಪಟ್ಟವು. ಮೆರೆದ ಗ್ರಂಥಸ್ಥ ಸಾಹಿತ್ಯಕ್ಕಿಂತ ಮರೆಮಾಡಿದ್ದ ಮೌಖಿಕ ಸಾಹಿತ್ಯದ ಹುಡುಕಾಟದಲ್ಲಿ ಹೊಸ ಆಲೋಚನೆಗಳು, ಸಂಸ್ಕೃತಿ ಚಿಂತನೆ, ಬಹುಶಿಸ್ತೀಯ ಅಧ್ಯಯನ ಈ ಸಂದರ್ಭದಲ್ಲಿ ನಡೆದವು. ಈ ಅಧ್ಯಯನ ಕ್ರಮಗಳನ್ನು ಸಾಹಿತ್ಯ ಮತ್ತು ಸಾಹಿತ್ಯೇತರ ವಿವಿಧ ಆಯಾಮಗಳ ಮೂಲಕ ಇಲ್ಲಿ ಒಳಪಡಿಸಲಾಗಿದೆ.

ಈ ಹೊತ್ತಿನ ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭವನ್ನು ಕರ್ನಾಟಕಕ್ಕೆ ಸೀಮಿತಗೊಳಿಸಿ ದಲಿತ ಬದುಕು, ಚಳುವಳಿ, ಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಲ್ಲದೆ ಅದರ ಪೂರಕ ಇಲ್ಲವೆ ಪ್ರೇರಕಾಂಶಗಳನ್ನು ಅಧ್ಯಯನಕ್ಕೆ ಒಳಪಡಿಸುವ ವ್ಯಾಪ್ತಿ ಇದೆ. ಈ ಅಧ್ಯಯನವು ಕರ್ನಾಟಕ ದಲಿತ ಸಂಘರ್ಷ ಸಮಿತಿ, ದಲಿತ ಸಮುದಾಯಗಳ ಚಳುವಳಿ, ಹಾಗೂ ಜಾಗತೀಕರಣದ ಪ್ರಕ್ರಿಯೆಯ ನೆಲೆಯನ್ನು ಒಳಗೊಳ್ಳುವುದು. ಇವುಗಳ ಆಲೋಚನಾಕ್ರಮಗಳನ್ನು ಇಲ್ಲಿ ಒಂದು ಸೈದ್ಧಾಂತಿಕ ಚೌಕಟ್ಟಿಗೆ ಒಳಪಡಿಸಲಾಗಿದೆ.

## ಅಧ್ಯಯನದ ವಿಧಾನ

ಸದ್ಯದ ಅಧ್ಯಯನಗಳ ವಿಧಾನಗಳು ಅಧ್ಯಯನದ ವಸ್ತು ವಿಷಯಗಳ ಪರಿಕಲ್ಪನೆಗೆ ಸಾಮಗ್ರಿಗಳನ್ನು ಜೋಡಿಸುವಂಥವಾಗಿದೆ. ಅವು ಲಿಖಿತ ಸಾಮಗ್ರಿಗಳಾಗಿರಬಹುದು; ಇಲ್ಲವೆ ಮೌಖಿಕ ಸಾಮಗ್ರಿಗಳಾಗಿರಬಹುದು. ಇವುಗಳ ಸಾಂಸ್ಕೃತಿಕ ಸಂದರ್ಭದ ಬದಲಾವಣೆಯ ಪ್ರಕ್ರಿಯೆಯ ನಿರಂತರತೆಯಲ್ಲಿ ಕಂಡುಬರುತ್ತವೆ. ಇದನ್ನು ನಿರ್ವಹಿಸುವ ವಿಧಾನ ಬಹಳ ಮುಖ್ಯ. ಇಲ್ಲಿ ಹಲವು ವಿಭಿನ್ನ ಆಯಾಮಗಳು ಈ ಸಾಂಸ್ಕೃತಿಕ ಸಂದರ್ಭದಲ್ಲಿ ಸೇರುತ್ತವೆ. ಈ ವಿಭಿನ್ನ ಆಯಾಮಗಳ ನಡುವಿನ ಪರಸ್ಪರ ಹೊಂದಾಣಿಕೆ ಮತ್ತು ಸಂಘರ್ಷದ ನೆಲೆಗಳನ್ನು ಗ್ರಹಿಸುವುದು ಮುಖ್ಯ. ಈ ನೆಲೆಗಳನ್ನು ಪ್ರಶ್ನಿಸಿ, ತಾತ್ವಿಕ ಚರ್ಚೆಗೊಳಪಡಿಸಿ, ವಾಸ್ತವ ನೆಲೆಯಲ್ಲಿ ನಿರ್ವಹಿಸುವ ವಿಧಾನವನ್ನು ಇಲ್ಲಿ ಅಳವಡಿಸಿಕೊಳ್ಳಲಾಗಿದೆ. ಇವುಗಳ ಆಂತರಿಕ ಹಾಗೂ ಬಾಹ್ಯ ಸಂಬಂಧಗಳ ಸ್ವರೂಪವನ್ನು ಸಾಂಸ್ಕೃತಿಕ ಸಂದರ್ಭದಲ್ಲಿ ಅರ್ಥೈಸಿ ವ್ಯಾಖ್ಯಾನಿಸುವ ವಿಧಾನವನ್ನು ಅಧ್ಯಯನದಲ್ಲಿ ಅನುಸರಿಸಲಾಗಿದೆ.

ದಲಿತ ಚಳುವಳಿ, ದಲಿತ ಸಾಹಿತ್ಯ, ದಲಿತ ಸಂಸ್ಕೃತಿ, ದಲಿತ ಬದುಕು ಇವುಗಳು ಒಂದಕ್ಕೊಂದು ಅಂತರ್ ಬೆಸುಗೆಯನ್ನು ಹೊಂದಿವೆ. ಅವುಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ದಲಿತ ಸಾಹಿತ್ಯ ಯಾರ ಸಾಹಿತ್ಯ? ಅದರ ರಚನೆಯ ಅಗತ್ಯವೇನು? ಯಾರಿಗಾಗಿ ಈ ಸಾಹಿತ್ಯ ರಚನೆಯಾಗಿದೆ? ಅದನ್ನು ಓದುವ ವರ್ಗ ಯಾವುದು? ಇಂಥ ಮೂಲಭೂತ ಪ್ರಶ್ನೆಗಳನ್ನು ಎತ್ತಿಕೊಂಡು ತಾತ್ವಿಕ ಚರ್ಚೆಗೆ ಒಳಪಡಿಸಲಾಗಿದೆ.

# ೧.೧ ಕರ್ನಾಟಕ ದಲಿತ ಚಳುವಳಿಯ ಹುಟ್ಟು ಮತ್ತು ವಿಕಾಸ

## ದಲಿತ ಚಳುವಳಿಯ ಹಿನ್ನೆಲೆ

ದಲಿತ ಚಳುವಳಿ ೧೯೭೦ರ ದಶಕದಿಂದ ಈಚೆಗೆ ಕರ್ನಾಟಕದಲ್ಲಿ ಸಾಮಾಜಿಕ ಚಳುವಳಿಯಾಗಿ ಕಂಡುಬಂತು. ಸ್ವಾತಂತ್ರ್ಯಪೂರ್ವದಲ್ಲಿ ಮತ್ತು ಸ್ವಾತಂತ್ರ್ಯಾನಂತರದಲ್ಲಿ ದಲಿತ ಪರ ಹೋರಾಟಗಳು; ಚಿಂತನೆಗಳು ಅಲ್ಲಲ್ಲಿ ಕಂಡು ಬಂದವು. ಆದರೆ ಅದೊಂದು ಚಳುವಳಿಯಾಗಿ ಅಸ್ತಿತ್ವವನ್ನು ಪಡೆದದ್ದು ಈ ಶತಮಾನದ ೬೦-೭೦ರ ದಶಕದ ನಂತರದಲ್ಲಿ. ದಲಿತ ಚಳುವಳಿಯು ಮೂಲಭೂತವಾಗಿ ಅಂಬೇಡ್ಕರ್ ಅವರ ವಿಚಾರ ಮತ್ತು ಅವರ ಹೋರಾಟಗಳಿಂದ ಪ್ರೇರೇಪಿತವಾದದ್ದು. ಆಧುನಿಕ ಶಿಕ್ಷಣವು ಪ್ರಜಾಪ್ರಭುತ್ವ ವ್ಯವಸ್ಥೆ, ಅದರೊಂದಿಗಿನ ಮೀಸಲಾತಿ ಸೌಲಭ್ಯಗಳು ದಲಿತ ಸಮುದಾಯಗಳ ಮೊದಲ ತಲೆಮಾರಿನ ಅಕ್ಷರ ಕಲಿತವರನ್ನು ಎಚ್ಚರಿಸಿತು. ಅವರು ಶ್ರೇಣೀಕೃತ ಸಮಾಜದ ಹಿಂದೂಧರ್ಮದ ಮಡಿವಂತಿಕೆಯನ್ನು ಪ್ರಶ್ನಿಸಿದರು. ತನ್ನ ಸಮುದಾಯಗಳಿಗೆ ಸಾಮಾಜಿಕ ಅರಿವನ್ನು ಮೂಡಿಸಿದರು. ಹಾಗೆಯೇ ಸಮಾಜದ ಸಾಮಾಜಿಕ ವಾಸ್ತವವನ್ನು ಬಿಂಬಿಸುವ ಕೆಲಸ ಮಾಡಿದರು. ಇವರ ಹೋರಾಟ ಪ್ರಗತಿಪರ ಹೋರಾಟಗಳಾಗಿ ಕಂಡು ಬಂದವು. ಶೋಷಿತ ಸಮುದಾಯಗಳ ಎಚ್ಚರ ಮತ್ತು ಸಮಾಜದ ಎಲ್ಲಾ ಕ್ಷೇತ್ರಗಳ ಸಮಾನತೆಯ ಹೋರಾಟವು ಇವರ ಆಶಯವಾಗಿದ್ದವು. ಇವರು ರೂಪಿಸಿದ ಚಳುವಳಿಯೇ ಕರ್ನಾಟಕ ದಲಿತ ಚಳುವಳಿ.

ಆಧುನಿಕ ಶಿಕ್ಷಣ ತೆರೆದುಕೊಳ್ಳುತ್ತಿದ್ದಂತೆ ಬೇರೂರಿರುವ ಅಸಮಾನತೆ ಹಾಗೂ ಬೇರೂರಿರುವ ವ್ಯವಸ್ಥೆಯ ಬಗೆಗಿನ ಅರಿವು ದಲಿತ ಬುದ್ಧಿಜೀವಿಗಳಲ್ಲಿ ಮೂಡಿತು. ಬುದ್ಧ, ಬಸವ, ಅಂಬೇಡ್ಕರ್, ಲೋಹಿಯಾ, ಮಾರ್ಕ್ಸ್, ಏಂಗಲ್ಸ್, ಮಾವೋ, ಮಾಂಡೆಲಾ ಮುಂತಾದವರ ಚಿಂತನೆಯ ತತ್ವಗಳು ಸಾಮಾಜಿಕ ಬದುಕಿನ ಕಟುವಾಸ್ತವವನ್ನು ಎತ್ತಿ ಹಿಡಿಯಲು ಆಗಲೇ ಪ್ರಶ್ನಿಸಿದ್ದವು. ಮನುಷ್ಯ ಮನುಷ್ಯರ ನಡುವಿನ ಬದುಕಲ್ಲಿ ಇರುವ ತಾರತಮ್ಯಗಳು, ಅವುಗಳಿಂದ ಆಗುವ ದುಷ್ಪರಿಣಾಮಗಳು ಈ ಸಂದರ್ಭದಲ್ಲಿ ವಸ್ತುವಿಷಯವಾಗಿ ಕಂಡುಬಂದವು. ಬುದ್ಧನ ಬದುಕು, ಅವನ ಸಕಲ ಸಂಪತ್ತಿನ ತ್ಯಾಗ, ಬೌದ್ಧ ಧರ್ಮದ ತತ್ವಗಳು ಚಳುವಳಿಗೆ ಪ್ರಸ್ತುತವಾದವು. ದಲಿತ ಚಳುವಳಿಯ ಹೋರಾಟಕ್ಕೆ ಅದರ ರೂಪರೇಷೆಗಳಿಗೆ ಬುದ್ಧ ಮಾದರಿಯಾದ. ಹಾಗೆಯೇ ಹನ್ನೆರಡನೇ ಶತಮಾನದ ಸಾಮಾಜಿಕ ಕ್ರಾಂತಿಯಿಂದ ಉಗಮಗೊಂಡ ವೀರಶೈವ ಧರ್ಮ ಕೆಳ ಸಮುದಾಯಗಳನ್ನು ಒಂದುಗೂಡಿಸಿತು. ಬಸವಣ್ಣ ಅದರ ಮುಂಚೂಣಿಯಲ್ಲಿದ್ದ.

ಈ ಕೆಳ ಜಾತಿಗಳೊಂದಿಗಿನ ಸ್ಪಂದನೆ, ಅವನ ನಿಲುವುಗಳು ದಲಿತ ಚಳುವಳಿಗೆ ಪ್ರಸ್ತುತವಾದವು. ಆಪ್ಪೊತ್ತಿನಲ್ಲಿ ಕೆಳ ಸಮುದಾಯಗಳಿಂದ ವಚನಕಾರರು ಹುಟ್ಟಿಕೊಂಡರು. ತಮ್ಮ ಅನುಭವದ ಧಾರೆಯನ್ನು ವಚನಗಳಲ್ಲಿ ಓಡಿದಿಟ್ಟರು. ಪರಿಣಾಮವಾಗಿ ತಮ್ಮ ಬದುಕಿನ ಸರ್ವ ವಿವರಗಳು, ಸಾಮಾಜಿಕ ನಿಲುವುಗಳು, ಅವುಗಳ ಕಳಕಳಿ ವಚನಗಳಲ್ಲಿ ಬಂದವು. ಈ ಸಮುದಾಯಗಳು ವೀರಶೈವ ಧರ್ಮದ ಅಡಿಯಲ್ಲಿ ತಮ್ಮ ಸಾಮಾಜಿಕ ಬದುಕನ್ನು ಅಭಿವ್ಯಕ್ತಿಸುವತ್ತ ಈ ಕಾಲವನ್ನು ಸಡಿಲಗೊಳಿಸುವತ್ತ ಪ್ರಯತ್ನಿಸಿದವು.

ಪ್ರಜಾಪ್ರಭುತ್ವ ವ್ಯವಸ್ಥೆಯ ಸುವರ್ಣಮಹೋತ್ಸವವನ್ನು ದಾಟಿರುವ ಹೊತ್ತಿನಲ್ಲೂ ಅಸಮಾನತೆ, ಅಸ್ಪೃಶ್ಯತೆ ತುಂಬಿರುವಾಗ, ರಾಜ್ಯವ್ಯವಸ್ಥೆಯಲ್ಲಿ ಪ್ರಜೆಗಳಿಗೆ ಪ್ರಭುತ್ವ ಇಲ್ಲದ ಹೊತ್ತಿನಲ್ಲಿ ಬಸವಣ್ಣನವರು ಕೆಳ ಸಮುದಾಯಗಳನ್ನು ಒಂದುಗೂಡಿಸುವ ಕೆಲಸವನ್ನು ಮಾಡಿದರು. ಈ ಜಾತಿಗಳಿಗೆ ಸಾಮಾಜಿಕವಾಗಿ ಕೀಳರಿಮೆಯನ್ನು ತೆಗೆದೊಯ್ಯುವ ಕೆಲಸವನ್ನು ಇವರು ಮಾಡಿದರು. ಇಂದು ಜಾತಿ ಜಾತಿಗಳ ನಡುವೆ ಇರುವ ಭಿನ್ನ ನಿಲುವುಗಳಲ್ಲಿ ಅಂದು ಬಸವಣ್ಣ ನಡೆಸಿದ ಅಂತರ್ ಜಾತಿ ವಿವಾಹವು ಮುಖ್ಯವಾಯಿತು. ಅದು ಮನುಷ್ಯರೆಲ್ಲರೂ ಒಂದೇ, ಯಾವ ಜಾತಿಯ ಹೆಣ್ಣಾದರೇನು? ಗಂಡಾದರೇನು? ಒಟ್ಟಿನಲ್ಲಿ ಎಲ್ಲರೂ ಮನುಷ್ಯರು ಎಂಬುದು ಬಸವಣ್ಣನವರ ಸಾಮಾಜಿಕ ಕ್ರಾಂತಿಯ ಮತ್ತು ಅದರ ಬದಲಾವಣೆಯ ಮುಖ್ಯ ಆಶಯವಾಗಿತ್ತು. ಇವುಗಳು ಕರ್ನಾಟಕ ದಲಿತ ಚಳುವಳಿಯ ಉಗಮದ ಈ ಹೊತ್ತಲ್ಲಿ ಪ್ರಸ್ತುತವಾದವು. ೧೨ನೇ ಶತಮಾನದ ವಚನ ಚಳುವಳಿಯಲ್ಲಿ ಕೆಳ ಸಮುದಾಯಗಳಿಗೆ ಅವಕಾಶಗಳು ಇದ್ದವು.

ನಂತರದ ದಾಸ ಸಾಹಿತ್ಯ ಕೆಳವರ್ಗದವರ ಬಗೆಗಿನ ಕಾಳಜಿಯನ್ನು ಹೊಂದಿತ್ತು. ದಾಸ ಸಾಹಿತ್ಯದ ಪ್ರಮುಖರಾದ ಕನಕದಾಸ, ಪುರಂದರದಾಸರ ಕೀರ್ತನೆಗಳಲ್ಲಿ ಬಹು ಮುಖ್ಯವಾಗಿ ಈ ಆಸಕ್ತಿಗಳು ಕಂಡು ಬಂದವು. ಅಲ್ಲದೆ ಅವರ ಸಮಕಾಲೀನ ಕೀರ್ತನಕಾರರಲ್ಲಿಯೂ ಸಮಾನತೆಯ ಅಂಶಗಳು ಕಂಡುಬಂದವು.

ಅಂಬೇಡ್ಕರ್ ಅವರ ಹೋರಾಟ, ಅವರ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಚಿಂತನೆ ಮತ್ತು ಅವರು ಅನುಭವಿಸಿದ, ನೋಡಿದ ದಲಿತರ ಬದುಕು ಒಂದು ಹೊಸ ರೂಪವನ್ನು ಪಡೆಯಿತು. ಅವರ ಬರಹ ಮತ್ತು ಭಾಷಣಗಳು, ಅವುಗಳ ಸತ್ವ ದಲಿತ ಚಳುವಳಿಯ ಹಿನ್ನೆಲೆಯಲ್ಲಿ ಕೆಲಸ ಮಾಡಿದವು. ಹಾಗೆಯೇ ಲೋಹಿಯಾ ಅವರ ಸಮಾಜವಾದ ಸಮಾಜದ ಬಗೆಗಿನ ಅವರ ಬರವಣಿಗೆಯು ಪೂರಕವಾಗಿ ಪ್ರಗತಿಪರ ಜಾತ್ಯತೀತ ಮೂಲಭೂತ ಹೋರಾಟಕ್ಕೆ ಪ್ರೇರಕವಾದವು. ಪಾಶ್ಚಾತ್ಯ ಚಿಂತನೆ ಮಾರ್ಕ್ಸ್‌ವಾದ, ಮಾವೋ ಥಿಯರಿಗಳು ದಲಿತ ಚಳುವಳಿಯ ರೂಪಕ್ಕೆ ಪ್ರೇರಕವಾದವು.

ವಸಾಹತುಶಾಹಿಯ ವಿರುದ್ಧದ ಹೋರಾಟ ಉಗಮಗೊಳ್ಳುತ್ತಿದ್ದಂತೆಯೇ ದೇಶೀಯರಲ್ಲಿ ದೇಶೀಯತೆಯ ಬಗೆಗಿನ ಕಾಳಜಿಗಳು ಹೋರಾಟಗಾರರಲ್ಲಿ ಉಗಮಗೊಂಡವು. ಈ ಸಂದರ್ಭದಲ್ಲಿ ದೇಶ ಪ್ರೇಮ, ನಿಸರ್ಗ ಪರಿಸರದ ಬಗೆಗಿನ ಪ್ರೀತಿ ಹೆಚ್ಚಾದವು. ವಸಾಹತುಶಾಹಿಯ ವಿರುದ್ಧದ ಹೋರಾಟದಲ್ಲಿ ದೇಶದಲ್ಲಿ ಇದ್ದ ಭೂಮಾಲೀಕರು ಬಲಗೊಂಡರು. ಶ್ರೇಣೀಕೃತ ವ್ಯವಸ್ಥೆಯ ಕೆಳ ಸಮುದಾಯಗಳ ಸಮಸ್ಯೆಗಳು ಸಮಸ್ಯೆಗಳಾಗಿಯೇ ಉಳಿದವು. ಈ ಸಮಯದಲ್ಲಿ ಅಂಬೇಡ್ಕರ್ ಅವರು ನಡೆಸಿದ ಹೋರಾಟವು ದಲಿತ ಸಮುದಾಯಗಳಿಗೆ ಆತ್ಮಗೌರವವನ್ನು ತಂದುಕೊಟ್ಟಿತು. ಇದು

ದಲಿತ ವಿದ್ಯಾವಂತರಲ್ಲಿ ಸ್ವಾಭಿಮಾನವಾಗಿ ಬೆಳೆಯಿತು. ''೧೯೧೭ರ ಕಲ್ಕತ್ತಾ ಅಧಿವೇಶನದಲ್ಲಿ ಅಸ್ಪೃಶ್ಯರ ಏಳಿಗೆಯನ್ನು ತನ್ನ ಕಾರ್ಯಕ್ರಮದಲ್ಲಿ ಕಾಂಗ್ರೆಸ್ಸು ಸೇರಿಸಿಕೊಂಡಿತು; ಬ್ರಾಹ್ಮಣೇತರರು ಹೆಚ್ಚು ಹೆಚ್ಚು ತಮ್ಮ ಹಕ್ಕುಗಳಿಗಾಗಿ ಒತ್ತಾಯಿಸುವುದನ್ನು ಕಲಿತ ಹಿನ್ನೆಲೆಯಲ್ಲಿ ವಸಾಹತುಶಾಹಿ ಅವರನ್ನು ತನ್ನ ವಿರುದ್ಧ ಬಳಸಬಹುದೆಂಬ ದಿಗಿಲು ಕಾಂಗ್ರೆಸ್ ಪಕ್ಷಕ್ಕೆ ಉಂಟಾಯಿತು''[೧]. ರಾಷ್ಟ್ರೀಯ ಕಾಂಗ್ರೇಸ್ ಪಕ್ಷದಲ್ಲಿ ಬಹುಸಂಖ್ಯಾತರು ಬ್ರಾಹ್ಮಣರೇ ಇದ್ದದ್ದರಿಂದ ಆಳುತ್ತಿದ್ದ ವಸಾಹತುಶಾಹಿಯ ವಿರುದ್ದ ತಮ್ಮ ಹಕ್ಕುಗಳಿಗೆ ಬೇಡಿಕೆಯನ್ನಿಡುತ್ತಿರುವ ಬ್ರಾಹ್ಮಣೇತರರನ್ನು ಬಳಸಿಕೊಳ್ಳಬಹುದೆಂಬ ಉಪಾಯ ಮಾಡಿದರು. ''೧೯೦೬ರ ವೇಳಗೆ ಡಿಪ್ರೆಸ್ಡ್ ಕ್ಲಾಸಸ್ ಮಿಷನ್ ಸೊಸೈಟಿ ಸ್ಥಾಪನೆಯಾಯಿತು. ಕಡುಮಲ್ ರಂಗರಾಯರ ಜೊತೆಗೆ ವಿ.ಆರ್.ಶಿಂದೆ, ನಾರಾಯಣ ಚಂದಾವರ್ಕರ್‌ರಂತ ನಾಯಕರು ಸಂಘಟನೆಯಲ್ಲಿ ತುಂಬಾ ಕ್ರಿಯಾಶಾಲಿಗಳಾಗಿದ್ದರು. ನಾರಾಯಣ ಚಂದಾವರ್ಕರ್ ಹಾಗೂ ರಂಗರಾವ್ ಅವರು ಕರ್ನಾಟಕದವರು''[೨]. ಈ ಶತಮಾನದ ಪ್ರಾರಂಭದಲ್ಲಿ ದಲಿತರ ಬಗೆಗಿನ ಹೋರಾಟಕ್ಕೆ ಸಂಬಂಧಿಸಿದ ಪೂರಕ ಸಂಸ್ಥೆಗಳು ಮತ್ತು ಸಂಘಟನಕಾರರು ಕಂಡುಬಂದದ್ದು ಕಾಣಸಿಗುತ್ತವೆ. ''ಬಿಜಾಪುರದಲ್ಲಿ ೧೯೧೮ರಲ್ಲಿ ಕರ್ನಾಟಕ ಪ್ರಾದೇಶಿಕ ಸಮಾವೇಶ ಜರುಗಿದ ಸಂದರ್ಭದಲ್ಲಿ ಹಾಜರಿದ್ದ ಗಾಂಧೀಜಿಯವರನ್ನು ಅಸ್ಪೃಶ್ಯತೆಗೆ ಸಂಬಂಧಿಸಿದ ಗೊತ್ತುವಳಿಯ ಬಗೆಗೆ ಮಾತನಾಡಬೇಕೆಂದು ಕೇಳಲಾಯಿತು. ಅಸ್ಪೃಶ್ಯವರ್ಗದವರ್‍ಯಾರಾದರೂ ಪ್ರೇಕ್ಷಕ ವೃಂದದಲ್ಲಿ ಇರುವವರೇ ಎಂದು ಗಾಂಧೀಜಿಯವರು ಕೇಳಿದರು. ಆ ವರ್ಗದವರು ಯಾರೂ ಇರಲ್ಲಿಲ್ಲ. ಗಾಂಧೀಜಿ ಜಿಗುಪ್ಸೆಯಿಂದ ಮೌನವಾಗಿ ಕುಸಿದು ಕುಳಿತುಕೊಂಡರು''[೩]. ಅಸ್ಪೃಶ್ಯರ ಸಾಮಾಜಿಕ ಸ್ಥಿತಿ ಅವರ ಸ್ಥಾನಮಾನ ಯಾವ ರೀತಿಯದು ಎಂಬುದು ಅಂದಿನ ವಾಸ್ತವ. ಅದು ಅಡಿಪಾಯವೂ ಹೌದು. ಜಾಗೃತಿ ಕಾಣದ ಹೊತ್ತಲ್ಲಿ ಬದುಕುವ ತಮ್ಮ ಸಮಾಜದಲ್ಲಿ ತಮ್ಮ ನೆಲೆ ಎಂಥದು ಎಂಬುದು ನಂತರದಲ್ಲಿ ದಲಿತರಿಗೆ ಗೊತ್ತಾಗುತ್ತಾ ಬಂತು. ಗಾಂಧೀಜಿಯವರು 'ಪೂನಾ ಒಪ್ಪಂದ'ದ ನಂತರ ಹರಿಜನರ ಪ್ರಶ್ನೆಯನ್ನು ಗಂಭೀರವಾಗಿ ಕೈಗೆತ್ತಿಕೊಂಡರು. ಕಾರಣ ಸ್ವಾತಂತ್ರ್ಯ ಹೋರಾಟದೊಡನೆ ಇದು ಬಿಡಿಸಲಾರದ ಸಂಬಂಧವನ್ನು ಹೊಂದಿತ್ತು. ಈ ಹೊತ್ತಿನಲ್ಲಿ ಅಂಬೇಡ್ಕರ್ ಅವರ ಅಸ್ಪೃಶ್ಯರ ಬಗೆಗಿನ ಹೋರಾಟವು ದೇಶದಲ್ಲಿ ಒಂದು ಅಲೆಯನ್ನು ಎಬ್ಬಿಸಿತ್ತು. ''ಗಾಂಧೀಜಿಯವರು ಹರಿಜನ ಪ್ರವಾಸವನ್ನು ಕೈಗೊಂಡಾಗ ಜನರಲ್ಲಿ ಅತ್ಯುತ್ಸಾಹ ಕಂಡು ಬಂದಿತು. ವೀರಣ್ಣಗೌಡ ಪಾಟೀಲರು ಹಾಗೂ ಅವರ ಹೆಂಡತಿ ಹರಿಜನೋದ್ಧಾರ ಪ್ರತಿಪಾದಕರಾದರು. ಗಾಂಧೀಜಿಯವರ ಹರಿಜನ ಪರ್ಯಟನೆಯ ಸಂದರ್ಭದಲ್ಲಿ ಅವರು ೧೯೩೪ರಲ್ಲಿ ಹುಬ್ಬಳ್ಳಿಯಲ್ಲಿ ಬಾಲಿಕಾಶ್ರಮವನ್ನು ತೆರೆದರು''[೪]. ಈ ಸಂದರ್ಭದಲ್ಲಿ ಅಸ್ಪೃಶ್ಯರ ಕುರಿತ ಕೆಲವು ಪುಸ್ತಕಗಳು ಬಂದವು. ''ಹರ್ಡೇಕರ ಮಂಜಪ್ಪ ಅವರು 'ಆದಿಜಾಂಬವರ ಸುಧಾರಣೆ' ಕೆ.ಎಸ್. ಪಾಟೀಲರು 'ಅಸ್ಪೃಶ್ಯತಾ ನಿವಾರಣೆ' ಎಂಬ ಕೃತಿಗಳನ್ನು ರಚಿಸಿದರು.''[೫] ಈ ಕೃತಿಗಳು ದಲಿತರ ಸಮಸ್ಯೆಗಳನ್ನು ಚರ್ಚಿಸುವಲ್ಲಿ ಹಾಗೂ ಅವುಗಳ ಪರಿಹಾರೋಪಾಯಗಳನ್ನು ಕಂಡುಕೊಳ್ಳುವಲ್ಲಿ ಪ್ರಮುಖವಾದವು.

''ಸ್ವಾಮಿ ವಿವೇಕಾನಂದರಿಂದ ವಿಶೇಷವಾಗಿ ಪ್ರಭಾವಗೊಂಡ ಹಿಂದೂ ಪುನಶ್ಚೇತನ ಚಳುವಳಿಗಳು ಮೈಸೂರು ಸಂಸ್ಥಾನಕ್ಕೆ ಪ್ರೇರಣೆ ನೀಡಿದ ಫಲವಾಗಿ ೧೮೯೦ರ ದಶಕದಲ್ಲಿಯೇ ಅಸ್ಪೃಶ್ಯರಿಗೆ ವಿಶೇಷವಾದ ಶಾಲೆಗಳನ್ನು ತೆರೆಯುವುದರ ಮೂಲಕ ಶೈಕ್ಷಣಿಕ ಸೌಲಭ್ಯವನ್ನು ದೊರಕಿಸಿಕೊಳ್ಳುವಂತಾಯಿತು''[೬]. ಇಂದಿನ ದಲಿತ ತಲೆಮಾರುಗಳಲ್ಲಿ ಇಂದು ಅಕ್ಷರ ಕಲಿಯುತ್ತಿರುವ ಕೆಲವೇ ಕೆಲವರು ಮೂರನೇ ತಲೆಮಾರಿಗೆ ಬಂದಿದ್ದಾರೆ. ಮೈಸೂರು ಪ್ರಾಂತ್ಯದಲ್ಲಿ ದಲಿತರಿಗೆ ಶಿಕ್ಷಣದಲ್ಲಿ ಕೊಟ್ಟಂತ ಅನುಕೂಲವು ಧಾರವಾಡ, ಮಂಗಳೂರು, ಗುಲಬರ್ಗಾ ಮುಂತಾದ ಕಡೆಗಳಲ್ಲಿ ಕಂಡು

ಬರಲಿಲ್ಲ. ಅದಕ್ಕೆ ಚಾರಿತ್ರಿಕ ಕಾರಣಗಳೂ ಉಂಟು. ಹೈದರಾಬಾದ್ ಕರ್ನಾಟಕದಲ್ಲಿ ನಿಜಾಮನ ಆಳ್ವಿಕೆ ಇತ್ತು ಮತ್ತು ಉತ್ತರ ಕರ್ನಾಟಕದ ಕೆಲವು ಭಾಗಗಳು ಮೈಸೂರು ಸಂಸ್ಥಾನಕ್ಕೆ ಸೇರಿರಲಿಲ್ಲ. ಆದ್ದರಿಂದ ಈ ಭಾಗದ ಜನಸಾಮಾನ್ಯರಿಗೆ ಸಾಮನ್ಯ ಸೌಲಭ್ಯಗಳು ದೊರೆಯಲಿಲ್ಲ. ಆದ ಕಾರಣ ಈ ಭಾಗಗಳು ಹಿಂದುಳಿದವು. ಈ ಪ್ರದೇಶದಲ್ಲಿ ಭೂಮಾಲೀಕರ ಮತ್ತು ಬಂಡವಾಳಗಾರರ ಆಳ್ವಿಕೆಯು ಹೆಚ್ಚು ಇತ್ತು. ಮೈಸೂರು ಭಾಗದಲ್ಲಿದ್ದ ದಲಿತರ ಶೋಷಣೆಯ ತೀವ್ರತೆಗಿಂತ ಹೈದರಾಬಾದ್ ಕರ್ನಾಟಕ ಮತ್ತು ಉತ್ತರ ಕರ್ನಾಟಕ ಭಾಗದಲ್ಲಿ ಹೆಚ್ಚಾಗಿರುವುದು ಮುಖ್ಯ ಕಾರಣಗಳಲ್ಲೊಂದು. ಆದ್ದರಿಂದ ಕರ್ನಾಟಕದ ಉತ್ತರ ಭಾಗದಲ್ಲಿ ದಲಿತೇತರ ಭೂಮಾಲೀಕರು ಮತ್ತು ದಲಿತ ಕೂಲಿಕಾರ್ಮಿಕರು ಕಂಡು ಬಂದರು.

೧೯೧೮ರ ಹೊತ್ತಿಗೆ ಕರ್ನಾಟಕದಲ್ಲಿ ಬ್ರಾಹ್ಮಣೇತರ ಚಳುವಳಿಗಳು ಶುರು ಆದವು. ಈ ಬ್ರಾಹ್ಮಣೇತರರ ಚಳುವಳಿಯಲ್ಲಿ ರಾಜ್ಯದಲ್ಲಿ ಬಲಾಢ್ಯ ಜಾತಿಗಳಾದ ಲಿಂಗಾಯಿತ ಮತ್ತು ಒಕ್ಕಲಿಗ ಜಾತಿಗಳು ಮುಂಚೂಣಿಯಲ್ಲಿದ್ದವು. ಈ ಮುಂಚೂಣಿಯಲ್ಲಿದ್ದ ಜಾತಿಗಳೊಂದಿಗೆ ಬ್ರಾಹ್ಮಣ ವಿರೋಧಿ ಚಟುವಟಿಕೆಗೆ ದಲಿತ ಸಮುದಾಯಗಳು ಸೇರಿಕೊಂಡವು. ''ಸರ್ಕಾರ ಬ್ರಾಹ್ಮಣೇತರರನ್ನು ತೃಪ್ತಿಪಡಿಸಲು ೧೯೧೮ರಲ್ಲಿ ಹಿಂದುಳಿದ ವರ್ಗದವರಿಗೆ ೧ ಲಕ್ಷ ರೂಪಾಯಿಗಳ ವಿದ್ಯಾರ್ಥಿ ವೇತನ ಮಂಜೂರು ಮಾಡಿತು. ಅದರಲ್ಲಿ ಅಸ್ಪೃಶ್ಯರಿಗೆ ೧೫,೦೦೦ ರೂಪಾಯಿಗಳನ್ನು ಹಂಚಲಾಯಿತು. ಮಿಲ್ಲರ್ ಸಮಿತಿಯು ಹಿಂದುಳಿದ ವರ್ಗಗಳ ವರದಿಯನ್ನು ಹೊರಡಿಸಿದಾಗ ಅಸ್ಪೃಶ್ಯರನ್ನು ಅದರಲ್ಲಿ ಸೇರಿಸಿಕೊಳ್ಳಲಾಯಿತು''[೬]. ಬ್ರಾಹ್ಮಣೇತರರ ವಿರುದ್ಧದ ಹೋರಾಟದಲ್ಲಿ ಸೇರಿದ ಅಸ್ಪೃಶ್ಯರು ಕ್ರಮೇಣ ಬೇರೆಯಾಗಿ ಒಡೆದು ನಿಂತರು. ಹೆಟ್ನೆಬಿಯವರು ಹೇಳುವಂತೆ ''ಬ್ರಾಹ್ಮಣೇತರ ಪಕ್ಷದ ವಿರುದ್ಧ ಜನರನ್ನು ಕ್ರೋಢೀಕರಿಸುವ ತಂತ್ರವಾಗಿ ಬ್ರಾಹ್ಮಣರು ಅಸ್ಪೃಶ್ಯರನ್ನು ಸಂಘಟಿಸತೊಡಗಿದರು''[೮]. (ಹೆಟ್ನೆ ಬ್ಯೂ : ಪೊಲಿಟಿಕಲ್ ಎಕಾನಮಿ ಆಫ್ ಇಂಡೈರೆಕ್ಟ್ ರೋಲ್ ಮೈಸೂರು - ೧೮೮೧, ೧೯೪೭ ನವದೆಹಲಿ) ಇದು ಅಸ್ಪೃಶ್ಯರಿಗೆ ಪ್ರತ್ಯೇಕತೆಯ ಹೋರಾಟಕ್ಕೆ ಅಡಿಗಲ್ಲಾಯಿತು. ಈ ಹೊತ್ತಿನಿಂದಲೇ ಶ್ರೇಣೀಕೃತ ವ್ಯವಸ್ಥೆಯಲ್ಲಿನ ಮೇಲ್ಜಾತಿಯ ಶೋಷಣೆಯ ಬಗೆಗಿನ ವಿಮರ್ಶೆಯನ್ನು ತಾತ್ವಿಕತೆಗೆ ಒಳಪಡಿಸಲಾಯಿತು. ''ಸಂಖ್ಯೆಯ ವಿಷಯದಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿದ್ದ ಬ್ರಾಹ್ಮಣರು (ಒಟ್ಟು ಜನಸಂಖ್ಯೆಯ ಶೇ. ೪ ಭಾಗ ) ಅಸ್ಪೃಶ್ಯರನ್ನು ತಮ್ಮ ಕಡೆಗೆ ಸೆಳೆದುಕೊಂಡು ಆಗ ಪ್ರಾಂತೀಯ ರಾಜಕಾರಣದಲ್ಲಿ ತಮಗೆ ವಿರೋಧಿಗಳಾಗಿದ್ದ ಬ್ರಾಹ್ಮಣೇತರರಿಗೆ ಬೆಂಬಲ ದೊರಕದ ಹಾಗೆ ಮಾಡುವುದು ಉದ್ದೇಶವಾಗಿತ್ತು. ಅವರು 'ದ ಡಿಪ್ರೆಸ್ಡ್ ಕ್ಲಾಸಸ್ ಮಿಷನ್ ಸೊಸೈಟಿ' (೧೯೨೦) ಹಾಗೂ 'ದ ಮೈಸೂರು ಸಿವಿಲ್ ಅಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್'(೧೯೨೦) ಎಂಬ ಸಂಘಟನೆಯನ್ನು ಸ್ಥಾಪಿಸಿದರು''[೯]. ಬ್ರಾಹ್ಮಣೇತರ ವಿರೋಧಿ ಸಂಘಟನೆಗಳು ತಮ್ಮ ಸಾಮಾಜಿಕ ನೆಲೆಯನ್ನು ಗುರ್ತಿಸಿಕೊಳ್ಳುವ ಸಂದರ್ಭದಲ್ಲಿ ನಿಕೃಷ್ಟ ಬದುಕನ್ನು ಹೊಂದಿದ್ದ ಅಸ್ಪೃಶ್ಯರ ಬಗೆಗಿನ ಕಾಳಜಿಗಳು ಪ್ರಾರಂಭವಾದವು. ಇದೇ ಹೊತ್ತಿನಲ್ಲಿ ''ಕಾಂಗ್ರೆಸಿಗರು ಹಾಗೂ ತಕ್ಷಣದ ಅಭಿಮಾನಿಗಳು ಒಂದುಗೂಡಿ 'ಮೈಸೂರು ರಾಜ್ಯ ಅಸ್ಪೃಶ್ಯತಾ ವಿರೋಧಿ ಒಕ್ಕೂಟ' (Mysore State Anti Untouchability League)ವನ್ನು ರಚಿಸಿಕೊಂಡರು. ೧೧ ಜನ ಸದಸ್ಯರ ಪೈಕಿ ಒಬ್ಬರು ಅಸ್ಪೃಶ್ಯವರ್ಗದವರು ಇಬ್ಬರು ಬ್ರಾಹ್ಮಣರು ಹಾಗೂ ಉಳಿದವರು ಬ್ರಾಹ್ಮಣೇತರಿದ್ದರು''[೧೦]. ಅಸ್ಪೃಶ್ಯತೆಯನ್ನು ವಿರೋಧಿಸುವ ಹಕ್ಕಿನೊಂದಿಗೆ ಒಕ್ಕೂಟದಲ್ಲಿನ ಸ್ಥಾನವು ಅನುಭವಿಸುವವರಿಗೆ ದೊರೆಯಿತು. ''ಸರ್ಕಾರವು ಮಾಮೂಲಿ ಎಂಬ ಹೆಸರಿನಲ್ಲಿ, ಅಸ್ಪೃಶ್ಯತೆಯು

ಆಚರಣೆಯನ್ನು ಸಮರ್ಥಿಸಿಕೊಳ್ಳುತ್ತಿರುವುದಾಗಿ ಅಸ್ಪೃಶ್ಯತಾ ವಿರೋಧಿ ಒಕ್ಕೂಟವು ಪ್ರತಿಭಟಿಸಿತು. 'ಅಸ್ಪೃಶ್ಯತಾ ನಿವಾರಣಾ ಮಸೂದೆ' ಎಂಬ ಮಸೂದೆಯ ಕರಡನ್ನು ತಯಾರಿಸಿ ಅಸ್ಪೃಶ್ಯತಾ ಆಚರಣೆಯಲ್ಲಿ ಸರ್ಕಾರವು ಯಾವುದೇ ರೀತಿಯ ಉತ್ತೇಜನವನ್ನು ನೀಡಬಾರದೆಂದು ಒಂದು ಶಾಸನ ಹೊರಡಿಸಬೇಕೆಂದು ಆಗ್ರಹಪಡಿಸಿತು''[೧೯]. ಸ್ವಾತಂತ್ರ್ಯ ಪೂರ್ವದಲ್ಲಿ, ಸ್ವಾತಂತ್ರ್ಯಾನಂತರದಲ್ಲಿ ಅಂಬೇಡ್ಕರ್ ನಡೆಸಿದ ಹೋರಾಟವು ಕರ್ನಾಟಕ ದಲಿತ ಚಳುವಳಿಗೆ ಅಡಿಪಾಯವಾಯಿತು. ಪರಿಣಾಮವಾಗಿ ಅಸ್ಪೃಶ್ಯರು ತಮ್ಮ ಹಕ್ಕನ್ನು ಪಡೆಯಲು ಚಳುವಳಿಗೆ ಇಳಿದರು, ಶಿಕ್ಷಣ ಪಡೆದು ತಮ್ಮ ಸಾಮಾಜಿಕ ಕಟುವಾಸ್ತವವನ್ನು ತಿಳಿದು ಚಳುವಳಿಯೊಂದೇ ಮಾರ್ಗವೆಂದು ತಿಳಿಯುವ ಹೊತ್ತಿಗೆ ಪರಕೀಯರಿಂದ ದೇಶದ ಸ್ವಾತಂತ್ರ್ಯ ಪಡೆದು ಹಲವು ದಶಕಗಳು ಕಳೆದಿದ್ದವು. ದೇಶೀಯರು ಸ್ವಾತಂತ್ರ್ಯಕ್ಕೆ ನಡೆಸಿದ ಹೋರಾಟದಷ್ಟೇ ದೇಶದಲ್ಲಿ ಬದುಕುತ್ತಿರುವ ಅಸ್ಪೃಶ್ಯರು ತಮ್ಮ ಸಾಮಾಜಿಕ ಸಮಾನತೆಗಾಗಿ; ತಮ್ಮ ಪ್ರಜಾಪ್ರಭುತ್ವದ ಬದುಕಿಗಾಗಿ; ಶೋಷಣೆಯ ವಿರುದ್ಧ ಹೋರಾಟಕ್ಕೆ ಚಳುವಳಿಯನ್ನು ಕಟ್ಟಬೇಕಾಯಿತು. ಈ ನಿಟ್ಟಿನಲ್ಲಿ ಅಸ್ಪೃಶ್ಯರ/ದಲಿತರ ಚಳುವಳಿಗಳು ಉಗಮಗೊಂಡವು. ಇವುಗಳ ಜೊತೆಗೆ ಕರ್ನಾಟಕದ ನೆರೆರಾಜ್ಯಗಳ ಪ್ರಭಾವವು ತುಂಬಾ ಆಯಿತು. ಮಹಾರಾಷ್ಟ್ರದಲ್ಲಿ ಉಗಮಗೊಂಡ ದಲಿತ ಪ್ಯಾಂಥರ್ಸ್ ಚಳುವಳಿ ಮತ್ತು ಆಂಧ್ರಪ್ರದೇಶದ ನಕ್ಸಲ್ ಬಾರಿ ಹೋರಾಟಗಳು ಕರ್ನಾಟಕ ದಲಿತ ಚಳುವಳಿಗೆ ಪೂರಕವಾದ ಹಿನ್ನೆಲೆಯಾದವು.

೧೯೮೯ರಿಂದೀಚೆಗೆ ಕರ್ನಾಟಕದಲ್ಲಿ ದಲಿತ ಚಳುವಳಿಗೆ ಸಾಕಷ್ಟು ಪುಷ್ಟಿ ಸಿಕ್ಕಂತಾಯಿತು. ಈ ಅವಧಿಯಲ್ಲಿ ಕರ್ನಾಟಕದ ಮುಖ್ಯ ಮಂತ್ರಿ ಶ್ರೀ ಡಿ. ದೇವರಾಜ ಅರಸು ಆಗಿದ್ದರು. ಇವರ ನೇತೃತ್ವದಲ್ಲಿ ಎಲ್.ಜಿ. ಹಾವನೂರ್ ವರದಿ ಜಾರಿಗೆ ಬಂತು. ಇದರಿಂದ ೧೯೮೯ರ ಅಂಬೇಡ್ಕರ್ ಜನ್ಮದಿನದಂದು (ಏಪ್ರಿಲ್ ೧೪) ದಲಿತ ಬುದ್ಧಿಜೀವಿಗಳೆಲ್ಲಾ ಒಂದುಗೂಡಿದರು. ದಲಿತರಿಗೆ, ಹಿಂದುಳಿದವರ ಪರವಾಗಿದ್ದ ಹಾವನೂರ್ ವರದಿಯ ಬಗೆಗಿನ ತಿಳಿವು ಈ ಸಮುದಾಯಗಳ ಬುದ್ಧಿಜೀವಿಗಳಿಗೆ ತಲುಪಿತು. ಈ ವರದಿಯ ಅನುಕೂಲಗಳ ಬಗ್ಗೆ ಚರ್ಚೆ ನಡೆಯಿತು. ಹಿಂದುಳಿದ ದಲಿತ ಅಲ್ಪಸಂಖ್ಯಾತರು ಒಂದಾದರು. ನಂತರದ ೧೯೭೩ರಲ್ಲಿ ಜರುಗಿದ ಬಿ. ಬಸವಲಿಂಗಪ್ಪನವರ 'ಭೂಸಾಪ್ರಕರಣ'ದಿಂದ ದಲಿತ, ದಲಿತಪರ ದಲಿತೇತರ ಬುದ್ಧಿಜೀವಿಗಳು ಸಕ್ರಿಯವಾಗಿ ಪಾಲ್ಗೊಂಡು ಪ್ರಕರಣದ ಪರವಾದ ಚರ್ಚೆಯನ್ನು ಕುರಿತು ಅದಕ್ಕೆ ತಾತ್ವಿಕರೂಪವನ್ನು ಕೊಟ್ಟರು. ಆ ರೀತಿಯಲ್ಲಿನ ಬಿ. ಬಸವಲಿಂಗಪ್ಪನವರ ಭಾಷಣದ ವಸ್ತು ವಿನ್ಯಾಸವನ್ನು ಕುರಿತು ಅದಕ್ಕೆ ಒಂದು ಆಯಾಮವನ್ನು ಕೊಟ್ಟರು. ಅವರ ಮಾತಿನ ಅನಿವಾರ್ಯತೆಯನ್ನು ಗುರ್ತಿಸಿದರು. ಈ ಭಾಷಣದಿಂದ ಬಸವಲಿಂಗಪ್ಪನವರು ಮಂತ್ರಿಪದವಿಯನ್ನು ಕಳೆದುಕೊಂಡರು. ಭಾಷಣ ಮಂತ್ರಿಪದವಿಯಿಂದ ಇಳಿಯಲು ಒಂದು ನೆಪವಾಯಿತು. ಇದರ ಹಿಂದಿನ ರಾಜಕೀಯದ ಕೈವಾಡ ಬೇರೆಯೇ ಇತ್ತು. ಇದು ದಲಿತ ಸಾಹಿತಿಗಳನ್ನು ದನಿಗೂಡಿಸುವಲ್ಲಿ ಯಶಸ್ವಿಯಾಯಿತು. ಇದು ಮುಂದೆ ದಲಿತ ಲೇಖಕರಲ್ಲಿ ತಮ್ಮ ಸಂಸ್ಕೃತಿಯನ್ನು ಗುರ್ತಿಸಿಕೊಳ್ಳಲು, ಹಾಗೂ ಸೃಜನಶೀಲ ಸಾಹಿತ್ಯವನ್ನು ಕಟ್ಟಲು ಸಹಕಾರಿಯಾಯಿತು. ಈ ಸಂದರ್ಭದಲ್ಲಿ ಬಸವಲಿಂಗಪ್ಪನವರು ದಲಿತರ ತಲೆಮೇಲೆ ಹೊರುತ್ತಿದ್ದ ಅನಿಷ್ಟ ಪದ್ಧತಿಯನ್ನು ನಿಲ್ಲಿಸಲು ಹೋರಾಡಿದರು. ಅಲ್ಲದೆ ಮಲ ಹೊರುವುದನ್ನು ನಿಲ್ಲಿಸಲು ಹೋರಾಡಿದ ಮೊದಲಿಗರು. ಇದು ದಲಿತ ಯುವಜನತೆಯನ್ನು ಕ್ರಿಯಾಶೀಲಗೊಳಿಸಿತು. ಇವರಲ್ಲಿ ಬಸವಲಿಂಗಪ್ಪನವರು ಮೊದಲೆತ್ತಿದ ದನಿಯು ದಲಿತರ ಶೋಷಣೆಯ ವಾಸ್ತವ ಅರಿವನ್ನು ಮೂಡಿಸಿತು. ೧೯೭೩ರ ಆಗಸ್ಟ್ ೨೫-೨೮ರಂದು ಮೈಸೂರಿನಲ್ಲಿ ಜಾತಿ ವಿನಾಶ ಸಮ್ಮೇಳನ ಜರುಗಿತು. ವೈಚಾರಿಕ ಮನಸ್ಸುಗಳು ಈ ಸಮ್ಮೇಳನದಲ್ಲಿ ಭಾಗವಹಿಸಿದವು.

ಇದರ ಮುಂಚೂಣಿಯಲ್ಲಿದ್ದವರು ಪಿ.ಲಂಕೇಶ್, ಪೂರ್ಣಚಂದ್ರ ತೇಜಸ್ವಿ, ದೇವನೂರು ಮಹಾದೇವ, ಸಿದ್ಧಲಿಂಗಯ್ಯ, ಕೆ. ರಾಮದಾಸ್, ಶ್ರೀಕೃಷ್ಣ ಆಲನಹಳ್ಳಿ ಮುಂತಾದವರು. ಇದು ಹೊಸ ಬಗೆಯ ರೋಮಾಂಚನವನ್ನು ಕರ್ನಾಟಕದ್ಯಂತ ಉಂಟು ಮಾಡಿತು.

ದಲಿತರ ಸ್ವಾಭಿಮಾನದ ಪ್ರತೀಕವಾಗಿ ೧೯೭೪ರಲ್ಲಿ ಭದ್ರಾವತಿಯಲ್ಲಿ 'ದಲಿತ ಸಂಘರ್ಷ ಸಮಿತಿ' ಬಿ.ಕೃಷ್ಣಪ್ಪನವರ ನೇತೃತ್ವದಲ್ಲಿ ರೂಪುಗೊಂಡಿತು. ನಂತರದ ಕಾಲಮಾನದಲ್ಲಿ ಇದು 'ಕರ್ನಾಟಕ ದಲಿತ ಸಂಘರ್ಷ ಸಮಿತಿ'ಯಾಗಿ ರೂಪುಗೊಂಡಿತು. ದಲಿತರ ಶೋಷಣೆಯ ವಿರುದ್ಧ ಮತ್ತು ಅವರ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಶೋಷಣೆಯ ವಿರುದ್ಧ ನಿರಂತರವಾಗಿ ಹೋರಾಡಲು ಚಳುವಳಿಯಾಗಿ ಕ.ದ.ಸಂ.ಸ ನಿಂತಿತು. ಈ ಸಂಘಟನೆಯು ತನ್ನ ತೆಕ್ಕೆಯೊಳಗೆ 'ಕರ್ನಾಟಕ ದಲಿತ ವಿದ್ಯಾರ್ಥಿ ಒಕ್ಕೂಟ', 'ದಲಿತ ಮಹಿಳಾ ಒಕ್ಕೂಟ' 'ದಲಿತ ನೌಕರರ ಒಕ್ಕೂಟ', 'ದಲಿತ ಕಲಾಮಂಡಲಿ' 'ದಲಿತ ವೈದ್ಯ ಒಕ್ಕೂಟ'ವನ್ನು ಬೆಳೆಸಿತು. ದಲಿತ ಕಲಾಮಂಡಲಿ ದಲಿತ ಸಾಹಿತ್ಯದ ಸ್ವರಗಳನ್ನು ನಗರದ ಬೀದಿ ಬೀದಿಗಳಲ್ಲಿ ಕಛೇರಿಯ ಎದುರು ಕೇಳಿಸುವಂತೆ ಮಾಡಿತು. ಇದಕ್ಕೆಲ್ಲಾ ದಲಿತ ಸಂಘರ್ಷ ಸಮಿತಿ ಕಾರಣವಾಯಿತು. ಹೋರಾಟದ ಹಾಡುಗಳು ಈ ಸಂದರ್ಭದಲ್ಲಿ ದಲಿತ ಸಾಹಿತ್ಯದ ಪ್ರಕಾರಗಳಿಗೆ ಸೇರಿಕೊಂಡವು. ೭೦ರ ದಶಕದಲ್ಲಿ ದೇವರಾಜ ಅರಸರ ಆಡಳಿತದಲ್ಲಿ ಕರ್ನಾಟಕದಲ್ಲಿ ಜಾರಿಗೆ ಬಂದ ಭೂಮಸೂದೆ ಕಾಯ್ದೆಯ ಫಲವಾಗಿ ಕರ್ನಾಟಕದಲ್ಲಿನ ಭೂಮಿ ಇಲ್ಲದ ಅಸಂಖ್ಯೆ ಜನರು ಭೂಮಿಯನ್ನು ಪಡೆದರು. ಭೂಮಿಯ ಸಂಬಂಧ ಹೊಂದದ ಜನರಲ್ಲಿ ಆಸ್ತಿಯ ಹಕ್ಕು ಸ್ವಾಭಿಮಾನವನ್ನು ಮೂಡಿಸಿತು. ೧೯೭೫ರ ಜೂನ್ ೨೫ರಂದು ತುರ್ತುಪರಿಸ್ಥಿತಿ ಜಾರಿಗೆ ಬಂತು. ಇದರಿಂದ ಕರ್ನಾಟಕದ ಕೆಲವು ಬರಹಗಾರರು, ಕಲಾವಿದರು, ಸಮಾಜ ಚಿಂತಕರು, ಜನ ಸಾಮಾನ್ಯ ಹೋರಾಟಗಾರರು ಬೀದಿಗಿಳಿದು ಹೋರಾಡಿದರು. ತುರ್ತುಪರಿಸ್ಥಿತಿಯನ್ನು ವಿರೋಧಿಸಿದರು. ಪರಿಣಾಮವಾಗಿ ಕೆಲವರು ಸೆರೆಮನೆಯನ್ನು ಸೇರಿದರು. ಆಳುವ ವರ್ಗದ ವಿರುದ್ಧ ಹೋರಾಡಿದರು. ಅವರ ಚಿಂತನೆಯು ಜನಸಾಮಾನ್ಯರ ಬದುಕಿನ ವಾಸ್ತವ ಸ್ಥಿತಿಯತ್ತ ಇತ್ತು. ಹೀಗೆ ಹಲವಾರು ಪೂರಕ ಅಂಶಗಳು ದಲಿತ ಚಳುವಳಿಯ ಹಿನ್ನೆಲೆಗೆ ಕಾರಣವಾದವು.

## ದಲಿತ ಚಳುವಳಿಯ ಪ್ರೇರಣೆ ಮತ್ತು ಪ್ರಭಾವ

**ಸಾಮಾಜಿಕ ವಾಸ್ತವ :** ಕರ್ನಾಟಕದ ಸಮುದಾಯಗಳ ಬದುಕಿನಲ್ಲಿ ಸಾಮಾಜಿಕ ವಾಸ್ತವವನ್ನು ನೋಡುವಾಗ ಅದು ಏಕಮುಖವಾದದಲ್ಲ. ಅವುಗಳು ಪ್ರಾದೇಶಿಕ ಭಿನ್ನತೆಯನ್ನು ಹೊಂದಿವೆ. ಅದಕ್ಕೆ ಪರಿಸರ, ಭೌಗೋಳಿಕ ವಾತಾವರಣ, ಅಲ್ಲಿಯ ಸ್ಥಿತಿಗತಿಗಳು ಕಾರಣವಾಗುತ್ತವೆ. ವ್ಯಕ್ತಿಯು ಬದುಕುವ ವ್ಯವಸ್ಥೆಯೊಂದಿಗೆ; ಅವನ ಕುಟುಂಬದ, ಸಮುದಾಯದ ಸಾಮಾಜಿಕ ಸ್ಥಾನಮಾನಗಳಿಂದ ಸಾಮಾಜಿಕ ವಾಸ್ತವವನ್ನು ಅರಿಯಬಹುದು.

ದಲಿತರ ಬದುಕಲ್ಲಿ ಸಾಮಾಜಿಕ ವಾಸ್ತವವನ್ನು ಅರಿಯುವಾಗ ಕರ್ನಾಟಕದಾದ್ಯಂತ ದಲಿತರ ಬದುಕು ಸಾರ್ವತ್ರಿಕವಾಗಿ ಶೋಷಣೆಗೆ ಒಳಗಾಗಿರುವಂತಹದ್ದು ಎಂಬ ಅಭಿಪ್ರಾಯವಿದೆ. ಆದರೆ ಈ ಶೋಷಣೆಗಳು ಏಕರೂಪದಲ್ಲಿ ಇಲ್ಲ; ಅವುಗಳು ದಲಿತ ಸಮುದಾಯ ಸಮುದಾಯಗಳ ಒಳಗೆ, ಕುಟುಂಬ ಕುಟುಂಬದಲ್ಲೂ ಭಿನ್ನ ಸ್ವರೂಪವನ್ನು ಹೊಂದಿವೆ. ಈ ದಲಿತ ಸಮುದಾಯಗಳು ಎಂತಹ ಶೋಷಣೆಗಳನ್ನು ಒಳಗೊಂಡಿವೆ? ಶೋಷಕ ಸಮುದಾಯಗಳು ಯಾವುವು? ಅದರ ಕಾರಣಗಳು ಏನು? ಶೋಷಿತ ಸಮುದಾಯಗಳು ಶೋಷಕ ಸಮುದಾಯಗಳ ಬಗೆಗಿನ ಕಲ್ಪನೆಗಳು ಎಂತಹವು ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ.

ಇಲ್ಲಿ ಅಧ್ಯಯನದ ದೃಷ್ಟಿಯಿಂದ ಕರ್ನಾಟಕವನ್ನು ಮೂರು ಪ್ರಾಂತ್ಯಗಳನ್ನಾಗಿ ವಿಭಾಗ ಮಾಡಿಕೊಳ್ಳಲಾಗಿದೆ. ಮೊದಲನೆಯದು ಈಗಿನ ಕರ್ನಾಟಕ ಮ್ಯಾಪಿನ (ನಕ್ಷೆಯ) ಚಿತ್ರದುರ್ಗದ ಕೆಳಜಿಲ್ಲೆಗಳು. ಇಲ್ಲಿ ಮೈಸೂರು, ಚಾಮರಾಜನಗರ, ಬೆಂಗಳೂರು, ಕೋಲಾರ, ಮಂಡ್ಯ, ಹಾಸನ, ತುಮಕೂರು, ಚಿಕ್ಕಮಗಳೂರು ಮುಂತಾದವು ಸೇರುತ್ತವೆ. ಸಾಮಾನ್ಯವಾಗಿ ಒಂದೇ ರೀತಿಯಲ್ಲಿ ಕಂಡುಬರುವ ಲಕ್ಷಣಗಳು ಇಲ್ಲಿ ಸೇರಿರುತ್ತವೆ. ಅದು ಸಂಪೂರ್ಣವಾಗಿ ಅಲ್ಲ. ಈ ಜಿಲ್ಲೆಗಳಲ್ಲಿ ಕೆಲವು ದಲಿತರು ಮಾತ್ರ ಅಲ್ಪಸ್ವಲ್ಪ ಜಮೀನನ್ನು ಹೊಂದಿದ್ದಾರೆ. ಬಹುಮಂದಿ ಬಂಡವಾಳಶಾಹಿಗಳ ಭೂಮಾಲೀಕರ ವಹಿವಾಟಿಗೆ ಸಂಬಂಧಿಸಿದ ಕೆಲಸಗಳಿಗೆ ತೊಡಗಿ ತಮ್ಮ ಬದುಕನ್ನು ಕಳೆಯುತ್ತಿದ್ದಾರೆ. ಈ ಭಾಗದ ಗ್ರಾಮ ಸಮಾಜದ ಒಕ್ಕಲಿಗ, ಗೌಡರು ಪ್ರಬಲವಾಗಿದ್ದಾರೆ. ಹಾಗೆಯೇ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ, ಹೆಚ್ಚು ಭೂ ಒಡೆತನವನ್ನು ಹೊಂದಿರುವವರು ತಮ್ಮ ಊರುಗಳಲ್ಲಿ ಪ್ರಾಬಲ್ಯವನ್ನು ನಡೆಸುತ್ತಾರೆ. ಇಂಥ ಒಡೆತನವನ್ನು ಹೊಂದಿದ ಸಮುದಾಯಗಳು ಲಿಂಗಾಯತರು, ಬ್ರಾಹ್ಮಣರು, ಕುರುಬರು, ವಿಶ್ವಕರ್ಮರು, ಒಕ್ಕಲಿಗರು, ವೈಶ್ಯರು ಮುಂತಾದವು ಆಗಿವೆ. ಈ ಸಮುದಾಯಗಳು ಯಾವ ಯಾವ ಊರಲ್ಲಿ ಹೆಚ್ಚಿರುತ್ತಾರೋ ಅವರು ತಮ್ಮ ಹಿಡಿತದಲ್ಲಿ ಗ್ರಾಮವ್ಯವಸ್ಥೆಯನ್ನು ಇಟ್ಟುಕೊಂಡಿರುತ್ತಾರೆ. ಇವರು ತಮ್ಮ ಸಮುದಾಯಗಳಿಗೆ ಇದ್ದ ಸ್ಥಾನಮಾನವನ್ನು ಅದಕ್ಕೆ ಅನುಗುಣವಾಗಿ ಅವುಗಳ ಸಾಮಾಜಿಕ ಪ್ರತಿಷ್ಠೆಯನ್ನು ಕಾಪಾಡಿಕೊಂಡು ಬರುತ್ತಾರೆ. ಈ ಎಲ್ಲಾ ಸಮುದಾಯಗಳು ತಮ್ಮ ದಾಸ್ಯಕ್ಕೆ ದಲಿತ ಸಮುದಾಯಗಳನ್ನ ಒಳಗು ಮಾಡಿಕೊಳ್ಳುತ್ತವೆ. ಬಂಡವಾಳಹೀನ ಭೂಹೀನ ದಲಿತ ಸಮುದಾಯಗಳು ಶ್ರಮದ ಆಧಾರದಿಂದ ತಮ್ಮ ಬದುಕಿ, ವೃತ್ತಿಯನ್ನು ನಡೆಸುತ್ತವೆ. ಅದಕ್ಕೆ ಹಿನ್ನೆಲೆಯಾಗಿ ಪಟ್ಟಭದ್ರ ಹಿತಾಸಕ್ತಿ ಕ್ರೂರ ವ್ಯವಸ್ಥೆಯನ್ನು ರೂಪಿಸಿದೆ. ಇಲ್ಲಿ ಮಾನವನ ಒಟ್ಟು ಸಮುದಾಯಗಳಲ್ಲಿ ಮನುಷ್ಯ ಕಲ್ಪನೆಯು ಎನ್ನುವುದು ಒಂದು ಎಂಬುದಿಲ್ಲ. ಹಾಗಾಗಿ ದಲಿತರು ಬಹುವಾಗಿ ಕೃಷಿಯ ವೃತ್ತಿಯನ್ನು ಹೊಂದಿರುತ್ತಾರೆ. ಈ ವೃತ್ತಿಗಳಲ್ಲಿ ಭೂಮಾಲಿಕರ ಹೊಲ, ಗದ್ದೆ, ತೋಟ, ಮತ್ತು ಊರ ಕೆಲಸಗಳಲ್ಲಿ ಸೇರಿರುತ್ತವೆ.

ಗೇಣಿದಾರರು ತಾವು ಉಳುವ ಭೂಮಿಯ ಮಾಲೀಕರಾಗಲು ೧೯೭೪ರ ಭೂ ಸುಧಾರಣಾ ಕಾಯ್ದೆಯು ಅವಕಾಶವನ್ನು ಕಲ್ಪಿಸಿತು. ಅದರ ಸಲುವಾಗಿ ಜಿಲ್ಲಾಧಿಕಾರಿಗಳಿಗೆ ಅರ್ಜಿಗಳನ್ನು ನೇರವಾಗಿ ಸಲ್ಲಿಸುವ ಅವಕಾಶವಿತ್ತು. ಈ ಸಂದರ್ಭದಲ್ಲಿ ದಲಿತ ಗೇಣಿದಾರರು ಬಹುಪಾಲು ಅರ್ಜಿಯನ್ನು ಸಲ್ಲಿಸಲಿಲ್ಲ. ಏಕೆಂದರೆ ತಾವು ಉಳುವ ಭೂಮಿಯ ಒಡೆತನವು ಭೂಮಾಲಿಕನ ಒಡೆತನದಲ್ಲಿತ್ತು. ಗೊತ್ತಾದ ಕೆಲವರಿಗೆ ಪ್ರತಿಭಟಿಸಲು ಶಕ್ತಿ ಇರಲಿಲ್ಲ. ಇದು ಒಂದು ಅಂಶವಾದರೆ, ಅರ್ಜಿ ಸಲ್ಲಿಸಬೇಕು ಎನ್ನುವ ಸಾಮಾನ್ಯ ತಿಳುವಳಿಕೆಯೂ, ಅದರ ವಿಷಯವೂ ದಲಿತ ಸಮುದಾಯಗಳಿಗೆ ಗೊತ್ತಿರಲಿಲ್ಲ. ಇದಕ್ಕೆ ದಲಿತ ಸಮುದಾಯಗಳ ಶಿಕ್ಷಣದ ಕೊರತೆಯು ಒಂದು ಕಾರಣವಿರಬಹುದು. ಎಲ್ಲೋ ಅಲ್ಲೊಬ್ಬ ಇಲ್ಲೊಬ್ಬ ದಲಿತ ದರಕಾಸ್ತಿನ / ಸರ್ಕಾರದ / ಪಾಳು ಜಮೀನನ್ನು ಉಳುಮೆ ಮಾಡಿದವರಿಗೆ ಅದು ಅವನ ಶಕ್ತಿ ಸಾಮರ್ಥ್ಯಕ್ಕೆ ತಕ್ಕಂತೆ ಹೆಚ್ಚೆಂದರೆ ನಾಲ್ಕು ಅಥವಾ ಐದು ಎಕರೆ ಹೊಂದಿದ್ದು ಕಂಡುಬಂತು. ಇಲ್ಲಿ ಶಿಕ್ಷಣವು ಪ್ರಚಾರವಾಗಿ ಕಂಡುಬಂತು. ಕೆಲವರು ಶಿಕ್ಷಣವನ್ನು ಪಡೆದರು. ಇದು ಮೈಸೂರು ಪ್ರಾಂತ್ಯದ ದಲಿತರ ಸಾಮಾನ್ಯ ಅಂಶ.

ಎರಡನೆಯದು ಬೀದರ್, ಗುಲ್ಬರ್ಗ, ರಾಯಚೂರು, ಬಳ್ಳಾರಿ, ಧಾರವಾಡ, ಚಿತ್ರದುರ್ಗ ಬಿಜಾಪುರ, ಮುಂತಾದವುಗಳು ಬಯಲುಸೀಮೆಯ ಪ್ರದೇಶವನ್ನು ಹೊಂದಿವೆ. ಈ ಪ್ರಾಂತ್ಯದಲ್ಲಿ ದಲಿತರ ಭೂ ಒಡೆತನವು ಬಹಳ

ಕಡಿಮೆ. ಕೆಲವು ಗ್ರಾಮಗಳಲ್ಲಿ ದಲಿತರಿಗೆ ಭೂಮಿ ಇಲ್ಲವೇ ಇಲ್ಲವೆಂದು ಹೇಳಬಹುದು. ಈ ಜಿಲ್ಲೆಗಳಲ್ಲಿ ಕೆಲವು ಹೈದರಾಬಾದ್ ಕರ್ನಾಟಕ, ಮುಂಬಯಿ ಕರ್ನಾಟಕಕ್ಕೆ ಒಂದು ಕಾಲದಲ್ಲಿ ಸೇರಿತ್ತು. ಈ ಭಾಗದಲ್ಲಿ ಬಾರೀ ಭೂಮಾಲೀಕರು, ಬಾರೀ ಬಂಡವಾಳಶಾಹಿಗಳು ಕಂಡುಬಂದರು. ಹಾಗೆಯೇ ವಸತಿಹೀನ, ಭೂಹೀನ ದಲಿತರು ಇಲ್ಲಿ ಕಂಡುಬಂದರು. ಈ ಭಾಗದಲ್ಲಿ ಬಹುಸಂಖ್ಯಾತ ದಲಿತರು ಕೂಲಿಯನ್ನೇ ನಂಬಿದ್ದಾರೆ. ಇಲ್ಲಿನ ದಲಿತರ ಕೂಲಿ ಬಹಳ ಕಡಿಮೆ. ಇಲ್ಲಿ ತಮ್ಮ ಬದುಕಿನ ವಹಿವಾಟಿಗೆ ಎಟುಕದ ಇವರ ಆರ್ಥಿಕ ಗಳಿಕೆಯು ದಲಿತ ಸಮುದಾಯಗಳಲ್ಲಿದೆ. ಇದು ಹಲವು ಸಮಸ್ಯೆಗಳನ್ನು ದಲಿತರ ಬದುಕಲ್ಲಿ ತಂದೊಡ್ಡುತ್ತಿದೆ. ಆದ್ದರಿಂದ ಇಲ್ಲಿನ ದಲಿತರಿಗೆ ಶಿಕ್ಷಣವು ಹತ್ತಿರಕ್ಕೆ ಸುಳಿಯುವುದು ಕಷ್ಟಕರವಾಗಿದೆ. ಶ್ರಮದಿಂದಲೇ ಬದುಕುತ್ತಿರುವ ಇವರಿಗೆ ದೈಹಿಕ ಶ್ರಮಕ್ಕೆ ದೇಹ ಮತ್ತನ್ನು ಬಯಸುತ್ತದೆ. ಶ್ರಮದಾಯಕವಾದ ಇವರ ಕೆಲಸವು ದಿನದ ಆ ಹೊತ್ತಿನ ನಿವಾರಣೆಗೆ ಚಟಗಳಿಗೆ ಬಲಿಯಾಗುತ್ತಾರೆ. ಸರ್ಕಾರದ ಶಿಕ್ಷಣ, ಮುಂತಾದ ವ್ಯವಸ್ಥೆಗಳಿಗೆ ಇವರ ಸಾಮಾಜಿಕ ಬದುಕು ಎಟಕಿಸಿಕೊಳ್ಳುವುದಿಲ್ಲ. ಸರ್ಕಾರದ ಯೋಜನೆಗಳು ಫಲಿತದಲ್ಲಿ ಸೋಲನ್ನು ಕಾಣುತ್ತವೆ. ಇಂಥ ದಲಿತರಲ್ಲಿ ಅನಕ್ಷರತೆ ಕಾಣುತ್ತದೆ. ಅದರ ಬೆನ್ನಲ್ಲೇ ನಂಬಿಕೆ, ಸಂಪ್ರದಾಯ, ಮೂಢನಂಬಿಕೆ, ಆಚರಣೆಗಳು ಮೈಗೂಡಿರುತ್ತವೆ. ಇಲ್ಲಿ ಪ್ರಬಲವಾದ ವೀರಶೈವ, ಕುರುಬ, ಮುಂತಾದ ಸಮುದಾಯಗಳು ಕಂಡುಬಂದು ಇವರ ಯಜಮಾನಿಕೆಯ ಅಡಿಯಲ್ಲಿ ದಲಿತ ಸಮುದಾಯಗಳು ಬದುಕ ನಿರ್ವಹಿಸುತ್ತಿವೆ.

ಮೂರನೆಯದು ದಕ್ಷಿಣಕನ್ನಡ, ಉತ್ತರಕನ್ನಡ, ಮಡಿಕೇರಿ, ಶಿವಮೊಗ್ಗ, ಚಿಕ್ಕಮಗಳೂರು, ಬೆಳಗಾಂ ಮುಂತಾದವುಗಳಾಗಿರುತ್ತವೆ. ಇಲ್ಲಿ ಬದುಕುವ ದಲಿತರು ಮೈಸೂರು ಮುಂತಾದ, ಗುಲಬರ್ಗಾ ಮುಂತಾದ ಜಿಲ್ಲೆಗಳಿಗಿಂತ ಭಿನ್ನವಾದ ಬದುಕನ್ನು ಹೊಂದಿರುತ್ತಾರೆ. ಈ ಭಾಗವು ಬಹುತೇಕವಾಗಿ ಗುಡ್ಡ ಹಳ್ಳಗಳ ಪ್ರದೇಶವನ್ನು ಹೊಂದಿ ಅರಣ್ಯವನ್ನು ಹೊಂದಿರುತ್ತದೆ. ಇಂದು ಈ ಅರಣ್ಯಗಳು ಸಂಪೂರ್ಣವಾಗಿ ಬೇರೆ ಸ್ವರೂಪವನ್ನು ಪಡೆದಿದ್ದು ಅದರೊಳಗೆ ಬಂಡವಾಳಶಾಹಿಗಳ ಕಾಫಿ, ಏಲಕ್ಕಿ, ಮೆಣಸು, ಮುಂತಾದ ನೆರಳುಬೆಳೆಯನ್ನು ಬೆಳೆಯುತ್ತಿರುವುದು ಕಂಡುಬರುತ್ತದೆ. ಇವುಗಳು ಪ್ಲಾಂಟರ್‌ಗಳಾಗಿ ಇವುಗಳ ಮಾಲೀಕರು ಪ್ಲಾಂಟರ್ಸ್ ಆಗಿ ಅಲ್ಲಿಯ ವ್ಯವಸ್ಥೆಯನ್ನು ಹಿಡಿದಿಟ್ಟುಕೊಂಡಿರುತ್ತಾರೆ. ಈ ಪ್ರದೇಶದಲ್ಲಿ ವಾಸಿಸುವ ಬಹುತೇಕ ದಲಿತರು ಈ ತೋಟಗಳಲ್ಲಿ ಕೆಲಸವನ್ನು ಮಾಡುತ್ತಾ ಜೀವನ ಸಾಗಿಸುತ್ತಾರೆ. ಈ ತೋಟಗಳ ಮಾಲೀಕರು ಕೂಲಿಗಳಿಗಾಗಿಯೇ ಕಟ್ಟಿಸಿರುವ ಅವ್ಯವಸ್ಥಿತ ಮನೆಗಳು ಅವರ ವಾಸಸ್ಥಳಗಳಾಗಿರುತ್ತವೆ. ಆ ಮನೆಯ ಹಕ್ಕು ತೋಟದಲ್ಲಿನ ಶ್ರಮಕ್ಕೆ ಸಂಬಂಧಪಟ್ಟಿರುತ್ತದೆ. ಇಲ್ಲಿ ಕೆಲಸ ಮಾಡುವ ದಲಿತ ಕೂಲಿಗಳು ತಮ್ಮ ಜೀವಿತದ ಅವಧಿಯನ್ನು ಬೆಟ್ಟಗಳ ಮರಗಳ ನಡುವೆ ತಮ್ಮ ಜೀವನವನ್ನು ಕಳೆಯುತ್ತಾರೆ. ಇಲ್ಲೇ ಅಂತ್ಯವನ್ನು ಕಾಣುತ್ತಾರೆ. ಇಲ್ಲಿಯ ಊರುಗಳ ಕಲ್ಪನೆಯು ಬಯಲುಸೀಮೆಯ ತರಹ ಇರುವುದಿಲ್ಲ. ಒಂದೊಂದು ಮನೆಗೂ ಒಂದೊಂದು ಊರಿನ ಹೆಸರಿರುತ್ತದೆ. ಕಡಿಮೆ ಮನೆಗಳು ಊರಿನ ಸ್ವರೂಪವನ್ನು ಹೊಂದಿರುತ್ತವೆ. ಇಂಥ ಪ್ರದೇಶದಲ್ಲಿ ಬದುಕುವ ದಲಿತರ ಸ್ಥಿತಿಯು ಬಯಲು ಸೀಮೆಗಿಂತ ತೀರಾ ಭಿನ್ನವಾಗಿರುತ್ತದೆ. ಇವರಿಗೆ ಸಾಮಾಜಿಕ ಸೌಕರ್ಯಗಳ ಅರಿವು ಗೊತ್ತೇ ಇರುವುದಿಲ್ಲ. ಬಹುಮುಖ್ಯವಾಗಿ ಮಾಧ್ಯಮಗಳ ಸೌಕರ್ಯ ಸರಕಾರಿ ಸೌಲಭ್ಯಗಳು ಇಲ್ಲಿನ ದಲಿತರ ತಿಳುವಿಗೆ ಬಂದಿರುವುದೇ ಇಲ್ಲ. ಇಲ್ಲಿ ಬಹುತೇಕವಾಗಿ ಪ್ರಾದೇಶಿಕವಾಗಿ ಹಿಡಿತವನ್ನು ಇಟ್ಟುಕೊಂಡಿರುವ ತೋಟದ (ಭೂಮಿಯು) ಒಡೆಯನಿಗೆ ಸೇರಿರುತ್ತದೆ. ಅವರ ಆಳುವ ಶಕ್ತಿಗಳು ದಲಿತ ಸಮುದಾಯಗಳನ್ನು ನಿಯಂತ್ರಿಸುತ್ತಿರುತ್ತವೆ.

ಬಯಲು ಸೀಮೆಯಿಂದ ದಲಿತರು ತಮ್ಮ ಪ್ರದೇಶದಲ್ಲಿ ಕೂಲಿ ಸಿಗದಿದ್ದ ತಿಂಗಳುಗಳಲ್ಲಿ ಮಲೆನಾಡಿಗೆ ಕೂಲಿಕೆಲಸಕ್ಕಾಗಿ ಬರುತ್ತಾರೆ. ಈ ಪ್ರದೇಶಗಳಲ್ಲಿ ವಾಸಮಾಡುವ ಶ್ರಮದಾಯಕ ದಲಿತ ಕೂಲಿಗಳು ಎರಡು ರೀತಿಯಲ್ಲಿ ಬದುಕನ್ನು ಅನುಭವಿಸುವವರು ಕಾಣ ಸಿಗುತ್ತಾರೆ. ಅವರಲ್ಲಿ ಮೊದಲನೆಯವರು ಈ ಕಾಫಿ, ಟೀ ಮುಂತಾದ ತೋಟಗಳಲ್ಲಿಯೇ ಬದುಕುವವರು. ಎರಡನೆಯವರು ಕೆಲವು ತಿಂಗಳುಗಳಲ್ಲಿ ಪ್ರಾದೇಶಿಕವಾಗಿ ಅನುಭವಿಸುವ ಅರೆನಿರುದ್ಯೋಗವನ್ನು ನೀಗಿಸಲು ಬೇಸಿಗೆಯ ಸಂದರ್ಭದಲ್ಲಿ ಮಲೆನಾಡಿಗೆ ಕೂಲಿಯನ್ನು ಹರಸಿ ಬರುತ್ತಾರೆ. ಕೂಲಿಕೆಲಸವು ತಮ್ಮ ಪ್ರದೇಶದಲ್ಲಿ ವರ್ಷಪೂರ್ತಿ ಸಿಗದ ಸಂದರ್ಭದಲ್ಲಿ ಸದಾ ಕೆಲಸವಿರುವ ಮಲೆನಾಡನ್ನು ಆಶ್ರಯಿಸಿ ದಲಿತರು ಬರುತ್ತಾರೆ.

ಮಲೆನಾಡಿನ ತೋಟಗಳಲ್ಲಿ ವಂಶಪಾರಂಪರ್ಯವಾಗಿ ಬದುಕುವ ಬಹುಪಾಲು ಕೂಲಿಕೆಲಸಗಾರರಿಗೆ, ಯಾವುದೇ ರೀತಿಯ ಭೂ ಒಡೆತನ ಇರುವುದಿಲ್ಲ. ತೋಟಗಳ ಮಾಲೀಕ ಅವನ ಭಾಗದ ಸರ್ವ ಆಸ್ತಿಗೆ ಒಡೆಯನಾಗಿರುತ್ತಾನೆ. ದುಡಿಮೆಗೆ ಸಿಕ್ಕಷ್ಟು ಕೂಲಿಯೇ ದಲಿತರ ಪಾಲಿಗೆ ಸೇರಿದ್ದಾಗಿರುತ್ತದೆ. ಊಳಿಗಮಾನ್ಯ ವ್ಯವಸ್ಥೆಯ ಎಲ್ಲಾ ಭೂಮಾಲೀಕ ವ್ಯವಸ್ಥೆಯ ಲಕ್ಷಣಗಳೂ ಇಲ್ಲಿ ಕಂಡುಬರುತ್ತವೆ.

ದಲಿತರ ಬದುಕು ಪ್ರಾದೇಶಿಕವಾಗಿ ಭಿನ್ನತೆಯನ್ನು ಹೊಂದಿರುವಂತೆ ದಲಿತರ ಸಂಸ್ಕೃತಿಗಳೂ ಪ್ರಾದೇಶಿಕವಾಗಿ ಭಿನ್ನತೆಯನ್ನು ಹೊಂದಿರುತ್ತವೆ. ಅದಕ್ಕೆ ತಕ್ಕಂತ ಉಡುಗೆ ತೊಡುಗೆ ಊಟೋಪಚಾರಗಳನ್ನು ಹೊಂದಿರುತ್ತವೆ. ಇವುಗಳೆಲ್ಲವನ್ನು ಆಳುವ ವರ್ಗವು ತನ್ನ ಪಟ್ಟಭದ್ರ ಹಿತಾಸಕ್ತಿಯಲ್ಲಿ ದಲಿತ ಸಮುದಾಯಗಳನ್ನು ಇಟ್ಟುಕೊಂಡಿರುತ್ತದೆ. ಇವುಗಳ ಪ್ರಾದೇಶಿಕ ಮತ್ತು ಪರಿಸರದ ಪ್ರಭಾವದಂತೆ ದಲಿತ ಸಮುದಾಯಗಳು ತಮ್ಮ ಸಾಮಾಜಿಕ ವಾಸ್ತವ ಬದುಕನ್ನು ಹೊಂದಿರುತ್ತವೆ. ಆಧುನಿಕತೆಯ ಪ್ರವೇಶದಿಂದ ಗ್ರಾಮೀಣ ಪ್ರದೇಶವು ನಗರ ಪ್ರದೇಶದಂತೆ ಪ್ರಭಾವವನ್ನು ಹೊಂದಿದೆ. ನಗರಗಳ ಅಭಿವೃದ್ಧಿ ಆಧುನಿಕತೆಯ ಒಂದು ಭಾಗ. ಆವಿಷ್ಕಾರಗೊಂಡ ಹೊಸ ಹೊಸ ಸಂಗತಿಗಳು ನಗರದಲ್ಲಿ ಬದುಕುವ ಸೌಲಭ್ಯಾಕಾಂಕ್ಷಿಗಳಿಗೆ ಅಂತ ಹೊಸದೇನೂ ಅನ್ನಿಸುವುದಿಲ್ಲ. ಇಂಥ ಹೊಸಸಂಗತಿಗಳು ಗ್ರಾಮೀಣ ಬದುಕಲ್ಲಿ ಕಟ್ಟಕಡೆಯ ಬದುಕನ್ನು ಅನುಭವಿಸುತ್ತಿರುವ ದಲಿತರಿಗೆ ತಲುಪುವುದೇ ಇಲ್ಲ. ಆಧುನಿಕ ಅನುಕೂಲಗಳಿಂದ ಸಿಗುವ ಅನೇಕ ಸಂಗತಿಗಳು ಈ ದಲಿತರಿಗೆ ಗೊತ್ತಾಗುವುದೇ ಇಲ್ಲ. ಹಾಗೇನಾದರೂ ಗೊತ್ತಾದರೂ ಅವುಗಳ ಪೂರೈಕೆಯ ಸಾಮರ್ಥ್ಯ ಅವರ ಹತ್ತಿರ ಇರುವುದಿಲ್ಲ.

ಆಧುನಿಕ ತಂತ್ರಜ್ಞಾನ ಹಾಗೂ ವೈಜ್ಞಾನಿಕತೆಯಿಂದ ಸಮಾಜದಲ್ಲಿ ತೀವ್ರ ಬದಲಾವಣೆಯಾದರೂ ಅವುಗಳ ನೇರ ಸೌಲಭ್ಯಗಳು ಭೂಮಾಲೀಕರ, ಬಂಡವಾಳಶಾಹಿಗಳ ಪರವಾಗಿರುತ್ತದೆ. ಇಂದಿನ ಬದಲಾಗುತ್ತಿರುವ ಸಮಾಜದ ಎಲ್ಲಾ ಅಂಗಗಳಲ್ಲಿಯೂ ಶೋಷಣೆಯು ವ್ಯವಸ್ಥಿತವಾಗಿ ಶೋಷಣೆಗೆ ಒಳಪಟ್ಟವರಿಗೇ ಅನ್ವಯಿಸುತ್ತದೆ. ದಲಿತರ ಆದಾಯವು ಈ ಹೊತ್ತಿನ ಸಾಮಾಜಿಕ ಬದುಕಲ್ಲಿನ ಸಮತೋಲಕ್ಕೆ ಕಷ್ಟಕರವಾಗುತ್ತಿದೆ. ಆಧುನಿಕತೆ ಬಲಗೊಳ್ಳುವಂತೆ ಪಟ್ಟಭದ್ರ ಹಿತಾಸಕ್ತಿಗಳಿಂದ ಜಾತಿ ವ್ಯವಸ್ಥೆಯು ಬಲಗೊಳ್ಳುತ್ತಿದೆ. ಇವುಗಳು ದಲಿತ ಚಳುವಳಿಗೆ ಒಂದು ರೀತಿಯ ಪ್ರೇರಣೆಯಾಗಿವೆ. ದಲಿತ ಚಳುವಳಿಯ ಪ್ರಮುಖ ಅಂಶಗಳಲ್ಲಿ ದಲಿತ ಬದುಕಿನ ಸಾಮಾಜಿಕ ವಾಸ್ತವವೂ ಸೇರಿಕೊಂಡಿದೆ. ದಲಿತರ ಬದುಕಿನ ಹಿನ್ನೆಲೆಯು ದಲಿತ ಚಳುವಳಿಯ ಉಗಮಕ್ಕೆ ಪ್ರಮುಖ ಕಾರಣವಾಯಿತು.

**ಅಂಬೇಡ್ಕರ್ ವಿಚಾರಧಾರೆ :** ಅಂಬೇಡ್ಕರ್ ಅವರು ತಮ್ಮ ವಿಚಾರಧಾರೆಯ ಮೂಲಕ ನಡೆಸಿದ ಸಾಮಾಜಿಕ ಹೋರಾಟವು ಮಹತ್ತರವಾದದ್ದು. ಮಹಾರಾಷ್ಟ್ರದ 'ಮಹಾರ್' ಜನಾಂಗದಲ್ಲಿ ಹುಟ್ಟಿ, ದೇಶದ ಸಂವಿಧಾನ ಶಿಲ್ಪಿಯಾಗಿ, ಕಾನೂನು ಮಂತ್ರಿಯಾಗಿ ಅಸ್ಪೃಶ್ಯರ, ದಲಿತರ ಹಿತಚಿಂತನೆಯನ್ನು ಮಾಡಿದ್ದರು. ಅದರ ಪರಿಣಾಮವು ದೇಶದ ಎಲ್ಲಾ ರಾಜ್ಯಗಳಲ್ಲಿಯೂ ದಲಿತ ಚಳುವಳಿಗಳಿಗೆ ಇವರ ಚಿಂತನೆ ಪ್ರೇರಕವಾಗಿದೆ.

ಅಂಬೇಡ್ಕರ್ ಅವರು ಜಾತಿವಿನಾಶ ಮತ್ತು ಸಾಮಾಜಿಕ ನ್ಯಾಯದ ಬಗ್ಗೆ ಹೆಚ್ಚು ಒತ್ತನ್ನು ಕೊಟ್ಟಂತವರು. ಇದನ್ನು ಎಸ್. ಚಂದ್ರಶೇಖರ ಅವರು ಅಂಬೇಡ್ಕರ್ ಅವರ ಮಾತುಗಳನ್ನು ಹೀಗೆ ದಾಖಲಿಸಿದ್ದಾರೆ. ''ಯಾವುದೂ ಎಲ್ಲಾ ಕಾಲಕ್ಕೂ ಸಲ್ಲುವುದಿಲ್ಲ. ಯಾವುದೂ ಸನಾತನವಲ್ಲ. ಎಲ್ಲವೂ ಬದಲಾಗುತ್ತದೆ. ಬದಲಾವಣೆ ವ್ಯಕ್ತಿಗಳ ಮತ್ತು ಸಮಾಜದ ಜೀವನ ನಿಯಮ''[೧೨] ಅಂಬೇಡ್ಕರರ ಈ ಮಾತು ವ್ಯವಸ್ಥಿತ ಊಳಿಗಮಾನ್ಯ ಶಾಹಿಯ ಯಜಮಾನಿಕೆಯ ವಿರುದ್ಧ ಹೋರಾಟದ ಕಲ್ಪನೆಯದು; ಅದು ಅಗತ್ಯವಾದದ್ದು ಮತ್ತು ಅನಿವಾರ್ಯವಾದದ್ದು. ಯಾವುದೂ ಕೂಡ ಎಲ್ಲಾ ಕಾಲಕ್ಕೂ ಒಂದೇ ಇರುವುದಿಲ್ಲ. ಬದಲಾಗುತ್ತಲೇ ಇರುತ್ತದೆ. ಹಾಗೆಯೇ ಬದಲಾಗಬೇಕು. ಆಳು ಕಾಲ ಬದಲಾದಂತೆ ಅರಸನಾಗಬೇಕು. ಅಂದರೆ ಸರ್ವಾಧಿಕಾರತ್ವದಿಂದಲ್ಲ; ಸಮಾನತೆಯಿಂದ. ಇದು ಮಾನವನ ಸಮಾನತೆಯ ವಿಚಾರಧಾರೆ. ತಮ್ಮ ಹಿನ್ನೆಲೆಯಿಂದ ಪ್ರಜಾಪ್ರಭುತ್ವದ ವ್ಯವಸ್ಥಿತ ಬದುಕಿನೆಡೆಗೆ ಸಾಗುವಿಕೆ ಇದಾಗಿರುತ್ತದೆ. ವಸಾಹತುಶಾಹಿಯ ಬ್ರಿಟೀಷ್ ವ್ಯವಸ್ಥೆಯು ದೇಶದ ಒಟ್ಟು ಎಲ್ಲಾ ಜನಾಂಗಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿತ್ತು. ದೇಶೀಯ ಸಮುದಾಯಗಳು ಒಂದೆಡೆ ವಸಾಹತುಶಾಹಿಯ ದಾಸ್ಯಕ್ಕೆ ಒಳಗಾಗಿದ್ದರೆ ಇಲ್ಲಿಯ ಶ್ರೇಣೀಕೃತ ವ್ಯವಸ್ಥೆಯ ಸಮುದಾಯಗಳಲ್ಲಿನ ಶೋಷಣೆಯು ಇನ್ನೂ ಭದ್ರಗೊಳ್ಳುತ್ತಿತ್ತು. ದಲಿತ ಸಮುದಾಯಗಳು ನೂರಾರು ವರ್ಷಗಳಿಂದ ಆಳಿದ ಬ್ರಿಟೀಷರಿಂದ ಬಿಡುಗಡೆಗೆ ಹೋರಾಡುವುದು ಒಂದೆಡೆಯಾದರೆ; ಸಾವಿರಾರು ವರ್ಷಗಳಿಂದ ದೇಶೀಯ ಮನೆಯೊಳಗಿನ ತಾರತಮ್ಯ ಅಸಮಾನತೆ ಶೋಷಣೆಯ ಅಸ್ಪೃಶ್ಯ ಬದುಕಿನಿಂದ ಸ್ವತಂತ್ರ ಮತ್ತು ಸಮಾನತೆಯನ್ನು ಪಡೆಯುವುದು ಇನ್ನೊಂದಾಗಿತ್ತು. ವಸಾಹತುಶಾಹಿಯ ವಿರುದ್ಧ ಹೋರಾಟದ ಸಂದರ್ಭದಲ್ಲಿ ದಲಿತರ ಬದುಕು ದ್ವಂದ್ವ ಸ್ಥಿತಿಯನ್ನು ತಲುಪುವಂತಾಯ್ತು. ''ಅಂಬೇಡ್ಕರ್ ಬ್ರಿಟೀಷ್ ಸರ್ಕಾರ ಶೋಷಕ ಸಮಾಜದ ವ್ಯವಸ್ಥೆಯನ್ನು ಸಮರ್ಥಿಸುತ್ತದೆ ಎಂದು ತಿಳಿದು ವ್ಯಾಖ್ಯಾನಿಸಿದ ಮೊದಲು ದಲಿತ; ಅವರ ಹೋರಾಟದ ಬದುಕಿನಲ್ಲಿ ೧೯೩೦-೧೯೩೫ರ ಅವಧಿ ಬಹಳ ಮಹತ್ವಪೂರ್ಣವಾದದ್ದು''[೧೩]. ಬ್ರಿಟೀಷ್ ಸರ್ಕಾರ ಅಥವಾ ದೇಶೀಯ ಆಡಳಿತ ವ್ಯವಸ್ಥೆ ಇವೆರಡೂ ಶೋಷಕ ಸಮಾಜಗಳೇ ಎಂಬುದು ಸ್ಪಷ್ಟ. ಈ ಅವಧಿಯ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅಂಬೇಡ್ಕರ್ ಅವರು ನಡೆಸುತ್ತಿದ್ದ ದಲಿತಪರ ಹೋರಾಟದ ಅಂಶಗಳಲ್ಲಿ ಇದ್ದ ವೈರುಧ್ಯಗಳು ಅದರ ಹಿಂದಿನ ತಾತ್ವಿಕ ಅರ್ಥದ ಮುಖಾಮುಖಿಯಲ್ಲಿ ಕಂಡುಬರುತ್ತವೆ.

ಹಿಂದೂಧರ್ಮದ ತಿರಸ್ಕಾರವು ಅಂಬೇಡ್ಕರ್ ಅವರ ಧಾರ್ಮಿಕತೆಯ ತಾತ್ವಿಕ ವಿಚಾರವಾಗಿದೆ. ''ಅಕ್ಟೋಬರ್ ೧೩ ೧೯೩೫ ರಂದು ಡಾ.ಅಂಬೇಡ್ಕರ್ ತಮ್ಮ ಧರ್ಮಾಂತರದ ತೀರ್ಮಾನವನ್ನು ಘೋಷಿಸಿದರು. 'ನಾನು ಹಿಂದುವಾಗಿ ಹುಟ್ಟಿದ್ದೇನೆ. ಆದರೆ ಹಿಂದುವಾಗಿ ಸಾಯಲಾರೆ' ಎಂದರು. ೧೯೩೬ರಲ್ಲಿ ಮಹರ್ ಸಮ್ಮೇಳನವನ್ನು ಉದ್ದೇಶಿಸಿ ಮಾತನಾಡಿದ ಅವರು ಮತಾಂತರದ ಅಗತ್ಯವೇನೆಂದು ಪ್ರತಿಪಾದಿಸಿದರು''[೧೪]. ಅಕ್ಟೋಬರ್ ೧೪, ೧೯೫೬ ರಂದು ನಾಗಪುರದಲ್ಲಿ ಪವಿತ್ರದೀಕ್ಷಾ ಸಮಾರಂಭದ ನಂತರ ಅಂಬೇಡ್ಕರ್‌ರವರೊಂದಿಗೆ ಬೌದ್ಧರಾದ ಐದು ಲಕ್ಷ ದಲಿತರನ್ನು

ಕುರಿತು ಬಾಬಾ ಸಾಹೇಬರು ಸಂದೇಶವನ್ನು ನೀಡಿದರು. ಅದು 'ಬೌದ್ಧ ಮಾರ್ಗದಿ ನಡೆಯೋಣ ವಿಮೋಚನೆ ಪಡೆಯೋಣ' ಎಂಬ ಸಮಾರಂಭವಾಗಿತ್ತು. ಈ ಸಮಾರಂಭದಲ್ಲಿ ವೈದಿಕರ ಕುರಿತ ಕೆಲವು ಮಾತುಗಳಿವೆ. ''ಗೋಮಾತೆ ವೈದಿಕರ ತಾಯಲ್ಲವೆ?; ಬೌದ್ಧರಾಗುವ ದಲಿತರು ಸತ್ತದನಗಳನ್ನು ತೆಗೆಯುವ ಕೆಲಸವನ್ನು ಬಿಡಬಹುದೆಂಬ ಆತಂಕ ಅವರದು. ಸು.೩೦ ವರುಷಗಳ ಹಿಂದೆ ನಾನೊಂದು ಚಳುವಳಿಯನ್ನು ಆರಂಭಿಸಿದ್ದೆ. ಆಗ 'ಹೊಲೆ ಮಾದಿಗರೇ ಇನ್ನು ಸತ್ತ ಕೋಣದನಗಳನ್ನು ತೆಗೆಯಬೇಡಿ. ಹೊಲೆಮಾದಿಗರೇ ಇನ್ನು ಮುಂದೆ ಸತ್ತ ದನಗಳನ್ನು ತಿನ್ನಬೇಡಿ' ಎಂಬ ಘೋಷಣೆಯನ್ನು ನೀಡಿದ್ದೆನು. ಈ ಚಳುವಳಿ ಅದೇಕೋ ನಮ್ಮ ಹಿಂದೂ ಗೆಳೆಯರಿಗೆ ಬಹಳ ಆಘಾತವನ್ನುಂಟುಮಾಡಿತು. ಆಗ ನಾನು ಅವರನ್ನು ಕೇಳಿದೆ 'ನಿಮ್ಮ ಹಸುಗಳು ಬದುಕಿರುವಾಗ ಅದರ ಹಾಲನ್ನು ನೀವು ತೆಗೆದುಕೊಳ್ಳುವಿರಿ. ಅದೇ ಹಸುಗಳು ಸತ್ತಾಗ ಅವುಗಳನ್ನು ನಾವು ತೆಗೆಯಬೇಕೆಂದು ಹೇಳುವಿರಿ ಯಾಕೆ? ನಿಮ್ಮ ಮಾತೆಯರ ಶವಗಳನ್ನು ಸಂಸ್ಕಾರ ಮಾಡಲು ನೀವೇ ತೆಗೆದುಕೊಂಡು ಒಯ್ಯುವಾಗ, ನಿಮ್ಮ ಗೋಮಾತೆಯರ ಶವಗಳನ್ನು ನೀವೇ ಯಾಕೆ ತೆಗೆದುಕೊಂಡು ಒಯ್ಯಬಾರದು.' ನಾನು ಹಿಂದೂಗಳಿಗೆ ಪ್ರಶ್ನೆಯನ್ನು ಹಾಕಿದಾಗ ಅವರಿಗೆ ಬಹಳ ಕಿರಿಕಿರಿಯಾಯಿತು. 'ನಿಮ್ಮ ತಾಯಂದಿರ ಶವಗಳನ್ನು ಹೊತ್ತುಕೊಂಡು ಹೋಗುವ ಅವಕಾಶವನ್ನು ನಮಗೆ ನೀಡುವಿರಾದರೆ ನಿಮ್ಮ ಸತ್ತ ಹಸು ಕೋಣಗಳನ್ನು ನಾವು ಆನಂದದಿಂದ ಹೊತ್ತೊಯ್ಯುತ್ತೇವೆ. ಎಂದು ನಾನು ಹೇಳಿದೆ'[೧೫]. ಹಿಂದೂ ಧರ್ಮದಲ್ಲಿನ ಗೋ ನಂಬಿಕೆ ಮತ್ತು ಈ ಧರ್ಮದೊಳಗೆ ಬದುಕುವ ಹಿತಾಸಕ್ತಿಗಳಲ್ಲಿನ ವೈರುಧ್ಯಗಳನ್ನು ಅಂಬೇಡ್ಕರ್ ಅವರು ಚರ್ಚಿಸಿದ್ದಾರೆ. ದೇವರು, ಧರ್ಮ, ಆಚರಣೆಗಳು ಮನುಷ್ಯನಲ್ಲಿ ಸಮಾನವಾಗಿರಬೇಕೆಂಬುದು ವಾಸ್ತವ ಸತ್ಯ. ಅದು ಇಲ್ಲಿ ಸಂಪೂರ್ಣವಾಗಿ ತಾರತಮ್ಯದಿಂದ ಇದೆ ಎಂಬುದನ್ನು ಚರ್ಚಿಸಿದ್ದಾರೆ. ''ಆತ್ಮ ಗೌರವಕ್ಕಾಗಿ ಹೋರಾಟ; ಗೌರವಯುತವಾದ ಬದುಕನ್ನು ನಡೆಸುವುದು ಪ್ರತಿಯೊಬ್ಬ ಮನುಷ್ಯನ ಆಜನ್ಮ ಹಕ್ಕಾಗಿದೆ. ಇದನ್ನು ಸಾಧಿಸುವ ಸಲುವಾಗಿ ನಾವು ಅತ್ಯುನ್ನತ ತ್ಯಾಗಕ್ಕೆ ಸಿದ್ಧರಾಗಿದ್ದೇವೆ. ಹಿಂದೂಗಳು ನಮಗೆ ಇಲ್ಲಿಯ ತನಕ ನಿರಾಕರಿಸಿರುವ ಮಾನವ ಸಹಜ ಆತ್ಮಗೌರವವನ್ನು ಗಳಿಸುವುದಕ್ಕಾಗಿ ನಾವು ಹೋರಾಡುತ್ತಿದ್ದೇವೆ. ನಾವು ಸಾಧ್ಯವಾದಷ್ಟು ಮಟ್ಟಿಗೆ ನಮ್ಮ ಬದುಕನ್ನು ಪರಿಪೂರ್ಣ ಹಾಗೂ ಗೌರವಯುತ ಬದುಕನ್ನಾಗಿ ಮಾಡಬೇಕಿದೆ''[೧೬]. ವ್ಯಕ್ತಿಯು ಬುದ್ಧಿಜೀವಿ. ಪ್ರತಿಯೊಬ್ಬನಿಗೂ ತನ್ನದೇ ಆದಂತ ವ್ಯಕ್ತಿತ್ವ ಇರುತ್ತದೆ. ಮೂಲಭೂತವಾಗಿ ಅದಕ್ಕೆ ಧಕ್ಕೆಯಾಗಬಾರದು. ಅಂಬೇಡ್ಕರ್ ಅವರು ಪ್ರಾಣಕ್ಕಿಂತ ಮಾನ ಮುಖ್ಯ ಆತ್ಮಗೌರವ ಮುಖ್ಯ ಎಂದು ಹೇಳಿರುವುದು ದಲಿತ ಬದುಕಿನ ಸಂದರ್ಭದಲ್ಲಿ ದಲಿತ ಚಳುವಳಿಯ ಸಂದರ್ಭದಲ್ಲಿ, ಮುಖ್ಯವಾಗುತ್ತದೆ. ಅದ್ದರಿಂದಲೇ ವ್ಯಕ್ತಿಗೆ ಉತ್ತಮ ಸಾಮಾಜಿಕ ಸ್ಥಿತಿ ಮತ್ತು ಸಾಮಾಜಿಕ ಸ್ಥಾನಮಾನಗಳು ಮುಖ್ಯವಾಗುತ್ತವೆ. ''ಹಣಕಾಸಿನ ಲಾಭಕ್ಕಿಂತ ಮಾನ ಮರ್ಯಾದೆ ಬಹಳ ಮುಖ್ಯ. ನಮ್ಮ ಹೋರಾಟವು ಆತ್ಮಗೌರವ ಘನತೆಗಾಗಿಯೇ ವಿನಾ ಕೇವಲ ಹಣಕಾಸು ಗಳಿಕೆಗಾಗಿ ಅಲ್ಲ''[೧೭]. ಪ್ರತಿಯೊಬ್ಬ ವ್ಯಕ್ತಿಯ ಸ್ವಾಭಿಮಾನದ ಸಂಕೇತವಾಗಿ ಆತ್ಮಗೌರವದ ಪ್ರಶ್ನೆ ಬರುತ್ತದೆ.

ಮನುಷ್ಯ ಬದುಕಲು ಪರಿಸರ ಮುಖ್ಯ. ಅದರಲ್ಲೂ ಆರೋಗ್ಯವಂತ ಪರಿಸರ ಬಹಳ ಮುಖ್ಯವೆಂದು ತಮ್ಮ ಪ್ರಚಾರಿಕೆಯಲ್ಲಿ ಅಂಬೇಡ್ಕರರು ಹೇಳಿದ್ದಾರೆ. ''ಬಡವರು ಎದುರಿಸಬೇಕಾದ ಕಷ್ಟಗಳ ಬಗ್ಗೆ ನನಗೆ ಅರಿವಿದೆ. ಬಡತನವನ್ನು ನೀಗಿಸಿ ಅನುಕೂಲಕರ ಜೀವನ ನಡೆಸುವುದಕ್ಕಾಗಿ ನಾವು ಹೋರಾಟ ಮಾಡಲೇಬೇಕು ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಪಡೆಯಲೇಬೇಕು. ಈ ನಿಟ್ಟಿನಲ್ಲಿ ನನ್ನ ಜೀವನದಲ್ಲಿ ನಾನು ಹೋರಾಡುತ್ತಾ ಬಂದಿದ್ದೇನೆ. ಅದಷ್ಟೇ

ಅಲ್ಲ, ಇಡೀ ಮಾನವ ಕುಲವೇ ಆರ್ಥಿಕವಾಗಿ ಬಲಿಷ್ಠವಾಗಬೇಕೆಂದು ನಾನು ಬಯಸುತ್ತೇನೆ. ಆದರೆ ಅದೇ ವೇಳೆಗೆ ಒಂದು ವಿಚಾರವನ್ನು ನಾವು ಮರೆಯಬಾರದು. ಮನುಷ್ಯನಿಗೂ ಪ್ರಾಣಿಗಳಿಗೂ ವ್ಯತ್ಯಾಸವಿದೆ. ಪ್ರಾಣಿಗೆ ತಾನು ಬದುಕಲು ಪ್ರತಿದಿನ ಮೇವು ಬೇಕು. ಮನುಷ್ಯನಿಗೆ ಆಹಾರ ಬೇಕು. ಆದರೆ ಪ್ರಾಣಿಗೆ ಮನಸ್ಸಿಲ್ಲ. ಮನುಷ್ಯನಿಗೆ ದೇಹದ ಜೊತೆಗೆ ಮನುಸ್ಸು ಉಂಟು. ಆದ್ದರಿಂದ ಮನುಷ್ಯನು ತನ್ನ ದೇಹ ಮತ್ತು ಮನಸ್ಸುಗಳೆರಡರ ಬಗ್ಗೆಯೂ ಗಮನ ಹರಿಸಬೇಕು. ಮತ್ತು ಅವೆರಡನ್ನು ಏಕಕಾಲಕ್ಕೆ ಬೆಳಸಬೇಕು. ಮನಸ್ಸಿಗೆ ಸಂಸ್ಕಾರ ಬೇಕು. ಮತ್ತು ಆ ಸಂಸ್ಕಾರವನ್ನು ಬೆಳಸಬೇಕು. ಮನಸ್ಸಿನಲ್ಲೆ ಸದಾಕಾಲ ಒಳ್ಳೆಯ ಆಲೋಚನೆ ತರಬೇಕು''[೧೮]. ಸಂಸ್ಕಾರ ಆಲೋಚನೆಯಲ್ಲಿ ಮೊದಲು ಬರಬೇಕು. ಬಂದ ಸುಧಾರಣೆಯು ಅಲ್ಲೇ ಉಳಿಯಬಾರದು. ಅದು ಕ್ರಿಯೆಯ ಮೂಲಕ ಸಮಾಜಕ್ಕೆ ಅನ್ವಯವಾಗಬೇಕು. ಆ ಮೂಲಕ ಕಳಕಳಿ ಪಡೆಯಬೇಕು ಎಂಬುದಾಗಿರುತ್ತದೆ.

ಸಮಾಜದ ಎಲ್ಲಾ ಆಯಾಮಗಳಿಂದಲೂ ಶೋಷಿತರಾದ ದಲಿತರು ಮೊದಲು ಶಿಕ್ಷಣ ಕಲಿಯಬೇಕು. ಇಲ್ಲಿಯ ಶಿಕ್ಷಣದ ಪ್ರಾಮುಖ್ಯತೆಯ ಒತ್ತು ಮುಖ್ಯ. ಅದು ಸಮಾಜದ ಕಟುಸತ್ಯವನ್ನು ಕೊಟ್ಟು ಸಂಘಟಿಸುತ್ತದೆ. ಸಂಘಟನೆಯ ಶಕ್ತಿಯು ಹೋರಾಟಕ್ಕೆ ಪ್ರೇರಣೆಯನ್ನು ನೀಡುತ್ತದೆ. ಇದು ಅಂಬೇಡ್ಕರರ ಪ್ರಮುಖ ವಿಚಾರಧಾರೆಗಳಲ್ಲಿ ಒಂದು ಶಿಕ್ಷಣ, ಸಂಘಟನೆ ಹೋರಾಟ. ಇವುಗಳ ಪ್ರಸ್ತುತತೆಯನ್ನು ದಲಿತ ಸಮುದಾಯಗಳಿಗೆ ಎಷ್ಟರ ಮಟ್ಟಿಗೆ ಅಗತ್ಯ ಎಂಬುದನ್ನು ವಿವರಿಸುತ್ತಾರೆ. ''ಅಸ್ಪೃಶ್ಯರಾದ ನಾವು ಹಿಂದೂಗಳೂ ಅಲ್ಲ ಮುಸ್ಲೀಮರೂ ಅಲ್ಲ. ಆದರೆ ಅವರಿಬ್ಬರಿಗಿಂತಲೂ ನಾವು ಬಹಳ ಹಿಂದಿದ್ದೇವೆ, ನಮ್ಮನ್ನು ಉದ್ಧಾರ ಮಾಡುವ ಆಲೋಚನೆಯು ನಿಮಗೇನಾದರೂ ಇದ್ದಲ್ಲಿ ಅವರಿಬ್ಬರಿಗಿಂತ ಸಾವಿರ ಪಟ್ಟು ಹೆಚ್ಚಿನ ಸಹಾಯವನ್ನು ನಮಗೆ ಮಾಡಬೇಕಾಗುತ್ತದೆ. ಆದರೆ ಕನಿಷ್ಠಪಕ್ಷ ಅವರಿಗೆ ನೀಡುವಷ್ಟು ಮೊತ್ತವನ್ನಾದರೂ ನಮ್ಮ ಶಿಕ್ಷಣಕ್ಕಾಗಿ ನೀವು ನೀಡಬೇಕು''[೧೯]. (ಲಾರ್ಡ್ ಲೀನ್ ಲಿತ್ ಗೋರವರು ವೈಸ್‌ರಾಯ್ ಆಗಿದ್ದಾಗ; ಬ್ರಿಟೀಷರ ವೈಸರಾಯರ ಏಕ್ಸಿಕ್ಯೂಟಿವ್ ಕೌನ್ಸಲ್‌ನಲ್ಲಿ ಅಂಬೇಡ್ಕರ್ ಅವರು ಮೆಂಬರ್ ಆಗಿದ್ದರು. ಲಾರ್ಡ್ ಲೀನ್ ಲಿತ್ ಗೋ ಅವರು ಶಿಕ್ಷಣಕ್ಕೆ ನಿರ್ದಿಷ್ಟ ಮೊತ್ತದ ಹಣವನ್ನು ತೆಗೆದಿರಿಸಿದ್ದರು. ಅದರಲ್ಲಿ ಅಲಿಘಡ ಮುಸ್ಲಿಂ ವಿಶ್ವವಿದ್ಯಾಲಯಕ್ಕೆ ೩ ಲಕ್ಷ ಮಂಜೂರು ಮಾಡಿದಾಗ ವೈಸ್‌ರಾಯ್ ಅವರೊಂದಿಗೆ ಚರ್ಚಿಸಿದ ಮಾತು) ಅಂಬೇಡ್ಕರ್ ಅವರ ಚಿಂತನೆಯ ಪ್ರಸ್ತುತವು ಜಾತಿ ವ್ಯವಸ್ಥೆಯಿಂದ ನಮ್ಮಲ್ಲಿ ಏಕತೆ ಬರಲು ಸಾಧ್ಯವಿಲ್ಲ ಎಂದು ಹೇಳುವುದು ವಾಸ್ತವ ಸತ್ಯ. ಇದೊಂದು ದೇಶಕ್ಕೆ ಸೋಲು, ಆದುದರಿಂದ ಈ ದೇಶ ಪದೇಪದೇ ವಿದೇಶಿಯರ ಆಕ್ರಮಣಕ್ಕೆ ಒಳಗಾಗುತ್ತಿದೆ ಎಂಬುದು ಅವರ ಅಭಿಪ್ರಾಯವಾಗಿದೆ. ''ಹಿಂದೂ ಧರ್ಮದಲ್ಲಿ ಯಾರಿಗೂ ಉಳಿಗಾಲವಿಲ್ಲ. ಆ ಧರ್ಮದಲ್ಲಿ ಯಾರಿಗೂ ಮುಕ್ತಿಯಿಲ್ಲ, ವಿಮೋಚನೆಯಿಲ್ಲ. ಹಿಂದೂಧರ್ಮದ ಕಟ್ಟಳೆಗಳ ಪ್ರಕಾರ ಮೇಲ್ಜಾತಿಯವರು ಎನಿಸಿಕೊಂಡವರಿಗೆ ಮಾತ್ರ ಲಾಭವುಂಟು. ನಾನು ಯಾವುದನ್ನೂ ಅದು ಇರುವುದಕ್ಕಿಂತ ಹೆಚ್ಚಾಗಿ ಹಿಗ್ಗಿಸಿ ಹೇಳುತ್ತಿಲ್ಲ. ಶೂದ್ರರಿಗೆ ಮತ್ತು ಅಸ್ಪೃಶ್ಯರಿಗೆ ಹಿಂದೂಧರ್ಮದಿಂದ ಏನು ಲಾಭ ಇದೆ''[೨೦]. ಎಂಬ ತಾತ್ವಿಕ ಪ್ರಶ್ನೆ ಮುಖ್ಯವಾಗುತ್ತದೆ. ಇಲ್ಲಿ ಇರುವ ಜಾತಿಗಳು ತಮ್ಮ ಜಾತಿಯ ಸಾಮಾಜಿಕ ಪರಿಸ್ಥಿತಿಯೊಂದಿಗಿನ ಪರಿಸರದ ಒತ್ತಡಗಳಿಂದ ಕೆಲಸವನ್ನು ಅಥವಾ ಕುಲಕಸುಬುಗಳನ್ನು ನಂಬಿಕೊಂಡು ಬಂದಂತವುಗಳು. ಕುಲವೃತ್ತಿಗಳು ಸಮಾಜದಲ್ಲಿನ ಜಾತಿಯನ್ನು ಸೂಚಿಸಿದವು. ''ಒಬ್ಬ ಬ್ರಾಹ್ಮಣ ಹೆಂಗಸು ಒಂದು ಮಗುವನ್ನು ಹೆತ್ತಳೆಂದರೆ, ಅಂದಿನಿಂದ ಅವಳ ನೋಟವು ಹೈಕೋರ್ಟಿನಲ್ಲಿ ಖಾಲಿಯಾಗುವ ಯಾವುದೇ ನ್ಯಾಯಾಧೀಶನ ಸ್ಥಾನದ ಮೇಲೆ ನೆಟ್ಟಿರುತ್ತದೆ. ಆದರೆ ಅದೇ ವೇಳೆಗೆ ಒಬ್ಬ ಜಾಡಮಾಲಿ

ಹೆಂಗಸು ಒಂದು ಮಗುವನ್ನು ಹೆತ್ತಳೆಂದರೆ ಅವಳು ತನ್ನ ಮಗನಿಗಾಗಿ ನಗರಸಭೆಯ ಜಾಡಮಾಲಿ ಕೆಲಸಕ್ಕಿಂತ ಬೇರೇನೂ ಯೋಚಿಸಲಾರಳು. ನಮ್ಮ ಹೆಣ್ಣುಮಕ್ಕಳಲ್ಲಿ ಯಾವುದೇ ಮಹತ್ತರ ಆಲೋಚನೆಗಳು ಇಲ್ಲದಿರುವುದಕ್ಕೆ ಹಾಗೂ ಬ್ರಾಹ್ಮಣ ಹೆಂಗಸಿನಲ್ಲಿ ಮಹತ್ವಾಕಾಂಕ್ಷೆ ತುಂಬಿರುವುದಕ್ಕೆ ಹಿಂದೂ ಧರ್ಮವೇ ಕಾರಣವಾಗಿದೆ''[೨]. ಮಗು ಭೂಮಿಗೆ ಕಣ್ಣು ಬಿಡುವುದಕ್ಕಿಂತ ಮೊದಲು ಹೊಟ್ಟೆಯಲ್ಲಿ ಇರುವಾಗಲೇ ಅದು ಜಾತಿ, ಧರ್ಮ, ಕುಲ, ಅಂತಸ್ತು, ಬದುಕಿನ ಹಿನ್ನೆಲೆಯ, ಆರ್ಥಿಕ ಹಿನ್ನೆಲೆಯನ್ನು ಹೊತ್ತುಕೊಂಡಿರುತ್ತದೆ. ಹಿಂದೂಧರ್ಮದಲ್ಲಿ ಹುಟ್ಟಿನಿಂದ ಸಾಯುವವರೆವಿಗೂ ಇಂಥ ಸಂಕೋಲೆಗಳಲ್ಲಿ ಹುಟ್ಟಿದ ವ್ಯಕ್ತಿಯು ಬದುಕಬೇಕಾಗುತ್ತದೆ. ಮಾನವನಿಂದ ಹುಟ್ಟಿದ ಬೌದ್ಧ ಧರ್ಮ ಮನುಷ್ಯ ಪ್ರೀತಿಯನ್ನು ಹೊಂದಿರುವಂತಹದು ಎಂಬುದು ಅಂಬೇಡ್ಕರರ ವಿಚಾರಧಾರೆ. ಹಿಂದೂಧರ್ಮವನ್ನು ತಿರಸ್ಕರಿಸುವಾಗ ಮತ್ತು ಬೌದ್ಧ ಧರ್ಮದ ನಿಯಮಗಳನ್ನು ಪ್ರೀತಿಸುವಾಗ ಅಂಬೇಡ್ಕರ್ ಅವರು ಹಲವು ಧರ್ಮಗಳ ಬಗೆಗೂ ಸೂಕ್ಷ್ಮವಾಗಿ ಅಧ್ಯಯನವನ್ನು ಮಾಡಿದಂತವರು. ಅದರಲ್ಲಿನ ಸತ್ವವನ್ನು ಕಂಡುಹಿಡಿಯಲು ಪ್ರಯತ್ನಿಸಿದಂತವರು.

ದಲಿತರ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಸ್ಥಿತಿಯ ಬಗ್ಗೆ ತಿಳಿದ ಅಂಬೇಡ್ಕರ್ ಅವರು ಸಾಕಷ್ಟು ವಿಚಾರಮಂಥನ ನಡೆಸಿದ್ದಾರೆ. ಅವುಗಳನ್ನು ಕುರಿತು ಚರ್ಚಿಸಿ ಪರಿಹಾರದ ಮಾರ್ಗವನ್ನು ತೋರಿಸಿದ್ದಾರೆ. ಇವರ ಭಾಷಣಗಳು, ಬರಹಗಳು ದಲಿತರಿಗೆ, ಶೂದ್ರರಿಗೆ ತಮ್ಮ ಮುಂದಿನ ಬದುಕಲ್ಲಿನ ವ್ಯವಸ್ಥೆಯೊಂದಿಗೆ ತಾತ್ವಿಕ ಮತ್ತು ಸೈದ್ಧಾಂತಿಕ ತಳಹದಿಯಾಗಿ ನಿಂತಿವೆ. ಹೊಟ್ಟೆಪಾಡಿಗಾಗಿ ಬದುಕಬೇಡಿ ತಮ್ಮ ಜನಾಂಗದ ಏಳಿಗೆಗಾಗಿ ಬದುಕಿರಿ ಮೊದಲು ಜನಾಂಗಗಳ ಸಂಕೋಲೆಗಳು ಮುಖ್ಯ; ನೊಂದ ಜನಾಂಗಕ್ಕೆ ನಾವು ಏನನ್ನು ಕೊಡುತ್ತೇವೆ ಎಂಬುದು ಮುಖ್ಯ. ಇಂಥ ಅಂಬೇಡ್ಕರರ ವಿಚಾರಧಾರೆಗಳು ದಲಿತ ಚಳುವಳಿಗೆ ಪ್ರೇರಕಾಂಶಗಳಾದವು

**ಕರ್ನಾಟಕ ದಲಿತ ಚಳುವಳಿಯ ಪ್ರೇರಕ ಶಕ್ತಿ ಬಿ.ಬಸವಲಿಂಗಪ್ಪ** : ಬಿ.ಬಸವಲಿಂಗಪ್ಪನವರು ರಾಜಕಾರಣಿಗಳು, ವೈಚಾರಿಕ ವಿಚಾರವಾದಿಗಳು, ಸಂಪ್ರದಾಯ ವಿರೋಧಿಗಳಾಗಿದ್ದವರು. ಇವರ ವಿಚಾರಗಳು ಕರ್ನಾಟಕಕ್ಕೆ ಸೀಮಿತವಾಗಿಲ್ಲ. ಕರ್ನಾಟಕದ ಹೊರಗೂ ಇವರು ಅತ್ಯುತ್ತಮ ಸೇವೆಯನ್ನು ಸಲ್ಲಿಸಿದವರು. ಹಿಂದೂ ಧರ್ಮ ಮತ್ತು ಅದರೊಳಗಿನ ಸಾಮಾಜಿಕ ವ್ಯವಸ್ಥೆಯನ್ನು ಕಟುವಾಗಿ ಖಂಡಿಸಿದವರು. ಧರ್ಮವನ್ನಷ್ಟೇ ಅಲ್ಲ, ಸಮಾಜದ ಸಮಕಾಲೀನ ಬದುಕಲ್ಲಿನ ಕಟುಸತ್ಯವನ್ನು ಹೇಳಿದಂತವರು. ಜಾತಿವ್ಯವಸ್ಥೆ, ಮತೀಯವಾದ, ಮೂಡನಂಬಿಕೆಗಳನ್ನು ಬಲವಾಗಿ ವಿರೋಧಿಸಿದಂತವರು. ಅಂಬೇಡ್ಕರ್‌ರಂತೆ ಹಿಂದೂ ಧರ್ಮವನ್ನು ತೊರೆದು ಬೌದ್ಧಧರ್ಮವನ್ನು ಸೇರಿದವರು. ಅಂಬೇಡ್ಕರ್ ಅವರ ಸಿದ್ಧಾಂತವನ್ನು ಮೈಗೂಡಿಸಿಕೊಂಡು ಸಮಸ್ತ ಶೋಷಿತ ಸಮುದಾಯಗಳ ಪರವಾಗಿ ದನಿ ಎತ್ತಿದವರು.

ಬಸವಲಿಂಗಪ್ಪನವರ ಭಾಷಣದಲ್ಲಿ ದಲಿತರು ಎಚ್ಚೆತ್ತುಕೊಳ್ಳಬೇಕು; ಸ್ವಾವಲಂಬಿ ಮತ್ತು ಸ್ವಾಭಿಮಾನಿಗಳಾಗಬೇಕು; ಲೋಕಜ್ಞಾನ ಮತ್ತು ಸಮಾಜದ ಕಟುವಾಸ್ತವ ಅರಿಯಲು ಶಿಕ್ಷಣ, ಸಂಘಟನೆ, ಹೋರಾಟ ಮಾಡಬೇಕು ಎಂದು ಅಂಬೇಡ್ಕರ್ ಅವರ ಹೋರಾಟದ ಹಾದಿಯನ್ನು ಹಿಡಿದವರು. ನಮಗೆ ಹಕ್ಕುಗಳು ಬೇಕು ಹಕ್ಕುಗಳಿಗೋಸ್ಕರ ನಾವು ಎಲ್ಲಾ ತ್ಯಾಗಮಾಡಲು ಸಿದ್ಧರಿರಬೇಕು ಎಂದು ಹೇಳಿದವರು.

ಭಾರತದಲ್ಲಿ ದಲಿತರಿಗೋಸ್ಕರ ದಲಿತರ ಸಮಸ್ಯೆಗಳಿಗೋಸ್ಕರ ಅಂಬೇಡ್ಕರ್ ಅವರು ರಾಷ್ಟ್ರೀಯ ನಾಯಕರಂತೆ ನಡೆಸಿದ ಚರ್ಚೆ ಮತ್ತು ಹೋರಾಟವನ್ನು ಬಿ.ಬಸವಲಿಂಗಪ್ಪನವರು ನಡೆಸಿದರು. ತಮ್ಮ ಬದುಕಿನ ಅವಧಿಯ

ಕರ್ನಾಟಕದಲ್ಲಿ ಅವರು ಎತ್ತಿದ ಪ್ರಶ್ನೆಗಳು, ಚರ್ಚೆಗಳು ಶೋಷಿತ ಸಮುದಾಯಗಳು ಪ್ರಶ್ನೆಯನ್ನು ಎತ್ತುವಂತೆ ಪ್ರೇರೇಪಿಸಿದವು. ೧೯೨೮ ಏಪ್ರಿಲ್ ೨೧ರಲ್ಲಿ ಹರಿಹರದಲ್ಲಿ ಹುಟ್ಟಿದ ಇವರು ಮೈಸೂರಿನಲ್ಲಿ ಬಿ.ಎ. ಪದವಿ ಮುಗಿಸಿ, ಬೆಳಗಾವಿಯಲ್ಲಿ ಎಲ್.ಎಲ್.ಬಿ ಪದವಿಯನ್ನು ಪಡೆದು ೧೯೪೪ರಲ್ಲಿ ಬೆಂಗಳೂರಿನ ಹೈಕೋರ್ಟಿನಲ್ಲಿ ವಕೀಲರಾದರು. ಇವರ ರಾಜಕೀಯ ಪ್ರವೇಶ ೧೯೪೪ರಲ್ಲಿ ಕಾಂಗ್ರೆಸ್ ಪಕ್ಷಕ್ಕೆ. ಇವರು ೧೯೫೭ರಲ್ಲಿ ಮೊದಲ ಬಾರಿಗೆ ಬೆಂಗಳೂರು ದಕ್ಷಿಣ ಕೇಂದ್ರದಿಂದ ವಿಧಾನಸಭೆಯ ಸದಸ್ಯರಾದರು. ನಂತರದಲ್ಲಿ ಉಪಗೃಹಮಂತ್ರಿ, ನಗರಾಭಿವೃದ್ಧಿ, ವಸತಿ, ಕಂದಾಯ, ಗ್ರಾಮಾಭಿವೃದ್ಧಿ ಪಂಚಾಯತ್‌ರಾಜ್, ಅರಣ್ಯ, ಪಶುಸಂಗೋಪನೆ ಮುಂತಾದ ಸಚಿವರಾಗಿ ರಾಜಕೀಯ ಪುಟಗಳಲ್ಲಿ ಸೇರಿದರು. ದುರ್ಬಲ ವರ್ಗದವರ ಶೋಷಿತರ ಪ್ರಾಥಮಿಕ ಸಮಸ್ಯೆಗಳ ಬಗ್ಗೆ ಇವರು ದನಿ ಎತ್ತಿದರು. ವಸತಿ ಇಲ್ಲದವರಿಗೆ ಮನೆಗಳನ್ನು ಕಟ್ಟಿಸಿದರು. ಇವರ ಸಾಧನೆಗಳಲ್ಲಿ ಮುಖ್ಯವಾದುದು, ವಿಶ್ವದ ಮಟ್ಟದಲ್ಲಿ ಪ್ರಖ್ಯಾತಿ ಪಡೆದದ್ದು 'ಮಲಹೊರುವ ಪದ್ದತಿ'ಯನ್ನು ನಿರ್ಮೂಲನ ಮಾಡಿದುದು. ಅದಕ್ಕೆ ಸಂಬಂಧಿಸಿದ ಕಾನೂನುಗಳನ್ನು ಜಾರಿಗೆ ತಂದರು.

**ಬೂಸಾ ಪ್ರಕರಣ:** ೭-೨-೧೯೭೩ ರಂದು ಮೈಸೂರು ವಿಶ್ವವಿದ್ಯಾಲಯವು ವಿಚಾರ ಸಂಕಿರಣವೊಂದಕ್ಕೆ ಮಾತನಾಡಲು ಬಿ.ಬಸವಲಿಂಗಪ್ಪನವರನ್ನು ಆಹ್ವಾನಿಸಿತ್ತು. ಆಗ ಬಸವಲಿಂಗಪ್ಪನವರು ದೇಶದ ಮೂಲಭೂತವಾದಿಗಳನ್ನು ಕುರಿತು, ಹಾಗೂ ದಲಿತರ, ಶೋಷಿತರ ಮೂಲಭೂತ ಸಮಸ್ಯೆಗಳನ್ನು ಕುರಿತು ಮಾತನಾಡುತ್ತಾ ಸಮಾಜದ ಶೋಷಿತ ಸಮುದಾಯಗಳ ಸ್ಥಿತಿ ಏನಾಗಿದೆ? ಕನ್ನಡ ಸಾಹಿತ್ಯದಲ್ಲಿ ಏನಿದೆ? ಕನ್ನಡ ಸಾಹಿತ್ಯ ಅದು 'ಬೂಸಾ ಸಾಹಿತ್ಯ' ಎಂದು ಟೀಕಿಸಿದರು. ಇದು ಶೋಷಿತರ ದಮನಿಗಳ ಮಿಡಿತವನ್ನು ಹಿಡಿದು ಹೇಳಿದಂತಹದ್ದಾಗಿದ್ದರೂ ನಂತರದಲ್ಲಿ ಅದು ತನ್ನದೇ ಆದ ರಾಜಕೀಯ ಆಯಾಮವನ್ನು ಪಡೆಯಿತು. ಯಾವ ಸಾಹಿತ್ಯವು ಜನರ ನೋವು ದುಃಖವನ್ನು ಪ್ರತಿಬಿಂಬಿಸುವುದಿಲ್ಲವೋ ಅಂತಹ ಸಾಹಿತ್ಯವು ನಿಷ್ಪ್ರಯೋಜಕವಾದದ್ದು ; ಅದು ಸಾಹಿತ್ಯವೇ ಅಲ್ಲ. ಅದು ರಾಶಿ ಬಿದ್ದ ಬೂಸಾ ಅಂದರು. ಈ ಸಂದರ್ಭದಲ್ಲಿ ಮೇಲ್ಜಾತಿಯ ರಾಜಕಾರಣಿಗಳು, ಸಾಹಿತಿಗಳು ಇದನ್ನು ಒಂದು ಗಲಬೆಯ ವಿಷಯವನ್ನಾಗಿ ಮಾಡಿ ಮಾಧ್ಯಮಗಳಲ್ಲಿ ಬಿತ್ತರಿಸಿದರು. ಈ ಸಂದರ್ಭದಲ್ಲಿ ಬಸಲಿಂಗಪ್ಪ ನವರ ಪರವಾಗಿ ಹೋರಾಡಿದ ಪರಿಣಾಮ ಪ್ರಬಲವಾದ ಮೇಲ್ಜಾತಿಯ ರಾಜಕಾರಣವು ದಲಿತ ವಿದ್ಯಾರ್ಥಿಗಳನ್ನು ಥಳಿಸಿತು. ಆಳುವ ವರ್ಗದವರು ಬಸವಲಿಂಗಪ್ಪನವರ ವಿಚಾರದ ವಾಸ್ತವ ಅರ್ಥವನ್ನು ಅರಿಯದ ಕಾರಣದಿಂದ ಅನಿವಾರ್ಯವಾಗಿ ರಾಜಿನಾಮೆಯನ್ನು ನೀಡಬೇಕಾಯ್ತು. ಇಲ್ಲಿ ಬೂಸಾಪ್ರಕರಣ ಬಸವಲಿಂಗಪ್ಪನವರನ್ನು ಅಧಿಕಾರದಿಂದ ಇಳಿಸಲು ಒಂದು ನೆಪವಾಗಿತ್ತು. ಅದರ ಹಿಂದಿನ ವಸ್ತುವಿಷಯವು ಸಹಿಸದ ಶೋಷಕರ ಮೂಲಭೂತವಾದಿಗಳದ್ದಾಗಿತ್ತು. ಬೂಸಾಪ್ರಕರಣವು ದಲಿತ ಬುದ್ಧಿಜೀವಿಗಳನ್ನು ಎಚ್ಚರಿಸಿತು. ಇದು ದಲಿತರಿಗೆ ಅಗತ್ಯವಾದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಹಕ್ಕುಗಳನ್ನು ಪಡೆಯಲು ಯೋಚಿಸಿತು. ರಾಜ್ಯದಲ್ಲಿ ದಲಿತ ಸಂಘಟನೆಯ ಭದ್ರತೆಯು ಅಗತ್ಯ ಎಂಬುದು ಚರ್ಚಿತವಾಯಿತು. ಈ ಹೊತ್ತಿಗೆ ದಲಿತ ಸಮುದಾಯಗಳ ಅಲ್ಪಸ್ವಲ್ಪ ಜನ ಶಿಕ್ಷಣವನ್ನು ಪ್ರವೇಶ ಮಾಡಿದ್ದರು. ಕೆಲವರು ಅದರಿಂದ ನೌಕರಿಯನ್ನು ಪಡೆದಿದ್ದರು. ಇದು ತಮ್ಮ ಹಿಂದಿನ ಬದುಕನ್ನು ಪ್ರಶ್ನಿಸಲು ಬುದ್ಧಿಜೀವಿಗಳಿಗೆ ಸಹಾಯಕವಾಗಿತ್ತು. ಅಲ್ಲದೆ ಕರ್ನಾಟಕ ದಲಿತ ಚಳುವಳಿಗೆ ನೆರೆ ರಾಜ್ಯಗಳಲ್ಲಿ ಉಗಮಗೊಂಡ ಚಳುವಳಿಗಳು ಸಾಕಷ್ಟು ಪ್ರೇರಣೆಯನ್ನು ನೀಡಿವೆ. ಮಹಾರಾಷ್ಟ್ರದ ಮಹಾತ್ಮಪುಲೆ ಮತ್ತು ಅಂಬೇಡ್ಕರ್ ಚಳುವಳಿಯಂತೆ ತಮಿಳುನಾಡಿನಲ್ಲಿ

ಪೆರಿಯಾರ್ ರಾಮಸ್ವಾಮಿಯವರ ದ್ರಾವಿಡ ಚಳುವಳಿ, ಕೇರಳದಲ್ಲಿ ಶ್ರೀ ನಾರಾಯಣ ಗುರುಗಳ ಚಳುವಳಿ ಮತ್ತು ಕಮ್ಯುನಿಷ್ಟ್ ಚಳುವಳಿಗಳು ಆಂಧ್ರದಲ್ಲಿ ಕಂಡು ಬರುತ್ತಿರುವ ನಕ್ಸಲೈಟ್ ಚಳುವಳಿಗಳು ದಲಿತ ಚಳುವಳಿಗೆ ಪ್ರಭಾವವನ್ನು ಬೀರಿದವು.

**ಹಾವನೂರ್ ಆಯೋಗ:** ಈ ಆಯೋಗವು ೧೯೭೫ರಂದು ಜಾರಿಗೆ ಬಂತು. ಈ ಹೊತ್ತಿಗಾಗಲೇ ಬೂಸಾಪ್ರಕರಣ ನಡೆದಿತ್ತು. ದಲಿತ ಬುದ್ಧಿಜೀವಿಗಳ ತಮ್ಮ ಸಮುದಾಯಗಳ ನಾಯಕರಂತೆ ಅವರಿಂದ ಪ್ರಶ್ನೆಗಳು ಏಳುತ್ತಿದ್ದವು. ಈ ಹೊತ್ತಿಗೆ ಸ್ವಾತಂತ್ರ್ಯವನ್ನು ಕಂಡ ಭಾರತವು ೨೫ರ ವರ್ಷವನ್ನು ಕಳೆದಿತ್ತು. ದಲಿತ ಬುದ್ಧಿಜೀವಿಗಳು ಸಕ್ರಿಯವಾಗಿ ದಲಿತ ಚಳುವಳಿಯ ಪಾತ್ರದಲ್ಲಿ ತೊಡಗುತ್ತಿದ್ದರು. ತನ್ನ ಧ್ಯೇಯ ದೋರಣೆಯನ್ನು ಹೊತ್ತು ಸಾಗುತ್ತಿದ್ದ ಸಂಘಟನೆಯ ಅನಿವಾರ್ಯತೆಯನ್ನು ಗುರ್ತಿಸುತ್ತಿದ್ದರು. ಈ ಸಂದರ್ಭದಲ್ಲಿ ವೈಶಾಲ್ಯತೆಯನ್ನು ಹೊಂದಿದ್ದ, ಹೊಸದಾಗಿ ಕಂಡ ದಲಿತ ಸಂಘಟನೆಯಲ್ಲಿ ಹಿಂದುಳಿದವರು, ಅಲ್ಪಸಂಖ್ಯಾತರು ಜೊತೆಗೂಡಿ ಪ್ರೋತ್ಸಾಹವನ್ನು ನೀಡುತ್ತಿದ್ದರು. ೧೯೭೨ ರಲ್ಲಿ ಕರ್ನಾಟಕದಲ್ಲಿ ಮೊದಲ ಬಾರಿಗೆ ಲಿಂಗಾಯಿತೇತರ ಮತ್ತು ಒಕ್ಕಲಿಗೇತರ ರಾಜಕಾರಣಿ ಶ್ರೀ ಡಿ. ದೇವರಾಜ ಅರಸರು ಮುಖ್ಯಮಂತ್ರಿಯಾದರು. ಅವರು ಅರಸು ಎಂಬ ಅಲ್ಪಸಂಖ್ಯಾತ ಕೋಮಿಗೆ ಸೇರಿದವರಾಗಿದ್ದರು. ಅವರು ಅಲ್ಪಸಂಖ್ಯಾತ, ಹಿಂದುಳಿದವರು ಎದುರಿಸುತ್ತಿದ್ದ ಸಮಸ್ಯೆಗಳಿಗೆ ಕಾನೂನಾತ್ಮಕವಾಗಿ ಸ್ಪಂದನೆಯನ್ನು ನೀಡಿದರು. "೧೯೭೨ ಹಾಲಿ ಉದ್ಯೋಗ ಹಾಗೂ ಜಾತಿಯ ಒರೆಯು ಹಿಂದುಳಿದ ವರ್ಗಗಳನ್ನು ಗುರ್ತಿಸಲು ತೃಪ್ತಿಕರವಾದ ಮಾನದಂಡವಲ್ಲವೆಂಬ ನಿರಂತರ ನಿಲುವಿಗೆ ಬೆಂಬಲಿಸಿದ ಅರಸ್ ಅವರು ಎಲ್.ಜಿ.ಹಾವನೂರ್ ಅವರ ಅಧ್ಯಕ್ಷತೆಯಲ್ಲಿ ಮೊದಲನೆಯ ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸಿದರು. ಈ ಆಯೋಗವು ೧೯೭೫ರಲ್ಲಿ ತನ್ನ ಪ್ರಧಾನ ವರದಿಯನ್ನು ಸಲ್ಲಿಸಿತು. ಅದರಲ್ಲಿ ಹಿಂದುಳಿದ ವರ್ಗಗಳನ್ನು ಮೂರು ಗುಂಪುಗಳನ್ನಾಗಿ ಮಾಡಲಾಯಿತು. ಅವು ಯಾವುದೆಂದರೆ ಹಿಂದುಳಿದ ಜನಾಂಗಗಳು, ಹಿಂದುಳಿದ ಜಾತಿಗಳು ಮತ್ತು ಹಿಂದುಳಿದ ವರ್ಗಗಳು ಎಂದು ಮಾಡಿ ಪ್ರತಿಯೊಂದು ಗುಂಪಿಗೂ ಭಾಗದ ಮೀಸಲಾತಿಯನ್ನು ಶಿಫಾರಸ್ಸುಮಾಡಿತು"[೨೨]. ಜನಸಂಖ್ಯೆಯ ಆಧಾರದ ಮೇಲೆ ಆಯಾಜಾತಿಯನ್ನು ವಿದ್ಯಾರ್ಹತೆಯನ್ನು ಇಲ್ಲಿ ನೋಡಲಾಯಿತು. ಜನಸಂಖ್ಯೆಯ ಶೇಕಡವಾರಲ್ಲಿ ಹಿಂದುಳಿದ ಅಲ್ಪಸಂಖ್ಯಾತ ದಲಿತರ ವಿದ್ಯಾರ್ಹತೆಯು ಕಡಿಮೆ ಇದ್ದದ್ದು ಕಂಡುಬಂತು. ಈ ಜನಾಂಗಗಳಿಗೆ ವಿಶೇಷ ಸೌಲಭ್ಯಗಳನ್ನು ಈ ವರದಿಯು ರೂಪಿಸಿತ್ತು. ಈ ಸಂದರ್ಭದಲ್ಲಿ ಪ್ರಕರತೆಯನ್ನು ಹೊಂದಿದ್ದ ದಲಿತ ಚಳುವಳಿಗೆ ಹಾವನೂರು ವರದಿ ಮತ್ತು ಆ ವರದಿಯ ಪ್ರಮುಖರಾದ ಹಿಂದುಳಿದವರು ಮತ್ತು ಅಲ್ಪಸಂಖ್ಯಾತರು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಪ್ರೇರಣೆಯನ್ನು ನೀಡಿದರು.

## ದಲಿತ ಚಳುವಳಿಯ (ಸಂಘಟನೆಯ) ಅನಿವಾರ್ಯತೆ

ಭಾರತವು ಹಳ್ಳಿಗಳಿಂದ ಕೂಡಿದೆ. ಹಳ್ಳಿಗಳ ಬೆಳವಣಿಗೆಯಿಂದ ಪಟ್ಟಣಗಳು, ನಗರಗಳು ಹುಟ್ಟಿವೆ. ಇದು ಬೆಳವಣಿಗೆಗೆ ಸಂಬಂಧಿಸಿರುವಂತಹದು. ನಗರ ಮತ್ತು ಗ್ರಾಮಗಳೆರಡೂ ಪ್ರತ್ಯೇಕ ಅಸ್ತಿತ್ವವನ್ನು ಹೊಂದಿವೆ. ಅಂತೆಯೇ ಅಲ್ಲಿಯ ವ್ಯವಸ್ಥೆಗಳೂ ಕೂಡ ಭಿನ್ನ ಸ್ವರೂಪವನ್ನು ಹೊಂದಿವೆ. ಈ ಎರಡೂ ಕಡೆ ಸಾಮಾಜಿಕ, ಆರ್ಥಿಕ, ರಾಜಕೀಯ, ಅಸಮಾನತೆ ಇದೆ. ಇದರ ಜೊತೆಗೆ ಬಡವ, ಶ್ರೀಮಂತ, ಮೇಲು ಕೀಳು, ಅಕ್ಷರಸ್ಥ, ಅನಕ್ಷರಸ್ಥ, ಬುದ್ಧಿವಂತ, ಜಾಣ ಮುಂತಾದ ಅಸಮಾನತೆಗಳೂ ಕೂಡ ಇವೆ.

ಸ್ವಾತಂತ್ರ್ಯ ಪೂರ್ವದಲ್ಲಿನ ಭಾರತವನ್ನು ರಾಜಮಹಾರಾಜರು ಆಳುತ್ತಿದ್ದರು. ಜೊತೆಗೆ ೨೦೦ ವರ್ಷಕ್ಕೂ ಹೆಚ್ಚು ಕಾಲ ಭಾರತವು ವಸಾಹತುಶಾಹಿಗಳ ಆಳ್ವಿಕೆಯಲ್ಲಿತ್ತು. ಆ ಸಂದರ್ಭದಲ್ಲಿ ಜನಸಾಮಾನ್ಯರ ಬದುಕು ಅವರ ಸಂಕಷ್ಟಗಳು ಆಳುವವರಿಗೆ ಕಾಣಲಿಲ್ಲ. ಅವುಗಳು ಬೆಳಕಿಗೆ ಬರಲೇ ಇಲ್ಲ. ಮನುಷ್ಯ ಮನುಷ್ಯರ ನಡುವೆ ಶೋಷಣೆ ಶುರು ಆದಾಗ ಶೋಷಿತ ಮತ್ತು ಶೋಷಕ ವರ್ಗಗಳು ಉಗಮಗೊಂಡವು. ವರ್ಗಗಳು ಇದನ್ನು ಪೋಷಿಸಿಕೊಂಡು ಬಂದವು. ಇವು ಮನುಷ್ಯ ಸಂಬಂಧದಲ್ಲಿ ಅಂತರ ಹುಟ್ಟಿಸಿದವು. ಅವುಗಳಿಂದ ಸಾಮಾಜಿಕ ಸ್ಥಿತಿ, ಆರ್ಥಿಕ ಸ್ಥಿತಿಗಳು ಭಿನ್ನವಾದವು. ಹಾಗೆಯೇ ಅವುಗಳಿಂದ ಭಾರತದಲ್ಲಿ ಜಾತಿಗಳಾಗಿ ಉಗಮಗೊಂಡವು. ಅವುಗಳಿಗೆ ತಕ್ಕಂತೆ ಕಸುಬುಗಳನ್ನು ಮಾಡುತ್ತಾ ಬಂದರು. ಅಂತರವೇರ್ಪಟ್ಟ ಸಾಮಾಜಿಕ ಬದುಕಿನಲ್ಲಿ ಪಟ್ಟಭದ್ರ ಹಿತಾಸಕ್ತಿಯ ಆಳುವ ವರ್ಗಗಳು ತಮ್ಮ ಅನುಕೂಲಗಳಿಗೆ ತಕ್ಕಂತೆ ಶೋಷಿತ ಸಮುದಾಯಗಳನ್ನು ನಡೆಸಿಕೊಂಡರು. ಅವಕ್ಕೆ ತಕ್ಕಂತೆ ನಿಯಮಾವಳಿಗಳೂ ಬದುಕಲ್ಲಿ ಸೇರಿಕೊಂಡವು. ಅವು ಅಂತರವೇರ್ಪಟ್ಟಿದ್ದ ಸಮುದಾಯ - ಸಮುದಾಯಗಳ ನಡುವೆ, ಜಾತಿ-ಜಾತಿಗಳ ನಡುವೆ ಬಲವಾದ ವ್ಯವಸ್ಥೆಯನ್ನು ರೂಪಿಸಿದವು.

ಸ್ವಾತಂತ್ರ್ಯಾನಂತರದ ಭಾರತದಲ್ಲಿ ಪ್ರಜಾಪ್ರಭುತ್ವ ಮಾದರಿಯ ಆಡಳಿತ ಜಾರಿಗೆ ಬಂತು. ಇದು ಇದ್ದ ವ್ಯವಸ್ಥೆಯಲ್ಲಿನ ಅಸಮಾನತೆಯ ಬದುಕಿನ ಹಿನ್ನೆಲೆಯಲ್ಲಿ ಕಂಡುಬಂದಿತು. ಪ್ರಭುತ್ವದ ಅರಿವು ಕೆಳವರ್ಗ, ಕೆಳಸಮುದಾಯಗಳಿಗೆ ಮುಖ್ಯವಾಯಿತು. ಪ್ರಜೆಗಳು ಪ್ರಭುಗಳೇ, ಪ್ರತಿಯೊಬ್ಬ ವ್ಯಕ್ತಿಯೂ ಕೀಳಲ್ಲ ಮೇಲಲ್ಲ; ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಎಲ್ಲರೂ ಸಮಾನರು ಎಂಬುದು ಸಂಸದೀಯ ಶಾಸನಬದ್ಧ ಕಾನೂನಿನಲ್ಲಿ ಅಡಕಗೊಂಡಿತು. ಬದುಕಿನ ಪ್ರತಿಯೊಂದು ಸಾಮಾಜಿಕ ಆರ್ಥಿಕ, ರಾಜಕೀಯ, ಶೈಕ್ಷಣಿಕ, ಧಾರ್ಮಿಕ ಮುಂತಾದ ವಲಯಗಳಲ್ಲೂ ಅಸಮಾನತೆಯನ್ನು ಎತ್ತಿ ಹಿಡಿಯುವ ಹಕ್ಕನ್ನು ವ್ಯಕ್ತಿಗಳು ಪಡೆದುಕೊಂಡರು. ಆಧುನಿಕ ಶಿಕ್ಷಣ ಪಡೆದ ದಲಿತರು ಸಮಾಜದ ಬಗೆಗಿನ ತಮ್ಮ ಅರಿವಿನಿಂದ ಪ್ರತಿಭಟನೆಗೆ ತೊಡಗಿದರು. ಇವರಿಗೆ ತಮ್ಮ ಸ್ಥಾನ ಮತ್ತು ಅಸ್ತಿತ್ವಗಳು ಪ್ರಶ್ನೆಯಾಗಿ ಎದ್ದವು. ಯಾವಾಗ ಪ್ರತಿಭಟನೆಗಳು ಶೋಷಿತ ಸಮುದಾಯಗಳಿಂದ ಕಂಡು ಬಂದವೋ ಆಗ ಅವುಗಳಿಗೆ ತಕ್ಕಂತೆ ಸಿದ್ಧಾಂತಗಳು ರೂಪುಗೊಂಡವು. ಇಲ್ಲಿ ಪ್ರಮುಖವಾಗಿ ಎರಡು ಬಗೆಯಲ್ಲಿ ಒಡೆದು ನಿಂತಂಥ ವ್ಯವಸ್ಥೆಗಳು ಕಂಡುಬಂದವು. ಅವು ಒಂದಕ್ಕೊಂದು ವೈರುಧ್ಯವನ್ನು ಹೊಂದಿವೆ.

ಮೊದಲನೆಯದು ಈಗಾಗಲೇ ಸ್ಥಾಪಿತ ಸಮಾಜದ ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿರುವಂತ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆ; ಅದಕ್ಕೆ ತಕ್ಕಂತೆ ಸಾಮಾಜಿಕ ಅಂತಸ್ತು ಮತ್ತು ಸಮಾಜದೊಳಗಿನ ಸ್ಥಾನ. ಹಾಗೆಯೇ ಅವುಗಳಿಗೆ ಹೊಂದಿಕೊಂಡಂತ ನೀತಿ ನಿಯಮ, ಸಂಪ್ರದಾಯ, ಲೋಕರೂಡಿಗಳು. ಇವುಗಳನ್ನು ಒಪ್ಪಿಕೊಂಡು ಸಾಮಾಜಿಕ ಬದುಕನ್ನು ನಿಯಂತ್ರಿಸುವ ಮತ್ತು ನಿಯಂತ್ರಣಕ್ಕೆ ಒಳಗೊಳ್ಳುವ ಸಮುದಾಯಗಳು.

ಎರಡನೆಯದು ಪ್ರಜಾಪ್ರಭುತ್ವ ವ್ಯವಸ್ಥೆಯೊಂದಿಗೆ ನಡೆಸುವಂತಹ ಬದುಕು. ಇಲ್ಲಿನ ಕೆಲವು ಮನಸ್ಥಿತಿಗಳು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಒಪ್ಪಿಕೊಂಡು, ಅಸಮಾನತೆಯ ಸಾಂಪ್ರದಾಯಿಕ ವ್ಯವಸ್ಥೆಯನ್ನು ಒಪ್ಪಿಕೊಂಡಿರುವ ವೈರುಧ್ಯಗಳು ಕಂಡು ಬರುತ್ತವೆ. ಇವುಗಳು ಇರುವ ವ್ಯವಸ್ಥೆಯನ್ನು ಪ್ರಶ್ನಿಸುವಂಥದ್ದಾಗಿದ್ದು ಸಂಸದೀಯ ಶಾಸನಬದ್ಧ ವ್ಯವಸ್ಥೆಯ ಫಲವನ್ನು ಕೇಳುತ್ತವೆ. ಜನಾಂಗೀಯ, ಸಾಮುದಾಯಿಕ ಸಮಾನತೆಗಳು ಎಲ್ಲಿಯವರಿಗೆ ಸಿಗುವುದಿಲ್ಲವೋ

ಅಲ್ಲಿಯವರೆಗೆ ಜಾತಿವ್ಯವಸ್ಥೆ ಇರುತ್ತದೆ. ಅದನ್ನು ಪ್ರತಿಭಟಿಸುತ್ತಾ ತಮ್ಮ ಹಕ್ಕನ್ನು ಆಡಳಿತಾತ್ಮಕವಾಗಿ ಪಡೆಯುವತ್ತ ದಲಿತ ಚಳುವಳಿಗಳು ಮುಖ ಮಾಡಿವೆ. ಈ ಚಳುವಳಿಗಳು ಜಾತಿ ವ್ಯವಸ್ಥೆ ಇರುವ ತನಕವೂ ಅನಿವಾರ್ಯತೆಯನ್ನು ಹೊಂದಿರುತ್ತವೆ.

ಆಧುನಿಕತೆಯ ಪ್ರಭಾವವು ವ್ಯಾಪಿಸಿಕೊಳ್ಳುತ್ತಿರುವಾಗ ಅದನ್ನು ನಿಯಂತ್ರಿಸುತ್ತಿರುವ ಜಾಗತೀಕರಣದ ರೂವಾರಿಯಾಗಿರುವ ಮೊದಲ ಜಗತ್ತಿನ ರಾಷ್ಟ್ರಗಳು ಅಥವಾ ಶ್ರೀಮಂತ ರಾಷ್ಟ್ರಗಳು ತೃತೀಯ ಜಗತ್ತಿನ ರಾಷ್ಟ್ರಗಳ ಮೇಲೆ ತಮ್ಮ ಪ್ರಭುತ್ವವನ್ನು ಸಾಧಿಸುತ್ತವೆ. ಬಡರಾಷ್ಟ್ರಗಳು, ಮತ್ತು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು ಮೊದಲ ಜಗತ್ತಿನ ರಾಷ್ಟ್ರಗಳ ಬಂಡವಾಳಶಾಹಿ ವ್ಯವಸ್ಥೆಗೆ ಅನಿವಾರ್ಯವಾಗಿ ತಮ್ಮನ್ನು ಹೊಂದಿಸಿಕೊಂಡಿರುತ್ತವೆ. ಇವು ಅಂತಾರಾಷ್ಟ್ರೀಯ ವ್ಯಾಪಾರ ಸಂಬಂಧದ ನೀತಿ ನಿಯಮ ಕಟ್ಟಳೆಗಳಿಗೆ ಬದ್ಧವಾಗಿರುತ್ತವೆ. ಒಂದು ರೀತಿಯಲ್ಲಿ ಜಾಗತೀಕರಣದಿಂದ ಉಪಯೋಗವನ್ನು ಹೊಂದುತ್ತಲಿದ್ದರೂ ಅವುಗಳು ಮತ್ತೊಂದು ರೀತಿಯಲ್ಲಿ ತೊಡಕುಗಳನ್ನು ಎದುರುಗೊಳ್ಳುತ್ತಿರುತ್ತವೆ. ಬಡರಾಷ್ಟ್ರಗಳು ಅಥವಾ ಭಾರತದಂತಹ ಹಲವು ಸಮುದಾಯಗಳಿರುವ, ಅಸಮಾನತೆಯ ಆಂತರ್ಯದ ಬದುಕನ್ನು ಹೊಂದಿರುವ ರಾಷ್ಟ್ರಗಳು ಸಮಸ್ಯೆಗಳಲ್ಲಿ ವಿಭಿನ್ನತೆಯನ್ನು ಹೊಂದಿರುತ್ತದೆ. ಜಾಗತೀಕರಣ ಪ್ರಕ್ರಿಯೆಯ ಲಾಭಗಳು ವ್ಯವಸ್ಥೆಯ ಬಂಡವಾಳಗಾರರನ್ನೇ ಅವಲಂಭಿಸಿರುತ್ತದೆ.

ಶ್ರೀಮಂತ ರಾಷ್ಟ್ರಗಳು ತಮ್ಮ ಬಂಡವಾಳ ವಿನಿಯೋಗ ಹಾಗೂ ಆರ್ಥಿಕ ಗಳಿಕೆಯ ಉದ್ದೇಶವನ್ನು ಹೊಂದಿವೆ. ಇವು ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಸಿಗುವ ಸಂಪನ್ಮೂಲಗಳಿಗೆ ತಕ್ಕಂತೆ ಉದ್ಯಮಗಳನ್ನು ಪ್ರಾರಂಭಿಸುತ್ತವೆ. ಈ ಉದ್ಯಮಗಳು ವಿಶ್ವಬ್ಯಾಂಕ್, ಜನರಲ್ ಅಗ್ರಿಮೆಂಟ್ ಟ್ರೇಡ್ ಅಂಡ್ ಟ್ಯಾರಿಫ್, ವರ್ಲ್ಡ್ ಟ್ರೇಡ್ ಆರ್ಗನೈಜೇಷನ್, ಇಂಟರ್ ನ್ಯಾಷನಲ್ ಮಾನಿಟರಿ ಫಂಡ್ ಮುಂತಾದವುಗಳು ಉದಾರೀಕರಣ ನೀತಿಯ ಅಡಿಯಲ್ಲಿ ಉಗಮಗೊಳ್ಳುತ್ತವೆ. ಪರಿಣಾಮವಾಗಿ ಇವುಗಳು ಸಮಾಜದ ಒಂದು ವರ್ಗಕ್ಕೆ ತನ್ನ ಪ್ರಖರತೆಯನ್ನು ಬಿಂಬಿಸಿ ಮತ್ತೊಂದು ವರ್ಗಕ್ಕೆ ಅದರ ಮಿತಿಯ ಪರಿಣಾಮವನ್ನು ಬೀರುತ್ತವೆ. ಭಾರತ ದೇಶದಲ್ಲಿ ಬಹುಸಂಸ್ಕೃತಿಗಳು ಬಹುಸಮುದಾಯಗಳು ಇವೆ. ಜಾಗತೀಕರಣದ ಪ್ರಕ್ರಿಯೆಯು ಒಂದು ವರ್ಗದ ಜನರ ಹಿತಾಸಕ್ತಿಯನ್ನು ಹೊಂದಿದೆ. ಇವುಗಳ ನಿರ್ಣಯಾತ್ಮಕ ವಸ್ತುವಿಷಯಗಳನ್ನು ಭಾರತದಂತಹ ಸಾವಿರಾರು ಸಮುದಾಯಗಳಿರುವ, ಭಿನ್ನಸಂಸ್ಕೃತಿಗಳಿರುವ, ವಿಭಿನ್ನ ಆಚರಣೆ, ಸಂಪ್ರದಾಯ, ನಂಬಿಕೆಗಳಿರುವ ದೇಶದ ಮೇಲೆ ಹೇರಲಾಗಿದೆ. ವ್ಯಕ್ತಿ ವ್ಯಕ್ತಿಗಳ ನಡುವೆ ಮನುಷ್ಯ ಸಂಬಂಧವನ್ನು ಇಂದೂ ಕಾಣದ ಸಮಾಜದಲ್ಲಿ ಪ್ರೀತಿಯ ಬೇರುಗಳು ಸಾರ್ವತ್ರಿಕವಾಗಿ ಪ್ರತಿಯೊಬ್ಬರಲ್ಲಿ ಬೇರೂರದೆ ಇರುವ ಸಂದರ್ಭ ಕಂಡುಬರುತ್ತಿದೆ. ಹಾಗೆಯೇ ಮೂಲಭೂತವಾದಿತನದ ಪಟ್ಟಭದ್ರ ಹಿತಾಸಕ್ತಿಯನ್ನು ಉಳಿಸಿಕೊಂಡು ಬರುತ್ತಿರುವುದು ದಲಿತೇತರ ಸಮುದಾಯಗಳಲ್ಲಿ ಕಂಡುಬರುತ್ತಿದೆ. ವೈಚಾರಿಕತೆ ಕಡಿಮೆ ಇದ್ದು ಸಾಂಪ್ರದಾಯಿಕ ಕಟ್ಟು ಕಟ್ಟಲೆಗಳು ಇವರನ್ನು ಕಟ್ಟಿಹಾಕಿವೆ. ಅಥವಾ ಅವುಗಳಿಗೆ ಇವರೇ ಒಳಗಾಗಿದ್ದಾರೆ. ಇವುಗಳನ್ನು ಪೋಷಿಸಿಕೊಂಡು ಬರುತ್ತಿರುವ ಈ ಹೊತ್ತಿನಲ್ಲಿ ಅತ್ಯಂತ ಕೆಳಸ್ಥಿತಿಯಲ್ಲಿರುವ ದಲಿತ ಸಮುದಾಯಗಳಿಗೆ ಪ್ರಜಾಪ್ರಭುತ್ವದ ಸಾಮಾಜಿಕ ನ್ಯಾಯದ ಮತ್ತು ಸೌಲಭ್ಯಗಳು ಇನ್ನೂ ಗೊತ್ತಿಲ್ಲ. ಹಾಗೆಯೇ ಅವುಗಳನ್ನು ಗೊತ್ತಾಗದಂತೆ ಇರುವ ವಾತಾವರಣವೂ ಇದೆ. ಇಂಥ ಬಿಕ್ಕಟ್ಟಿನಲ್ಲಿ ದಲಿತ ಸಮುದಾಯಗಳು ಬದುಕುತ್ತಿವೆ. ಇವು ಆರ್ಥಿಕ ಅಸಮಾನತೆ, ಭೂ ಹೀನತೆ, ಉದ್ಯೋಗಹೀನತೆ, ಸೌಲಭ್ಯಹೀನತೆಯಿಂದ ಬಳಲುತ್ತಿವೆ. ಇಂತಹ ಸಾಂಸ್ಕೃತಿಕ ವಾತಾವರಣದಲ್ಲಿ ದಲಿತ ಚಳುವಳಿಯು

ಇಂದಿನ ಅನಿವಾರ್ಯತೆ ಬಹಳ ಮುಖ್ಯವಾದುದ್ದು. ಕೇವಲ ದಲಿತೇತರ ದೌರ್ಜನ್ಯ ದಬ್ಬಾಳಿಕೆ ಅವಮಾನ ಅತ್ಯಾಚಾರಗಳಿಂದ ದಲಿತ ಸಮುದಾಯಗಳು ಶೋಷಿತವಾಗಿಲ್ಲ. ಅವುಗಳನ್ನು ಮೀರಿ ಆರ್ಥಿಕ ಸ್ಥಿತಿವಂತರಿಗೆ, ಬಂಡವಾಳ ಶಾಹಿಗಳಿಗೆ, ಭೂಮಾಲೀಕರ ಪರವಾದ ಜಾಗತಿಕ ಶೋಷಣೆ ಕೂಡಾ ಇದೆ. ಮೊದಲೇ ಶೋಷಣೆಯಿಂದ ಬದುಕುತ್ತಿರುವ, ಕೆಳಸಮುದಾಯಗಳು, ಜಾಗತೀಕರಣದ ದಾಸ್ಯಕ್ಕೂ ಒಳಗಾಗಿವೆ. ಈವೊತ್ತಿನ ತಾಂತ್ರಿಕತೆ/ವೈಜ್ಞಾನಿಕ ಅವಕಾಶಗಳು, ಸೌಲಭ್ಯಗಳು ದಲಿತರಿಗೆ ಸಿಗುತ್ತಿಲ್ಲ. ಇಂದು ಕೈಗಾರಿಕೀಕರಣದ ಪ್ರಭಾವ, ಯಂತ್ರ ಮತ್ತು ತಾಂತ್ರಿಕ ಜಗತ್ತು ದಲಿತ ಸಮುದಾಯಗಳನ್ನು ತಲ್ಲಣಗೊಳಿಸಿವೆ. ಆಧುನಿಕ ತಂತ್ರಜ್ಞಾನವು ಮುಂದುವರೆಯುತ್ತಿರುವ ಹೊತ್ತಿನಲ್ಲಿ ಇವು ಸಮಸ್ಯೆಗಳಾಗಿ ಎದುರಾಗುತ್ತಿರುವಂತಹವುಗಳು. ಆದ್ದರಿಂದ ದಲಿತ ಚಳುವಳಿಗಳು ಅನಿವಾರ್ಯವಾಗಿವೆ.

ದಲಿತ ಚಳುವಳಿಯ ಅನಿವಾರ್ಯತೆಯನ್ನು ಕುರಿತು ಮತ್ತಷ್ಟು ಚರ್ಚಿಸುವಾಗ ಈ ಚಳುವಳಿ ಯಾಕೆ ಬೇಕು? ಎಂಬ ಪ್ರಶ್ನೆಗೆ ದಲಿತರಲ್ಲಿ ಇರುವ ಸಮಸ್ಯೆಗಳು ಎದುರು ನಿಲ್ಲುತ್ತವೆ. ಅವು ಎಂಥಹ ಸಮಸ್ಯೆಗಳು? ಅವು ಸಮಾಜದ ಸಮಕಾಲೀನ ಬದುಕಿನ ಇತರೆ ಸಮುದಾಯಗಳ ಜೊತೆಯಲ್ಲಿ ಹೇಗೆ ಬದುಕುತ್ತಿವೆ? ಎಂಬವು ಕಾಣಸಿಗುತ್ತವೆ. ದಲಿತರಲ್ಲಿ ಸಮಸ್ಯೆಗಳಿವೆ. ಅವುಗಳಲ್ಲಿ ಮುಖ್ಯವಾಗಿ ಆರ್ಥಿಕ ಸಮಸ್ಯೆ, ಭೂಮಿ ಸಮಸ್ಯೆ, ನೌಕರಿ ಸಮಸ್ಯೆ. ಜೊತೆಗೆ ಸಾಮಾಜಿಕ ವ್ಯವಸ್ಥೆಯ ಜಾತಿವ್ಯವಸ್ಥೆಯಲ್ಲಿ, ಮೇಲುಜಾತಿಯವರಿಂದ ಶೋಷಣೆ, ಅತ್ಯಾಚಾರ, ಅವಮಾನ, ಮಾನಭಂಗಗಳನ್ನು ದಲಿತರು ಅನುಭವಿಸುತ್ತಲೇ ಬರುತ್ತಿದ್ದಾರೆ. ಇವರಿಗೆ ಮುಖ್ಯವಾಗಿ ಆರ್ಥಿಕ ನೆಲೆ ಇಲ್ಲ. ಸಮಸ್ಯೆಗಳನ್ನು ಪ್ರಶ್ನಿಸಲು ಮತ್ತು ಪ್ರತಿಭಟಿಸಲು ಸಾಮಾಜಿಕ ಸಂಘಟನೆಯು ಹಿಂದೆ ಇರಲಿಲ್ಲ. ದಲಿತರ ಸಾಮಾಜಿಕ ಸಂಘಟನೆಯು ಎಪ್ಪತ್ತರ ದಶಕದಿಂದ ಈಚೆಗೆ ಕಂಡುಬಂದದ್ದು. ಅದು ತನ್ನ ಪ್ರಕ್ರಿಯೆಯ ಕಾರ್ಯಕ್ರಮದಡಿಯಲ್ಲಿ ಹೋರಾಟವನ್ನು ಮಾಡುತ್ತಲೇ ಬಂದಿದೆ. ಆದರೂ ದಲಿತರು ಒಂದು ರಾಜಕೀಯ ಮುಖ್ಯ ಶಕ್ತಿಯಾಗಿ ಹೊರ ಹೊಮ್ಮಿಲ್ಲ. ಶೈಕ್ಷಣಿಕವಾಗಿ ಎಲ್ಲರೂ ಅಕ್ಷರಸ್ಥರಾಗಿಲ್ಲ. ಬಹುತೇಕ ಮಂದಿ ಉನ್ನತ ಶಿಕ್ಷಣ ಪಡೆದಿಲ್ಲ. ತಾಂತ್ರಿಕ - ವೈದ್ಯಕೀಯ ಶಿಕ್ಷಣ ಪಡೆಯುವಲ್ಲಿ ಸಾಂಸ್ಕೃತಿಕ ಸಮಸ್ಯೆಗಳಿವೆ. ಅವುಗಳನ್ನು ಪಡೆಯುವಲ್ಲಿ ಎದುರಾಗುವ ಸಮಸ್ಯೆಗಳೇ ದಲಿತರನ್ನು ಹಿಂದಕ್ಕೆ ತಳ್ಳುತ್ತಿವೆ. ಸ್ವಾರ್ಥ ಬದುಕು, ಸ್ವಾರ್ಥ ಅಧಿಕಾರ, ಸ್ವಾರ್ಥ ರಾಜಕಾಣದಿಂದಾಗಿ ದಲಿತರ ಸಮಸ್ಯೆಗಳು ಸಮಸ್ಯೆಗಳಾಗಿಯೇ ಉಳಿದಿವೆ. ಇವೆಲ್ಲವನ್ನು ಯಾರು/ಯಾವುದು ಪೂರೈಸಬೇಕು ಎಂಬುದು ಇವರಿಗೆ ಎದುರಾಗುತ್ತದೆ. ದಲಿತರ ಸಮಸ್ಯೆಗಳನ್ನು ಸರ್ಕಾರ ಬಗೆಹರಿಸಬೇಕು, ಇಲ್ಲವೆ ವ್ಯವಸ್ಥಿತ ಬದುಕನ್ನು ಅನುಭವಿಸುತ್ತಿರವ ಭೂಮಾಲಿಕರು, ಬಂಡವಾಳಗಾರರು ಬಗೆಹರಿಸಬೇಕು.

ಆದರೆ ಸರ್ಕಾರ ಮತ್ತು ಭೂಮಾಲೀಕರು, ಬಂಡವಾಳಗಾರರು ದಲಿತರನ್ನು ಕಾಪಾಡಿಲ್ಲ. ದಲಿತರ ಹಿತವನ್ನು ದಲಿತರೇ ಕಾಪಾಡಿಕೊಳ್ಳಬೇಕು. ಅದರ ಸಲುವಾಗಿ ದಲಿತರಿಗೆ ದಲಿತ ಚಳುವಳಿ ಬೇಕು. ಆದ್ದರಿಂದ ದಲಿತ ಚಳುವಳಿಯ ಅನಿವಾರ್ಯತೆ ದಲಿತರಿಗೆ ಇದೆ.

## ಅಡಿ ಟಿಪ್ಪಣಿಗಳು

೧. ಎಸ್.ಚಂದ್ರಶೇಖರ, 'ಕರ್ನಾಟಕ ಚರಿತ್ರೆ, ಸಂಪುಟ-೭' ದಲಿತ ವರ್ಗಗಳು ಹಾಗೂ ಸ್ವಾತಂತ್ರ್ಯ ಹೋರಾಟ, ಪು:೧೭೮
೨. -ಅದೇ- ಪುಟ:೧೮
೩. -ಅದೇ- ಪುಟ:೧೭೯
೪. -ಅದೇ- ಪುಟ:೧೭೯
೫. -ಅದೇ-
೬. ಗುಂಡಪ್ಪ ಡಿ.ವಿ. 'ಸ್ವಾತಂತ್ರ್ಯಪೂರ್ವದ ಆರು ದಶಕಗಳು' ಜ್ಞಾಪಕ ಚಿತ್ರಶಾಲೆ, ಮೈಸೂರು, ದಿವಾನರು, ಮೈಸೂರು, ಪುಟ:೯೧
೭. ಎಸ್.ಚಂದ್ರಶೇಖರ್, 'ಕರ್ನಾಟಕ ಚರಿತ್ರೆ, ಸಂಪುಟ-೭', ಪುಟ:೧೮೦
೮. -ಅದೇ-, ಪುಟ:೧೮೦
೯. -ಅದೇ- ಪುಟ:೧೮೦
೧೦. -ಅದೇ- ಪುಟ:೧೮೧
೧೧. -ಅದೇ- ಪುಟ:೧೮೨
೧೨. ಎಸ್. ಚಂದ್ರಶೇಖರ್, 'ಅಂಬೇಡ್ಕರ್ ಮತ್ತು ಗಾಂಧಿ' ಪುಟ : ೭೩
೧೩. ---ಅದೇ --- ಪುಟ : ೪೪
೧೪. ಎಲ್.ಹನುಮಂತಯ್ಯ 'ಅಂಬೇಡ್ಕರ್ ಮತ್ತು ಸಮಕಾಲೀನತೆ', ಪುಟ : ೬೫
೧೫. ಬಿ.ಆರ್.ಅಂಬೇಡ್ಕರ್ ಅನು. ಎಂ.ಗೋಪಿನಾಥ್ 'ಬೌದ್ಧ ಮಾರ್ಗದಿ ನಡೆಯೋಣ' ಪುಟ : ೩
೧೬. --- ಅದೇ --- ಪುಟ : ೫೬
೧೭. --- ಅದೇ --- ಪುಟ : ೫
೧೮. --- ಅದೇ --- ಪುಟ : ೮
೧೯. --- ಅದೇ --- ಪುಟ : ೧೩
೨೦. --- ಅದೇ --- ಪುಟ : ೧೩
೨೧. --- ಅದೇ --- ಪುಟ : ೧೩
೨೨. ಬಿ.ಸಿ.ಮೈಲಾರಪ್ಪ, 'ಗ್ರಾಮೀಣ ಬದುಕು ಮತ್ತು ಸಾಮಾಜಿಕ ಚಳುವಳಿ', ಪುಟ : ೩೪೭

ಮೊದಲ ಜನ್ಮದ ಕತೆಯಲ್ಲಿ ಬರುತ್ತವೆ. ''ವಾಯುಭೂತಿ ಗರ್ವದಿಂದ ಋಷಿಯರನ್ನು ಅಪಮಾನಗೊಳಿಸಿ ಬಯ್ದುದ್ದರಿಂದ, ಜಿನ ಧರ್ಮವನ್ನು ಹಳಿದುದರ ಫಲವಾಗಿ ಏಳು ದಿನಗಳೊಳಗೆ ಕುಷ್ಠರೋಗ ಪೀಡಿತನಾದನು. ಮೈಯೆಲ್ಲಾ ಹುಳಹತ್ತಿ ಸಮೆದು ಸತ್ತನು. ಸತ್ತು ಕೌಶಾಂಬಿಯಲ್ಲಿ ಒಂದು ಡೊಂಬರ ಮನೆಯಲ್ಲಿ ಹೆಣ್ಣುಕತ್ತೆಯಾಗಿ ಹುಟ್ಟಿದನು. ಅತಿಯಾದ ಭಾರವನ್ನು ಹೊತ್ತು ಹೊತ್ತು ಬೆನ್ನಲ್ಲಿ ಹುಳಬಿದ್ದು, ಹುಣ್ಣಾಗಿ ಕತ್ತೆ ಸತ್ತಿತು. ಆಮೇಲೆ ಹೊಲಸನ್ನು ತಿನ್ನುವ ಹಂದಿಯಾಗಿ ಹುಟ್ಟಿ, ಸತ್ತು, ಮಗಧೆಯ ಚಂಪಾನಗರವೆಂಬ ನಗರದಲ್ಲಿ ಮಾದಿಗರ ಮನೆಯಲ್ಲಿ ಹೆಣ್ಣು ನಾಯಿಯಾಗಿ ಹುಟ್ಟಿತು. ವಾಯುಭೂತಿಯ ಜೀವ ಆ ಜನ್ಮದಲ್ಲಿ ಸತ್ತು ಆ ಮೇಲೆ ಮಾದಿಗರ ನಾಯಕನಾದ ನೀಳ ಅವನ ಹೆಂಡತಿಯ ಕೇಸಿ ಎಂಬುವರಿಗೆ ಮಗಳಾಗಿ ಹುಟ್ಟಿತು. ಆ ಹುಡುಗಿ ಕುರೂಪಿ, ದುರ್ವರ್ಣೆ, ದುರ್ಗಂಧೆ, ದುಸ್ವರೆ, ಹುಟ್ಟು ಕುರುಡಿ, ವ್ಯಾದಿಪೀಡಿತೆ. ಮಾದಿಗರ ಹುಡುಗಿಯನ್ನು ಕುರಿತಂತೆ ಇದು ಶಿವಕೋಟಾಚಾರ್ಯರ ವರ್ಣನೆ''[೧೩]. ಮಾದಿಗ ಡೊಂಬ ಸಮುದಾಯದ ಬಹಿಷ್ಕೃತರಾದವರು. ಈ ಕಾಲಮಾನದಲ್ಲಿನ ಸಾಮಾಜಿಕ ಸ್ಥಿತಿಯಲ್ಲಿ ಅಸಹ್ಯ, ಕೊಳಕು, ಕುರುಡತ್ವ ಇಂತಹವುಗಳನ್ನು ದಲಿತ ಸಮುದಾಯಗಳು ಹೊಂದಿದ್ದಕ್ಕೆ ಪುರಾವೆಯಾಗಿ ಕಂಡುಬರುತ್ತವೆ. ದಲಿತ ಜಾತಿಗಳು ಕೀಳು ಎಂಬುದಕ್ಕೆ ವಾಯುಭೂತಿ ಎತ್ತಿದ ಜನ್ಮ ಮತ್ತು ಅವುಗಳ ವಿವರಗಳಲ್ಲಿ ಕಾಣಸಿಗುತ್ತವೆ. ಶ್ರೇಷ್ಠ ಸುಕುಮಾರನಾಗಲು ಸಮಾಜದೊಳಗಿನ ಕನಿಷ್ಟ ಜಾತಿಯ ದೊಂಬರ ಕತ್ತೆ ಅದರಲ್ಲೂ ಹೆಣ್ಣು ಕತ್ತೆ, ಮಾದಿಗರ ಮಗಳು, ಅವಳ ವಿಕಾರತೆಯ ರೋಗಪೀಡಿತ ಮನುಷ್ಯ ಜೀವಿಗಳ ಅಂತರದಲ್ಲಿ ಕಂಡು ಬಂದಿದೆ. ಹತ್ತನೆಯ ಶತಮಾನದ ಕನ್ನಡ ಸಾಹಿತ್ಯದಲ್ಲಿ ಪ್ರಖರವಾಗಿ ಬೆಳಕಿಗೆ ಬಂದ ಜೈನಧರ್ಮ ಮತ್ತು ಸಾಹಿತ್ಯದಲ್ಲಿ ಅಸ್ಪೃಶ್ಯ ಅಸಹ್ಯ ಶ್ರೇಣಿಯ ಚಿತ್ರಣವು ಮೂಡಿ ಬಂದದ್ದು ಗೊತ್ತಾಗುತ್ತದೆ. ''ಜೈನಧರ್ಮ ವಾಯುಭೂತಿ ಪಾಪ ಕೃತ್ಯವೆಸೆಗಿದುದರಿಂದ ಹೊಲೆ ಮಾದಿಗರ ಮನೆಯಲ್ಲಿ ಹುಟ್ಟಿದನೆಂಬುದರ ಅರ್ಥ ಬೇರೇನೂ ಆಗಿರದೆ ಹೊಲೆ ಮಾದಿಗರೆಂದರೆ ಕೀಳೆಂಬುದು ಒಂದೆಡೆಗಾದರೆ, ಇನ್ನೊಂದು ಕಡೆ ಜೈನಧರ್ಮದಲ್ಲಿನ ಹೊಲೆಮಾದಿಗರೂ ವೈಧಿಕ ಧರ್ಮದಲ್ಲಿನ ಹೊಲೆ ಮಾದಿಗರಿಗೂ ವೈಧಿಕ ಧರ್ಮದಲ್ಲಿನ 'ಪಾಪ ಯೋನಿಜ'ರಿಗೂ ಪರಿಕಲ್ಪನಾತ್ಮಕವಾಗಿ ಯಾವುದೇ ವ್ಯತ್ಯಾಸವಿದ್ದಂತೆ ತೋರುವುದಿಲ್ಲ''[೧೪] ಅಂದಿನ ಸಾಮಾಜಿಕ ಸ್ಥಿತಿಯಲ್ಲಿನ ಧರ್ಮಗಳಲ್ಲಿನ ಸಮಾಜದಲ್ಲೂ ತಾರತಮ್ಯ ಬದುಕು ಇತ್ತು ಎಂದು ಜಾತಿ ಮತ್ತು ಅದರ ಶ್ರೇಣಿವ್ಯವಸ್ಥೆಯನ್ನು 'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ'ದಲ್ಲಿ ಮ.ನ.ಜವರಯ್ಯನವರು ಸ್ಪಷ್ಟ ವಿವರಣೆ ನೀಡಿದ್ದಾರೆ.

'ಪಂಪ'ನು ಜಾತಿ, ಸಮುದಾಯಗಳನ್ನು ತನ್ನ ಕಾವ್ಯಗಳಲ್ಲಿ ಬಳಸಿಕೊಂಡಿಲ್ಲ. ಈತ ಮೂಲತಃ ಬ್ರಾಹ್ಮಣ ಜಾತಿಯಿಂದ ಜೈನ ಧರ್ಮಕ್ಕೆ ಮತಾಂತರ ಹೊಂದಿದವನು. ಈತನು ಬ್ರಾಹ್ಮಣ ಜಾತಿಯನ್ನು ಉತ್ತಮ ಜಾತಿ ಎಂದು ಹೇಳಿದ್ದಾನೆ ಅಷ್ಟೆ. ಅಂದರೆ ಇತರೆ ಜಾತಿಗಳನ್ನು ಅಲ್ಲೆಗಳೆದಿದ್ದಕ್ಕೆ ಆಧಾರಗಳು ಇಲ್ಲ. ಈತ ಮನುಷ್ಯರೆಲ್ಲರೂ ಸಮಾನರು ಎಂಬ ಧೋರಣೆಯನ್ನು ಹೊಂದಿದವನು. ಆದರಿಂದ 'ಮನುಷ್ಯಜಾತಿ ತಾನೊಂದೆವಲಂ' ಎಂಬ ಕಾವ್ಯದ ಸಾಲುಗಳು ಇಂದಿಗೂ ಪ್ರಸ್ತುತವಾಗುತ್ತದೆ. ಹತ್ತನೆಯ ಶತಮಾನದಲ್ಲಿನ ಮನುಷ್ಯರು ಒಂದು ಎಂಬ ಕಲ್ಪನೆಯು ಸಮಕಾಲೀನ ಸಂದರ್ಭಕ್ಕೆ ಮತ್ತು ಇಂದಿನ ದಲಿತ - ಬಂಡಾಯ ಧೋರಣೆಗೆ ಹತ್ತಿರವಾಗುತ್ತದೆ.

ನಯಸೇನನ 'ಧರ್ಮಾಮೃತ'ದ 'ನಿರ್ವಿಚಿಕಿತ್ಸೆಯ ಕಥೆ' ಒಂದು ಭಾಗದಲ್ಲಿ ಹೊಲೆಯ ಎಂಬುದರ ಪ್ರಸ್ತಾಪವು ಕಂಡು ಬರುತ್ತದೆ. ''ಪುತ್ತಂ ಮಾಡುವ ಒರಲೆಯಂತೆ ಪಾಪಮಂ ನೆರಪುವುದು, ಖಿರ್ಚಿನಂತೆ ಪೂರ್ವದರುಂ ಕಿಡಿಸುವುದು,

ಪಂದೆಯಂತೆ ಪೆರಗುವುದು, ಬಡತನದಂತೆ ಬಗೆದುದನೀಯದ, ಪುಣ್ಣಿನಂತೆ ನೋವಂ ಮಾಳ್ಪುದು ಗ್ರಹದಂತೆ ಪಾಡೆಯಂ ಮಾಳ್ಪುದು, ಬಸಿರಕುತ್ತದಂತೆ ನೆಮೆಯಿಸುವುದು, ಪಂದಿಯಂರೊಪ್ಪಂಗೊಳ್ಪದು, ಕೃಷ್ಣ ಪಕ್ಷದಂತೆ ಶುಭಮ ಮೊಲ್ಲದು ....... ಪೊಲಗೇರಿಯಂತೆ ಮೂಳೆಮಯವಾಗಿಪ್ಪುದು... ಪೊಲೆಯನಂತೆ ವರ್ಣಕ್ಕೆ ಸಲ್ಲದು''[೧೫]. ಜೈನಧರ್ಮದ ನೀತಿಬೋಧನೆಗಳು ಇಲ್ಲಿ ಕಂಡುಬರುತ್ತವೆ. ಇದನ್ನು ಮನಜ ಅವರು ಹೀಗೆ ವಿವರಿಸಿದ್ದಾರೆ: ''ಇಲ್ಲಿ ಸೋತು ಶರಣಾದ ವಾಸುದೇವನಿಗೆ ಪ್ರಭಾವತೀದೇವಿ ಜೈನಧರ್ಮದ ನೀತಿ ನಿಬಂಧನೆಗಳನ್ನು ತತ್ವ ವಿಚಾರಗಳನ್ನು ಹೇಳುತ್ತಿದ್ದಾಳೆ ಎಂಬ ಒಂದೇ ಮಾತಿನಲ್ಲಿ ಈ ಪದ್ಯದ ಅರ್ಥವನ್ನು ಸಧ್ಯದ ನಮ್ಮ ಉದ್ದೇಶಕ್ಕೆ ತಕ್ಕಂತೆ ಹೇಳಿ ಮುಗಿಸಬಹುದು. ಹಾಗಾಗಿ ಇಲ್ಲಿ ಗಮನಿಸಬೇಕಾದ ಮಹತ್ವದ ಸಂಗತಿ ಎಂದರೆ ಹೊಲೆತನ ಅಥವಾ ಅಸ್ಪೃಶ್ಯತೆಯನ್ನು ಎರಡು ರೀತಿಯಲ್ಲಿ ಇಲ್ಲಿ ವ್ಯಕ್ತಪಡಿಸಲಾಗಿದೆ''[೧೬]. ಹೊಲೆಯರು ವರ್ಣ ವ್ಯವಸ್ಥೆಯೊಂದಿಗೆ ಸೇರದೆ ಹೊರಗಿನವರು ಆಗಿದ್ದಾರೆ. ಇಲ್ಲಿ ಹೊಲೆಯರು ಯಾವ ವರ್ಣಕ್ಕೂ ಸಲ್ಲದವರು. ಅವರು ವರ್ಣ ವ್ಯವಸ್ಥೆಯವರಿಗಿಂತ ಭಿನ್ನವಾಗಿದ್ದು ಅಸಹ್ಯ ಕೆಲಸಗಳಿಗೆ ತೊಡಗಿಕೊಂಡಿದ್ದು ಪ್ರಾಣಿ ಹಿಂಸೆಯನ್ನು ಮಾಡುತ್ತಾ, ಮಾಂಸಾಹಾರಿಗಳಾಗಿ ಬದುಕನ್ನು ಅನುಭವಿಸುತ್ತಾ ಬಂದವರು. ಅಹಿಂಸೆಯ ತತ್ವವಾದ ಜೈನಧರ್ಮಕ್ಕೆ ವಿರುದ್ಧವಾಗಿ ಬದುಕನ್ನು ನಡೆಸಿಕೊಂಡು ಬಂದವರು ಹೊಲೆಯರು ಎಂಬುದು ಇಲ್ಲಿ ಕಂಡುಬರುತ್ತದೆ. ಅಂದರೆ ಇವರು ಧರ್ಮವಿರೋಧಿಗಳು ಎಂದಲ್ಲ ಅದಕ್ಕೆ ಕಾರಣ ಅಂದಿನ ಸಮಾಜವೂ ಹೌದು. ಅದರ ಚರ್ಚೆಯು ಬೇರೆಯ ಸ್ವರೂಪವನ್ನು ಹೊಂದಿರುವಂತಹದ್ದು.

ಬ್ರಹ್ಮಶಿವ ತನ್ನ ಕೃತಿ 'ಸಮಯ ಪರೀಕ್ಷೆ'ಯಲ್ಲಿ ಅಸ್ಪೃಶ್ಯರ ಬಗ್ಗೆ, ಹೊಲೆಯವ, ಹೊಲಗೇರಿ, ಶ್ವಪಚ, ಅಂತ್ಯಜ ಎಂಬುದನ್ನು ಹಲವು ಕಡೆಗಳಲ್ಲಿ ಬಳಸಿರುವುದು ಕಂಡು ಬರುತ್ತದೆ. ಒಂದನೇ ನಾಗವರ್ಮನು 'ಕರ್ನಾಟಕ ಕಾದಂಬರಿ'ಯಲ್ಲಿ ಚಂಡಾಳ ಕನ್ಯೆಯ ನಾಮ ವಿಶೇಷಣವನ್ನು ಹತ್ತಾರುಬಾರಿ ಬಳಸಿದ್ದಾನೆ. ರಾಘುವಾಕನ 'ಹರಿಶ್ಚಂದ್ರ ಕಾವ್ಯ'ದಲ್ಲಿ ಹೊಲತಿಯರ ಪ್ರಸ್ತಾಪವು ಬರುತ್ತದೆ. ಮುತ್ತಿನ ಸತ್ತಿಗೆಯನ್ನು ಹೊಲತಿಯರು ಹರಿಶ್ಚಂದ್ರನಿಗೆ ಕೇಳಿದಾಗ ಹೊಲತಿಯರ ಜಾತಿ ಪ್ರಸ್ತಾಪ, ರಾಜಮನೆತನದ ಶ್ರೇಷ್ಠತೆಯ ಪ್ರಸ್ತಾಪ ಕಂಡುಬರುತ್ತದೆ. ಮಾದಾರ ಚನ್ನಯ್ಯನು ದಲಿತ ಬಂಡಾಯದ ಮೊದಲ ಲೇಖಕರೆಂದು ಗುರ್ತಿಸಬಹುದು. ಅಲ್ಲದೆಯೂ ದಲಿತ ವಚನಕಾರರಲ್ಲಿ ಮೊಟ್ಟ ಮೊದಲ ವಚನಕಾರ ಆಗಿದ್ದಾನೆ. ಈತನು ತನ್ನ ವಚನಗಳಲ್ಲಿ ತನ್ನ ಹಿಂದಿನ ಮತ್ತು ಸಮಕಾಲೀನ ಕಟುವಾಸ್ತವವನ್ನು ಪ್ರಶ್ನಿಸಿದ್ದಾನೆ. ವಚನ ಸಾಹಿತ್ಯದಲ್ಲಿನ ವಚನಕಾರರು ಬಹುತೇಕ ಕೆಳವರ್ಗದವರ ಸಾಮಾಜಿಕ ಬದುಕನ್ನು ಕುರಿತಂತೆ ರಚಿಸಿದ್ದಾರೆ. ಬಸವಣ್ಣನು ವೈದ್ದಿಕರ ಪರಂಪರೆಯಿಂದ ಕಳಚಿ ಬಂದು ಶಿವದಾರವನ್ನು ಧರಿಸಿದವನು; ಅಂತೆಯೇ ತನ್ನ ಪರಂಪರೆಯ ಮಿತಿಯನ್ನು ಗುರ್ತಿಸುವಲ್ಲಿ ಸಾಮಾಜಿಕ ಕಳಕಳಿಯನ್ನು ಹೊಂದಿದವನಾಗಿದ್ದನು. ವಚನಕಾರರಲ್ಲಿ ಸಾಹಿತ್ಯದಲ್ಲಿ ಕೆಲವರು ಕೆಳವರ್ಗದವರು ಸೇರಿಕೊಂಡಿದ್ದಾರೆ. ಅವರು ತಮ್ಮ ವಚನಗಳ ರಚನೆಯಲ್ಲಿ ಸಾಮಾಜಿಕ ಕಳಕಳಿಯ ಸತ್ವವನ್ನು ತುಂಬಿ ತಂದರು. ಮಡಿವಾಳ ಮಾಚಯ್ಯ, ಡೋಹರ ಕಕ್ಕಯ್ಯ, ಹೊಲೆಯರ ಹೊನ್ನಯ್ಯ. ಮಾದಾರ ಚನ್ನಯ್ಯ, ಅಂಬಿಗರ ಚೌಡಯ್ಯ ಮುಂತಾದವರು ವಚನ ಸಾಹಿತ್ಯದಲ್ಲಿ ಕಂಡುಬಂದರು.

ದಾಸ ಸಾಹಿತ್ಯದಲ್ಲಿ ಕನಕದಾಸರ ಬಂಡಾಯ ತತ್ವವು ಅವರ ಕೀರ್ತನೆಗಳಲ್ಲಿ ಕಂಡು ಬಂದಿದೆ. ಅವರು ಕುರುಬ ಕುಲದಲ್ಲಿ ಹುಟ್ಟಿ ಬೆಳೆದು ದಂಡನಾಯಕರಾದನೆಂದೂ ನಂತರದಲ್ಲಿ ಭಕ್ತರಾದರೆಂದು ಕಂಡು ಬರುತ್ತದೆ. ಇವರ ಕೀರ್ತನೆಗಳಲ್ಲಿ ಸಮಾಜದಲ್ಲಿ ಕಂಡುಬಂದ ಜಾತಿ, ಕುಲಧರ್ಮಗಳ ನಡುವೆ ಇರುವ ತಾರತಮ್ಯದ ಬಗ್ಗೆ ಬಂಡಾಯದ ದೋರಣೆಯನ್ನು ಕಾಣುತ್ತೇವೆ.

ಕುಲಕುಲವೆಂದು ಹೊಡೆದಾಡದಿರಿ ನಿಮ್ಮ
ಕುಲದ ನೆಲೆಯನೇನಾದರೂ ಬಲ್ಲಿರಾ?
ಹುಟ್ಟದ ಯೋನಿಗಳಿಲ್ಲ ಮೆಟ್ಟದ ಭೂಮಿಗಳಿಲ್ಲ
..................................
ಜಲವೆ ಸಕಲ ಕುಲಕೆ ತಾಯಲ್ಲವೆ?
ಜಲಜ ಕುಲವೇನೇನಾದರೂ ಬಲ್ಲಿರಾ?

ಕನಕದಾಸರ ವೈಚಾರಿಕತೆಯು ಅವರ ಈ ಕೀರ್ತನೆಯಲ್ಲಿದೆ. ಕನಕದಾಸರು ಎತ್ತಿರುವ ಪ್ರಶ್ನೆ ಮೇಲು ಕೀಳು ಜಾತಿಗಳಲ್ಲಿನ ಬದುಕನ್ನು, ಅದರ ತಾರತಮ್ಯವನ್ನು. ಇವರು ಮನುಷ್ಯನ ಹುಟ್ಟಿಗೆ ಸಂಬಂಧಿಸಿದ್ದು ಒಂದೆ ಎಂದಿದ್ದಾರೆ. ಆನಂತರದಲ್ಲಿ ಮನುಷ್ಯನು ಜಾತಿ, ಕುಲ ಧರ್ಮವನ್ನು ಕಟ್ಟಿಕೊಂಡಿರುವನು ಎಂಬುದು ಕನಕದಾಸರ ಕೀರ್ತನೆಯಲ್ಲಿ ಮುಖ್ಯವಾಗಿ ಕಂಡುಬಂದಿದೆ. ಇದನ್ನು ಈ ಹೊತ್ತಿನ ಬಂಡಾಯ-ದಲಿತ ಕಾಲದವರೆಗೂ ವಿಸ್ತರಿಸಬಹುದು.

ಆಧುನಿಕ ಕನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಕಥಾ ಸಾಹಿತ್ಯದಲ್ಲಿ ದಲಿತ ಚಿತ್ರಣಗಳು ಕಾಣಸಿಗುತ್ತವೆ. ಅವುಗಳಲ್ಲಿ ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು', ಶಿವರಾಮ ಕಾರಂತರ 'ಚೋಮನದುಡಿ', ಗೊರೂರು ರಾಮಸ್ವಾಮಿ ಅಯ್ಯಂಗಾರರ 'ಹೇಮಾವತಿ', ಬೈರಪ್ಪನವರ 'ದಾಟು', ಯು.ಆರ್.ಅನಂತಮೂರ್ತಿಯವರ 'ಭಾರತೀಪುರ', ಚದುರಂಗರ 'ವೈಶಾಖ' ಮುಂತಾದ ಕಾದಂಬರಿಗಳು ಕಾಣಸಿಗುತ್ತವೆ. ಅಲ್ಲದೆ ಬೆಸಗರಹಳ್ಳಿ ರಾಮಣ್ಣ, ಬರಗೂರು ರಾಮಚಂದ್ರಪ್ಪ, ಕಾಳೇಗೌಡ ನಾಗವಾರ, ಕುಂ.ವೀರಭದ್ರಪ್ಪ, ಅಮರೇಶ ನುಗುಡೋಣಿ ಮುಂತಾದ ಬಂಡಾಯ ಸಾಹಿತಿಗಳು ತಮ್ಮ ಕಥೆ ಕಾದಂಬರಿಗಳ ಮೂಲಕ ದಲಿತ ಚಿತ್ರಣವನ್ನು ತಂದರು. ಇವರ ಸಾಹಿತ್ಯ ಪ್ರಕಾರಗಳಲ್ಲಿ ದಲಿತ ಚಿತ್ರಣಗಳು ಅಲ್ಲಲ್ಲಿ ಒಂದು ಅಂಶವಾಗಿ ಕಂಡುಬಂದವು. ಕೆಲವು ಲೇಖಕರು ದಲಿತ ಬದುಕನ್ನು ಸಮರ್ಥವಾಗಿಯೇ ಮುಖ್ಯ ಪಾತ್ರವಾಗಿ, ವಸ್ತುವಾಗಿ ತಂದದ್ದು ಕಂಡುಬಂದಿದೆ. ಈ ಶತಮಾನದ ೭೦ರ ದಶಕದ ನಂತರದಲ್ಲಿ ದಲಿತ ಬರಹಗಾರರಲ್ಲಿ ದಲಿತ ಚಿತ್ರಣಗಳು ಮೂಡಿಬಂದವು. ಅವುಗಳೇ ತಮ್ಮ ಕಥೆ-ಕಾದಂಬರಿ ಕಾವ್ಯಗಳ ಮುಖ್ಯ ವಸ್ತುಗಳಾದವು. ಈ ಲೇಖಕರಲ್ಲಿ ದೇವನೂರು ಮಹಾದೇವ, ಸಿದ್ದಲಿಂಗಯ್ಯ, ಮ.ನ.ಜವರಯ್ಯ, ಅರವಿಂದ ಮಾಲಗತ್ತಿ, ಎಲ್.ಹನುಮಂತಯ್ಯ, ಕೆ.ಬಿ.ಸಿದ್ದಯ್ಯ, ಮೊಗಳ್ಳಿ ಗಣೇಶ, ಸೋಮಣ್ಣ ಹೊಂಗಳ್ಳಿ, ಕುಕ್ಕರಳ್ಳಿ ಬಸವರಾಜ ಮುಂತಾದವರು. ಇವರು ದಲಿತ ಬದುಕನ್ನು ತಮ್ಮ ಸಾಹಿತ್ಯದ ಮೂಲಕ ಕಟ್ಟುವಲ್ಲಿ ಪ್ರಮುಖರಾದವರು.

ಶಿವರಾಮ ಕಾರಂತರ 'ಚೋಮನದುಡಿ' ಕಾದಂಬರಿ ದಲಿತ ಸಂವೇದನೆಯನ್ನು ಒಳಗೊಂಡಿದೆ. ಚೋಮನದುಡಿಯಲ್ಲಿ ಕಂಡುಬರುವ ಮುಖ್ಯವಾದ ಪಾತ್ರಗಳು ಚೋಮ, ಮುದುಕಿ, ಅವನ ಮಕ್ಕಳು. 'ಚೋಮನ ದುಡಿ'ಯಲ್ಲಿ ಮುದುಕಿಯ ಧರ್ಮಗೊಡ್ಡು, ತಾಯಿಲ್ಲದ ಚೋಮನ ಮಕ್ಕಳು ಕಾಣಸಿಗುತ್ತಾರೆ. ಇವರು ಯೌವನಸ್ಥರಾಗಿ ದುಡಿಯುವ ಸಾಮರ್ಥ್ಯ ಪಡೆದರೂ ದುಡಿಮೆಗೆ ಮಾರ್ಗವಿಲ್ಲದಂತಾಗಿ ದರಿದ್ರವು ಅವರನ್ನು ಬಿಡದಂತೆ ಕಾಡುತ್ತದೆ. ಚೋಮನ ಮಕ್ಕಳಲ್ಲಿನ ಆಂತರಿಕ ಸಂಘರ್ಷ ಮತ್ತು ಕ್ರೈಸ್ತಧರ್ಮದ ಆಕರ್ಷಣೆಯು ಇಲ್ಲಿ ಕಂಡುಬರುವ ಅಂಶಗಳು. ಚೋಮನ ಮಗಳ ಶೀಲಹರಣ ಮತ್ತು ಮಗನ ಮರಣವು ಚೋಮನಿಗೆ ಯಾತನೆಯನ್ನು ಉಂಟುಮಾಡುತ್ತದೆ. ಅದಕ್ಕೆ ಪರಿಹಾರದಂತೆ ತನ್ನ 'ದುಡಿ'ಯನ್ನು ಬಾರಿಸುತ್ತಾ ಕಾಲ ಹಾಕುತ್ತಾನೆ. ಇಲ್ಲಿ ಭೂಮಿಗೆ ಸಂಬಂಧಪಟ್ಟಂತೆ ವಿಷಯವೂ ಕಂಡುಬರುತ್ತದೆ.

ಕಾದಂಬರಿಯುದ್ದಕ್ಕೂ ಚೋಮನಿಗೆ ಭೂಮಿ ದೊರೆಯುವುದಿಲ್ಲ. ಅದಕ್ಕೆ ಕಾರಣವಾದ ಊಳಿಗಮಾನ್ಯ ವ್ಯವಸ್ಥೆಯ ಪ್ರತಿನಿಧಿ ಸಂಕಪ್ಪಯ್ಯನ ದ್ವಂದ್ವವು ಚೋಮನಿಗೆ ಭೂಮಿಯನ್ನು ಕೊಡದಂತೆ ಇರಿಸುತ್ತದೆ. ಇಲ್ಲಿ ಸಂಕಪ್ಪಯ್ಯನ ಮನೆಯಲ್ಲಿರುವ ಮುದುಕಿಯು ಭೂಮಿಯನ್ನು ಚೋಮನಿಗೆ ಕೊಡದಂತೆ ತಡೆಯನ್ನು ಹಾಕುತ್ತಿರುತ್ತಾಳೆ. ದಲಿತರ ಸಮಸ್ಯೆಯನ್ನು ಎತ್ತಿಕೊಂಡು ಕಾರಂತರು 'ಚೋಮನ ದುಡಿ' ಕಾದಂಬರಿಯಲ್ಲಿ ದಲಿತ ಬದುಕಿನಲ್ಲಿ ಕಂಡುಬರುವ ಸೂಕ್ಷ್ಮಗ್ರಹಿಕೆಯನ್ನು ನೀಡಿದ್ದಾರೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಕುವೆಂಪುರವರು ದಲಿತ ಪಾತ್ರಗಳ ಮೂಲಕ ದಲಿತರ ಬದುಕಿನ ಚಿತ್ರಣವನ್ನು ಕೊಟ್ಟಿದ್ದಾರೆ. ಅವುಗಳು ಹೊಲೆಯರ ಗುತ್ತಿ ಹಾಗೂ ತಿಮ್ಮಿಯ ಪಾತ್ರಗಳಲ್ಲಿ ಕಂಡುಬಂದಿವೆ. ಜಮೀನ್ದಾರಿ ವ್ಯವಸ್ಥೆಯಲ್ಲಿ ಸಿಕ್ಕಿಬಿದ್ದಿರುವ ತಿಮ್ಮಿಗುತ್ತಿಯರ ಪಾತ್ರಗಳು, ಅವುಗಳ ಬದುಕು ಕಾದಂಬರಿಯಲ್ಲಿ ಕಂಡುಬರುತ್ತವೆ.

ಗೊರೂರರ 'ಹೇಮಾವತಿ' ಕಾದಂಬರಿಯು ಅಂತರಜಾತಿಯ ಮದುವೆಯಂತಹ ಸಾಮಾಜಿಕ ಸಂಘರ್ಷದ ವಸ್ತುವನ್ನು ಇಟ್ಟುಕೊಂಡು ಕಾದಂಬರಿಯನ್ನು ಹೆಣೆದಿದ್ದಾರೆ. ''ಈ ಕಾದಂಬರಿಯಲ್ಲಿ ಅಂತರಜಾತೀಯ ಘರ್ಷಣೆಗಿಂತಲೂ ಮುಖ್ಯವಾಗಿ ಒಂದೇ ಜಾತಿಯಲ್ಲಿನ ಆಂತರಿಕ ಘರ್ಷಣೆಯೇ ಅತ್ಯಂತ ಮುಖ್ಯವಾದುದು ಎಂದೆನಿಸುತ್ತದೆ. ಇಲ್ಲಿ ಬ್ರಾಹ್ಮಣರಲ್ಲಿನ ಮಾಧ್ವರು ಮತ್ತು ಅಯ್ಯಂಗಾರರು ಈ ಎರಡು ಉಪಜಾತಿಗಳ ನಡುವೆ ನಡೆಯುತ್ತದೆ ಅಥವಾ ಶ್ರೀನಿವಾಸ ಪೆರುಮಾಳ ಮಗಳು ಹೇಮಾವತಿ ಸುಂದರನನ್ನು ಮದುವೆಯಾದಂದಿನಿಂದ ಹಿಡಿದು ಅವನು ದಂಡಿನ ಹುಡುಗಿಯ ಸಹವಾಸ ಮಾಡುವವರೆಗಿನ ಕಾದಂಬರಿಯ ಕ್ರಿಯಾ ಸರಣಿಯ ಕೇಂದ್ರ ಪಾತ್ರವೇ ಹೇಮಾವತಿಯಾಗಿದ್ದು, ಅವಳ ಬದುಕಿನ ಘರ್ಷಣೆಯೇ ಕಾದಂಬರಿಯ ಕೇಂದ್ರ ಪ್ರಜ್ಞೆಯೂ ಆಗಿದೆ''[೧೮]. ಕಾದಂಬರಿಯಲ್ಲಿ ಮುಖ್ಯವಾಗಿ ಕಾಣುವುದು ಶ್ರೀನಿವಾಸ ಪೆರುಮಾಳರು, ಗಾನ ಶಾರದೆ ಅಥವಾ ಅಸ್ಪೃಶ್ಯ ಚೆನ್ನಿಯ ಅಪ್ಪ ಕಾಳನ ಬಗ್ಗೆ ಇರುವ ಸಹಾನುಭೂತಿ. ಲೇಖಕರು ಸುಧಾರಣಾವಾದಿಯಂತೆ ಶ್ರೀನಿವಾಸ ಪೆರುಮಾಳರನ್ನು ಚಿತ್ರಿಸಿದ್ದಾರೆ. ಇಲ್ಲಿ ಸಾಮಾಜಿಕ ಶ್ರೇಣೀಕರಣದಲ್ಲಿ ಕಂಡುಬರುವ ಸಂಘರ್ಷಣದ ಸ್ವಾಭಾವಿಕತೆಯಾದರೂ ಅದೊಂದು ಬದಲಾವಣೆಯೇ ಹೊರತು, ಮೂಲಭೂತವಾದದ ಸುಧಾರಣೆಯಲ್ಲ. 'ಹೇಮಾವತಿ' ಕಾದಂಬರಿಯಲ್ಲಿ ದಲಿತ ಚಿತ್ರಣವು ಸಾಮಾಜಿಕ ಶ್ರೇಣೀಕರಣದಲ್ಲಿ ಹಲವು ಭಿನ್ನ ಅಂಶಗಳಾಗಿ ಕಂಡುಬರುತ್ತವೆ.

ಪ್ರಗತಿಶೀಲ ಸಾಹಿತ್ಯದಲ್ಲಿ ಅನ್ಯಾಯಕ್ಕೆ ಒಳಗಾದ ಜನ ಸಮುದಾಯಗಳ ಚಿತ್ರಣಗಳು ಕಂಡುಬಂದವು. ಈ ಸಾಹಿತ್ಯದಲ್ಲಿ ಸ್ವಾತಂತ್ರ್ಯ ನಂತರದ, ನಾಡಿನ ಸಾಮಾಜಿಕ ದೌರ್ಬಲ್ಯಗಳು ಕಂಡುಬಂದವು. ಲೇಖಕರು ಇಲ್ಲಿ ಸಮಾಜದ ಕೆಡುಕುಗಳನ್ನು ಬಯಲುಗೊಳಿಸಿದರು. ಇವು ಕಾದಂಬರಿಯ ಪ್ರಕಾರದಲ್ಲಿನ ವಸ್ತುಗಳಾದವು. ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು ಈ ವಸ್ತುಗಳನ್ನು ಒಳಗೊಂಡವು. 'ನೀನನ್ನ ಮುಟ್ಟ ಬೇಡ', 'ಮಾಡಿಮಡಿದವರು' ಮುಂತಾದ ಕಾದಂಬರಿಗಳು ವಾಸ್ತವ ಬದುಕಿನಲ್ಲಿನ ಜನಪರ ಮೌಲ್ಯಗಳನ್ನು ಎತ್ತಿಹಿಡಿದವು.

ಎಸ್.ಎಲ್.ಬೈರಪ್ಪನವರ 'ದಾಟು' ಕಾದಂಬರಿಯ ಬಹುತೇಕ ಪಾತ್ರಗಳು ಭಿನ್ನ ಸ್ವರೂಪವನ್ನು ಹೊಂದಿರುವಂತವು. ಇಲ್ಲಿ ತಲೆಮಾರಿನ ಭಿನ್ನತೆಯು ಕಂಡುಬರುತ್ತದೆ. ವೆಂಕಟರಮಣಯ್ಯ, ಬೆಟ್ಟಯ್ಯ, ಮೇಲಗಿರಿಗೌಡ, ರಂಗಮ್ಮ ಮಾತಂಗಿ

ಮುಂತಾದವರು ಹಿರಿಯ ತಲೆಮಾರಿನವರಾದರೆ ಸತ್ಯಭಾಮ, ಶ್ರೀನಿವಾಸ, ಮೋಹನದಾಸ, ಮೀರಾ, ಹೊನ್ನೇಶ ಕಿರಿಯ ತಲೆಮಾರಿನವರು. ಇಲ್ಲಿ ಹಿರಿಯ ತಲೆಮಾರಿನವರು ಸಂಪ್ರದಾಯವಾದಿಗಳಾಗಿ ಕಾಣಿಸುತ್ತಾರೆ. ಸತ್ಯಭಾಮ, ಮೋಹನದಾಸ, ಮೀರಾ, ಹೊನ್ನೇಶ, ಶ್ರೀನಿವಾಸ ಇವರು ಮೂಲಭೂತವಾದಿತನವನ್ನು ವಿರೋಧಿಸುತ್ತಾ ಸಾಂಪ್ರದಾಯಿಕತೆಯನ್ನು ಒಪ್ಪಿಕೊಂಡವರು. ಮೋಹನ ದಾಸ ಬೆಟ್ಟಯ್ಯನ ಮಗ ದಲಿತ ಹುಡುಗ ಸಮಾಜದ ಶ್ರೇಣೀಕೃತ ವ್ಯವಸ್ಥೆಯ ಬಗ್ಗೆ ಅಸಮಾಧಾನವನ್ನು ಹೊಂದಿದಂತವನು. ಇವನು ವ್ಯವಸ್ಥೆಯ ವಿರುದ್ಧ ಪ್ರತಿಭಟನೆಯ ದನಿಯನ್ನು ಎತ್ತಿದವನು ಆಗಿದ್ದಾನೆ. ಮೀರಾಳನ್ನು ಮೇಲುಜಾತಿಯ ಶ್ರೀನಿವಾಸ ಪ್ರೀತಿಯ ಆಟವಾಡಿ ಮೋಸಗೊಳಿಸುವುದು ಅವಳು ಕೆರೆಗೆ ಹಾರಿ ಪ್ರಾಣ ಕಳೆದುಕೊಳ್ಳುವುದು, ಯುವಕ ಮೋಹನದಾಸನು ಪ್ರವಾಹದಲ್ಲಿ ಸಿಕ್ಕಿ ಕೊಚ್ಚಿಹೋಗುವುದು ಹೀಗೆ ದಲಿತರ ಬದುಕಿನ ವಾಸ್ತವವನ್ನು ಹಿಡಿದಿಟ್ಟಿದ್ದಾರೆ. ಅವುಗಳ ಸೋಲಿಗೆ ಮತ್ತು ಬ್ರಾಹ್ಮಣರ ಉಳಿವಿಗೆ ಲೇಖಕರು ಎಲ್ಲೊ ಒಂದು ಕಡೆ ಪಕ್ಷಪಾತ ಧೋರಣೆಯನ್ನು ಅನುಸರಿಸುವುದು ಕಂಡುಬರುತ್ತದೆ. ನಂತರದ ದಲಿತ - ಬಂಡಾಯ ಲೇಖಕರಂತೂ ದಲಿತರ ವಸ್ತುವನ್ನೇ ಮುಖ್ಯವಾಗಿ ಎತ್ತಿಕೊಂಡು ಸೃಜನಶೀಲ ಸಾಹಿತ್ಯವನ್ನು ಬರೆಯತೊಡಗಿದರು. ಅವುಗಳು ದಲಿತರ ಬದುಕಿನ ಹಲವು ಮಗ್ಗಲುಗಳನ್ನು ಪ್ರವೇಶಿಸಿದವು. ಇವು ಊಳಿಗಮಾನ್ಯ ವ್ಯವಸ್ಥೆಯ ಭೂಮಾಲಿಕರ, ಮತ್ತು ಆಳುವ ವರ್ಗಗಳ ವಿರುದ್ಧವಾಗಿ ಇದ್ದದ್ದು ಕಂಡುಬಂದವು. (ದಲಿತ ಸಾಹಿತ್ಯದ ಬಗ್ಗೆ ಅಧ್ಯಾಯ ೩ ರಲ್ಲಿ ಕೆಲವು ಮುಖ್ಯ ಅಂಶಗಳನ್ನು ಚರ್ಚಿಸಲಾಗುವುದು.)

## ದಲಿತ ಸಾಹಿತ್ಯದ ಹಿನ್ನೆಲೆ ಹುಟ್ಟು ಕಾರಣ ಮತ್ತು ಅದರ ಅನಿವಾರ್ಯತೆ

'ದಲಿತ ಸಾಹಿತ್ಯ'ದ ಹಿನ್ನೆಲೆಯನ್ನು ಕುರಿತು ಕೆಲವು ಆಂಶಿಕ ವಿವರಗಳನ್ನು ಇಲ್ಲಿ ಕೊಡಲಾಗುವುದು. ಈ ಹಿನ್ನೆಲೆಯನ್ನು ಅಧ್ಯಯನ ಮಾಡುವಾಗ ಎರಡು ರೀತಿಯ ತರ್ಕಗಳು ಉಂಟಾಗುತ್ತವೆ. ಅವುಗಳಲ್ಲಿ ಒಂದನೆಯದು 'ದಲಿತ' ಅನ್ನುವ ಪರಿಕಲ್ಪನೆಯನ್ನು ಇಟ್ಟುನೋಡುವುದು, ದಲಿತ ಬದುಕಿನ ಜೀವನಾನುಭವದ ಹಿನ್ನೆಲೆಯಿಂದ ನೋಡುವುದು. ಮತ್ತೊಂದು 'ದಲಿತ' ಅನ್ನುವ ಪರಿಕಲ್ಪನೆಯೇ ಇಲ್ಲದೆ; ಈ ಹೊತ್ತು ದಲಿತ ಸಮುದಾಯಗಳು ಬರೆದ ಸಾಹಿತ್ಯ ಮತ್ತು ಅದು ಕಟ್ಟಿಕೊಡುವ ಅನುಭವದ ತೀವ್ರತೆಯ ಹಿನ್ನೆಲೆಯವನ್ನು ನೋಡುವುದು. ಇವುಗಳೆರಡನ್ನು ಅಧ್ಯಯನ ಮಾಡಿದಾಗ ಆ ಎರಡೂ ರೀತಿಯ ಸಾಹಿತ್ಯದ ಸತ್ವವನ್ನು ಹುಡುಕಬಹುದು. ಅಂದರೆ ಇಲ್ಲಿ ದಲಿತ ಸಾಹಿತ್ಯ ಅನ್ನುವುದು ಪರಿಕಲ್ಪನೆಗೆ ಸಂಬಂಧಿಸಿದ್ದೋ ಅಥವಾ ಜೀವನಾನುಭವದ ಅಭಿವ್ಯಕ್ತಿಗೆ ಸಂಬಂಧಿಸಿದ್ದೋ ಎಂಬುದರ ಚರ್ಚೆಯು ದಲಿತ ಸಾಹಿತ್ಯದ ಹಿನ್ನೆಲೆಯನ್ನು ನೋಡುವಾಗ ಕಂಡುಬರುತ್ತದೆ.

ಈ ಶತಮಾನದ ಎಪ್ಪತ್ತರ ದಶಕದ ನಂತರದಲ್ಲಿ ದಲಿತ ಸಾಹಿತ್ಯವು ತನ್ನ ಲಕ್ಷಣವನ್ನು ಇಟ್ಟುಕೊಂಡು ತನ್ನದೇ ಆದ ಧ್ಯೇಯ ಉದ್ದೇಶಗಳನ್ನು ಸಾಹಿತ್ಯದಲ್ಲಿ ಸೇರಿಸಿಕೊಂಡಿತು. ಅನಂತರ ತನ್ನ ಸಾಹಿತ್ಯದ ರಚನೆಯಲ್ಲಿ ತಮ್ಮ ಸಮುದಾಯಗಳ ವಾಸ್ತವ ಬದುಕನ್ನು ಓದುಗರಿಗೆ ಹಿಡಿದಿಟ್ಟುಕೊಟ್ಟಿತು. ೧೯೭೪ರಲ್ಲಿ ಹಾವನೂರು ವರದಿಯನ್ನು ಅಂಬೇಡ್ಕರ್ ಜಯಂತಿಯನ್ನು ಜಾರಿಗೆ ತರಬೇಕೆಂದು ದಲಿತ ರಾಜಕೀಯ ನಾಯಕರ ಹೋರಾಟವು ನಡೆಯಿತು.

ಪ್ರಗತಿಪರ ಚಿಂತನೆಯ ಮನಸ್ಸುಗಳು ಮತ್ತು ಸಮಾನತೆಯ ಮನಸ್ಸುಗಳು ನೆಲೆಯೂರಿದ್ದ ಜಾತಿವ್ಯವಸ್ಥೆಯ ಸಮಾಜದಲ್ಲಿ ಎತ್ತುತ್ತಿದ್ದ ಪ್ರಶ್ನೆಗಳು ಪ್ರತಿಭಟನೆಯ ರೂಪವನ್ನು ತಾಳಿ ಅವು ಆಳುವ ವರ್ಗದವರಿಗೆ ವಿರೋಧಕ್ಕೆ

ಕಾರಣವಾಗಿದ್ದವು. ಯಜಮಾನಿಕೆಯ ಪ್ರತಿಕ್ರಿಯೆಗಳು, ಪ್ರಗತಿಪರ ಹೋರಾಟಗಾರರ ಚಿಂತನೆಯಲ್ಲಿ ವೈರುಧ್ಯವನ್ನು ಹೊಂದಿದ್ದವು. ಈ ಸಂದರ್ಭದಲ್ಲಿ ೧೯೭೩ರಲ್ಲಿ ಬಸವಲಿಂಗಪ್ಪನವರು ಮಲಹೊರುವ ಪದ್ಧತಿಯನ್ನು, ಅದರ ಬಗ್ಗೆ ಮೌಲಿಕವಾದ ಚರ್ಚೆಯನ್ನು ಆರಂಭಿಸಿದರು. ಸಮಾಜದ ಒಳಗೆಯೇ ಸೇರಿಕೊಂಡಿದ್ದ, ಸಮುದಾಯಗಳ ಹೀನವೃತ್ತಿ, ಮನುಷ್ಯ - ಮನುಷ್ಯರ ಮಲವನ್ನು ಹೊರುವ ಹೀನ ಕೃತ್ಯವು ಶೋಷಣೆಯ ಭಾಗ ಎಂದು ವೃತ್ತಿಯಲ್ಲಿ ತೊಡಗಿದವರ ಮತ್ತು ತೊಡಗಿದವರಿಗೆ ತಿಳಿಯಪಡಿಸಿದರು. ಶೋಷಣೆಯ ಭಾಗವಾಗಿ ನಡೆಸಿಕೊಂಡು ಬರುತ್ತಿರುವ ಸಮಾಜಕ್ಕೆ ಮತ್ತು ಸರ್ಕಾರಕ್ಕೆ ಅದರ ಚರ್ಚೆಯನ್ನು ನೀಡಿದರು. ೧೯೭೪ರಲ್ಲಿ ಬಸವಲಿಂಗಪ್ಪನವರು ದಲಿತರ ಬದುಕನ್ನು ಗಮನದಲ್ಲಿಟ್ಟುಕೊಂಡು ಕಣ್ಣಿಗೆ ತೆರೆದು ಕಾಣುವ, ಸಾಮಾನ್ಯ ಜನರಿಗೂ ತೆರೆದು ಕಾಣುವಂತೆ 'ದಲಿತರ' ಸಮಸ್ಯೆಯನ್ನು ಎತ್ತಿಕೊಂಡು ಕನ್ನಡ ಸಾಹಿತ್ಯದಲ್ಲಿ ಬೂಸಾ ಇದೆ ಎಂದು ಹೇಳಿದರು. ಇದು ಅವರಿಗೆ ವೈಯಕ್ತಿಕವಾಗಿ ತಮ್ಮ ಮಂತ್ರಿ ಪದವಿಯನ್ನು ಕಳೆದುಕೊಳ್ಳುವಲ್ಲಿ ಪ್ರಮುಖ ಪಾತ್ರವಾಯಿತು. ಇದರ ಪರಿಣಾಮ ದಲಿತ ಯುವಕರು ಪ್ರತಿಭಟನೆಯನ್ನು ಮಾಡಿದರು. ಹಾಗೆಯೇ ಈ ಪ್ರತಿಭಟನೆಕಾರರಿಗೆ ಪೋಲೀಸರ ಲಾಟಿ ಪ್ರವಾಹದಿಂದ ಒದೆಯನ್ನು ಕೊಟ್ಟು ಜೈಲು ಸೇರಿಸಿದರು. ಇದು ದಲಿತರಲ್ಲಿ ದಲಿತಚಿಂತಕರಲ್ಲಿ, ದಲಿತ ಪರಚಿಂತಕರಲ್ಲಿ ದಲಿತ ಪ್ರಜ್ಞೆ - ದಲಿತ ಜಾಗೃತಿಯನ್ನು ಮೂಡಿಸಿತು. ಬಸವಲಿಂಗಪ್ಪನವರ ರಾಜೀನಾಮೆ, ದಲಿತ ಯುವಕರು ಜೈಲು ಅನುಭವಿಸಿದ ಶಿಕ್ಷೆಯ ಹಿನ್ನೆಲೆಯಲ್ಲಿ ಇರುವ ವ್ಯವಸ್ಥೆಯನ್ನು ಉಳಿಸಿಕೊಂಡು ಬರಲು ಪ್ರಯತ್ನಿಸಿದ ಮೂಲಭೂತವಾದಿಗಳ ಬಿರುಸಾದ ಕೈವಾಡವಿತ್ತು. ಇದಕ್ಕೆ ಆಳುವ ವರ್ಗದ ಪ್ರತ್ಯೇಕವಾಗಿ ಮತ್ತು ಪರೋಕ್ಷವಾಗಿ ಕಾರಣವಾಗಿತ್ತು. ೧೯೭೫ರಲ್ಲಿ ದಲಿತ ಬರಹಗಾರರ ಯುವ ಸಂಘಟನೆ ಕರ್ನಾಟಕದಲ್ಲಿ ಕಾಣಿಸಿಕೊಂಡಿತು. ಇದು ಪ್ರಾರಂಭವಾದ ಒಂದು ವರ್ಷದಲ್ಲಿ ೧೯೭೬ರಲ್ಲಿ ಭದ್ರಾವತಿಯಲ್ಲಿ ಸಮ್ಮೇಳನವೊಂದನ್ನು ಮಾಡಿತು. "೧೯೭೯ರ ಮಾರ್ಚ್‌ನಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತಿನವರು ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಸಿದ್ಧತೆ ನಡೆಸಿದಾಗ ದಲಿತ ಬರಹಗಾರರು ಸಮ್ಮೇಳನದಲ್ಲಿ ದಲಿತ ಗೋಷ್ಠಿಯನ್ನಿಡಲು ಕೋರಿದರು. ಅದರ ಅಧ್ಯಕ್ಷರು ಈ ಬೇಡಿಕೆಯನ್ನು ತಿರಸ್ಕರಿಸಿದಾಗ ದಲಿತರು - ದಲಿತೇತರರು ಒಂದೆಡೆ ಸೇರಿ 'ಬಂಡಾಯ ವೇದಿಕೆ'ಯನ್ನು ರೂಪಿಸಿಕೊಂಡರು. ಬಂಡಾಯ ಸಂಘಟನೆಯು ಮೊದಲು ದಲಿತರದ್ದೇ ಮನೆಯಾಗಿತ್ತು. ಬರಬರುತ್ತಾ ದಲಿತೇತರರ ಹಿಡಿತವು ಹೆಚ್ಚಾದಾಗ ಭಿನ್ನಾಭಿಪ್ರಾಯಗಳು ಬಂದು ಮುಂದೆ ಅದು ದಲಿತ - ಬಂಡಾಯ ವೇದಿಕೆಯಾಯಿತು. ಸಾಹಿತ್ಯದಲ್ಲಿ ದಲಿತ ಬಂಡಾಯ ಅವಳಿ ಜವಳಿ ಪದಗಳಾಗಿಯೇ ಬಳಕೆಗೆ ಬಂದವು. ಕಾಲಾಂತರದಲ್ಲಿ ಕೆಲ ದಲಿತರು ಈ ವೇದಿಕೆಯಿಂದ ಹೊರಬಂದರು. 'ಬಂಡಾಯ ದಲಿತ ವೇದಿಕೆ' 'ದಲಿತರು ಬಂಡಾಯದ ಅಂಗ'ವೆಂದು ಎಡಪಂಥೀಯ ಬರಹಗಾರರು ವಾದಿಸತೊಡಗಿದರು. ಇನ್ನೂ ಕೆಲವರು ದಲಿತ-ಬಂಡಾಯ ಎಂದು ಬರೆಯುವ ಸಂಪ್ರದಾಯವನ್ನು ತಿರುಚಿ 'ಬಂಡಾಯ-ದಲಿತ'ವೆಂದು ಬರೆದರು. ದಲಿತರಿಲ್ಲದ ಬಂಡಾಯ ಬಡವಾಯಿತು. ದಲಿತರು ಮತ್ತೆ ಪ್ರತ್ಯೇಕವಾಗಿ ದಲಿತ ಸಮಾವೇಶಗಳನ್ನು, ವಿಚಾರ ಸಂಕಿರಣಗಳನ್ನು ಆರಂಭಿಸಿದರು. ೧೯೮೩ರಲ್ಲಿ ಈ ಪ್ರತ್ಯೇಕತೆಯನ್ನು ಗುರುತಿಸಿಕೊಳ್ಳಲು 'ದಲಿತ ಲೇಖಕರ ಕಲಾವಿದರ ಬಳಗ'ವನ್ನು ಆರಂಭಿಸಿದರು. ಇದರ ಸಂಚಾಲಕರು ಸಿದ್ದಲಿಂಗಯ್ಯ, ಇಂದೂಧರ ಹೊನ್ನಾಪುರ, ವಿ.ಮುನಿವೆಂಕಟಪ್ಪ, ಬೋಳ ಬಂಡೆಪ್ಪ, ಡಾ.ಬಿ.ಕೆ.ಕೃಷ್ಣಮೂರ್ತಿಯವರಿದ್ದರು"[೧೮]. ದಲಿತ ಸಾಹಿತ್ಯವು ದಲಿತ ಲೇಖಕರಿಂದ ಸಾಹಿತ್ಯ ಕೃಷಿಯ ಕೆಲಸವನ್ನು ಮಾಡಿಸಿತು. ಅದು ಓದುವ ವರ್ಗಕ್ಕೆ ತನ್ನ ಸಾಹಿತ್ಯದ ಚಿಂತನಾಕ್ರಮವನ್ನು ಹೇಳುವುದಾಗಿತ್ತು. ಅದು ಬೌದ್ಧಿಕ ವಲಯದಲ್ಲಿ ಚರ್ಚಿತವಾಯಿತು. ಇದರೊಂದಿಗೆ ದಲಿತೇತರ ಬಂಡಾಯ ಸಾಹಿತಿಗಳು ಸಮಾಜದ ಕ್ರೌರ್ಯವನ್ನು, ದಲಿತ ಬದುಕನ್ನು ಜನತೆಯಲ್ಲಿ ಬಿಂಬಿಸಲು ಪ್ರಯತ್ನಿಸಿದರು.

ದಲಿತೇತರೊಂದಿಗೆ ಇದ್ದ ದಲಿತ ಲೇಖಕರು, 'ದಲಿತ ಲೇಖಕರ ಕಲಾವಿದರ ಬಳಗ'ದ ಹಿನ್ನೆಲೆಯಲ್ಲಿ ತಮ್ಮ ಒತ್ತಾಸೆಗಳು ಇರುವುದು ಕಂಡುಬಂದವು. ಇಲ್ಲಿ ದಲಿತ ಸಾಹಿತಿಗಳು, ಲೇಖಕರು, ಕಲಾವಿದರು ಸೇರಿದಂತೆ ದಲಿತ ಸಮುದಾಯಗಳ ಚಿಂತನಾ ಕಾರ್ಯ ಜರುಗಿದವು. ಇಲ್ಲಿ ಅಕ್ಷರಜ್ಞಾನವನ್ನು ಹೊಂದಿದವರು ಕಟ್ಟಿದ ಸಾಹಿತ್ಯಿಕ ಸಂಘಟನೆಯಲ್ಲಿ ಕಲಾವಿದರೂ ಸೇರಿಕೊಂಡಿದ್ದರು. ಬಂಡಾಯ ಸಾಹಿತ್ಯದ ಒಳಗೆ ದಲಿತ ಸಾಹಿತ್ಯ ಇದೆ; ದಲಿತ ಸಾಹಿತ್ಯದ ಒಳಗೆ ಬಂಡಾಯ ಸಾಹಿತ್ಯವಿಲ್ಲ ಎಂಬುದು ದಲಿತೇತರ ಲೇಖಕರ ಒತ್ತು ಆಗಿತ್ತು. ಇದಕ್ಕೆ ದಲಿತ ಲೇಖಕರು ಒಪ್ಪಲಿಲ್ಲ. ಒಂದೆಡೆ ಪ್ರಥಮ ತಲೆಮಾರಿನ ದಲಿತರ ಅಕ್ಷರ ಜ್ಞಾನ; ಅದಕ್ಕೆ ಸ್ಫೂರ್ತಿಯಾದ ಅಂಬೇಡ್ಕರ್, ಮಾರ್ಕ್ಸ್, ಲೆನಿನ್, ಮಾವೋ ಮುಂತಾದವರ ಚಿಂತನೆಗಳು ತಮ್ಮಲ್ಲಿ, ತಮ್ಮ ಸಾಹಿತ್ಯದಲ್ಲಿ ಸ್ವಾಭಿಮಾನವನ್ನು ಮೂಡಿಸಿದವು. ೧೯೬೫ ರಿಂದೀಚೆಗೆ ಆಂಧ್ರಪ್ರದೇಶದಲ್ಲಿ ಬಹುವಾಗಿ ಬೆಳೆದು ಬಂದ ದಿಗಂಬರ ಕಾವ್ಯವು ಈ ಸಾಹಿತ್ಯದ ಹಿನ್ನೆಲೆಗೆ ಪ್ರೇರಣೆ ನೀಡಿದವು. ಹಾಗೆಯೇ ೧೯೬೦ರಿಂದೀಚೆಗೆ ಮಹಾರಾಷ್ಟ್ರದಲ್ಲಿ ಜನಪ್ರಿಯವಾದ ದಲಿತ ಸಾಹಿತ್ಯ ಚಳುವಳಿ ದಲಿತರ ಮೇಲೆ ಗಾಢವಾದ ಪ್ರಭಾವ ಬೀರಿತು. 'ದಲಿತ ಸಾಹಿತ್ಯ'ದ ಬಗ್ಗೆ ಬರೆಯುತ್ತಾ ಎಸ್.ಆರ್.ವಿಜಯ ಶಂಕರ ಅವರು ದಲಿತರ ಸ್ವಾಭಿಮಾನ ಮತ್ತು ಅವರ ಒರಟುತನವನ್ನು ಎತ್ತಿ ಅದಕ್ಕೆ ಒಂದು ತಾತ್ವಿಕ ರೂಪವನ್ನು ಕೊಡಲು ಪ್ರಯತ್ನಿಸಿದ್ದಾರೆ: "ಕನ್ನಡ ಸಾಹಿತ್ಯದಲ್ಲಿ ಈ ತನಕ ಇರದಿದ್ದ ಒಂದು ಕತ್ತಲ ಲೋಕದಿಂದ ಬಂದ ದಲಿತ ಲೇಖಕರು ಬಹಳ ಒರಟಾಗಿ ಬರೆಯುತ್ತಾರೆ. ನಾಜೂಕು ಅವರಿಗೆ ಬೇಡ, ಅವರಿಗೆ ಅನುಭವವು ನಾಜೂಕಿನದಲ್ಲ."[೧೯] ಇದನ್ನು ಡಾ.ಪುರುಷೋತ್ತಮ ಬಿಳಿಮಲೆಯವರು 'ಶಿಷ್ಟ ಪರಿಶಿಷ್ಟ' ಕೃತಿಯಲ್ಲಿನ 'ದಲಿತ ಸಾಹಿತ್ಯ ಹಿನ್ನೆಲೆ'ಯ ಲೇಖನದಲ್ಲಿ ವಿವರಿಸಿದ್ದಾರೆ. ಇದೇ ಕೃತಿಯಲ್ಲಿ ಸಿದ್ದಲಿಂಗಯ್ಯನವರ ಕಾವ್ಯಕ್ಕೆ ಯಲಗುಡಿಗೆ ಮಂಜಯ್ಯನವರು, ಹಾಗೂ ದೇವನೂರು ಮಹಾದೇವ ಅವರ ಒಡಲಾಳದ ಬಗ್ಗೆ ಸದಾಶಿವ ಎಣ್ಣೆಹೊಳೆಯವರು ಹೀಗೆ ಕ್ರಮವಾಗಿ ಪ್ರತಿಕ್ರಿಯಿಸಿದ್ದಾರೆ :

"ದಲಿತ ಸಾಹಿತ್ಯದಲ್ಲಿ ಸಿಟ್ಟು ರೋಷ ಪ್ರತಿಭಟನೆಯ ದನಿಗಳು ಎದ್ದು ಕಾಣುತ್ತವೆ. ಇದು ಅವರ ನೋವಿನ ಪ್ರತೀಕ" (ಮುಂಗಾರು ದೈನಿಕ: ೩/೨/೧೯೮೫).

"ಅದುವರೆಗೆ ಶೂದ್ರಾತಿಶೂದ್ರರೆನಿಸಿಕೊಂಡ ದಲಿತರ ಬದುಕು ಬವಣೆಗಳನ್ನು ಇಷ್ಟು ಸಮರ್ಪಕವಾಗಿ ಅಭಿವ್ಯಕ್ತಿಸಿದ ಉದಾಹರಣೆ ಮತ್ತೊಂದಿಲ್ಲ. ದಲಿತರಾಗಿ ಹುಟ್ಟಿ, ದಲಿತರ ಸಂಕಷ್ಟ ಬೇನೆಗಳನ್ನು ತುಂಬಾ ಹತ್ತಿರದಿಂದ ಬಲ್ಲವರಾಗಿ ಮಹಾದೇವ ಅವರು ಬದುಕಿನ ಕಠೋರ ಸತ್ಯವನ್ನು ತುಂಬಾ ಸಮರ್ಥವಾಗಿ ಅನಾವರಣ ಮಾಡಿದ್ದಾರೆ. ದಲಿತ ಕುಟುಂಬವೊಂದರ ಒಳಜೀವನ ಇಷ್ಟು ಸಮರ್ಥವಾಗಿ ಹಿಂದೆಂದೂ ಸಾಹಿತ್ಯದಲ್ಲಿ ಮೂಡಿಬಂದಿಲ್ಲ"[೨೦] (ಗ್ರಂಥಲೋಕ: ಏಪ್ರಿಲ್ ೧೯೮೫).

ದಲಿತರ ಹಸಿವು, ಬಡತನ, ಶೋಷಣೆ, ಅವಮಾನ ಸಮಾಜದಿಂದಲೇ ಪ್ರತ್ಯೇಕಗೊಳಿಸುವುದು ದಲಿತರ ಸಾಹಿತ್ಯ ಪ್ರವೇಶದ ಮೊದಲ ಆವೇಶವಾಗಿದೆ. ತಮ್ಮ ಬದುಕಲ್ಲಿ ಶತಶತಮಾನಗಳ ನೋವನ್ನು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿನ ತಮ್ಮ ಹಕ್ಕುದಾರಿಕೆಯನ್ನು ದಕ್ಕಿಸಿಕೊಳ್ಳಲು ಇಡುವ ವಾಸ್ತವ ವಸ್ತುಗಳಾಗಿ ಕಂಡುಬಂದವು. ದಲಿತರು ತಮ್ಮ ಬದುಕಿನ ವ್ಯವಸ್ಥೆಯನ್ನು ಇಂದು ಮುಖ್ಯವಾಗಿ ಎರಡು ರೀತಿಯಲ್ಲಿ ಸಮಸ್ಯೆಯನ್ನು ತೆರೆದಿಡುವ ಕೆಲಸವನ್ನು ಮಾಡುತ್ತಿದ್ದಾರೆ.

ಮೊದಲನೆಯದು : ಬರವಣಿಗೆಯ ರೂಪದಲ್ಲಿ; ಅಂದರೆ ಸಾಹಿತ್ಯ, ಪ್ರಬಂಧ, ಸಂಸ್ಕೃತಿ ವಿಮರ್ಶೆ.

ಎರಡನೆಯದು : ಮುಷ್ಕರಗಳು; ದಲಿತ ಚಳುವಳಿಯ ಸಂದರ್ಭಗಳ ಕಾರ್ಯಚಟುವಟಿಕೆಗಳು.

ಸಾಹಿತ್ಯದಲ್ಲಿ ಹಿಂದೆ ಎಂದೂ ಕಾಣದ ವಸ್ತುವನ್ನು ತುಂಬುವುದು ದಲಿತ ಸಾಹಿತ್ಯದಲ್ಲಿ ಮೂಡಿಬಂತು. ಇದರಲ್ಲಿ ತಮ್ಮ ಬದುಕು, ಅದರಲ್ಲಿನ ಶೋಷಣೆ, ಸಂಸ್ಕೃತಿ, ಧರ್ಮ ಹೀಗೆ ಹಲವು ಸೂಕ್ಷ್ಮ ಬದುಕಿನ ಚಿತ್ರಣವನ್ನು ಸಾಹಿತ್ಯ ಕಟ್ಟಿಕೊಡುತ್ತಾ ಬಂದಿದೆ. ಅಕ್ಷರಸ್ಥ ಸಮುದಾಯಗಳಿಗೆ ಅಕ್ಷರಗಳಿಂದ ತಮ್ಮ ಬದುಕನ್ನು ಕಟ್ಟಿಕೊಡುವ ಕೆಲಸವನ್ನು ದಲಿತ ಸಾಹಿತ್ಯದಲ್ಲಿ ಮಾಡಿತು. ಇಲ್ಲಿನ ಸಾಹಿತ್ಯದಲ್ಲಿ ಬರುವ ಪ್ರಮುಖ ಪಾತ್ರಗಳು ಅನಕ್ಷರಸ್ಥ ಪಾತ್ರಗಳು. ಹಾಗೆಯೇ ಈ ಸಮುದಾಯಗಳೂ ಅನಕ್ಷರಸ್ಥ ಸಮುದಾಯಗಳೇ! ಇಲ್ಲಿನ ಸೃಜನತೆಯು ತಮ್ಮ ಶೋಷಿತ ಸಮುದಾಯದವರಿಗಿಲ್ಲ, ಏಕೆಂದರೆ ಅದಕ್ಕೂ ತೀವ್ರ ಅನುಭವವನ್ನು ದಲಿತರು ತಮ್ಮ ಜೀವನದಲ್ಲಿ ಕಂಡಿರುತ್ತಾರೆ. ಇದು ಶೋಷಕ ಸಮುದಾಯಗಳಿಗೆ ತಮ್ಮ ಜನಾಂಗದ ಬದುಕಿನ ವಾಸ್ತವ ಚಿತ್ರವನ್ನು ತಂದುಕೊಡುವುದು ಹಾಗೆಯೇ ಇಂಥ ಬದುಕು ಅನುಭವಿಸುತ್ತಿರುವ ಸಮುದಾಯಗಳ ಒಳ ತುಡಿತಗಳನ್ನು ಸಾಹಿತ್ಯ ಪ್ರಕಾರದಲ್ಲಿ ಸೇರಿಸುವುದು ಆಗಿದೆ. ಇದೊಂದು ಪಟ್ಟಭದ್ರ ಹಿತಾಸಕ್ತಿಯ ಸಾಹಿತ್ಯ ಲೋಕದ ಬುದ್ಧಿಜೀವಿಗಳಿಗೆ ಪ್ರತಿಭಟನೆಯೂ ಆಗಿ ಕಂಡುಬಂತು.

ದಲಿತ ಸಾಹಿತ್ಯದ ಓದುಗ ವರ್ಗವು ಯಾವುದು ಎಂಬುದು ಒಂದು ತಾತ್ವಿಕ ಚರ್ಚೆ. ದಲಿತ ಸಮುದಾಯಗಳ ಅಕ್ಷರ ಜ್ಞಾನವು ಅನಿವಾರ್ಯವಾಗಿ ತಮ್ಮ ಭಾಷೆಯನ್ನು ಕಟ್ಟಿಕೊಟ್ಟಿತು. ಶಿಷ್ಟ ಭಾಷೆಯನ್ನು ಮೀರಿಸಿ ತಾವು ಬದುಕುವ ಪ್ರಾದೇಶಿಕ ಭಾಷೆಯಲ್ಲಿ ಬರವಣಿಗೆ ಕಂಡುಬಂತು. ಶಿಷ್ಟ ಭಾಷೆಯನ್ನು ಗ್ರಹಿಸಿದಷ್ಟು ಸುಲಭವಾಗಿ ದಲಿತ ಸಾಹಿತ್ಯದ ಪ್ರಾದೇಶಿಕ ಭಾಷೆಯನ್ನು ಗ್ರಹಿಸಲು ಆಗಲಿಲ್ಲ. ಓದಲು ಸಮಸ್ಯೆಯನ್ನು ತಂದುಕೊಟ್ಟಿತು. ಪ್ರಾದೇಶಿಕ ಭಾಷೆ, ಶಿಷ್ಟಭಾಷೆಗೆ ಸವಾಲಾಗಿ ನಿಂತಿತು. ಪ್ರಾದೇಶಿಕತೆಗೆ ಸಂಬಂಧಿಸಿದ ನುಡಿಗಟ್ಟುಗಳು, ಗಾದೆಗಳು ಹಲವು ಅರ್ಥಗಳನ್ನು ಹೊಂದಿರುವ ಪದಪ್ರಯೋಗದ ಪುಂಜಗಳು ಓದುವ ವರ್ಗವನ್ನು ತಲ್ಲಣಿಸಿದವು. ಅವು ದಲಿತ ಸಮುದಾಯಗಳ ಸಾಹಿತ್ಯದ ಸವಾಲಂತೆ ನಿಂತವು. ಸಾಹಿತ್ಯದ ಪ್ರಕಾರಗಳಲ್ಲಿ ವೈವಿಧ್ಯ ಪ್ರಖರತೆಯನ್ನು ಹೊತ್ತುಕೊಂಡವು. ಈ ಸಾಹಿತ್ಯದ ಜೊತೆಯಲ್ಲಿಯೇ ಹೋರಾಟದ ಹಾಡುಗಳು ತಮ್ಮ ಸಮುದಾಯಗಳ ಸಂಸ್ಕೃತಿಯ ಜೀವವನ್ನು ತುಂಬಿಕೊಂಡಿದ್ದವು. ಅವು ಚಳುವಳಿಯ ಬೆಳವಣಿಗೆಯಲ್ಲಿ ಮುಂದುವರೆದವು. ದಲಿತೇತರ, ದಲಿತ ಶೋಷಕ ಸಮುದಾಯಗಳ ಬಹು ಸಂಖ್ಯಾತ ಓದುವ ವರ್ಗಕ್ಕೆ ಇವು ತಲುಪಿದವು.

ಈ ಹೊತ್ತಿಗೆ 'ಸ್ವಾತಂತ್ರ್ಯ' ಅನ್ನುವ ಕಲ್ಪನೆಯನ್ನು ಗ್ರಹಿಸಿದ ಜನತೆಯು ಕಾಲು ಶತಮಾನ ಕಳೆದಿತ್ತು. ಸ್ವಾತಂತ್ರ್ಯ ಚಳುವಳಿಯ ಸಂದರ್ಭದ ಪೂರಕ ಸಾಹಿತ್ಯವಾದ ನವೋದಯವು ಓದುವ ಜನ ಸಮುದಾಯಗಳಿಗೆ ಸಾಹಿತ್ಯ ಮತ್ತು ಚರಿತ್ರೆಯನ್ನು ನೀಡಿದ್ದವು. ಈ ಹೊತ್ತಿಗೆ ಪ್ರಗತಿಶೀಲ ನವ್ಯ ಸಾಹಿತ್ಯ ಪ್ರಕಾರಗಳು ತಮ್ಮ ಐಡಿಯಾಲಜಿಗಳ ಹಿನ್ನೆಲೆಯಲ್ಲಿ ಸಾಹಿತ್ಯ ಸೃಷ್ಟಿ ನೀಡಿ ಪ್ರಖರತೆಯನ್ನು ಸಾರಿದ್ದವು. ಅವುಗಳ ನಂತರದ ಬೆಳವಣಿಗೆಯಲ್ಲಿ ಮಿತಿಯನ್ನು ಗುರ್ತಿಸಿದ ವಿಮರ್ಶೆಗಳು ಕಂಡು ಬಂದವು. ಈ ಸ್ವಾತಂತ್ರ್ಯ ಬಂದ ಸಂದರ್ಭದಲ್ಲಿ ಹುಟ್ಟಿದ ದಲಿತರ ಮನೆಯ ಕೂಸುಗಳಲ್ಲಿ ಬೆರಳೆಣಿಕೆಯಷ್ಟು ದಲಿತ ಕೂಸುಗಳು ಸಾಮಾಜಿಕ ಶೋಷಣೆಯ ಮೂಲಭೂತ ಸಮಸ್ಯೆಯ ಮಡಿಲೊಳಗಿಂದ ಶಿಕ್ಷಣವನ್ನು ಕಲಿತರು. ಈ ಹೊತ್ತಿಗೆ ಆಗಲೇ ಆಗಿ ಹೋಗಿದ್ದ ಅಂಬೇಡ್ಕರ್ ಚಿಂತನೆ, ಮಾರ್ಕ್ಸ್ ಚಿಂತನೆ, ಮಾವೋ ಚಿಂತನೆಯು ಬುದ್ಧಿಜೀವಿಗಳಲ್ಲಿ ಚರ್ಚಿತವಾಗಿ ಹೋಗಿತ್ತು. ಅಕ್ಷರ ಕಲಿತ ಮೊದಲ ತಲೆಮಾರಿನ ದಲಿತರಿಗೆ ಸಾಮಾಜಿಕ

ವಾಸ್ತವ ತಿಳಿದು ಬರವಣಿಗೆಗೆ ತೊಡಗುವ ಹೊತ್ತಿಗೆ ಸ್ವಾತಂತ್ರ್ಯಕ್ಕೆ ಮುವತ್ತು ವರ್ಷ ಕಳೆದಿತ್ತು. ಅನಿವಾರ್ಯವಾಗಿ ತಮ್ಮ ಬದುಕನ್ನು ಸಾಹಿತ್ಯದ ಮೂಲಕ ಸಾಹಿತ್ಯವಾಗಿ; ಪ್ರತಿಭಟನೆಯ ಮೂಲಕ ಸಿದ್ಧಾಂತವಾಗಿ ಕನ್ನಡದಲ್ಲಿ ಕಾಣಿಸಿಕೊಂಡವು.

ಈ ದಲಿತ ಸಾಹಿತ್ಯದ ಹಿನ್ನೆಲೆಯಲ್ಲಿ ಪ್ರಖರವಾಗಿ ದಲಿತರಲ್ಲಿ ಪ್ರಜ್ಞೆ ಮೂಡಬೇಕು, ಅಕ್ಷರವಂತರಾಗಬೇಕು ಎನ್ನುವ ಅಕ್ಷರ ಚಿಂತನೆ ನಡೆಯಿತು. ಅದು ಈ ಹೊತ್ತಿನ ಪ್ರಕ್ರಿಯೆಯೊಂದಿಗೂ ಸೇರಿಕೊಂಡಿದೆ. ''ಸಾರ್ವತ್ರಿಕ ಅಕ್ಷರ ಜ್ಞಾನದಿಂದಾಗಿ ನಮ್ಮಲ್ಲಿ ಅವನಲ್ಲಿ ಒಂದು ಹೊಸ ಪ್ರಜ್ಞೆ ಮೂಡಬಹುದಲ್ಲವೆ? ಈಗಿಂದೀಗಲೇ ಹೊಲೆಯನೊಬ್ಬ ಅಕ್ಷರಸ್ಥನಾದಲ್ಲಿ ಉಂಟಾಗುವ ಆಸ್ಫೋಟ ಅವನ ಪ್ರಜ್ಞೆಯಲ್ಲಿ ಎಷ್ಟೊಂದು ವ್ಯಾಪಕ ಬದಲಾವಣೆಗೆ ಪ್ರೇರಕವಾಗಲಿಕ್ಕಿಲ್ಲ? ಹಾಗಾದರೆ ನಾವು ಸಾಮಾಜಿಕ ಕ್ರಾಂತಿಗೆ ಬದ್ಧರೆಂದು ಸಾರುವ ಆಳುವ ವರ್ಗದ ಜನ ಆಸ್ಫೋಟನೆಗೆ ಬೇಕಾದ ಆತುರವನ್ನು ಏಕೆ ತೋರಿಸುತ್ತಿಲ್ಲ''[೨೧]. ಯು.ಆರ್.ಅನಂತಮೂರ್ತಿಯವರು ದಲಿತ ಅಕ್ಷರಸ್ಥ ಮನಸ್ಸು, ಹಾಗೂ ಸಮಾಜ ಮತ್ತು ಸಮಾಜಕ್ಕೆ ದಲಿತರ ಪ್ರತಿಕ್ರಿಯೆಯು ಎಷ್ಟು ಅನಿವಾರ್ಯ ಎಂಬುದನ್ನು ಚರ್ಚಿಸಿದ್ದಾರೆ. ಅಲ್ಲಿ ಜಾತಿ ವರ್ಗ ಸಮುದಾಯಗಳ ಅಂತರವಲ್ಲ! ಮುಖ್ಯವಾಗಿ ಮನುಷ್ಯನಿಗೆ ಶಿಕ್ಷಣದಿಂದ ತಿಳಿದ ಅರಿವು ಮುಖ್ಯ. ಅನಂತರದಲ್ಲಿ ಮಾನವೀಯತೆ ಮನುಷ್ಯತ್ವ ಮುಖ್ಯವೆನ್ನುವುದು. ಸಾರ್ವತ್ರಿಕ ಶಿಕ್ಷಣಕ್ಕೆ ಕಾರಣಕರ್ತರಾಗಿ ಆಳುವ ವರ್ಗಗಳು ಪ್ರಮುಖ ಪಾತ್ರವನ್ನು ವಹಿಸಬೇಕಾಗಿದೆ. ದಲಿತ ಸಮುದಾಯಗಳು ಬದುಕುವ ಒಟ್ಟು ಸಾಂಸ್ಕೃತಿಕ ಹಿನ್ನೆಲೆಯಿಂದ ದಲಿತ ಸಮುದಾಯಗಳೇ ಅಕ್ಷರ ಕ್ರಾಂತಿಗೆ ಮುಂದಾಗುವುದು ಕಷ್ಟ. ಈ ಸಮುದಾಯಗಳ ಸಾರ್ವತ್ರಿಕ ಶಿಕ್ಷಣಕ್ಕೆ ಆಳುವ ವರ್ಗಗಳಿಗೆ ಜವಾಬ್ದಾರಿಯನ್ನು ಬಿಟ್ಟದ್ದಾಗಿದೆ. ಅದು ಪ್ರಜಾಸತ್ತಾತ್ಮಕ ಕಾನೂನಿನ ಹಿನ್ನೆಲೆಯಲ್ಲಿ ಸ್ಪಷ್ಟವಾಗುತ್ತದೆ. ಆದರೂ ಬೇರೂರಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಮಾನವೀಯತೆ ಮನುಷ್ಯತ್ವಕ್ಕೆ ಮುಖ್ಯ ಎನ್ನುವುದನ್ನು ಅನಂತಮೂರ್ತಿಯವರು ತಮ್ಮ ಲೇಖನದಲ್ಲಿ ಹೇಳಿದ್ದಾರೆ : ''ಮಲ ಹೊತ್ತ ಹೊಲೆಯ ಪತ್ರಿಕೆಯೋದ ಬಲ್ಲವನಾಗಿದ್ದಲ್ಲಿ ನಮಗೂ ಅವನಿಗೂ ನಡುವಿನ ಮಾನವ ಸಂಬಂಧದಲ್ಲಿ ಒಂದು ಆಸ್ಫೋಟ ಉಂಟಾದೀತೆಂಬ ಕುತೂಹಲ ನನ್ನದು''[೨೨]. ಜಾತಿ ಜಾತಿಗಳಲ್ಲಿ ಅಂತರವನ್ನು ಹೊಂದಿರುವ ಸಮಾಜ ಒಂದು ಕಡೆ, ಮತ್ತು ಪ್ರಜಾಪ್ರಭುತ್ವ ವ್ಯವಸ್ಥೆಯ ಶಕ್ತಿ ರಾಜಕಾರಣದ ಸಮಾಜ ಮತ್ತೊಂದು ಕಡೆ, ಇವು ಇಂದೂ ಹೊಂದಿಕೊಂಡು ನಡೆಯುತ್ತಿವೆ. ಈ ಎರಡರ ಅರಿವು ಅಗತ್ಯವಾದಾಗ ತಮ್ಮ ಅನುಭವದ ಜ್ಞಾನದಲ್ಲಿ ಪ್ರಶ್ನೆಗಳು ಏಳುತ್ತವೆ.

## ದಲಿತ ಸಾಹಿತ್ಯದ ತಾತ್ವಿಕ ಚರ್ಚೆ

ಈ ಭಾಗದಲ್ಲಿ ದಲಿತ ಸಾಹಿತ್ಯವನ್ನು ಚರ್ಚಿಸಿ, ನಂತರದಲ್ಲಿ ಏಕೆ 'ದಲಿತ ಸಾಹಿತ್ಯ'ವೆಂದು ಕರೆಯಲ್ಪಟ್ಟಿತು ಎಂಬುದನ್ನು ವಿವರಿಸಲಾಗುವುದು. ದಲಿತ ಸಾಹಿತ್ಯವೆಂದಾಕ್ಷಣ ದಲಿತರ ಜೀವನಕ್ಕೆ ಸಂಬಂಧಿಸಿದ್ದು ಎಂತಲೂ, ಅದು ದಲಿತರ ಶೋಷಿತ ಬದುಕನ್ನು ಅದಕ್ಕೆ ಸಂಬಂಧಿಸಿದವರನ್ನು ಒಳಗೊಂಡಿರುತ್ತದೆ ಎಂತಲೂ ಸಾಮಾನ್ಯಗ್ರಹಿಕೆಯಾಗಿದೆ. ಇದು ಪ್ರಾರಂಭದಲ್ಲಿ ಬಂಡಾಯ ಸಾಹಿತ್ಯದ ಜೊತೆಗೂಡಿ ಕಂಡುಬಂದಿದೆ. ನಂತರದಲ್ಲಿ ಬಂಡಾಯ ಸಾಹಿತ್ಯದಲ್ಲಿನ ವಸ್ತುವಾಗಿ, ಮತ್ತು ಅದರೊಳಗೆ ದಲಿತ ಸಾಹಿತ್ಯದ ವಸ್ತುವಾಗಿ ಕನ್ನಡ ಸಾಹಿತ್ಯ ಪ್ರಕಾರಗಳ ಬೆಳವಣಿಗೆಯಲ್ಲಿ ಕಂಡುಬಂದವು.

ದಲಿತ ಸಾಹಿತ್ಯದ ಬಗೆಗೆ ಜಿ.ಎಸ್.ಶಿವರುದ್ರಪ್ಪನವರು ಹೀಗೆ ವ್ಯಾಖ್ಯಾನಿಸಿದ್ದಾರೆ: ಅದು ಯಾವ ಸ್ವರೂಪವನ್ನು ಹೊಂದಿದೆ ಎಂಬುದಕ್ಕೆ ಭಾರತೀಯ ಸಾಹಿತ್ಯ ಚಳುವಳಿ ಮತ್ತು ದಲಿತ ಸಾಹಿತ್ಯಕ್ಕೆ ಮೂಲತಃ ಅಂಬೇಡ್ಕರ್ ಅವರು ಕೊಟ್ಟಂತಹ ದಲಿತ ಸಂವೇದನಾ ಸಾಮರ್ಥ್ಯವೇ ಮುಖ್ಯವಾಗಿ ಕಾರಣ. "ದಲಿತ ಸಾಹಿತ್ಯದ ಮೊದಲು ಹಿಂದೂ ಧರ್ಮದ ವಿರುದ್ಧವಾಗಿ ಹಿಂದೂ ಧರ್ಮದಲ್ಲಿನ ವರ್ಣವ್ಯವಸ್ಥೆಯ ವಿರುದ್ಧವಾಗಿ; ಹಿಂದೂ ಧರ್ಮದ ಅಸ್ಪೃಶ್ಯತೆಯ ಕಲ್ಪನೆಯ ಹಿಂದಿರುವ ಅಮಾನವೀಯ ಮತ್ತು ಜೀವವಿರೋಧಿ ನೆಲೆಗಳನ್ನು ಪ್ರತಿಭಟಿಸಿ ಮನುಷ್ಯನಾಗಿ ಘನತೆ ಗೌರವವನ್ನು ಪಡೆದುಕೊಂಡು; ಬದುಕಿನ ಎಲ್ಲಾ ಹಂತದಲ್ಲೂ ಕೂಡ ಸಮಾನತೆಯನ್ನು ಪಡೆದುಕೊಳ್ಳುವ ಉದ್ದೇಶದಿಂದ; ಆಕ್ರೋಶವೇ ಇದಕ್ಕೆ ಕಾರಣ"[೨೩]. ಅದು ದಲಿತ ಸಾಹಿತ್ಯಕ್ಕೆ ಕಾರಣವಾಯಿತು ಎಂಬುದಾಗಿದೆ. "ದಲಿತ ಸಾಹಿತ್ಯವೆನ್ನುವುದು ಈ ಕೆಳಸ್ತರಗಳಲ್ಲಿಯೇ ಅತ್ಯಂತ ಕೆಳಸ್ತರದ, ಶತಮಾನಗಳಿಂದ ಅಸ್ಪೃಶ್ಯ, ಅನಾಗರೀಕ, ಪಂಚಮ ಇತ್ಯಾದಿ ಹೀನಾರ್ಥಗಳಲ್ಲಿ ಸಂಬೋಧಿಸಲ್ಪಟ್ಟು, ಇತರ ಕೆಳವರ್ಗಗಳಿಗಿಂತ ಕೇವಲ ಶೋಷಣೆಗೆ ಮಾತ್ರವಲ್ಲದೆ, ಅವಮಾನಕ್ಕೆ, ಅಮಾನವೀಯವಾದ ನಡವಳಿಕೆಗೆ, ತಾವು ಮನುಷ್ಯರಲ್ಲವೇನೋ ಎನ್ನುವಂತಹ ಸ್ಥಿತಿಗೆ ತಳ್ಳಲ್ಪಟ್ಟಂತಹ ಒಂದು ವರ್ಗದವರು ದಲಿತರು. ಈ ದಲಿತರು ಬರೆದದ್ದು ದಲಿತ ಸಾಹಿತ್ಯ, ಇವರ ಬರಹಗಳಲ್ಲಿ ಯಾತನೆಯ ಜೊತೆಗೆ ಆಕ್ರೋಶವು ಇರುವುದು ಅತ್ಯಂತ ಸಹಜವಾದ ಸಂಗತಿ ಎಂದು ಭಾವಿಸುತ್ತೇವೆ"[೨೪]. 'ದಲಿತ ಸಾಹಿತ್ಯವು 'ದಲಿತ ಬದುಕನ್ನು' ಒಳಗೊಂಡಿರುವಂತಹದ್ದು. ಇದರಲ್ಲಿ ಶ್ರಮ, ಶೋಷಣೆ, ದಬ್ಬಾಳಿಕೆ, ದೌರ್ಜನ್ಯ, ಅವಮಾನ, ಅತ್ಯಾಚಾರ, ಅಸ್ಪೃಶ್ಯತೆ, ಬಹಿಷ್ಕಾರ ಇಂತಹ ಸಾಮಾಜಿಕ ನಿಂದನೆಯನ್ನು ಒಳಗೊಂಡಿರುವಂತಹದ್ದು. ಇವುಗಳ ಅನಾವರಣ ಹಾಗೂ ಅದನ್ನು ಸೃಜನಶೀಲತೆಯಲ್ಲಿ ಕಟ್ಟಿಕೊಡುವುದು ದಲಿತ ಸಾಹಿತ್ಯವಾಗುತ್ತದೆ. ದಲಿತ-ಬಂಡಾಯ ಸಾಹಿತ್ಯದ ಸಂಬಂಧ ಸ್ವರೂಪದ ಬಗ್ಗೆ ಚರ್ಚೆ ಎದ್ದಾಗ ಯಾವುದು ದಲಿತ ಸಾಹಿತ್ಯ? ಯಾವುದು ಬಂಡಾಯ ಸಾಹಿತ್ಯ ಈ ಎರಡರ ವ್ಯತ್ಯಾಸ ಅಂಶಗಳ ಸೂಕ್ಷ್ಮ ಎಳೆಗಳನ್ನು ಚರ್ಚಿಸುವಾಗ ರಹಮತ್ ತರೀಕೆರೆಯವರು: "ದಲಿತರ ಬಗೆಗೆ ಇತರರು ಬರೆದುದು ಅಥವಾ ದಲಿತರೇ ಸಾರ್ವಜನಿಕ ವಿಷಯಗಳ ಬಗ್ಗೆ ಬರೆದದ್ದು ದಲಿತ ಸಾಹಿತ್ಯ ಅಲ್ಲ. ದಲಿತರಾದವರು ತಮ್ಮ ರಕ್ತಮಾಂಸಗಳ ಜೀವಂತ ಅನುಭವ ಅನಿಸಿಕೆಗಳನ್ನು ಹಿಡಿದಿಟ್ಟಿರುವುದು ಮಾತ್ರ 'ದಲಿತ ಸಾಹಿತ್ಯ'. ಸಹಜವಾಗಿ ಇದರ ಧೋರಣೆ ಪ್ರತಿಭಟನೆಯದು"[೨೫]. ರಹಮತ್ ಅವರು ದಲಿತ ಸಾಹಿತ್ಯದ ಬಗ್ಗೆ ಸ್ಪಷ್ಟಪಡಿಸುತ್ತಾ ಸಾಹಿತ್ಯವನ್ನು ಪ್ರತಿಭಟನೆಯದ್ದು ಎಂದು ವಿವರಿಸಿದ್ದಾರೆ. ಇಲ್ಲಿ ಪ್ರಮುಖವಾಗಿ ಒಟ್ಟು ದಲಿತ ಸಾಹಿತ್ಯವನ್ನು ಎರಡು ರೀತಿಯಲ್ಲಿ ನೋಡುವ ಸಾಧ್ಯತೆ ಇದೆ. ಅದರಲ್ಲಿ ಮೊದಲನೆಯದು ದಲಿತ ಸಾಹಿತ್ಯವನ್ನು 'ಸಾಹಿತ್ಯವನ್ನಾಗಿ' ನೋಡುವುದು. ಎರಡನೆಯದು ಇದರ ಶತ್ರುಸ್ವರೂಪ, ಮಿತ್ರಸ್ವರೂಪವನ್ನಾಗಿ ವಿಭಾಗಿಸಿಕೊಂಡು ನೋಡುವುದು. ಹೀಗೆ ದಲಿತ ಸಾಹಿತಿಗಳು ತಮ್ಮ ಬದುಕನ್ನು ಅನಾವರಣಗೊಳಿಸಿದರು. ಆದರೆ ಬಂಡಾಯ ಸಾಹಿತಿಗಳು ಸೃಜನಶೀಲತೆಯಲ್ಲಿ ದಲಿತರ ಮತ್ತು ಶೋಷಕರರ ನಡುವಿನ ವೈರುಧ್ಯಗಳಿಗೆ ಒತ್ತು ಕೊಟ್ಟರು. ಇಲ್ಲಿ ಶೋಷಕರ ಮತ್ತು ಶೋಷಿತರ ನಡುವೆ ಅಂತರ ಏರ್ಪಟ್ಟದ್ದು ಕಂಡು ಬಂತು. ಈ ರೀತಿಯಲ್ಲಿ ನೋಡಿದರೆ ದಲಿತ ಸಾಹಿತ್ಯವು ಪ್ರತಿಭಟನೆಯ ಅನುಭವವನ್ನು, ಅದರ ಬದುಕನ್ನು ಸಾಹಿತ್ಯದಲ್ಲಿ ತರುವುದು ಆಗಿರುತ್ತದೆ. ಈ ಸಾಹಿತ್ಯವು ಅನುಭವದ ಹಿನ್ನೆಲೆಯಲ್ಲಿ ತನ್ನ ದಲಿತತೆಯ ತೀವ್ರತೆಯನ್ನು ರಕ್ತ ಮಾಂಸಗಳಲ್ಲಿ ಬೆರತು ಬಂದಂತಹದ್ದಾಗಿರುತ್ತದೆ. ದಲಿತನಾದವನು ತನ್ನ ಅನುಭವದ ಸಾಹಿತ್ಯವನ್ನು ಸೃಷ್ಟಿಸುತ್ತಾನೆ. ಅದು ದಲಿತ ಸಾಹಿತ್ಯವಾಗುತ್ತದೆ. ದಲಿತೇತರರ, ಸಾರ್ವಜನಿಕರ ವಿಷಯವನ್ನು ದಲಿತ ಬರೆದರೂ ಅದು

ದಲಿತ ಸಾಹಿತ್ಯವಾಗುವುದಿಲ್ಲ ಅಥವಾ ದಲಿತೇತರರು ದಲಿತರ ಅನುಭವವನ್ನು ಸಾಹಿತ್ಯಗೊಳಿಸಿ ಬರೆದರೂ ಅದು ದಲಿತ ಸಾಹಿತ್ಯವಾಗುವುದಿಲ್ಲ. ಸಾಹಿತ್ಯ ಸೃಷ್ಟಿಯ ಕ್ರಿಯೆಯಲ್ಲಿ ಸಾಚಾತನ ಬಹಳ ಮುಖ್ಯ. ದಲಿತರ ಸಮಸ್ಯೆಗಳು ಬದಲಾಗುತ್ತಿರುವ ಭಾರತದ ಹಲವು ಸಮುದಾಯಗಳ ಅಸಮಾನತೆಯ ಬದುಕಿನ ಸಾಂಸ್ಕೃತಿಕ ಸಂದರ್ಭದಲ್ಲಿ ದಲಿತರ ಸಮಸ್ಯೆಗಳು ಭಿನ್ನ ಸ್ವರೂಪವನ್ನು ಮೈದಳೆಯುತ್ತಿವೆ. ಅವುಗಳ ಸೂಕ್ಷ್ಮ ವಿವರಗಳು ಕಾಲದಿಂದ ಕಾಲಕ್ಕೆ ಭಿನ್ನ ಸ್ವರೂಪವನ್ನು ಪಡೆದುಕೊಳ್ಳುತ್ತಲಿವೆ. ಇದು ದಲಿತ ಸಾಹಿತ್ಯದ ನಿರಂತರ ಕ್ರಿಯೆಯಲ್ಲಿ ನಡೆಯುತ್ತದೆ. 'ದಲಿತ ಸಾಹಿತಿ' 'ದಲಿತ ಸಾಹಿತ್ಯ' ಹಣೆ ಪಟ್ಟಿಕೊಂಡು ಬರುತ್ತಿರುವ ಸಾಹಿತ್ಯವಲ್ಲ. ಅದಕ್ಕೆ ಸಾಂಸ್ಕೃತಿಕ ಜವಾಬ್ದಾರಿ ಇದೆ. ಇಲ್ಲಿ ಬಹುಸಂಸ್ಕೃತಿಯ ಸಮುದಾಯಗಳೂ ಕೂಡ ಭಿನ್ನ ಸ್ವರೂಪವನ್ನು ಹೊಂದಿರುವಂತವು. ಈ ಸಮುದಾಯಗಳ ಸಂಸ್ಕೃತಿಯ ಸಾಹಿತ್ಯ ರಚನೆ ಮಾಡುವುದು ಅದೇ ಸಮುದಾಯದವರೆಲ್ಲ ಮಾಡಿ ಬರಲಿರುವ ಸಂಸ್ಕೃತಿಯ ಸಾರದ ನಿಖರತೆಯಿಂದ. ಅನ್ಯ ಸಮುದಾಯದವರು ತಮಗೆ ಗೊತ್ತಿಲ್ಲದ ಸಮುದಾಯದ ಸೂಕ್ಷ್ಮವಿವರಗಳನ್ನು ಕೊಡುವುದು ಕಷ್ಟ. ವಾಸ್ತವತೆಗೆ ಅನುಭವ ಮುಖ್ಯವಾಗುತ್ತದೆ. ''ಪ್ರತಿಗಾಮಿ ದಲಿತ ಸಾಹಿತಿಗಳೆಲ್ಲಾ ಬಂಡಾಯ ಸಾಹಿತಿಗಳು. ಬಂಡಾಯ ಸಾಹಿತಿಗಳೆಲ್ಲಾ ದಲಿತ ಸಾಹಿತಿಗಳಲ್ಲ.''[೨೬] ತಮ್ಮ ವ್ಯಕ್ತಿಗತ ಮತ್ತು ಸಾಮುದಾಯಿಕ ಸಾಹಿತ್ಯ ಸೂಕ್ಷ್ಮತೆಯನ್ನು ದಲಿತ ಸಾಹಿತಿಗಳು ಗುರ್ತಿಸಿದಷ್ಟು ಬಂಡಾಯ ಸಾಹಿತಿಗಳಿಗೆ 'ದಲಿತತೆಯ' ತೀವ್ರತೆಯನ್ನು ತರಲು ಆಗುವುದಿಲ್ಲ ಎಂಬುದು ಬಿಳಿಮಲೆಯವರ ಮಾತಿನಿಂದ ಸ್ಪಷ್ಟ.

ವಿದ್ಯೆ ಕೇವಲ ವೈದಿಕ ಸ್ವತ್ತಾಗಿದ್ದ ಸಂದರ್ಭದಲ್ಲಿಂದ ಹಾಗೂ ವಸಾಹತುಶಾಹಿಯ ಆಡಳಿತದ ಮೆಕಾಲೆಯ ಶಿಕ್ಷಣ ನೀತಿಯಿಂದ ವಿದ್ಯೆಯನ್ನು ಪಡೆದವರು ಬ್ರಾಹ್ಮಣರು ಮತ್ತು ಕೆಲವು ಶೂದ್ರರು. ಸ್ವಾತಂತ್ರ್ಯಾನಂತರದ ಭಾರತದಲ್ಲಿ ಸ್ವಾತಂತ್ರ್ಯ ಕಲ್ಪನೆ ಹಾಗೂ ತಮ್ಮ ಸ್ಥಿತಿಯನ್ನು ಅರಿತ ದಲಿತರಲ್ಲಿ ಕೆಲವೇ ಕೆಲವರು ಓದುಗರಾದರು, ಸಾಹಿತಿಗಳಾದರು, ಚಿಂತಕರಾದರು. ಇವರು ರಚಿಸುವ ಸಾಹಿತ್ಯವು ತಮ್ಮ ಬದುಕಿನ ಅನುಭವದ ವಾಸ್ತವವಾದರೂ ಅದು ದಲಿತೇತರ ಓದುಗ ಜಗತ್ತಿಗೆ ದಲಿತರು ಕೊಟ್ಟ ಹೊಸ ಕೊಡುಗೆಯಾಯಿತು. ಹಿಂದೆಂದೂ ಕಾಣದ ಸಾಹಿತ್ಯ ಸೃಷ್ಟಿಯಾಯಿತು. ಅದು ದಲಿತ ಪ್ರತಿಭಟನೆಯೂ ಆಗಿತ್ತು. ಅದರಲ್ಲಿ ದಲಿತ ಜನಾಂಗಗಳು ಬಿಂಬಿಸಿದವು.

ಅರವಿಂದ ಮಾಲಗತ್ತಿಯವರು ದಲಿತ ಸಾಹಿತ್ಯವನ್ನು ಈ ರೀತಿಯಲ್ಲಿ ಕ್ರೋಡೀಕರಿಸಿದ್ದಾರೆ. ಇದು ಮೇಲೆ ನಿರ್ವಚಿಸಿದ ಇಬ್ಬರು ಲೇಖಕರ ಚರ್ಚೆಗಿಂತ ಭಿನ್ನವಾದದ್ದು ''(ಅ) ದಲಿತರ ಕುರಿತು ಯಾರು ಬರೆದರೂ ದಲಿತ ಸಾಹಿತ್ಯವಾಗುತ್ತದೆ. (ಆ) ದಲಿತರೇ ಬರೆದದ್ದು ದಲಿತ ಸಾಹಿತ್ಯವಾಗುತ್ತದೆ. (ಇ) ಪ್ರಗತಿಪರರು ಮತ್ತು ದಲಿತರು ದಲಿತರ ಕುರಿತು ಬರೆದದ್ದು ದಲಿತ ಸಾಹಿತ್ಯವಾಗುತ್ತದೆ''.[೨೭]

ಯಾವುದು ದಲಿತ ಸಾಹಿತ್ಯ ಎಂಬುದನ್ನು ವಿಭಾಗಿಸಿ ಕೆಲವು ಪ್ರಶ್ನೆಗಳನ್ನು ಎತ್ತಿಕೊಂಡಿದ್ದಾರೆ. ''ದಲಿತರು ಬರೆದದೆಲ್ಲವೂ ದಲಿತ ಸಾಹಿತ್ಯವಾಗುತ್ತದೆಯೇ? ದಲಿತ ಬರೆದ ರಾಘವೇಂದ್ರನ ಭಜನೆಯೂ ದಲಿತ ಸಾಹಿತ್ಯವಾಗುತ್ತದೆಯೇ? ದಲಿತರು ಬರೆದದ್ದು ರಕ್ತ ಮಾಂಸದಿಂದ ಕೂಡಿರುತ್ತದೆ. ಅಥೆಂಟಿಕ್ ಆಗಿರುತ್ತದೆ. ದಲಿತೇತರರು ಅಥವಾ ಪ್ರಗತಿಪರರು ಬರೆದದ್ದು ಅಷ್ಟೇ ಅಥೆಂಟಿಕ್ ಆಗಿರಲು ಸಾಧ್ಯವೇ? ಬರೀ ಅನುಕಂಪೆಯಿಂದ ದಲಿತ ಸಾಹಿತ್ಯ ಹುಟ್ಟುತ್ತದೆಯೇ?.''[೨೮] ಎಂಬ ಪ್ರಶ್ನೆಗಳೂ ಹುಟ್ಟುತ್ತವೆ. ಈ ಪ್ರಶ್ನೆಗಳು ನಿರ್ವಚನಕ್ಕೆ ಸಂಬಂಧಪಟ್ಟಿರುತ್ತವೆ. ದಲಿತ

ಸಾಹಿತ್ಯವು ದಲಿತರ ಬಗೆಗಿನ ಬರೆದ ಯಾವ ಸಾಹಿತ್ಯದ ಪ್ರಕಾರವಾದರೂ ಅದು ದಲಿತ ಸಾಹಿತ್ಯವಾಗುತ್ತದೆ. ಇಲ್ಲಿ ಬರಹಗಾರರ ಜನಾಂಗ ಅಥವಾ ಸಮುದಾಯಗಳು ಮುಖ್ಯವಲ್ಲ. ದಲಿತ ಸಾಹಿತ್ಯಕ್ಕೆ ಸಂಬಂಧಿಸಿದ ವಸ್ತು ಮುಖ್ಯ. ದಲಿತರು ಸಾಹಿತ್ಯಿಕವಾಗಿ ಕೊಡಬಲ್ಲ ತೀವ್ರತೆಯನ್ನು ದಲಿತೇತರರೂ ಸಹ ಕೊಡಬಹುದು. ದಲಿತ ಸಾಹಿತ್ಯದ ಬಗ್ಗೆ ಮಾಲಗತ್ತಿಯವರು ಎತ್ತಿಕೊಂಡಿರುವ ಪ್ರಶ್ನೆಗಳಿಗೆ ವಿವರಣೆಯನ್ನು ನೀಡುತ್ತಾ ಅವುಗಳನ್ನು ವರ್ಗೀಕರಿಸಿದ್ದಾರೆ. ಅದನ್ನು ಒಂದು ಪಟ್ಟಿಯಲ್ಲಿ ನೋಡಬಹುದು.




**ದಲಿತ ಸಾಹಿತ್ಯ :** ದಲಿತರು ದಲಿತೇತರರು ದಲಿತಪ್ರಜ್ಞೆಯಿಂದ ದಲಿತರ ಕುರಿತು ಸೃಷ್ಟಿಸಿದ ಸಾಹಿತ್ಯವೇ ದಲಿತ ಸಾಹಿತ್ಯ. ಇದರಲ್ಲಿ ದಲಿತೀಯ, ದಲಿತೇಯ, ಆಂಶಿಕ ಸಾಹಿತ್ಯವು ಒಳಗೊಂಡಿರುತ್ತವೆ.

**ದಲಿತೀಯ ಸಾಹಿತ್ಯ :** ದಲಿತರು ದಲಿತಪ್ರಜ್ಞೆಯಿಂದ ದಲಿತತ್ವದ ಕುರಿತು ಬರೆದ ಸಾಹಿತ್ಯ ದಲಿತೀಯ ಸಾಹಿತ್ಯ.

**ದಲಿತೇಯ ಸಾಹಿತ್ಯ :** ಪ್ರಗತಿಪರ ದಲಿತರು ದಲಿತಪ್ರಜ್ಞೆಯಿಂದ ದಲಿತರನ್ನು ಕುರಿತು ಬರೆದ ಸಾಹಿತ್ಯವೇ ದಲಿತೇಯ ಸಾಹಿತ್ಯವಾಗುತ್ತದೆ''[೯] ಹೀಗೆ ದಲಿತ ಸಾಹಿತ್ಯದ ವಿಭಾಗೀಕ್ರಮದಲ್ಲಿ ದಲಿತ ಸಾಹಿತ್ಯದ ಅರ್ಥ ಕಲ್ಪನೆಯನ್ನು ನೀಡಿದ್ದಾರೆ. ಹಾಗೆ ''ದಲಿತ ಸಾಹಿತ್ಯ ಜಾತಿವಾದಿ ಸಾಹಿತ್ಯದಲ್ಲಿ ಇತರ ಸಾಹಿತ್ಯಕ ಪಂಥಗಳಂತೆ ಇದೂ ಕೂಡ ಒಂದು''[೧೦]. ಇಲ್ಲಿ ದಲಿತ ಸಮುದಾಯದಿಂದ ಬಂದ ಮಾಲಗತ್ತಿಯವರ ದಲಿತ ಸಾಹಿತ್ಯದ ಬಗೆಗಿನ ನಿರ್ವಚನಕ್ಕೂ; ದಲಿತೇತರ ಸಮುದಾಯದ ಬಿಳಿಮಲೆ, ತರೀಕೆರೆಯವರ ನಿರ್ವಚನಕ್ಕೂ ಸಾಕಷ್ಟು ವೈವಿಧ್ಯತೆಯನ್ನು ಕಾಣಬಹುದಾಗಿದೆ. ಸಾಹಿತ್ಯ ಇರುವವರೆಗೆ ದಲಿತ ಸಾಹಿತ್ಯ ಮತ್ತು ಅದರ ಬೆಳವಣಿಗೆ ಮುಂದುವರೆಯುತ್ತಿರುತ್ತದೆ. ಅದು ಭಾರತದ ಜಾತಿವ್ಯವಸ್ಥೆಯ ಮತ್ತು ಅಸಮಾನತೆ ಬದುಕ ಸೋಂಕು ಇರುವವರೆಗೆ ಇರುವಂತಹದ್ದು. ಸಾಹಿತ್ಯಿಕ ಪ್ರಕಾರದಲ್ಲಿ ದಲಿತ ಸಾಹಿತ್ಯವು ಅದಕ್ಕೆ ಒಳಗೊಳ್ಳುವವರ ಎಲ್ಲರ ಸಾಹಿತ್ಯವಾಗಿದೆ. ಇದು ಸೀಮಿತತೆಯನ್ನು ಹೊಂದಿರುವಂತಹದ್ದಲ್ಲ. ಇದರ ವಿಸ್ತಾರಿಕೆಯನ್ನು ಸಾಹಿತ್ಯಿಕವಾಗಿ ನೋಡಬೇಕು. ಸಾಮುದಾಯಿಕ ಸೀಮಿತ ಕೇಂದ್ರದಿಂದಲ್ಲ.

## ದಲಿತ ಸಾಹಿತ್ಯದ ಲಕ್ಷಣ ಮತ್ತು ಸ್ವರೂಪ

ಸಾಹಿತ್ಯದ ಎಲ್ಲಾ ಪ್ರಕಾರಗಳೂ ತನ್ನದೇ ಆದ ಲಕ್ಷಣವನ್ನು ಹೊಂದಿರುತ್ತದೆ. ಅವುಗಳ ಉಗಮಕ್ಕೆ ಸಾಂಸ್ಕೃತಿಕ ಸಂದರ್ಭ ಕಾರಣವಿರಬಹುದು; ಇಲ್ಲವೆ ಆ ಕಾಲದ ಸಾಮಾಜಿಕ, ಆರ್ಥಿಕ, ರಾಜಕೀಯ, ಕಾರಣಗಳ ತುರ್ತು ಆಗಿರಬಹುದು. ಎಲ್ಲಾ ಸಾಹಿತ್ಯ ಪ್ರಕಾರಗಳೂ ತನ್ನದೇ ವೈಶಿಷ್ಟ್ಯತೆಗಳನ್ನು ಹೊಂದಿ ಸೃಷ್ಟಿಗೊಳ್ಳುತ್ತವೆ. ಅವು ತಮ್ಮ ಅನುಭವದ ಮಿತಿಯೊಳಗೆ ಸಮಾಜಕ್ಕೆ; ಓದುವವರಿಗೆ ತನ್ನ ಬದುಕಿನ ಹಿಂದಿನ ಸಮಕಾಲೀನತೆಯ ಹಲವಾರು ಮುಖಗಳನ್ನು ತೆರೆದಿಡುತ್ತವೆ.

ಆಧುನಿಕ ಕನ್ನಡ ಸಾಹಿತ್ಯದ ನವೋದಯ, ಪ್ರಗತಿಶೀಲ, ನವ್ಯ, ದಲಿತ, ಬಂಡಾಯ ಸಾಹಿತ್ಯಗಳು ತಮ್ಮ ಬೆಳವಣಿಗೆಗಳಲ್ಲಿ ಒಂದಕ್ಕೊಂದು ಪೂರಕವಲ್ಲದ ವಿಭಿನ್ನ ನೆಲೆಯಲ್ಲಿ ಸಾಹಿತ್ಯ ಕೃಷಿ ಕಂಡು ಬಂದುದನ್ನು ನೋಡುತ್ತೇವೆ. ದಲಿತ ಬಂಡಾಯ ಸಾಹಿತ್ಯ ಪಂಥವು ಬರುವ ಹೊತ್ತಿಗೆ ಹಲವಾರು ತನ್ನ ಲಕ್ಷಣಗಳನ್ನು ಇಟ್ಟುಕೊಂಡು ಸಾಹಿತ್ಯ ಸೃಷ್ಟಿ ಕ್ರಿಯೆ ಪ್ರಾರಂಭವಾಯಿತು. ಹಾಗೂ ತನ್ನದೇ ಆದ ವೈಶಿಷ್ಟ್ಯವು ಕಂಡು ಬಂತು. ಕನ್ನಡ ಸಾಹಿತ್ಯ ಪ್ರಕ್ರಿಯೆಯಲ್ಲಿ ಹಿಂದೆಂದೂ ಕಾಣದಷ್ಟು ಸಾಹಿತ್ಯಿಕ ಲಕ್ಷಣಗಳನ್ನು ಹೊಂದಿಕೊಂಡು ಬಂದಿತು. ಈ ಸಾಹಿತ್ಯದ ಲೇಖಕರು ಒಬ್ಬರು ಬರೆದಂತೆ ಮತ್ತೊಬ್ಬರು ಬರೆಯಲಿಲ್ಲ. ತಮ್ಮ ಲೋಕದ ಬದುಕನ್ನು ಅವುಗಳ ಆವಿಷ್ಕಾರಗಳನ್ನು ಸಾಹಿತ್ಯದಲ್ಲಿ ರಚಿಸತೊಡಗಿದರು.

ದಲಿತ ಸಾಹಿತ್ಯದ ಪ್ರಾರಂಭದಲ್ಲಿ ಸಿಟ್ಟು, ಅಬ್ಬರ, ರೊಚ್ಚು, ಆವೇಶ ಇವು ದಲಿತ ಸಾಹಿತ್ಯದ ಮಿತಿಗಳಾದವು. ಕೇಳುಗರ ರೋಮಗಳನ್ನು ಕ್ರಿಯಾಶೀಲಗೊಳಿಸುವಂತ ಸತ್ವವುಳ್ಳವಾಗಿದ್ದವು. ಇವು ದಲಿತರ ಸ್ವಾಭಿಮಾನವನ್ನು ಮೂಡಿಸುವಲ್ಲಿ ಯಶಸ್ವಿಯಾದವು. ಈ ಸಂದರ್ಭದಲ್ಲಿ ಶಿಕ್ಷಣಕ್ಕೆ ಮಹತ್ವದ ಹೆಚ್ಚುಗಾರಿಕೆಯನ್ನು ನೀಡಲಾಯಿತು. ತಲೆಮಾರುಗಳ ಭಿನ್ನತೆ ಮತ್ತು ಅವುಗಳ ಲಕ್ಷಣಗಳು ಈ ಸಾಹಿತ್ಯದಲ್ಲಿ ಕಂಡುಬಂದವು. ಅದರಲ್ಲಿ ಸಮಾಜದ ಬೆಳವಣಿಗೆಯ ಅಂಶಗಳು ಮತ್ತು ಬದಲಾವಣೆಗಳು ಕಂಡುಬಂದವು.

ಬುದ್ಧ, ಬಸವ, ಅಂಬೇಡ್ಕರ್, ಮಾರ್ಕ್ಸ್ ಚಿಂತನೆಯ ಪ್ರೇರಕಶಕ್ತಿಗಳು ಕಾವ್ಯವಾಗಿ ಹೊರಹೊಮ್ಮಿದವು. ಈ ದೇಶ, ನೆಲ, ಜಲ, ಪ್ರಕೃತಿ, ರಾಷ್ಟ್ರಾಭಿಮಾನ, ಹಿಂದುತ್ವದ ಕಲ್ಪನೆಗಳು ಹಾಗೂ ಅವುಗಳ ಉನ್ನತೀಕರಣದ ಮಾತುಗಳನ್ನು ಬಹುಸಂಖ್ಯಾತ ದಲಿತರ ಬಡವರ, ಆಹಾರ ಇವುಗಳನ್ನು ಇಲ್ಲದವರ ಗೋಳಲ್ಲಿ ಟೀಕೆಗೆ ಒಳಪಟ್ಟವು. ಇವು ದಲಿತ ಸಾಹಿತ್ಯದಲ್ಲಿ ಒಂದು ಅಸ್ತ್ರವಾಗಿ ಬಳಸಿಕೆಗೊಂಡವು. ಆಡುಭಾಷೆಯ ಲಯವನ್ನು ಹಿಡಿದು ಆ ಭಾಷೆಯ ಅರ್ಥಕೋಶವನ್ನು, ಅಥವಾ ತಮ್ಮ ಬದುಕುವ ಸಂಸ್ಕೃತಿಯ ಅರ್ಥಕೋಶವನ್ನು ಕೊಡುವಲ್ಲಿ ಕೆಲಸ ಮಾಡಿದವು. ಈ ಆಡುಭಾಷೆಗಳೆಲ್ಲವನ್ನು ತಮ್ಮದೇ ಆದ ಅಸ್ತಿತ್ವಕ್ಕೆ ತಂದುಕೊಳ್ಳುವಲ್ಲಿ ಈ ಸಾಹಿತಿಗಳು ಪ್ರಯತ್ನಿಸಿದರು.

ದಲಿತ ಸಾಹಿತ್ಯದ ಲಕ್ಷಣಗಳಲ್ಲಿ ಪ್ರಮುಖವಾಗಿ ಕಂಡುಬರುವುದು ಯಜಮಾನಿಕೆ ಮತ್ತು ಅವರ ಆಡಳಿತ. ಈ ಆಡಳಿತಕ್ಕೆ ಸಿಕ್ಕಿ ನಲುಗುವ ದಲಿತನ ವಾಸ್ತವ ಬದುಕು ಹಾಗೆಯೇ ಯಜಮಾನಿಕೆಯ ಅಧಃಪತನ, ದಬ್ಬಾಳಿಕೆಗೆ ಸಂಬಂಧಿಸಿದ ಕ್ರಿಯೆಗಳೆಲ್ಲವೂ ಕಂಡುಬಂದವು. ಅಷ್ಟೇ ಅಲ್ಲದೆ ಜಾತಿ, ಭೇದ, ಮತಗಳನ್ನು ಮೀರುವ ಮನುಷ್ಯ ಸಂಬಂಧದ ಕಾಮದ ಆಟವು ಕಂಡುಬಂದವು. ಈ ಜಾತಿ ಜಾತಿಗಳ ನಡುವಿನ ಮನುಷ್ಯನ ಲೈಂಗಿಕ ಸಂಬಂಧ, ಅದರ ಗೌಪ್ಯತೆಗಳು ದಲಿತ ಸಾಹಿತ್ಯದಲ್ಲಿ ಕಂಡುಬಂದವು.

ಗ್ರಾಮೀಣ ಬದುಕನ್ನು ಕುರಿತಂತೆ ಹೆಚ್ಚು ಕೃತಿಗಳು ದಲಿತ ಸಾಹಿತ್ಯದಲ್ಲಿ ಕಂಡುಬಂದವು. ನಗರದ ಬದುಕಿಗೆ ಸಂಬಂಧಿಸಿದ ಕೃತಿಗಳು ಬಂದದ್ದು ಕಡಿಮೆ. ಗ್ರಾಮೀಣ ಬದುಕಿನ ಅದರ ಚಿತ್ರಣವನ್ನು ಕೊಡುತ್ತಲೇ ನಗರ ಜೀವನದ ಚಿತ್ರಣದ ಬಿಂಬವು ಕಂಡುಬಂದವು. ಕೃತಿಗಳಲ್ಲಿ ತಲೆಮಾರುಗಳ ಅಂತರದಲ್ಲಿ ಬಹುಮುಖ್ಯವಾಗಿ ಹಿರಿಯ ತಲೆಮಾರಿನವರು ಶೋಷಣೆಯನ್ನು ಅನುಭವಿಸುತ್ತಿರುವುದನ್ನು ಕಂಡರೆ ಅದೇ ಸಂದರ್ಭದಲ್ಲಿ ಕಿರಿಯ ತಲೆಮಾರಿನ

ಯುವಕರು ಗ್ರಾಮೀಣ ಬದುಕಿನ ವ್ಯವಸ್ಥೆಯೊಂದಿಗೆ ಬದುಕಲು ತಮಗೊಪ್ಪಿಗೆ ಇಲ್ಲದೆಯೇ ನಗರದ ಕಡಗೆ ಹೊರಟರು. ಭೂಮಾಲಿಕರ ಕೈಯಿಂದ ತಪ್ಪಿಸಿಕೊಂಡರೂ ನಗರ ಬದುಕಿನ ಬಂಡವಾಳಶಾಹಿಗಳ ಬಲೆಯಲ್ಲಿ ಸಿಲುಕಿಕೊಂಡರು.

ತಮ್ಮ ಬದುಕಿನ ವ್ಯವಸ್ಥೆಯನ್ನು ದಕ್ಕಿಸಿಕೊಳ್ಳಲು ನಗರ ವ್ಯವಸ್ಥೆಯೊಂದಿಗೆ ಸೇರಿದರು. ಇದು ತಮ್ಮ ಕರುಳುಬಳ್ಳಿ ಸಂಬಂಧವನ್ನು ಕಡಿದು ಹಾಕಿಕೊಂಡು ಬದುಕುವ ಸ್ಥಿತಿಯನ್ನು ತಂದೊಡ್ಡಿತು. (ಸಾಹಿತ್ಯಕ್ಕೆ ಪೂರಕ ಚರ್ಚೆಯನ್ನು ಅಧ್ಯಾಯ ೩ ರಲ್ಲಿ ಕೊಡಲಾಗುವುದು.)

## ದಲಿತ ಸಾಹಿತ್ಯದ ಪ್ರೇರಣೆ ಮತ್ತು ಪ್ರಭಾವ

ದಲಿತ ಸಾಹಿತ್ಯಕ್ಕೆ ಪೂರಕವಾದ ಪ್ರೇರಣೆ ಮತ್ತು ಪ್ರಭಾವವನ್ನು ಐದು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳನ್ನು ಈ ರೀತಿಯಲ್ಲಿ ವಿಭಾಗೀಕ್ರಮ ಮಾಡಿಕೊಳ್ಳಲಾಗಿದೆ.

೧. ವ್ಯಕ್ತಿಗಳು : ಅಂಬೇಡ್ಕರ್, ರಾಮ ಮನೋಹರ ಲೋಹಿಯಾ, ಜೋತಿಬಾಫುಲೆ, ಪೆರಿಯಾರ್, ನಾರಾಯಣಗುರು, ಕುದ್ಮಲ್ ರಂಗರಾಯರು, ಗಾಂಧೀಜಿ, ಮಾರ್ಕ್ಸ್, ಮಾವೋ, ಮಂಡೇಲಾ ಮುಂತಾದವರು.

೨. ಪ್ರಭಾವೀವಾದಗಳು : ಮಾರ್ಕ್ಸ್‌ವಾದ, ಲೋಹಿಯಾವಾದ, ಅಂಬೇಡ್ಕರ್‌ವಾದ ಮುಂತಾದವು.

೩. ಅನ್ಯ ಸಾಹಿತ್ಯಗಳ ಪ್ರಭಾವ ಮತ್ತು ಪ್ರೇರಣೆ:

* ಮಹಾರಾಷ್ಟ್ರದಲ್ಲಿ ಜನಪ್ರಿಯವಾಗಿರುವ ದಲಿತ ಸಾಹಿತ್ಯ ಚಳುವಳಿಯ ಪ್ರಭಾವ.
* ಆಂಧ್ರದಲ್ಲಿನ ದಿಗಂಬರ ಕಾವ್ಯ: ಕನ್ನಡ ಸಾಹಿತ್ಯಕ್ಕೆ ಪರಿಚಯವಾದದ್ದು.
* ಹಿಂದಿ ಜನವಾದೀ ಸಾಹಿತ್ಯ: ಕರ್ನಾಟಕ ಯುವಕರನ್ನು ಪ್ರೇರೇಪಿಸಿತು.

೪. ನವ್ಯ ಸಾಹಿತ್ಯದ ಮಿತಿಗಳು:

೫. ನವವಸಾಹತೀಕರಣದ ವಿರುದ್ಧ ದೇಶೀ ಚಿಂತನೆಯ ಪರಿಣಾಮ.

ದಲಿತ ಸಾಹಿತ್ಯವು ಪ್ರೇರಣೆ ಪ್ರಭಾವವನ್ನು ಒಳಗೊಂಡು, ತನ್ನ ಹುಟ್ಟಿನ ಸಮಕಾಲೀನ ಅನಿವಾರ್ಯವನ್ನು ಒಳಗೊಂಡಿತು. ದಲಿತರ ಜಾಗೃತಿ ಮನಸ್ಸು; ತಮ್ಮ ಅನುಭವದ ಅಭಿವ್ಯಕ್ತತೆ; ಅದಕ್ಕೆ ಕಾರಣಗಳನ್ನು ಒಳಗೊಂಡು ತಮ್ಮ ಸಂಸ್ಕೃತಿಯ ಮತ್ತು ಬದುಕಿನ ಸಾಮಾಜಿಕ ವಾಸ್ತವವನ್ನು ದಲಿತ ಸಾಹಿತ್ಯದ ಮೂಲಕ ಕೆನೆಯಾಯಿತು. ಹಲವು ಸಮುದಾಯಗಳ ಸಂಸ್ಕೃತಿಗಳನ್ನು ಹೆಚ್ಚು ಬಿಂಬಿಸುವ ಹೊತ್ತಿನಲ್ಲಿ ಈ ನೆಲದಲ್ಲಿ ಬದುಕುತ್ತಿರುವ ದಲಿತ ಸಮುದಾಯಗಳ ಕಟುವಾಸ್ತವವನ್ನು ಚಿತ್ರಿಸಲು ದಲಿತ ವಿದ್ಯಾವಂತರಿಗೆ ಅನುವಾಯಿತು. ಇದಕ್ಕೆ ಪೂರಕವಾಗಿ ಪ್ರಭಾವೀ ವ್ಯಕ್ತಿಗಳು, ಸಿದ್ಧಾಂತಗಳು, ನೆರೆಹೊರೆಯ ರಾಜ್ಯಗಳ ಸಾಹಿತ್ಯ, ನವ್ಯಸಾಹಿತ್ಯದ ಮಿತಿಗಳು, ಬಂಡಾಯ ಸಾಹಿತ್ಯ ಮತ್ತು ಸಮಾನ ಆಲೋಚನೆಗಳು ಕಾರಣವಾದವು.

ಡಾ.ಬಿ.ಆರ್.ಅಂಬೇಡ್ಕರ್ ಅವರ ಬದುಕು, ಅವರು ಎದುರಿಸಿದ ಸಮಸ್ಯೆಗಳು ಅವರ ಹಿನ್ನೆಲೆಯಲ್ಲಿ ಕಂಡು ಬರುತ್ತವೆ. ಅದರ ಫಲದ ಸ್ವಾತಂತ್ರ್ಯಾನಂತರದ ಪ್ರಜಾಪ್ರಭುತ್ವ ವ್ಯವಸ್ಥೆಯಡಿಯಲ್ಲಿ ಮೀಸಲಾತಿಯ ಸೌಲಭ್ಯಗಳು ದಲಿತ ಬದುಕಲ್ಲಿ ಬೆಳಕಾಯಿತು. ಇದು ಶಿಕ್ಷಣ ಪಡೆಯಲು ಅನುಕೂಲವಾಯಿತು. ಪರಿಣಾಮ ದಲಿತ ಸಾಹಿತಿಗಳಿಗೆ

ಅಂಬೇಡ್ಕರ್ ಚಿಂತನೆಗಳು ಪ್ರಭಾವವನ್ನು ಬೀರಿದವು. ಅಂತೆಯೇ ಲೋಹಿಯಾ, ಜೋತಿಬಾಪುಲೆ, ಪೆರಿಯಾರ್, ಕದ್ಮಲ್ ರಂಗರಾಯರು ಸಮಾಜದ ಬಗೆಗಿನ ಆಗುಹೋಗುಗಳ ಬಗ್ಗೆ ಹೋರಾಡಿದರು. ಇವರ ದಲಿತರ ಬಗೆಗಿನ ಕಾಳಜಿಗಳು ದಲಿತ ಸಾಹಿತಿಗಳಲ್ಲಿ ಪ್ರೇರಣೆ ಮತ್ತು ಶಕ್ತಿಯನ್ನು ತಂದುಕೊಟ್ಟವು. ಮಾರ್ಕ್ಸ್ ಮತ್ತು ಮಾವೋ ಅವರು ತಮ್ಮ ರಾಷ್ಟ್ರದ ಶೋಷಿತರ/ಕಾರ್ಮಿಕರ/ಬಡವರ ಬಗೆಗಿನ ಕಾಳಜಿ ಮತ್ತು ಚಿಂತನೆಗಳು ದಲಿತ ಸಾಹಿತ್ಯಕ್ಕೆ ಪ್ರೇರಣೆಯನ್ನು ನೀಡಿದವು.

ಸಮಾಜದಲ್ಲಿ ನಡೆಯುತ್ತಿದ್ದ ದಲಿತರ ಮೇಲಿನ ದೌರ್ಜನ್ಯ ಮತ್ತು ಘೋರ ಘಟನೆಗಳು, ತಾವು ಶ್ರೇಣೀಕೃತ ವ್ಯವಸ್ಥೆಯ ಸಮಾಜದಲ್ಲಿ ನೊಂದ ಅನುಭವಗಳು ದಲಿತ ಸಾಹಿತ್ಯದಲ್ಲಿ ದಟ್ಟವಾಗಿದ್ದವು. ಅನುಭವಿಸಿದ ಅಸ್ಪೃಶ್ಯತೆ ಮತ್ತು ಅವಮಾನಗಳನ್ನು ತಮ್ಮ ದಲಿತ ಸಮುದಾಯಗಳು ಎದುರಿಸುತ್ತಿರುವ ಸಾಮಾಜಿಕ, ಆರ್ಥಿಕ, ರಾಜಕೀಯ ಶೈಕ್ಷಣಿಕ ಸಮಸ್ಯೆಗಳಿಗೆ ಸೃಜನ ರೂಪವನ್ನು ಕೊಡಲು ದಲಿತ ಸಾಹಿತ್ಯವು ಪ್ರಯತ್ನಿಸಿತು.

ಕನ್ನಡದ ದಲಿತ ಬರಹಗಾರರು ಅಂಬೇಡ್ಕರ್‌ವಾದದಿಂದಲೇ ಹೆಚ್ಚು ಸ್ಫೂರ್ತಿಯನ್ನು ಪಡೆದಂತವರೇ ಆಗಿದ್ದಾರೆ. ಅಂಬೇಡ್ಕರ್ ದಲಿತರ ಸ್ವಾಭಿಮಾನದ ಸಂಕೇತ. ಈ ಹಿಂದೆ ಅಂಬೇಡ್ಕರ್ ಅವರು ಭಾರತೀಯ ಸಮಾಜವು ಹೊಂದಿದ್ದ ಪಟ್ಟಭದ್ರ ಹಿತಾಸಕ್ತಿಯನ್ನು ಪ್ರಶ್ನಿಸಿದರು. ಹಿಂದೂ ಧರ್ಮದಲ್ಲಿನ ಶ್ರೇಣೀಕೃತ ವ್ಯವಸ್ಥೆಯನ್ನು ನೇರವಾಗಿ ತಿರಸ್ಕರಿಸಿ, ಅದರ ವಿರುದ್ಧ ದನಿ ಎತ್ತಿದ್ದರು. ''ಹಿಂದೂ ಧರ್ಮದ ತಾತ್ವಿಕ ತಳಹದಿಯನ್ನೇ ಬದಲಿಸಬೇಕು; ಯಾಕಂದರೆ ಜಾತಿ ಹಿಂದೂ ಧರ್ಮಶಾಸ್ತ್ರಗಳಿಂದ ಪೋಷಿತವಾಗಿದೆ. ಅವುಗಳ ಆಧಾರಗಳಾದ ಶಾಸ್ತ್ರಸ್ಮೃತಿಗಳನ್ನು ತಿರಸ್ಕರಿಸಬೇಕು. ಅಂತರ್ ಜಾತಿ ವಿವಾಹಗಳಾಗಬೇಕು. ಪೌರೋಹಿತ್ಯ ವಂಶಪಾರಂಪರ್ಯವಾಗಿರುವುದನ್ನು ತಪ್ಪಿಸಿ ಅರ್ಹತೆಯಿರುವ ಯಾರಾದರೂ ಪುರೋಹಿತರಾಗಲು ಅವಕಾಶವಿರಬೇಕು. ಹಿಂದೂ ಧರ್ಮ ಒಂದೇ ಇರಬೇಕು. ಆಗ ಇದರ ಮೂಲಕ ಜಾತಿ ವಿನಾಶ ಸಾಧ್ಯ''[೩೧] ಎಂಬ ಅಭಿಪ್ರಾಯ ಹೊಂದಿದ್ದರು ಈ ಹಂತದಲ್ಲಿ ಅಂಬೇಡ್ಕರರು ಹಿಂದೂ ಧರ್ಮದ ಚೌಕಟ್ಟಿನೊಳಗೇ ಇದ್ದವರು. ಇವರು ಜಾತಿ ವಿನಾಶಕ್ಕೆ ಆಸ್ಪದವನ್ನು ಕೊಟ್ಟಂತವರು.

ಜಾತಿ ವಿನಾಶದ ಬಗ್ಗೆ ಆಳವಾಗಿ ಯೋಚಿಸಿದವರಲ್ಲಿ ಅಂಬೇಡ್ಕರ್ ಮೊದಲ ಭಾರತೀಯರು ಮತ್ತು ಬಹಳ ಮುಖ್ಯರು. ಇವು ದಲಿತ ಬರಹಗಾರರನ್ನು ಬಹಳಷ್ಟು ಪ್ರೇರೇಪಿಸಿವೆ. ಅಂಬೇಡ್ಕರ್‌ರವರು ಬ್ರಾಹ್ಮಣೀಕರಣವನ್ನು ಗುರ್ತಿಸಿದ್ದನ್ನು ಡಾ.ಪುರುಷೋತ್ತಮ ಬಿಳಿಮಲೆಯವರು ಈ ಕೆಳಕಂಡಂತೆ ಗುರ್ತಿಸಿದ್ದಾರೆ.

''ಹಿಂದೂ ಧರ್ಮದ ಸಾಮಾಜಿಕ ವಿಷಮತೆಗೆ ಬ್ರಾಹ್ಮಣೀಕರಣ ಕಾರಣವೆಂದು ವಿಶ್ಲೇಷಿದ ಅವರು ಬ್ರಾಹ್ಮಣ್ಯವನ್ನು ಈ ಕೆಳಕಂಡಂತೆ ಗುರ್ತಿಸಿದರು.

೧. ಅಸಮಾನತೆಯನ್ನು ನಿರಂತರವಾಗಿ ಪೋಷಿಸಿಕೊಂಡು ಬರುವುದು

೨. ಅಸ್ಪೃಶ್ಯರನ್ನು ಮತ್ತು ಶೂದ್ರರನ್ನು ಸಂಪೂರ್ಣವಾಗಿ ನಿರಾಯುಧರನ್ನಾಗಿಸುವುದು

೩. ಅಧಿಕಾರ ಸ್ಥಾನಗಳನ್ನು ಶೂದ್ರರು ಮತ್ತು ಅಸ್ಪೃಶ್ಯರು ಹೊಂದದಂತೆ ಷಡ್ಯಂತ್ರಗಳನ್ನು ರಚಿಸುವುದು

೪. ಶೂದ್ರರಿಗೆ ಮತ್ತು ಅಸ್ಪೃಶ್ಯರಿಗೆ ಆಸ್ತಿ ನಿರಾಕರಣೆ ಮಾಡುವುದು.

೫. ಶೂದ್ರರು ಮತ್ತು ಅಸ್ಪೃಶ್ಯರಿಗೆ ಶಿಕ್ಷಣ ದೊರೆಯದಂತೆ ನಿಷೇಧ ಹೇರುವುದು.

೬. ಮಹಿಳೆಯರಿಗೆ ಸ್ವಾತಂತ್ರ್ಯ ನಿರಾಕರಿಸುವುದು.

ಅಂಬೇಡ್ಕರ್‌ರ ಪ್ರಕಾರ ಎಲ್ಲಾ ವಿಧಗಳಿಂದಲೂ ಅಸಮಾನತೆಯನ್ನು ಸಾಂಸ್ಥಿಕರಿಸುವುದೇ 'ಬ್ರಾಹ್ಮಣಿಸಂ'ನ ಅಧಿಕೃತ ತತ್ವವಾಗಿದೆ. ಇದನ್ನು ತಲಸ್ಪರ್ಶಿಯಾಗಿ ವಿರೋಧಿಸಿದ ಅವರು ದಲಿತರ ಏಳಿಗೆಗಾಗಿ ಸ್ವ-ಸುಧಾರಣೆ, ಸ್ವ-ಪ್ರಗತಿ, ಸ್ವಾವಲಂಬನೆ, ಸ್ವಾಭಿಮಾನ, ಸ್ವಪ್ರತ್ಯಯ ಇದನ್ನು ಬಲವಾಗಿ ಪ್ರತಿಪಾದಿಸಿದರು''[೩೨]. ಬಿಳಿಮಲೆಯವರು ಗುರ್ತಿಸಿದಂತೆ ಅಂಬೇಡ್ಕರ್‌ವಾದದ ಮುಖ್ಯ ತಿರುಳಾದ ಬ್ರಾಹ್ಮಣಿಸಂ, ಅದರ ದಬ್ಬಾಳಿಕೆ ದಲಿತ ಸಾಹಿತ್ಯದ ಮೇಲೆ ಪ್ರಭಾವ ಬೀರಿತು. ಅಷ್ಟೇ ಅಲ್ಲದೆ ಜೊತೆಗೆ ಬ್ರಾಹ್ಮಣ್ಯವನ್ನು ಮಾಡುವ ಎಲ್ಲಾ ಶೋಷಕ ಜಾತಿಗಳಿಂದ ದಲಿತ ಸಾಹಿತ್ಯವು ಬಿಗಿಯನ್ನು ತನ್ನ ಸಾಹಿತ್ಯ ಪ್ರಕಾರದಲ್ಲಿ ತಂದುಕೊಂಡಿತು. ದಲಿತ ಸಾಹಿತ್ಯಕ್ಕೆ ಪ್ರಬಲವಾಗಿ ಆಳುವ ವರ್ಗಗಳು ಪಟ್ಟಭದ್ರ ಹಿತಾಸಕ್ತಿಗಳು ಪ್ರಮುಖ ಪ್ರಭಾವವನ್ನು ಬೀರಿವೆ.

ಕನ್ನಡ ಸಾಹಿತ್ಯ ಪ್ರಕಾರದ ಪ್ರಗತಿಶೀಲ ಸಾಹಿತ್ಯ ಚಳುವಳಿಗೆ ಮಾರ್ಕ್ಸ್‌ವಾದವು ಪ್ರೇರಣೆ ನೀಡಿತು. ಇದು ನಂತರದ ದಲಿತ-ಬಂಡಾಯ ಸಾಹಿತ್ಯಕ್ಕೂ ಪ್ರೇರಣೆಯನ್ನು ನೀಡಿತು. ಈ ಪ್ರಕಾರದ ಕೆಲವರು ಮಾರ್ಕ್ಸ್‌ವಾದಿಗಳೂ ಆದರು. ಮಾರ್ಕ್ಸ್‌ವಾದವು ''ಸಮಾನತೆಯ ಆದರ್ಶಕ್ಕಾಗಿ ಅಲ್ಲ. 'ಅಸಮಾನತೆ'ಯಿಂದ ಬಿಡುಗಡೆ ಹೊಂದುವುದೇ ಸಮಾನತೆ. ಬಿಡುಗಡೆ ಆದರ್ಶಕ್ಕಾಗಿ ಅಲ್ಲ-ಆತ್ಮ ರಕ್ಷಣೆ! ಆತ್ಮಗೌರವ! ಕರ್ತವ್ಯ''[೩೩]. ಇದು ಎಲ್ಲಾ ಜಾತೀಯ / ಸಮುದಾಯಗಳ ಬಡವರನ್ನು ಸಮಾನವೆಂದು ಪರಿಗಣಿಸಿ ವರ್ಗಸಂಘರ್ಷಕ್ಕೆ ಪ್ರಚೋದನೆಯನ್ನು ನೀಡುವಂತಹದ್ದು. ಇಲ್ಲಿ ಬಡವರು ಒಂದೇ ಎಂಬುದು ಮುಖ್ಯ. ''ಸಾಹಿತ್ಯಕೃತಿ ತಿಳಿದೋ ತಿಳಿಯದೆಯೋ ಬರಹಗಾರನ ವರ್ಗದ ಮಾನಸಿಕ ಧೋರಣೆಯನ್ನು ಪ್ರತಿಬಿಂಬಿಸುತ್ತದೆ ಅಥವಾ ಸಾಮಾನ್ಯವಾಗಿ ಆಗುವಂತೆ ಬರಹಗಾರನ ಮೇಲಾಗುವ ವಿವಿಧ ವರ್ಗಗಳಿಂದ ಪ್ರಭಾವಿತವಾದ ಬೆರೆತ ಅಂಶಗಳನ್ನು ಪ್ರತಿಬಿಂಬಿಸುತ್ತದೆ. ಎಂದು ಮಾರ್ಕ್ಸ್‌ವಾದಿ ವಿಮರ್ಶಕರು ಭಾವಿಸುತ್ತಾರೆ. ಇಂಥ ಸೃಜನಶೀಲ ಬರಹಗಾರರು ಕೃತಿಯ ವಸ್ತುವಿನ ಬಗ್ಗೆ, ಅದರಲ್ಲಿರುವ ಸಮಾಜದ ರೂಪದ ಬಗ್ಗೆ ಹೆಚ್ಚಿನ ಗಮನ ಹರಿಸುತ್ತಾರೆ. ಕೃತಿಯ ರೂಪಕ್ಕೆ ಇವರಲ್ಲಿ ಅಷ್ಟಾಗಿ ಗಮನವಿಲ್ಲ. ಪ್ರತಿಶ್ರೇಷ್ಠ ಕೃತಿಯಲ್ಲಿಯೂ ವಸ್ತುವೇ ರೂಪವನ್ನು ನಿರ್ಣಯಿಸುತ್ತದೆ. ಎಂದು ನಂಬಿಯೇ ಇಲ್ಲಿ ಸಾಹಿತ್ಯ ಸೃಷ್ಟಿಯಾಗುತ್ತದೆ. ಇದರ ಜೊತೆಗೆ ಸಾಹಿತ್ಯದ ಮತ್ತು ಸಾಹಿತಿಯ ಹುಟ್ಟು ಸಮಾಜದ ಒಟ್ಟು ಉತ್ಪಾದನಾ ವ್ಯವಸ್ಥೆಯ ಒಂದು ಭಾಗವೇ ಆಗಿರುತ್ತದೆ ಎಂಬ ನಂಬಿಕೆ ಪೂರ್ವಗ್ರಹಿತವಾಗಿ ಕೆಲಸ ಮಾಡುವುದರಿಂದ ಸಾಹಿತಿ ಮತ್ತು ಅವನ ಸಾಹಿತ್ಯ ಸಮಾಜದೊಂದಿಗೆ ಸ್ಪಂದಿಸಿಯೇ ತೀರಬೇಕೆಂದು ಇವರು ಹಠ ಹಿಡಿಯುತ್ತಾರೆ''[೩೪]. ಆರ್ಥಿಕ, ಸಾಮಾಜಿಕ, ಸಮಾನತೆಯ ಆಧಾರದ ಮೇಲೆ ಇರುವ ಮಾರ್ಕ್ಸ್‌ವಾದವನ್ನು ಬಿಳಿಮಲೆಯವರು ಗುರ್ತಿಸಿದಂತೆ ದಲಿತ ಬಂಡಾಯ ಸಾಹಿತಿಗಳು ಮಾರ್ಕ್ಸ್‌ವಾದಕ್ಕೆ ಪ್ರೇರಿತವಾಗಿರುವುದು ಗಮನಾರ್ಹವಾಗಿದೆ.

ಮಾರ್ಕ್ಸ್‌ವಾದದಂತೆ ಲೋಹಿಯಾವಾದವು ದಲಿತ ಸಾಹಿತ್ಯಗಳಿಗೆ ಪ್ರೇರಣೆಯನ್ನು ನೀಡಿದೆ. ಲೋಹಿಯಾವಾದವು ಪ್ರಮುಖವಾಗಿ ಸಮಾಜವಾದದ ಕಲ್ಪನೆಯನ್ನು ಹೊಂದಿದೆ. ಅಧಿಕಾರದ ಹಂಚಿಕೆ ಮತ್ತು ಬೇರೂರಿದ ಅಧಿಕಾರದ ನಾಶವು ಇವರ ವಿಚಾರಧಾರೆಯ ಅಂಶಗಳಲ್ಲೊಂದು. ಇವರ ಸೈದ್ಧಾಂತಿಕ ಮತ್ತು ವೈಚಾರಿಕ ಚಿಂತನೆಗಳು ಬ್ರಾಹ್ಮಣೇತರ

ಬರಹಗಾರರಿಗೆ ಪ್ರಮುಖ ಪ್ರೇರಣೆಯಾಗಿವೆ. ಲೋಹಿಯ ಅವರು ಇಂಗ್ಲೀಷನ ಬಗ್ಗೆ, ಭಾರತದ ಜಾತಿ ವ್ಯವಸ್ಥೆಯ ಬಗ್ಗೆ, ಧರ್ಮಗಳ ಬಗ್ಗೆ ಅಂತಾರಾಷ್ಟ್ರೀಯ ಕಪ್ಪು-ಬಿಳುಪು ಜನಸಮುದಾಯಗಳ ಬಗ್ಗೆ, ಭಾರತೀಯ ಗ್ರಾಮಗಳ ವಾಸ್ತವ ಬದುಕಿನ ವೈರುಧ್ಯಗಳ ಬಗ್ಗೆ ಹೀಗೆ ಬರೆದ ಅವರ ಬರಹಗಳು ಕನ್ನಡದ ಬರಹಗಾರರನ್ನು ಪ್ರಭಾವಿಸಿದವು. ಲೋಹಿಯಾವಾದವು "ಬಡರೈತರ, ಭೂರಹಿತರ, ಹಾಗೂ ಕೃಷಿ ಕಾರ್ಮಿಕರ ಆಕಾಂಕ್ಷೆಗಳ ಸಂಕೇತವಾಗಿ ಪರಿಣಮಿಸಿದವು. ನಮ್ಮ ಸಾಮಾಜಿಕ ಸಂಬಂಧಗಳ ತಳಹದಿಯಿಂದಲೇ ಮರುವ್ಯವಸ್ಥೆಗೊಳಿಸಬೇಕೆಂಬುದನ್ನು ಸೂಚಿಸಿದುದು ಮಾತ್ರವಲ್ಲದೆ ಅಂತಹ ಕ್ರಾಂತಿಕಾರಕ ಮಾರ್ಪಾಟಿಗೆ ಅಗತ್ಯವಾದ ಸೈದ್ಧಾಂತಿಕ ನೆಲೆಗಟ್ಟನ್ನು ಒದಗಿಸಿದ ಮಹಾನ್ ನಾಯಕರಲ್ಲಿ ಲೋಹಿಯಾ ಒಬ್ಬರಾಗಿದ್ದರು"[೩೯]. ಲೋಹಿಯಾವಾದವು ಸಾಮಾಜಿಕ ಸಮಾನತೆಯನ್ನು ಹೊಂದಿದೆ. "ಜಾತಿ ಪದ್ಧತಿ ಹಾಗೂ ಹುಟ್ಟಿನ ಆಧಾರದ ಮೇಲೆ ರೂಪುಗೊಂಡ ಮೇಲು ಕೀಳಿನ ಶ್ರೇಣೀಕರಣ ವ್ಯವಸ್ಥೆಗಳೇ ಈ ಭವ್ಯ ರಾಷ್ಟ್ರದ ವಿನಾಶ ಹಾಗೂ ಪರಕೀಯರ ಆಕ್ರಮಣಗಳಿಗೆ ತುತ್ತಾಗಿ ಸಂಭವಿಸಿದ ದಾಸ್ಯ ಹಾಗೂ ಪರಕೀಯರ ಆಳ್ವಿಕೆಗೆ ಏಕೈಕ ಕಾರಣವಾಗಿದೆ ಎಂಬುದು ಅವರ ನಿಲುವಾಗಿತ್ತು. ಇವರು ಜಾತಿವಿನಾಶ ಚಳುವಳಿಯನ್ನು ಹುಟ್ಟುಹಾಕಿದರು. ಪರಂಪರಾಗತವಾಗಿ ಅಸಮಾನತೆಯನ್ನೇ ನಿರಂತರವಾಗಿ ಉಂಡು, ಉಟ್ಟು, ಹಾಸಿ, ಹೊದ್ದುಕೊಂಡು ಬರುತ್ತಿರುವ ಸಮಾಜವೊಂದರಲ್ಲಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಕೊಟ್ಟಮಾತ್ರಕ್ಕೆ ಸಮಾನತೆ ಸಾಕ್ಷಾತ್ಕಾರ ಆಗುವುದಿಲ್ಲ. ಮುಂದಿನ ದಿನಗಳಲ್ಲಿ ದೀರ್ಘಕಾಲದವರಿಗೂ ಹಿಂದುಳಿದ ವರ್ಗಗಳಿಗೆ, ಹರಿಜನರಿಗೆ, ಆದಿವಾಸಿಗಳಿಗೆ ಮತ್ತು ಅಲ್ಪಸಂಖ್ಯಾತರಲ್ಲಿಯೇ ಮೂಲೆಗುಂಪಾದವರಿಗೆ ಮುಂದುವರಿದವರ ಮಟ್ಟಕ್ಕೆ ಏರಲು ಅವಕಾಶವಾಗುವಂತೆ ವಿಶೇಷವಾದ ಸವಲತ್ತುಗಳನ್ನು ಕಲ್ಪಿಸಬೇಕು ಎಂಬುದು ಲೋಹಿಯಾ ಅವರ ಹೆಬ್ಬಯಕೆಯಾಗಿತ್ತು"[೪೦] ಎಂದು ಮಧುಲಿಮಯೆ ಅವರು ಲೋಹಿಯಾ: ವ್ಯಕ್ತಿತ್ವ ಮತ್ತು ವಿಚಾರಧಾರೆ, ಲೇಖನದಲ್ಲಿ ಅವರ ಸೈದ್ಧಾಂತಿಕ ಸ್ವರೂಪವನ್ನು ಹೇಳಿದ್ದಾರೆ.

ಊಳಿಗಮಾನ್ಯ ವ್ಯವಸ್ಥೆಯನ್ನು ಹಾಗೂ ಆ ವ್ಯವಸ್ಥೆಯ ಶಿಕ್ಷಣದ, ಆಡಳಿತ ಭಾಷೆಯನ್ನು ಲೋಹಿಯಾ ಅವರು ವಿರೋಧಿಸಿದರು. ಇವರು ವ್ಯವಸ್ಥೆಯ ವಿಲಾಸೀ ಬದುಕನ್ನು ವಿರೋಧಿಸಿ ಜನಸಾಮಾನ್ಯರ ಕಡುಬಡತನದ ಬಗೆಗಿನ ದರಿದ್ರ, ಅದಕ್ಕೆ ಕಾರಣವಾದ ಕಷ್ಟ, ಕಾರ್ಪಣ್ಯಗಳ ಬಗ್ಗೆ ಒತ್ತುಕೊಟ್ಟರು. ಲೋಹಿಯ ಅವರ ಸಪ್ತಕ್ರಾಂತಿಯ ಅಂಶಗಳು ಕನ್ನಡದ ದಲಿತ-ಬಂಡಾಯ ಬರಹಗಾರರನ್ನು ಆಕರ್ಷಿಸಿದವು. ಸಪ್ತಕ್ರಾಂತಿಯ ಅಂಶಗಳು ದಲಿತ-ಬಂಡಾಯ ಬರಹಗಾರರ ದೋರಣೆಗೆ ಪೂರಕವಾದವು.

"(i) ಗಂಡು ಹೆಣ್ಣುಗಳ ನಡುವಿನ ಸಮಾನತೆಗಾಗಿ

(ii) ಮೈಬಣ್ಣವನ್ನು ಆಧರಿಸಿದ ರಾಜಕೀಯ, ಆರ್ಥಿಕ ಹಾಗೂ ಆಧ್ಯಾತ್ಮಿಕ ಅಸಮಾನತೆಯ ವಿರುದ್ಧ

(iii) ಅನೂಚಾನವಾಗಿ ನಡೆದು ಬಂದ ಸಂಪ್ರದಾಯ ಸೃಷ್ಟಿಸಿದ ಹಿಂದುಳಿದ ಮುಂದುವರೆದ ಜಾತಿ ಸಮುದಾಯಗಳ ನಡುವಣ ಅಸಮಾನತೆಯ ವಿರುದ್ಧ; ಹಿಂದುಳಿದವರಿಗೆ ವಿಶೇಷ ಅವಕಾಶಗಳನ್ನು ಕಲ್ಪಿಸುವುದರ ಪರ

(iv) ವಿದೇಶಿ ಗುಲಾಮರಾಗಿರುವುದರ ವಿರುದ್ಧ; ಸ್ವಾತಂತ್ರ ಮತ್ತು ಜಾಗತಿಕ ಪ್ರಜಾಪ್ರಭುತ್ವವಾದಿ ಆಳ್ವಿಕೆಯ ಪರ

(v) ಆರ್ಥಿಕ ಸಮಾನತೆಯ ಮತ್ತು ಯೋಜಿತ ಉತ್ಪಾದನೆಯ ಪರ; ಖಾಸಗಿ ಬಂಡವಾಳದ ಅಸ್ತಿತ್ವ ಹಾಗೂ ಅದನ್ನು ಕುರಿತ ವ್ಯಾಮೋಹದ ವಿರುದ್ಧ.

(vi) ಖಾಸಗಿ ಬದುಕಿನ ಮೇಲೆ ನಡೆಯುವ ಅನ್ಯಾಯವಾದ ಆಕ್ರಮಣಗಳ ವಿರುದ್ಧ; ಪ್ರಜಾಪ್ರಭುತ್ವವಾದಿ ಮಾರ್ಗಗಳ ಪರ

(vii) ಆಯುಧಗಳ ವಿರುದ್ಧ; ಸತ್ಯಾಗ್ರಹದ ಪರ''[೬]. ಇವುಗಳ ಭಾರತೀಯ ಜಾತಿ ಪದ್ಧತಿಯ ವಿರುದ್ಧ; ಮತ್ತು ಅದನ್ನು ಉಳಿಸಿಕೊಂಡು ಬರುತ್ತಿರುವ ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧವಾಗಿತ್ತು. ಈ ಅಂಶಗಳು ಮತ್ತು ಲೋಹಿಯ ಅವರ ಸೈದ್ಧಾಂತಿಕ ವಾದಗಳು ದಲಿತ ಬಂಡಾಯ ಬರಹಗಾರರನ್ನು ಪ್ರೇರೇಪಿಸಿದವು. ದಲಿತ ಬರಹಗಾರರ ಧೋರಣೆ ಮತ್ತು ಸಮಾಜದ ಬಗೆಗಿನ ಕಳಕಳಿ ಲೋಹಿಯಾ ಅವರ ವಾದದ ಹಿನ್ನೆಲೆಯಲ್ಲಿತ್ತು.

ದಲಿತ ಸಾಹಿತ್ಯಕ್ಕೆ ನೆರೆ ರಾಜ್ಯಗಳ ಸಾಹಿತ್ಯ ಪ್ರಭಾವವು ಸಾಕಷ್ಟು ಬೀರಿದೆ. ಅವುಗಳಲ್ಲಿ ಪ್ರಮುಖವಾಗಿ ತೆಲುಗಿನ ದಿಗಂಬರ ಕಾವ್ಯ ಮಹಾರಾಷ್ಟ್ರದ ದಲಿತ ಸಾಹಿತ್ಯಗಳು ಪ್ರಬಲವಾಗಿ ಪ್ರೇರಣೆಯನ್ನು ನೀಡಿದವು.

೧೯೬೫ರ ನಂತರದಲ್ಲಿ ಆಂಧ್ರಪ್ರದೇಶದಲ್ಲಿ ಬಹುವ್ಯಾಪಕವಾಗಿ ದಿಗಂಬರ ಕಾವ್ಯವು ಬೆಳೆದು ಬಂತು. ಇದು ತನ್ನ ಪ್ರಖರತೆಯನ್ನು ಗರ್ಭೀಕರಿಸಿಕೊಂಡು ಸಾಹಿತ್ಯ ಸೃಷ್ಟಿಯ ಕಾಯಕ ನಡೆಯಿತು. ಅಲ್ಲದೆಯೂ ಇದರ ಲೇಖಕರು ಭಿನ್ನ ನಿಲುವನ್ನು ಹೊಂದಿದಂತವರಾಗಿದ್ದರು. ಚರಬಂಡರಾಜು, ಮಹಾಸ್ವಪ್ನ, ಜ್ವಾಲಾಮುಖಿ, ನಿಖಿಲೇಶ್ವರ್, ನಗ್ನಮುನಿ, ಭೈರವಯ್ಯ ಇವರ ಕೃತಿಗಳು ಜನ ಸಾಮಾನ್ಯರ ಪರವಾಗಿದ್ದವಾಗಿವು. ಇವರು ರಚಿಸಿದ ಜನಸಾಮಾನ್ಯರ ಬದುಕಿನ ಸಾಹಿತ್ಯವನ್ನು ಜನಸಾಮಾನ್ಯರ ನಡುವೆಯೇ ಅತ್ಯಂತ ಕಡು ಬಡವನಿಂದ, ಭಿಕ್ಷುಕರಿಂದ, ಹೋಟೆಲ್ ಕ್ಲೀನರ್‌ನಿಂದ ಮಧ್ಯರಾತ್ರಿಯ ಬೀದಿಗಳಲ್ಲಿ ಬಿಡುಗಡೆ ಮಾಡಿಸಿದ್ದು ಕರ್ನಾಟಕ ದಲಿತ ಬಂಡಾಯ ಬರಹಗಾರರನ್ನು ಗಾಢವಾಗಿ ಪರಿಣಾಮ ಬೀರಿದವು.

ಮಹಾರಾಷ್ಟ್ರದ ೧೯೭೦ರ ನಂತರದಲ್ಲಿ ಪ್ರಭಾವಿಯಾಗಿ ಕಂಡು ಬಂದ ಮರಾಠಿ ದಲಿತ ಸಾಹಿತ್ಯ ಚಳುವಳಿಯು ದಲಿತ ಬರಹಗಾರರ ಮೇಲೆ ಪ್ರಭಾವವನ್ನು ಬೀರಿತು. ಮಹಾರಾಷ್ಟ್ರ ದಲಿತ ಸಾಹಿತ್ಯ ಚಳುವಳಿಯು ಅದೇ ಮಣ್ಣಿನ ಅಂಬೇಡ್ಕರ್‌ರವರ ಬದುಕು, ಹೋರಾಟ ಮತ್ತು ಜನಪ್ರಿಯತೆಯ ಸಂಬಂಧವನ್ನು ಹೊಂದಿತ್ತು. ಬಾಬುರಾವ್ ಬಾಗುಲ್, ಮನೋಹರ ವಾಂಖೇಡೆ, ದಯಾಪವಾರ್, ಕೇಶವ ಮೇಶ್ರಾಮ್, ಅರುಣ್ ಕಾಂಬ್ಳೆ, ನಾಮದೇವ ಢಸಾಳ, ವಾಮನ್ ನಿಂಬಾಳ್ಕರ್ ಮುಂತಾದ ಬರಹಗಾರರಿಂದ ದಲಿತ ಬರಹಗಾರರು ಪ್ರೇರಣೆಯನ್ನು ಪಡೆದರು. ಮಹಾರಾಷ್ಟ್ರದ ಕೆಲವು ದಲಿತ ಸಾಹಿತಿಗಳು ಕರ್ನಾಟಕ ದಲಿತ ಸಂಘರ್ಷ ಸಮಿತಿಯ ವೇದಿಕೆಗಳಲ್ಲಿ ಭಾಗವಹಿಸುತ್ತಿದ್ದರು.

ಇವುಗಳ ಜೊತೆಗೆ ಆಫ್ರಿಕಾದ ಕಪ್ಪು ಸಾಹಿತ್ಯ, ಹಿಂದಿ ಜನವಾದಿ ಸಾಹಿತ್ಯ, ಕೇರಳದ ಮಾರ್ಕ್ಸ್‌ವಾದಿ ಬರಹಗಾರರ ಸಾಹಿತ್ಯ, ಮೂರನೇ ಜಗತ್ತಿನಲ್ಲಿ ನಡೆಯುವ ಗೆರಿಲ್ಲಾ ಹೋರಾಟದ ಅಂಗವಾಗಿ ಹುಟ್ಟಿಬರುತ್ತಿರುವ ಗೆರಿಲ್ಲಾ ಸಾಹಿತ್ಯ ಮುಂತಾದವುಗಳು ಪ್ರೇರಣೆಯನ್ನು ನೀಡಿದವು. ಹಾಗೆಯೇ ಆಫ್ರಿಕಾದಲ್ಲಿ ನೇಣುಗಂಬವನ್ನು ಏರಿದ ಬೆಂಜಮಿನ್ ಮೊಲಾಯಿಸ್, ಕಪ್ಪು ಜನರಿಗಾಗಿ ಹೋರಾಡಿ ೨೭ ವರ್ಷ ಜೈಲು ಶಿಕ್ಷೆಯನ್ನು ಅನುಭವಿಸಿದ ನೆಲ್ಸನ್ ಮಂಡೆಲಾ ಮುಂತಾದವರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ದಲಿತ ಸಾಹಿತ್ಯಕ್ಕೆ ಪ್ರೇರಣೆಯನ್ನು ನೀಡಿದವರು.

ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳ ನವ್ಯ ಸಾಹಿತ್ಯದ ಮಿತಿಗಳು ದಲಿತ ಬಂಡಾಯ ಸಾಹಿತ್ಯದ ಹೊತ್ತಿಗೆ

ಕಂಡುಬಂದವು. ನವ್ಯ ಸಾಹಿತ್ಯದ ಬಗ್ಗೆ ಬಿಳಿಮಲೆಯವರು ಬರೆಯುತ್ತಾ ಡಿ.ಆರ್ ನಾಗರಾಜರ ಮಾತುಗಳನ್ನು ಉದ್ಧರಿಸಿದ್ದಾರೆ: ''ಇವರು ಕನ್ನಡಕ್ಕೆ ಹೊಸಬಗೆಯ ಸಂವೇದನೆ-ಆಕೃತಿ-ಅನುಭವಗಳನ್ನು ನೀಡಿದರು. ಅನುಭವ ಜನ್ಯವಾದ ವಿಚಾರಗಳಿಗೆ ನವ್ಯದವರು ಎಲ್ಲಿಲ್ಲದ ಮಹತ್ವ ನೀಡಿದರು. ಈ ಅರ್ಥದಲ್ಲಿ ನವ್ಯ ಸಾಹಿತ್ಯವು ಸಮಾಜಕ್ಕೆ ಅತಿಯಾದ ಮಾನ್ಯತೆಯನ್ನು ನೀಡಿದೆ. ಇದನ್ನು ಡಿ.ಆರ್.ನಾಗರಾಜ ಅವರು ಹೀಗೆ ಗುರ್ತಿಸಿದ್ದಾರೆ: 'ಸಧ್ಯದ ತೀವ್ರತೆಗೇ ಅತ್ಯುನ್ನತ ಸ್ಥಾನ ಕೊಡುವ ಬರವಣಿಗೆಯ ಕ್ರಮ ಇದು. ಇದರ ಪರಿಣಾಮವೆಂದರೆ ನವ್ಯ ಸಾಹಿತ್ಯ ಕೃತಿಗಳು ಸಾಮಾಜಿಕ ವಿಮರ್ಶೆಯ ಪರಿಧಿಯಲ್ಲೇ ಸುತ್ತುವುದು. ನವ್ಯದ ಆಕೃತಿಯ ಸಮಸ್ಯೆ ಎಂದರೆ ಸಾಮಾಜಿಕ ವಾಸ್ತವ ಕಡಿಮೆ ಇರುವುದಲ್ಲ, ಈ ವಾಸ್ತವಕ್ಕೆ ಅತಿಯಾಗಿ ಅಂಟಿಕೊಂಡು ಅದು ಬಿದ್ದಿದೆ. ಕಾವ್ಯ, ಕಥನ, ಸಾಹಿತ್ಯ, ನಾಟಕ ಹೀಗೆ ಎಲ್ಲಾ ಪ್ರಕಾರಗಳಿಗೂ ಅನ್ವಯವಾಗುವಂಥ ಮಾತು ಅಡಿಗರ ಕೃತಿ ಕಲ್ಪನೆ, ಲಂಕೇಶ್, ಅನಂತ ಮೂರ್ತಿಯವರ ಕಥನ ಕಲ್ಪನೆ ಒಂದೇ ರೀತಿಯದು 'ದಿ ವರ್ಲ್ಡ್ ಈಸ್ ಟೂ ಮಚ್ ವಿತ್ ಅಸ್''[೩೮] (ಉದ್ಧರಣೆ: ಡಿ.ಆರ್.ನಾಗರಾಜ (೧೯೮೯) 'ನವ್ಯ ಚಳುವಳಿ: ಕೆಲವು ಚಲ್ಲಾಪಿಲ್ಲಿ ಚಿಂತನೆಗಳು' ಸಂಕ್ರಮಣ:೧೯೭) ದಲಿತ ಬಂಡಾಯ ಸಾಹಿತ್ಯ ಪ್ರಕಾರದವರಿಗೆ ನವ್ಯ ಸಾಹಿತ್ಯದಲ್ಲಿ ಕಂಡುಬರುವ ಏಕಾಂಗಿತನ ಮತ್ತು ವ್ಯಕ್ತಿಕೇಂದ್ರಿತ ನಿರ್ವಚನಗಳು ಅತಿ ಎನಿಸಿದವು. ಇವರು ಅನುಭವವನ್ನು ವ್ಯಕ್ತಿ ಕೇಂದ್ರಿತ ನೆಲೆಯಿಂದ ತರ್ಕಕ್ಕೊಳಪಡಿಸಲಾಯಿತು. ಆಧುನಿಕತೆಯ ಆಕರ್ಷಣೆಗೆ ಬರಹಗಳು ಸೇರಿಕೊಂಡಂತೆ ಎದ್ದವು. ''ತರ್ಕರೂಪಿ ಕಾವ್ಯ ತರ್ಕವೇ ಆತ್ಮವಾಗಿರುವ ನಾಗರಿಕತೆಯ ವಿರುದ್ಧ ನಿಲ್ಲಲಾರದು. ಕನಸುಗಳ, ಪುರಾಣಗಳ, ಸಹಯೋಗಗಳ ಪಾರದರ್ಶಕವಲ್ಲದ ಗ್ರಹಿಕೆಯ ಕ್ರಮಗಳು ಮಾತ್ರ ನಾಗರಿಕತೆಗೆ ಸವಾಲು. ಈ ನಾಗರಿಕತೆ ಯಾವುದನ್ನು ಮೆಚ್ಚುತ್ತದೆ? ಸ್ಪೆಂಡರಿನ ಪದ್ಯಗಳನ್ನೇ, ಬೋದಿಲೇರನ ನರಕದ ರೂಪಗಳನ್ನೇ ? ನರಕದ ರೂಪಗಳೇ ಈಗಿನ ಸಮಾಜದ ಮ್ಯಾನೇಜರುಗಳನ್ನು ಬೆಚ್ಚಿಸುವುದು. ಈ ಸಮಾಜ ತನಗೆ ಸುಲಭವಾಗಿ ಅರ್ಥವಾಗುವ ಎಲ್ಲವನ್ನು ಪಳಗಿಸಿಕೊಂಡು ಬಿಡುತ್ತದೆ. ತನಗೆ ಗೊತ್ತಿರುವ ಪರಿಭಾಷೆಯಲ್ಲಿ ಮಾತಾಡಲು ತನ್ನ ವಿರೋಧಿಗಳನ್ನು ಒತ್ತಾಯಿಸುತ್ತದೆ''[೩೯] (ನಾಗರಾಜ.ಡಿ.ಆರ್.(೧೯೮೯) ನವ್ಯ ಚಳುವಳಿ: ಕೆಲವು ಚಲ್ಲಾಪಿಲ್ಲಿ ಚಿಂತನೆಗಳು' ಸಂಕ್ರಮಣ ೧೯೭). ಸಮಕಾಲೀನ ನಾಗರಿಕತೆಯ ವಿರುದ್ಧ ಹೊಸ ಬಗೆಯ ದನಿಯನ್ನು ಯಾರು ಎತ್ತಿದರೋ ಅವರು ಪ್ರಗತಿಪರರಾದರು ಎಂಬ ನಾಗರಾಜರ ತರ್ಕಬದ್ಧವಾದ ಚರ್ಚೆಯನ್ನು ಬಿಳಿಮಲೆಯವರು ಉದ್ಧರಣೆಯ ಮೂಲಕ ನೀಡಿದ್ದಾರೆ.

ನವ್ಯ ಸಾಹಿತ್ಯದಲ್ಲಿ ಪ್ರಮುಖವಾಗಿ ಕಂಡುಬಂದ ಸಂಕೇತಗಳು, ತಂತ್ರಗಳು, ಪ್ರತಿಮೆಗಳು ಜನಸಾಮಾನ್ಯರನ್ನು ತಲುಪಲಿಲ್ಲ. ಈ ಪ್ರಕಾರದಲ್ಲಿ ಹೆಚ್ಚಾಗಿ ಉಪಾಧ್ಯಾಯರೇ ಬರಹಗಾರರಾಗಿದ್ದರಿಂದ ಇವರಿಂದ ಬಂದ ಸಾಹಿತ್ಯ ಸೃಷ್ಟಿಯ ಸೂಕ್ಷ್ಮತೆಯನ್ನು ಗ್ರಹಿಸಲು ಇಂತಹ ಓದುಗ ಸಾಹಿತ್ಯ ವರ್ಗವೇ ಬೇಕಾಯಿತು. ಜನ ಸಾಮಾನ್ಯರ ಸ್ಪಂದನೆಯನ್ನು ಇವರ ಸಾಹಿತ್ಯ ಕೃತಿಗಳು ಒಳಗೊಳ್ಳಲಿಲ್ಲ. ಈ ನವ್ಯ ಸಾಹಿತ್ಯ ಆಂಗ್ಲ ಕಾವ್ಯದ ಸಿದ್ಧಾಂತಗಳಿಂದ ಪ್ರೇರಿತವಾಗಿದ್ದವು. ಆಚಾರ, ವಿಚಾರ, ಸಂಪ್ರದಾಯ, ನಂಬಿಕೆ, ಲೋಕ ರೂಡಿ, ನಿಯಮಗಳು, ಸಮುದಾಯಗಳ ಸಮಸ್ಯೆಗಳು ಹತ್ತಿರ ಸುಳಿಯಲಿಲ್ಲ. ಅಬಚೂರಿನ ಪೋಸ್ಟಾಪೀಸು ಕಥಾ ಸಂಕಲನದ ಮುನ್ನುಡಿಯಲ್ಲಿ ನವ್ಯದ ಮಿತಿಗಳನ್ನು ಪೂರ್ಣಚಂದ್ರ ತೇಜಸ್ವಿಯವರು ತುಂಬಾ ಖಚಿತವಾಗಿ ಹೇಳಿದ್ದಾರೆ. ಸೃಷ್ಟಿಗೊಳ್ಳುತ್ತಿರುವ ಸಾಹಿತ್ಯವು ಜನರನ್ನು ಸ್ವೀಕರಿಸಿಕೊಳ್ಳುತ್ತದೆ. ಯಾವುದು ಬೇಡವೋ ಅದನ್ನು ಬಿಟ್ಟುಬಿಡುತ್ತದೆ. ಮಿತಿಗಳನ್ನು ಗುರುತಿಸಿದ ಸಾಹಿತಿಗಳು ಸಾಹಿತ್ಯಸೃಷ್ಟಿಗೆ ಅಗತ್ಯವಿದ್ದ ದಲಿತ, ಬಡವರ, ಶೋಷಕರ ಸಮುದಾಯಗಳ ಕುರಿತು ಅವರ ಪರಂಪರೆಯನ್ನು ಕುರಿತು ಸಾಹಿತ್ಯರಚನೆಗೆ ತೊಡಗಿದರು.

ಅದು ಮುಂದೆ ದಲಿತ-ಬಂಡಾಯ ಸಾಹಿತ್ಯ ಎಂಬ ನಾಮ ಫಲಕವನ್ನ ಹೊತ್ತುಕೊಂಡಿತು. ನವವಸಾಹತುಶಾಹಿಯ ವಿರುದ್ಧ ದನಿ ಎತ್ತಿದ ದೇಶೀ ಚಿಂತನೆಗಳು ದಲಿತ ಸಾಹಿತ್ಯದ ಮೇಲೆ ಪ್ರತ್ಯೇಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಪ್ರಭಾವವನ್ನು ಬೀರಿದವು. ಈ ಹೊತ್ತಿನ ಜಾಗತೀಕರಣ ಪ್ರಕ್ರಿಯೆಯ ಖಾಸಗೀಕರಣ, ಉದಾರೀಕರಣ, ಆಧುನೀಕರಣ, ಕೈಗಾರಿಕೀಕರಣದ ಪ್ರಭಾವವು ಕೈಗಾರಿಕೆಯಲ್ಲಿ, ಉದ್ಯಮದಲ್ಲಿ, ಆಧುನಿಕತೆಯಲ್ಲಿ ತಮ್ಮ ಪ್ರಭಾವವನ್ನು ದೇಶದ ಬದುಕಲ್ಲಿ ಕಾಣಿಸಿದವು. ಶ್ರೀಮಂತ ರಾಷ್ಟ್ರಗಳು ಭಾರತದಂತಹ ತೃತೀಯ ಜಗತ್ತಿನ ದೇಶಗಳ ಮೇಲೆ ಆರ್ಥಿಕ ದಿಗ್ಬಂಧನೆಗಳನ್ನು ಹೇರಿ ನಡೆಸುತ್ತಿರುವ ಹೊತ್ತಿನಲ್ಲಿ ಬಹು ಸಮುದಾಯಗಳಿರುವ; ಬಹುಸಂಖ್ಯೆಯಲ್ಲಿ ಜನರು ವಾಸಿಸುತ್ತಿರುವ ಬದುಕಲ್ಲಿ ಬಾರೀ ಪ್ರಮಾಣದಲ್ಲಿ ಘಾಸಿಗೊಳಿಸಿದವು. ಅವುಗಳು ಮೇಲು ನೋಟಕ್ಕೆ ಒಳಿತೆನಿಸಿದರೂ ಆಂತರ್ಯದಲ್ಲಿ ಸುಡುತ್ತಲೇ ಬಂತು. ಆಧುನಿಕತೆಯ ಆಕರ್ಷಣೆಗೆ ದಲಿತ ಸಮುದಾಯಗಳು ತಲ್ಲಣಗೊಂಡವು. ಮೊದಲೇ ಶ್ರೇಣೀಕೃತ ಸಮಾಜದ ಯಜಮಾನಿಕೆಯಲ್ಲಿ ನೋವ ಅನುಭವಿಸುತ್ತಾ ಬದುಕುತ್ತಿರುವ ದಲಿತ ಸಮುದಾಯಗಳು ಜಾಗತೀಕರಣ ಪ್ರಕ್ರಿಯೆಯ ಪ್ರಭಾವದಿಂದ ಮತ್ತಷ್ಟು ಸಮಸ್ಯೆಯನ್ನು ಎದುರಿಸಿದವು. ಈ ಜಾಗತೀಕರಣ ಪ್ರಕ್ರಿಯೆಯ ಪ್ರಭಾವದ ಅನುಕೂಲಗಳು ಒಂದು ವರ್ಗದ ಜನರಿಗೆ ಸೀಮಿತವಾದವು. ಇವುಗಳ ಅರಿವು ಮತ್ತು ಇವುಗಳಿಂದ ಆಗುವಂತ ಸಮಸ್ಯೆಗಳ ಎಚ್ಚರ ಗೊತ್ತಾಗದಂತೆ ಪ್ರಭಾವಿತವಾದವು. ಇವುಗಳ ಪ್ರಭಾವವು ನೇರವಾಗಿ ದಲಿತ ಸಾಹಿತ್ಯದ ಮೇಲೆ ಪ್ರಭಾವ ಬೀರದಿದ್ದರೂ ಅವುಗಳಿಂದಾದ ಸಮಸ್ಯೆಯಿಂದ ತಲ್ಲಣಗೊಂಡ ಬದುಕಿನ ಸೂಕ್ಷ್ಮ ವಿವರಗಳು ದಲಿತ ಸಾಹಿತ್ಯದಲ್ಲಿ ಕಂಡುಬಂದವು.

### ದಲಿತ ಮತ್ತು ಬಂಡಾಯ ಸಾಹಿತ್ಯದ ವಿಭಿನ್ನ ನೆಲೆಗಳು

ದಲಿತ ಮತ್ತು ಬಂಡಾಯ ಸಾಹಿತ್ಯವು ಒಂದೇ ವಸ್ತುವಿಷಯವನ್ನು ಒಳಗೊಂಡು ರಚನೆಗೊಂಡಿರುವಂತಹವು. ಈ ಸಾಹಿತ್ಯ ಚಳುವಳಿಯ ಮುಖ್ಯತೆ ಮನುಷ್ಯ ಮತ್ತು ಸಮಾಜದ ಸಂಬಂಧದ ಬಗೆಗಿನ ವಿವರಣೆಯನ್ನು ನೀಡುವುದು ಆಗಿದೆ. ಬಂಡಾಯದ ನೆಲೆಯೇ ಇರುವ ಅಸಮಾನತೆ ಬದುಕಿನ ವಿರುದ್ಧ ಬಂಡೇಳುವುದು. ವಿರೋಧಿಸುವುದು. ಬದುಕಲ್ಲಿ ಸಹಬಾಳ್ವೆಯನ್ನು ರೂಪಿಸುವುದು; ಸಮಾಜದ ವ್ಯವಸ್ಥೆಯ ಬದಲಾವಣೆಯನ್ನು ತರುವುದು ಬಂಡಾಯವೆಂದು ತಿಳಿಯಲಾಗಿದೆ. ಹಾಗಾಗಿ ವ್ಯವಸ್ಥೆಯ ಶೂದ್ರರು ಮತ್ತು ದಲಿತೇತರರು ಬಂಡಾಯ ವೇದಿಕೆಯನ್ನು ಹುಟ್ಟು ಹಾಕಿದರು. ಇದರಲ್ಲಿ ದಲಿತರೂ ಸೇರಿಕೊಂಡಿದ್ದರು.

ಬಂಡಾಯ ಸಾಹಿತ್ಯದಲ್ಲಿ ದಲಿತರ ಬದುಕು ಮತ್ತು ಅವರ ಚಿತ್ರಣಗಳು ದಲಿತೇತರ ಬದುಕ ವಿರುದ್ಧದ ಪ್ರತಿಭಟನೆಯಾಗಿತ್ತು. ದಲಿತ ಮತ್ತು ದಲಿತೇತರರ ಬದುಕನ್ನು ತೌಲನಿಕವಾಗಿ ನೋಡಿದಾಗ ಹೋಲಿಸಲಾರದಷ್ಟು ಭಿನ್ನತೆ ಕಂಡುಬಂದದ್ದು ಪ್ರತಿಭಟನೆಯ ಕಾರಣಗಳಲ್ಲೊಂದು. ಅದು ಸ್ಫೋಟಗೊಳ್ಳುವಂತಹದ್ದೇ; ಏಕೆಂದರೆ ವ್ಯವಸ್ಥೆಯಲ್ಲಿನ ಜನರು ತಮ್ಮ ಒತ್ತಡಗಳನ್ನು ಎಲ್ಲಿಯ ತನಕ ತಡೆದಾರು? ಇವು ಸಾಮಾಜಿಕ ವ್ಯವಸ್ಥೆಯ ಕ್ರೂರತೆಯನ್ನು ವಿರೋಧಿಸುವ ಅಂಶಗಳಾಗಿ ಸೃಜನಶೀಲ ಸಾಹಿತ್ಯದಲ್ಲಿ ಕಂಡುಬಂದವು.

ದಲಿತ ಸಾಹಿತ್ಯವನ್ನು ಅಕ್ಷರಸ್ಥ ದಲಿತ ಬುದ್ಧಿಜೀವಿಗಳು ತಮ್ಮ ಅನುಭವದ ಹೊಳೆಯಲ್ಲಿ ತಮ್ಮ ಬದುಕಿನ ಸಾಮಾಜಿಕ ವಾಸ್ತವವನ್ನು ಸಾಹಿತ್ಯಗೊಳಿಸಿದರು. ದಲಿತ ಸೂಕ್ಷ್ಮ ವಿವರಗಳು ಮತ್ತು ಹೊರನೋಟಕ್ಕೆ ಕಾಣದ ವಿವರಗಳು ಖಾಲಿ ಇದ್ದ ಸಾಹಿತ್ಯದ ಒಂದು ಭಾಗವನ್ನು ತುಂಬಿದವು. ದಲಿತ ಸಾಹಿತ್ಯದ ಪ್ರಾರಂಭದಲ್ಲಿ ತಮ್ಮ ಸಮುದಾಯಗಳ

ನೋವಿನ ಅಬ್ಬರವು ಕಂಡುಬಂದರೂ ಅದು ನಂತರದಲ್ಲಿ ಸೂಕ್ಷ್ಮತೆಯನ್ನು ಸೃಜನಗೊಳಿಸುವಲ್ಲಿ ತನ್ನ ನೆಲೆಯನ್ನು ಕಂಡುಕೊಂಡಿತು. ದಲಿತ ಸಾಹಿತ್ಯವು ಬದುಕುವ ಸಮುದಾಯದ ಭಾಷೆಯನ್ನು ಸಾಹಿತ್ಯಗೊಳಿಸುವಲ್ಲಿ ತನ್ನ ಪ್ರಾದೇಶಿಕ ಭಾಷೆಯನ್ನು ತಂದು ಓದುವ ವರ್ಗಕ್ಕೆ ಒಂದು ಹೊಸ ರೂಪವನ್ನು ತಂದುಕೊಟ್ಟಿತು. ಇದು ಸಾಹಿತ್ಯದಲ್ಲಿ ತನ್ನ ಅನನ್ಯತೆಯನ್ನು ಕಂಡುಕೊಳ್ಳುವಲ್ಲಿ ಪ್ರಮುಖವಾಯಿತು. ಗ್ರಂಥಸ್ಥ ಭಾಷೆಗಿಂತ ಭಿನ್ನ ಸತ್ವವನ್ನು ತನ್ನ ಪ್ರಾದೇಶಿಕ ಭಾಷೆ ಮತ್ತು ಅದರ ಅರ್ಥಕೊಡುವಲ್ಲಿ ದಲಿತ ಸಾಹಿತ್ಯವು ಭಿನ್ನ ನೆಲೆಯನ್ನು ಕಂಡುಕೊಂಡಿತು. ದಲಿತ ಸಂಸ್ಕೃತಿಯ ವಿಭಿನ್ನ ಛಾಯೆಗಳು ಸಾಹಿತ್ಯದಲ್ಲಿ ಕಂಡುಬಂದವು.

ತಲೆಮಾರುಗಳ ಭಿನ್ನತೆ ದಲಿತರಲ್ಲಿ ಕಂಡು ಬಂದದ್ದು ದಲಿತ ಸಾಹಿತ್ಯ ಮತ್ತು ಚಳುವಳಿಗಳ ಉಗಮದ ನಂತರವೇ; ಇದಕ್ಕೆ ಪ್ರಮುಖವಾಗಿ ಆಧುನಿಕ ಶಿಕ್ಷಣ ವ್ಯವಸ್ಥೆ. ಇದು ಹಿರಿಯ ತಲೆಮಾರುಗಳ ತಾರತಮ್ಯತಮವಾದ ಬದುಕನ್ನು ಪ್ರಶ್ನಿಸಿ ತನ್ನದೇ ಆದ ರೀತಿಯಲ್ಲಿ ಹೋರಾಟದ ಸಾಹಿತ್ಯ ಅಸ್ತ್ರವನ್ನು ರೂಪಿಸಿಕೊಂಡಿತು. ಇದು ಅಕ್ಷರಸ್ಥ ದಲಿತರನ್ನು ತಲುಪುವಲ್ಲಿ ಯಶಸ್ವಿಯಾಯಿತು. ಹಾಗೆಯೇ ಇಡೀ ಓದುವ ಸಮುದಾಯಕ್ಕೆ ದಲಿತರ ವಾಸ್ತವ ಸ್ಥಿತಿಯನ್ನು ಕಟ್ಟಿಕೊಟ್ಟಿತು. ಕನ್ನಡ ಸಾಹಿತ್ಯ ಪ್ರಕಾರದಲ್ಲಿ ಹಿಂದೆಂದೂ ಕಾಣದ ವಸ್ತುವಿಷಯವನ್ನು ದಲಿತ ಸಾಹಿತ್ಯವು ಸೃಷ್ಟಿಸಿ ಓದುವ ವರ್ಗವನ್ನು ದಿಗ್ಭ್ರಮೆಗೊಳಿಸಿತು. ಜನಸಾಮಾನ್ಯರ ಸಾಹಿತ್ಯ ಮತ್ತು ಅವುಗಳ ಸಂವೇದನೆ ದಲಿತ ಸಾಹಿತ್ಯ ಪ್ರಕಾರಗಳಲ್ಲಿ ಕಂಡುಬಂತು.



ದಲಿತ ಬದುಕಿನ ವಾಸ್ತವ ಚಿತ್ರಣವನ್ನು ಸೃಜನಶೀಲತೆಯಲ್ಲಿ ದಾಖಲೆಗೊಳಿಸುವಾಗ ದಲಿತ ಪಾತ್ರಗಳ ಸೊರಗುವಿಕೆ, ಹೆಣ್ಣಿನ ಪಾತ್ರಗಳನ್ನು ಕಾಮಕ್ಕೆ ಬಳಕೆ, ನವ ಪೀಳಿಗೆಯ ಕ್ರಾಂತಿಕಾರಿ ಬೆಳವಣಿಗೆ, ಆಧುನಿಕತೆಯಿಂದ ಬಳಲುವಿಕೆಯು ಪಾತ್ರಗಳಲ್ಲಿ ಕಂಡು ಬಂದವು. ಅದು ದಲಿತರ ಅವಮಾನ ಸಂಗತಿಯೆಂದು ಪರಿಗಣಿಸಬೇಕಿಲ್ಲವೆಂದು ಹೇಳಿಕೊಂಡಿತು. ಪ್ರಜಾಪ್ರಭುತ್ವದ ಸಮಾನತೆಯನ್ನು ಸಾರುವ ವ್ಯವಸ್ಥೆಯ ಬದುಕಿನಲ್ಲಿ ಓದುವ ವರ್ಗಕ್ಕೆ ಒಂದು ತಿಳಿರೂಪದಲ್ಲಿ ವೈಚಾರಿಕತೆಯನ್ನು ತಿಳಿಸಿತು. ಅಸಲಿ ಅನುಭವಗಳು ಕಲಾತ್ಮಕವಾಗಿ ಸಾಹಿತ್ಯದಲ್ಲಿ ಅಬಿವ್ಯಕ್ತಗೊಂಡವು.

ದಲಿತ ಸಾಹಿತ್ಯವು ಪ್ರಮುಖವಾಗಿ ಸಾಮಾಜಿಕ ಪರಿವರ್ತನೆಯತ್ತ ಮುಖಮಾಡಿತು. ಸಾಮಾಜಿಕ ಅಸಮಾನತೆ ಸ್ಪ್ರುಶ್ಯ ಅಸ್ಪ್ರುಶ್ಯ ಪರಿಕಲ್ಪನೆಗೆ ಮುಖ್ಯ ಕಾರಣವಾದ ದೇವರು ಧರ್ಮ ಮೂಢನಂಬಿಕೆಯನ್ನು ತಿರಸ್ಕರಿಸಿತು. ಸಂಪ್ರದಾಯ ನಂಬಿಕೆಗಳ ಮೂಲಕ ಸಮಾಜದ ವಾಸ್ತವ ಕಂಡುಬಂದವು. ಹೊಸ ತಲೆಮಾರಿನ ವೈಚಾರಿಕ ಯುವ ಪೀಳಿಗೆಯವರು ಸಂಪೂರ್ಣವಾಗಿ ನಾಸ್ತಿಕತ್ವವನ್ನು ಮೈಗೂಡಿಸಿಕೊಂಡರು. ಧರ್ಮ, ದೇವರು, ದೆವ್ವಗಳಿಗೆ ಸಂಬಂಧಿಸಿದಂತೆ ಬೇರೂರಿದ ನಂಬಿಕೆಗಳಿಗೆ ಪ್ರಶ್ನೆಗಳನ್ನು ಎತ್ತಿದರು. ಇವರು ದೇವರು ನಂಬಿಕೆಗಳಿಗೆ ಸವಾಲನ್ನು ಒಡ್ಡಿ ಸಾಮಾಜಿಕ ಅಸಮಾನತೆ; ಮತ್ತು ಮನುಷ್ಯ ಸಂಬಂಧದ ಅಮಾನವೀಯ ವರ್ತನೆಯನ್ನು ಸಮಾಜದೆದುರು ತೆರೆದಿಟ್ಟರು.

ಚರ್ಚೆಯಲ್ಲಿ ದಲಿತ ಸಾಹಿತ್ಯವನ್ನು ಜಾತಿಯನ್ನು ಬಿಂಬಿಸುವ ಸಾಹಿತ್ಯವೆಂದೂ ಬೌದ್ಧಿಕತೆಯ ಹಿನ್ನೆಲೆಯಲ್ಲಿ ಜಾತಿವಾದಿ ಸಾಹಿತ್ಯವೆಂದು ಹೇಳುವ ದೀರ್ಘಚರ್ಚೆ ಇದೆ. ಸಮಾನತೆಯ ಕಲ್ಪನೆಯಿರುವ; ಜಾತಿ ವಿನಾಶದ ಕಲ್ಪನೆ ಇರುವ ಈ ಸಾಹಿತ್ಯಿಕ ಚಳುವಳಿಯು ಮತ್ತೊಂದು ರೀತಿಯಲ್ಲಿ ಜಾತಿಕೇಂದ್ರಿತ ನೆಲೆಯಲ್ಲಿ ಹೊರಡುತ್ತದೆ ಎಂಬ

ಚರ್ಚೆ ಇದೆ. ಇದು ಒಂದು ರೀತಿಯ ಮೂಲಭೂತವಾದಿಗಳ ತರ್ಕವೂ ಹೌದು. ಈ ದೇಶದಲ್ಲಿ ಹಲವು ಸಮುದಾಯ, ಜಾತಿ, ಧರ್ಮ, ಅಸಮಾನತೆಗಳಿರುವ ತನಕ ದಲಿತ ಸಾಹಿತ್ಯವನ್ನು ಜಾತಿವಾದಿ ಸಾಹಿತ್ಯವೆನ್ನುವುದು ಸಮಂಜಸವಲ್ಲ. ಕೆಲವೇ ಸಮುದಾಯಗಳು ಪ್ರಬಲಗೊಳ್ಳುತ್ತಿರುವ ಹಿನ್ನೆಲೆಯಲ್ಲಿ ದಲಿತ ಸಮುದಾಯಗಳ ಸ್ಥಾನ ಸಮಾಜದಲ್ಲಿ ಯಾವ ಮಟ್ಟದ್ದು ಎಂಬುದು ದಲಿತ ಸಾಹಿತ್ಯದ ತಾತ್ವಿಕ ಪ್ರಶ್ನೆಯಾಗುತ್ತದೆ. ಹಾಗಾಗಿ ಈ ಎಲ್ಲಾ ಸಮುದಾಯಗಳ ನಡುವೆ ಸಮಾನತೆಯು ಇಲ್ಲ. ಆದುದರಿಂದ ದಲಿತ ಸಾಹಿತ್ಯವು 'ಜಾತಿ ಕೇಂದ್ರಿತ', 'ಜಾತಿವಾದಿ' ಸಾಹಿತ್ಯಕ್ಕೆ ಸಂಬಂಧಿಸಿದ್ದಲ್ಲ.

ದಲಿತರ ಬದುಕು, ಸಂಸ್ಕೃತಿ, ನಂಬಿಕೆ, ಸಂಪ್ರದಾಯ, ಸಾಮಾಜಿಕ, ಆರ್ಥಿಕ, ರಾಜಕೀಯ ವಾಸ್ತವವನ್ನು ದಲಿತ ಸಾಹಿತ್ಯವು ಹೊಂದಿ ಶೋಷಿತ ಸಮುದಾಯದವರನ್ನು, ಅದರ ಸೃಜನಶೀಲ ಸಾಹಿತ್ಯವನ್ನು ಹೊಂದಿ ಖಾಲಿ ಇದ್ದ ಸಾಹಿತ್ಯದ ಜಾಗವನ್ನು ದಲಿತ ಸಾಹಿತ್ಯವು ತುಂಬಿದೆ.

ಅಡಿಟಿಪ್ಪಣಿಗಳು

೧. ಅರವಿಂದ ಮಾಲಗತ್ತಿ, 'ದಲಿತ ಸಾಹಿತ್ಯ ಪ್ರವೇಶಿಕೆ', ಪುಟ : ೫

೨. ಅದೇ ಪುಟ ---"---

೩. ಶ್ರೀನಿವಾಸ ಗೋಪಾಲಾಚಾರ್ಯ, 'ಸಂಸ್ಕೃತ - ಕನ್ನಡ ಶಬ್ದಕೋಶಗಳ ಸಂಪುಟ', ಪುಟ : ೧೩೧೫, ಸಂಪುಟ : ೩

೪. 'ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು', ಸಂಪುಟ : ೪ ಪುಟ : ೪೮೨೮

೫. ದೇವಯ್ಯ ಹರವೆ, 'ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು', ಪುಟ : ೧

೬. 'ಕನ್ನಡ ಭಾರತಿ', ಸಂಪುಟ : ೨೪ ಸಂಚಿಕೆ : ೧, ಪುಟ : ೧೨೫.

೭. ಅರವಿಂದ ಮಾಲಗತ್ತಿ, 'ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನೆ', ಪುಟ : ೪

೮. ಪುರುಷೋತ್ತಮ ಬಿಳಿಮಲೆ, 'ಬಂಡಾಯ-ದಲಿತ ಸಾಹಿತ್ಯ', ಪುಟ : ೧೪.

೯. ಅರವಿಂದ ಮಾಲಗತ್ತಿ, ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನ, ಪುಟ : ೭.

೧೦. ದೇವಯ್ಯ ಹರವೆ, 'ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು', ಪುಟ : ೨

೧೧. ದೇವಯ್ಯ ಹರವೆ, 'ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು', ಪುಟ : ೪.

೧೨. ಎಲ್.ಹನುಮಂತಯ್ಯ. 'ದಲಿತ ಲೋಕದ ಒಳಗೆ', ಪುಟ : ೨,೩

೧೩. ಮ.ನ. ಜವರಯ್ಯ 'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ೧೯೯೪ ಆಧಾರ : ವಡ್ಡಾರಾಧನೆ ಕಥಾಲೋಕ ಪು. ೧೪ - ೧೫. ೧೯೭೧ ಅನು : ಆರ್.ಎಲ್. ಅನಂತರಾಮಯ್ಯ.

೧೪. ಮ.ನ. ಜವರಯ್ಯ, 'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ', ಪುಟ : ೭

೧೫. ನಯಸೇನನ 'ಧರ್ಮಾಮೃತಂ' ೪ - ೧೭೪ ಪುಟ ೧೭೭ - ೭೮ (ಸಂ) ಆರ್. ಶಾಮಶಾಸ್ತ್ರಿ

೧೬. ಮ.ನ. ಜವರಯ್ಯ, 'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ', ೧೯೯೪ ಪುಟ : ೧೮

೧೭. ಮ.ನ.ಜವರಯ್ಯ 'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ', ಪುಟ : ೧೦೦

೧೮. ಅರವಿಂದ ಮಾಲಗತ್ತಿ, 'ದಲಿತ ಸಾಹಿತ್ಯ ಪ್ರವೇಶಿಕೆ', ಪುಟ : ೨೩

೧೯. ಪುರುಷೋತ್ತಮ ಬಿಳಿಮಲೆ, 'ಶಿಷ್ಟಪರಿಶಿಷ್ಟ' (ಉದ್ಧರಣೆ : ಸಂಕ್ರಮಣ ಸಂಪುಟ ೧೭ ಸಂಚಿಕೆ ೪ ೧೯೮೧ ಪುಟ : ೨೯)

೨೦. ಪುರುಷೋತ್ತಮ ಬಿಳಿಮಲೆ, 'ಶಿಷ್ಟ ಪರಿಶಿಷ್ಟ' ಪುಟ : ೧೧೦

೨೧. ಯು.ಆರ್.ಅನಂತಮೂರ್ತಿ, 'ಸನ್ನಿವೇಶ', ಪುಟ : ೩೧

೨೨. ಯು.ಆರ್ .ಅನಂತಮೂರ್ತಿ ಸನ್ನಿವೇಶ, ಪುಟ : ೩೧

೨೩. ದಾಖಲಿಸಿದವರು : ಕೆ.ಆರ್.ದುರ್ಗಾದಾಸ್, ಜಿ.ವಿ.ಆನಂದಮೂರ್ತಿ : ಜಿ. ಎಸ್. ಶಿವರುದ್ರಪ್ಪನವರ (ಉದ್ಘಾಟನಾ ಭಾಷಣ) ಪುಟ : ೪೦ 'ದಲಿತ ಮೂರು ಕಮ್ಮಟಗಳು'.

೨೪. --- ಅದೇ--- ಪು: ೩೮

೨೫. ರಹಮತ್ ತರೀಕೆರೆ, 'ಸಂಕ್ರಮಣ' ಕನ್ನಡ ಕಾವ್ಯ ಮತ್ತು ಪ್ರತಿಭಟನೆ, ಪುಟ : ೨೦

೨೬. ಪುರುಷೋತ್ತಮ ಬಿಳಿಮಲೆ, 'ಬಂಡಾಯ-ದಲಿತ ಸಾಹಿತ್ಯ', ಪುಟ : ೨೧.

೨೭. ಅರವಿಂದ ಮಾಲಗತ್ತಿ, 'ದಲಿತ ಸಾಹಿತ್ಯ ಪ್ರವೇಶಿಕೆ', ಪುಟ : ೧೧

೨೮. --- ಅದೇ--- ಪುಟ : ೧೧-೧೨

೨೯. --- ಅದೇ--- ಪುಟ : ೧೨-೧೩

೩೦. --- ಅದೇ--- ಪುಟ : ೧೩

೩೧. ಅಂಬೇಡ್ಕರ್ ಬಿ.ಆರ್. Annilation of court (ಜಲಂದರ್ ೧೯೭೮) ಪುಟ - ೮೬

೩೨. ಪುರುಷೋತ್ತಮ ಬಿಳಿಮಲೆ, 'ಬಂಡಾಯ-ದಲಿತ ಸಾಹಿತ್ಯ', ಪುಟ : ೧೮

೩೩. ರಂಗನಾಯಕಮ್ಮ, 'ಮಾರ್ಕ್ಸ್‌ವಾದ ಎಂದರೇನು?', ಪುಟ : ೧

೩೪. ಪುರುಷೋತ್ತಮ ಬಿಳಿಮಲೆ, 'ಬಂಡಾಯ-ದಲಿತ ಸಾಹಿತ್ಯ', ಪುಟ : ೨೬

೩೫. ರಾಮಮನೋಹರ ಲೋಹಿಯಾ, 'ಸ್ವಾತಂತ್ರ್ಯದ ಅಂತರ್ಜಲ', ಪುಟ : ೨೭೨

೩೬. ರಾಮಮನೋಹರ ಲೋಹಿಯಾ, 'ಸ್ವಾತಂತ್ರ್ಯದ ಅಂತರ್ಜಲ', ಪುಟ : ೨೭೩ - ೨೭೪

೩೭. ರಾಮಮನೋಹರ ಲೋಹಿಯಾ 'ಸ್ವಾತಂತ್ರ್ಯದ ಅಂತರ್ಜಲ', ಪುಟ : ೨೮೧

೩೮. ಪುರುಷೋತ್ತಮ ಬಿಳಿಮಲೆ, 'ಬಂಡಾಯ-ದಲಿತ ಸಾಹಿತ್ಯ', ಪುಟ : ೩೩

೩೯. ಪುರೊಷೋತ್ತಮ ಬಿಳಿಮಲೆ, 'ಬಂಡಾಯ-ದಲಿತ ಸಾಹಿತ್ಯ', ಪುಟ : ೩೩- ೩೪

# ೨.೧ ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ದಲಿತ ಬದುಕು

## ದಲಿತರ ಶಿಕ್ಷಣ

ಮಾನವನ ಬದುಕಿನಲ್ಲಿ ಶಿಕ್ಷಣವು ಹೊಸ ತಿರುವನ್ನು ನೀಡಿದೆ. ಅದು ಆಧುನಿಕ ಶಿಕ್ಷಣ ಸಂದರ್ಭದಲ್ಲಿ ಬೌದ್ಧಿಕತೆಯನ್ನು ವಿಸ್ತರಿಸಿಕೊಂಡಿದೆ. ಇದರಲ್ಲಿ ಪಾಶ್ಚಾತ್ಯ ಪ್ರಭಾವವು ಬಹು ಮುಖ್ಯವಾದ ಪಾತ್ರವನ್ನು ವಹಿಸಿದೆ. ಅಂದರೆ ಆಧುನಿಕ ಶಿಕ್ಷಣಕ್ಕೆ ಬಹು ಸಮುದಾಯಗಳು ಒಳಗೊಂಡಂತೆ ಭಾರತದ ಪ್ರಾಚೀನ ಶಿಕ್ಷಣಕ್ಕೆ ಒಳಗೊಳ್ಳಲಿಲ್ಲ. ಅದು ಕೆಲವೇ ಕೆಲವು ಸಮುದಾಯಗಳ ಸ್ವತ್ತಾಗಿತ್ತು. ಅದಕ್ಕೆ ಆ ಹೊತ್ತಿನ ಪರಿಸ್ಥಿತಿ ಮತ್ತು ಆಳುವ ವರ್ಗಗಳು ಕಾರಣ ಇರಬಹುದು.

ವ್ಯಕ್ತಿಗೆ ಸುತ್ತ ಮುತ್ತಲಿನ ಪರಿಸರವೆ ಹೊಸ, ಹೊಸ ತಿಳುವಳಿಕೆಯನ್ನು ನೀಡುತ್ತದೆ. ಅದು ಅವನು ಬದುಕುವ ವಲಯಕ್ಕೆ ಸೀಮಿತ ಹೊಂದಿದ್ದರೂ ಅನುಭವ ಮುಖ್ಯವಾಗುತ್ತದೆ. ಶಿಕ್ಷಣ ಅಥವಾ ತಿಳುವಳಿಕೆಯನ್ನು ಎರಡು ರೀತಿಯಲ್ಲಿ ವಿಭಾಗ ಮಾಡಬಹುದು. ಒಂದು ಪರಿಸರದಿಂದ ಪಡೆದ ತಿಳುವಳಿಕೆ, ಮತ್ತೊಂದು ಅಕ್ಷರ ಕಲಿಕೆಯಿಂದ ಬಂದ ತಿಳುವಳಿಕೆ. ಮೊದಲನೆಯದು ಸಹಜವಾಗಿ ಬರುವಂತಹದು. ಅದು ಆಚರಣೆ, ನಂಬಿಕೆ, ಧರ್ಮ, ಊಟೋಪಚಾರ, ಕಸುಬು ಮತ್ತು ಸಮಾಜದ ತನ್ನ ಸ್ಥಾನ ಮುಂತಾದನ್ನು ಒಳಗೊಂಡಿರುತ್ತದೆ. ಬದುಕಿನಲ್ಲಿ ಕುಟುಂಬದ ಹಿನ್ನೆಲೆಯಿಂದ ವ್ಯಕ್ತಿಯ ವೃತ್ತಿಯು, ಧರ್ಮವು ಅದರ ಆಜುಬಾಜಿನ ಇತರ ಅಂಶಗಳು ಬೆಳೆದು ಬಂದಿವೆ. ಅಂದರೆ ವ್ಯಕ್ತಿಯ ಎಲ್ಲಾ ಕ್ರಿಯೆಗಳಿಗೂ ಹಾಗೂ ಆತನ ಎಲ್ಲಾ ನಡವಳಿಕೆಗಳಿಗೂ ಪರಿಸರದ ಹಿನ್ನೆಲೆಯೇ ಕಾರಣವೆಂದು ಹೇಳಬಹುದು.

ಶಿಕ್ಷಣದ ಜಗತ್ತು ದಲಿತರಿಗೆ ಈಚಿನದು. ದಲಿತರು ಶಿಕ್ಷಣದಿಂದ ದೂರ ಉಳಿದಿದ್ದಾರೆ. ಅಂದರೆ ಇಲ್ಲಿ ಮುಖ್ಯವಾಗಿ ಶ್ರೇಣೀಕೃತ ವ್ಯವಸ್ಥೆಯಲ್ಲಿ ಇವರ ಸ್ಥಾನ ಯಾವ ಮಟ್ಟದು? ಸಾಮಾಜಿಕ ವ್ಯವಸ್ಥೆಯಲ್ಲಿ ಇವರ ಬದುಕಿನ ಸ್ಥಾನ ಯಾವ ಮಟ್ಟದು? ಈ ವ್ಯವಸ್ಥೆಯಲ್ಲಿ ಇವರ ಆರ್ಥಿಕ ಸ್ಥಿತಿ ಎಂತಹದು? ಈ ಎಲ್ಲಾ ಹಿನ್ನೆಲೆಯಲ್ಲಿ ದಲಿತರ ಶಿಕ್ಷಣವು ಯಾವ ಮಟ್ಟದಲ್ಲಿರುತ್ತದೆ ಎಂಬುದನ್ನು ಬಿಡಿಸಿಕೊಂಡರೆ ಅದರ ಅರ್ಥವಿವರಣೆಯು ಸಿಗುತ್ತದೆ. ಹೀಗೆ ತಾತ್ವಿಕ ಪ್ರಶ್ನೆಗಳನ್ನು ಹಾಕಿಕೊಂಡು ದಲಿತರ ಶಿಕ್ಷಣವನ್ನು ಮುಂದೆ ವಿವರಿಸಲಾಗುವುದು.

ದಲಿತರು ಎಂಥ ಶಿಕ್ಷಣವನ್ನು ಮಾಡುತ್ತಿದ್ದಾರೆ? ಅದಕ್ಕೆ ಕಾರಣಗಳೇನು? ಅದು ಪ್ರಭಾವ ಮತ್ತು ಪರಿಣಾಮವನ್ನು ಹೇಗೆ ಬೀರುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳುವುದು ಒಳ್ಳೆಯದು. ಇಲ್ಲಿ ವಿದ್ಯಾವಂತ ದಲಿತ ತಲೆಮಾರುಗಳು

ಯಾವುವು? ಬಹು ಸಂಖ್ಯಾತ ದಲಿತ ವಿದ್ಯಾರ್ಥಿಗಳು ಏತಕ್ಕಾಗಿ ಒಂದೇ ರೀತಿಯ (ಆರ್ಟ್ಸ್) ವ್ಯಾಸಂಗ ವಿಷಯವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಇಂದಿನ ಶಿಕ್ಷಣ ಪದ್ಧತಿಯು ದಲಿತರಿಗೆ ಹೇಗೆ ಉಪಯುಕ್ತ ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ನಿಲ್ಲುತ್ತದೆ. ಹಾಗಾಗಿ ಇಂದಿನ ಶಿಕ್ಷಣ ವ್ಯವಸ್ಥೆ ಮತ್ತು ಪಠ್ಯಕ್ರಮಗಳು ದಲಿತ ಸಮುದಾಯಗಳ ಮೇಲೆ ಯಾವ ರೀತಿಯ ಪ್ರಭಾವವನ್ನು ಬೀರುತ್ತವೆ ಎಂಬುದನ್ನು ನೋಡಬಹುದು.

ಚರಿತ್ರೆಯಲ್ಲಿ ಒಟ್ಟು ದಲಿತೇತರರು ದಲಿತರನ್ನು ಶ್ರಮದ ಕೆಲಸಗಳಿಗೆ ಬಳಸಿಕೊಂಡರು. ಮತ್ತು ಇವರ ಮೇಲೆ ಸಾಮಾಜಿಕವಾದ, ಧಾರ್ಮಿಕವಾದ, ಕಟ್ಟು ಕಟ್ಟಳೆಗಳನ್ನು ಹೇರಿ ಇವರ ಬೌದ್ಧಿಕ ವಿಕಾಸವನ್ನು ಕುಂಠಿತಗೊಳಿಸಿದರು. ಈ ಹಿನ್ನೆಲೆಯಲ್ಲಿ ಐವತ್ತು ವರ್ಷ ಸ್ವಾತಂತ್ರ್ಯವನ್ನು ತುಂಬಿದ ಭಾರತದಲ್ಲಿ ಇಂದು ದಲಿತರ ಶಿಕ್ಷಣ ಏನಾಗಿದೆ? ಯಾರು ಶಿಕ್ಷಣವನ್ನು ಪಡೆಯುತ್ತಿದ್ದಾರೆ? ಎಂಬುದನ್ನು ನೋಡಬಹುದು. ಇದರಿಂದ ದಲಿತರ ಶಿಕ್ಷಣ ಯಾವ ಮಟ್ಟದಲ್ಲಿದೆ ಎಂಬುದು ಗೊತ್ತಾಗುತ್ತದೆ. ಏಕೆಂದರೆ ಶಿಕ್ಷಣವನ್ನು ಪಡೆಯಲು ಒಂದು ಮಟ್ಟದ ಆರ್ಥಿಕ ಭದ್ರತೆಯು ಬೇಕು. ಅಂದರೆ ಆರ್ಥಿಕತೆಯು ಕೊನೇ ಪಕ್ಷ ಅವರ ಪ್ರಾಥಮಿಕ ಸಮಸ್ಯೆಯನ್ನಾದರೂ ಪೂರೈಸುವ ಹಂತದಲ್ಲಿರಬೇಕು. ಇಂಥ ದಲಿತ ಕುಟುಂಬಗಳು ಇಂದು ಎಷ್ಟಿವೆ ಎಂಬುದು ಮುಖ್ಯವಾಗುತ್ತದೆ. ಮೊದಲು ವ್ಯಕ್ತಿ ಬದುಕಬೇಕು; ಅದಕ್ಕೋಸ್ಕರ ಅನಿವಾರ್ಯವಾಗಿ ಹೊಟ್ಟೆ ತುಂಬಿಸಿಕೊಳ್ಳಲು ದುಡಿಯಬೇಕು. ಮಕ್ಕಳು ಬೆಳೆದಂತೆ ಹೊಟ್ಟೆಪಾಡಿಗಾಗಿ ಕೆಲಸವು ಹೆಚ್ಚು ಬೇಕಾಗುತ್ತದೆ. ಮಕ್ಕಳ ಆಲೋಚನೆಯಲ್ಲಿ ಒಳ್ಳೆಯದು ಯಾವುದು ಕೆಟ್ಟದು ಯಾವುದು ಎಂಬುದು ಮೂಡುವುದಕ್ಕೆ ಮೊದಲೇ ಕೂಲಿಗೆ ಜೋತು ಬೀಳುವ ಅನಿವಾರ್ಯ ಸ್ಥಿತಿ ದಲಿತ ಸಮುದಾಯಗಳಿಗೆ ಇದೆ. ಇದನ್ನು ಸಾರಾಸಗಟಾಗಿ ಹೇಳಲಾಗದಿದ್ದರೂ ಬಹುಸಂಖ್ಯಾತ ದಲಿತ ಸಮುದಾಯಗಳು ಈ ರೀತಿಯ ಸಮಸ್ಯೆಯನ್ನು ಎದುರಿಸುತ್ತಿವೆ.

ಓದಲು ಹೊರಟ ದಲಿತ ಮಕ್ಕಳಿಗೆ ಎದುರಾಗುವ ಸಮಸ್ಯೆಗಳೇ ಬೇರೆ. ಅವು ತಮ್ಮ ಬದುಕಿನ ಸಂಕಷ್ಟಗಳಲ್ಲಿಯೂ ಹೇಗೋ ಪಡೆದ ಶಿಕ್ಷಣದ ವ್ಯಾಪಕತೆಯು ಬೇರೆ ಬೇರೆ ರೂಪವನ್ನು ಪಡೆದು ಅದರ ವಿಸ್ತೃತ ಆಯಾಮವು ಬದಲಾವಣೆಯನ್ನು ಪಡೆಯುತ್ತದೆ. ಶಿಕ್ಷಣದ ವಿವಿಧ ಹಂತಗಳಲ್ಲಿ ದಲಿತ ಸಮುದಾಯಗಳು ವಿವಿದ ಬಗೆಯ ಸಮಸ್ಯೆಗಳನ್ನು ಎದುರಿಸುತ್ತಲಿವೆ. ಅವುಗಳ ಕೆಲವು ಮಗ್ಗುಲುಗಳನ್ನು ನೋಡುವುದಾದರೆ ದಲಿತರ ಮಕ್ಕಳು ಖಾಸಗಿ ಶಾಲೆಗಳಲ್ಲಿ ಓದುವ ಸ್ಥಿತಿಯಿಲ್ಲ. ಸರ್ಕಾರಿ ಶಾಲೆಗಳಲ್ಲಿ ಓದಿ ನೌಕರಿ ಪಡೆಯುವ ಸ್ಥಿತಿಯೂ ಇಲ್ಲ. ದಲಿತರ ಮಕ್ಕಳು ವಿಶೇಷವಾಗಿ ಈ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ.

ಮನೆಯೇ ಮೊದಲ ಪಾಠಶಾಲೆ, ತಾಯಿಯೇ ಮೊದಲ ಗುರು, ಇದು ಶಿಕ್ಷಣದಲ್ಲಿ ಬಹಳ ಮುಖ್ಯವಾಗುತ್ತದೆ. ಶಿಕ್ಷಣಕ್ಕೆ ಪರಿಸರ ಮುಖ್ಯ. ದಲಿತ ಸಮುದಾಯ, ಕೆಳವರ್ಗಗಳ ಮಕ್ಕಳಿಗೆ ಶಾಲೆಯನ್ನು ಬಿಟ್ಟರೆ ಮನೆಯಲ್ಲಿ ಓದಿನ ವಾತಾವರಣವೇ ಇರುವುದಿಲ್ಲ. ಇಂಥ ಸಂದರ್ಭದಲ್ಲಿ ದಲಿತ ಮಕ್ಕಳು ಪ್ರಾಥಮಿಕ ಶಾಲೆಯಿಂದ ಮಾಧ್ಯಮಿಕ ಶಾಲೆಗೆ ಬಂದಾಗ ಎದುರಿಸುವ ಸಮಸ್ಯೆಯೇ ಬೇರೆಯದಾಗಿರುತ್ತವೆ. ಮಾಧ್ಯಮಿಕ ಶಾಲೆಯ ನಂತರದಲ್ಲಿನ ಹಂತಗಳಲ್ಲಿ ಹಿಂದೆ ಕಲಿತ ಭಾಷೆಯೊಂದಿಗೆ ಇಂಗ್ಲಿಷ್ ಹಾಗೂ ಹಿಂದಿಯನ್ನು ಕಡ್ಡಾಯಗೊಳಿಸುವುದು ದಲಿತ ಸಮುದಾಯಗಳಿಂದ ಬಂದ ವಿದ್ಯಾರ್ಥಿಗಳಿಗೆ ತೊಡಕುಂಟಾಗುತ್ತದೆ. ಅದು ಒಂದು ರೀತಿಯಲ್ಲಿ ದಲಿತ ವಿದ್ಯಾರ್ಥಿಗಳಿಗೆ ಕಡಿವಾಣ ಹಾಕುವ

ಕ್ರಮದಂತೆ ಇದೆ. ಇದಕ್ಕೆ ದಲಿತ ವಿದ್ಯಾರ್ಥಿಗಳು ನೇರವಾಗಿ ಬಲಿಯಾಗಿದ್ದಾರೆ. ತನ್ನದಲ್ಲದ, ತನಗೆ ಗೊತ್ತಿಲ್ಲದ ಭಾಷೆಯನ್ನು ಕಡ್ಡಾಯಗೊಳಿಸಿ ಪರೀಕ್ಷೆಗೆ ಒಡ್ಡುವುದು ಒಂದು ರೀತಿಯಲ್ಲಿ ತಡೆಯನ್ನು ಒಡ್ಡಿದಂತಾಗುತ್ತದೆ. ಕೆಳವರ್ಗಗಳ, ದಲಿತ ಸಮುದಾಯಗಳ ಮಕ್ಕಳು ಏಕೆ ಪರಭಾಷೆಗಳಲ್ಲಿ ಫೇಲಾಗುತ್ತಾರೆ ಎಂಬ ಸಾಮಾನ್ಯ ಸಮಸ್ಯೆಯನ್ನು ಎತ್ತಿಕೊಂಡರೆ ಅದರ ಅರ್ಥ ಸಿಗುತ್ತದೆ. ಪರಿಸರದಿಂದ ದೂರವಾದ ಭಾಷೆಯು ತಕ್ಷಣ ಮೈಗೂಡುವುದಿಲ್ಲ. ಅದು ಪರಿಸರದೊಂದಿಗೆ ಮೊದಲು ಸೇರಬೇಕು. ಪರಿಸರದ ಭಾಷೆಯಾಗಬೇಕು. ಹಾಗಾದರೆ ಇಂಗ್ಲಿಷ್, ಹಿಂದಿ, ಸಂಸ್ಕೃತ ಭಾಷೆಗಳಲ್ಲಿ ದಲಿತ ವಿದ್ಯಾರ್ಥಿಗಳು ಪಾಸಾಗುವುದಿಲ್ಲವೆ? ಈ ವಿದ್ಯಾರ್ಥಿಗಳು ಮುಂದಿನ ವಿದ್ಯಾಭ್ಯಾಸಕ್ಕೆ ಹೋಗುವುದಿಲ್ಲವೆ ಎಂಬೆಲ್ಲಾ ಪ್ರಶ್ನೆಗಳು ಏಳುತ್ತವೆ. ಆದರೆ ಅಲ್ಪಸ್ವಲ್ಪ ಸುಧಾರಿಸಿದ ಮನೆಯಲ್ಲಿನ ಮಕ್ಕಳಿಗೆ, ಪೋಷಕರ ಸಹಕಾರದೊಂದಿಗೆ ಮಾತ್ರ ಮುಂದಿನ ಶಿಕ್ಷಣಕ್ಕೆ ಹೋಗಲು ಅವಕಾಶವಾಗುತ್ತದೆ. ಇಂದು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿನ ದಲಿತ ಸಮುದಾಯದವರನ್ನು ಸಮೀಕ್ಷೆ ಮಾಡಿದರೆ, ನಗರಕ್ಕಿಂತ ಗ್ರಾಮೀಣ ಪ್ರದೇಶದ ಶಿಕ್ಷಣಾರ್ಥಿಗಳು ಎಸ್.ಎಸ್.ಎಲ್.ಸಿ, ಪಿ.ಯು.ಸಿ., ಬಿ.ಎ.ಯಲ್ಲಿ ಫೇಲಾದವರು ಅಪಾರ ಸಂಖ್ಯೆಯಲ್ಲಿ ಕಾಣಸಿಗುತ್ತಾರೆ. ಅವರ ಅನುತ್ತೀರ್ಣ ವಿಷಯವು ಇಂಗ್ಲಿಷ್, ಹಿಂದಿ ಆಗಿರುತ್ತದೆ. ಜೊತೆಗೆ ಗಣಿತ, ವಿಜ್ಞಾನದ ವಿಷಯವೂ ಆಗಿರುತ್ತದೆ.

ದಲಿತ ಸಮುದಾಯಗಳ ಮೊದಲ ತಲೆಮಾರಿನ ಓದುಗರು ಮಾನವಿಕ ಶಾಸ್ತ್ರಗಳ ವ್ಯಾಸಂಗ ಮಾಡುವುದೇ ಕಷ್ಟವಿರುತ್ತದೆ. ಇಂಥವರು ತಾಂತ್ರಿಕ, ವೈದ್ಯಕೀಯ ಶಿಕ್ಷಣ ಪಡೆಯುವುದು ಕಷ್ಟವೇ ಸರಿ. ಈ ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣವನ್ನು ಪಡೆಯಬೇಕಾದರೆ; ಈ ದಲಿತ ಕುಟುಂಬಗಳು ಎರಡನೆಯ ಅಥವಾ ಮೂರನೆಯ ವಿದ್ಯಾವಂತ, ಉದ್ಯೋಗಸ್ಥ ಕುಟುಂಬದವರಾಗಿದ್ದರೆ ಸಾಧ್ಯವಾಗಬಹುದು. ಇಂದು ದಲಿತ ಕುಟುಂಬದ ಮೊದಲ ಓದುಗ ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣಕ್ಕೆ ಹೋಗಲು ಸಾಧ್ಯವೇ ಇಲ್ಲ. ಇಂದಿನ ಈ ಶಿಕ್ಷಣಕ್ಕೆ ಪೂರ್ವಭಾವಿಯಾಗಿರುವ ಪ್ರಾಥಮಿಕ ತಿಳುವಳಿಕೆಯು ಬಹಳ ಅಗತ್ಯವಾದದ್ದು. ಕಂಪ್ಯೂಟರ್, ಟಿ.ವಿ., ದಿನಪತ್ರಿಕೆ, ವಿದ್ಯುತ್ ಬೆಳಕನ್ನೇ ಕಾಣದ ಕುಟುಂಬಗಳಿಂದ ಬಂದವರಿಗೆ ಇವುಗಳೆಲ್ಲದರ ಜ್ಞಾನವು ಹೇಗೆ ಸಾಧ್ಯವಾಗುವು ಎಂಬ ಪ್ರಶ್ನೆಗಳು ಹುಟ್ಟುತ್ತವೆ. ಆದರೆ ಈ ಜ್ಞಾನಗಳ ಅರಿವು ಸಿಗುವ ಪ್ರಾಥಮಿಕ ಶಿಕ್ಷಣದಲ್ಲಿ; ವ್ಯವಸ್ಥಿತ ಕುಟುಂಬಗಳಿಂದ ಬಂದ ವಿದ್ಯಾರ್ಥಿಗಳ ಎದುರು ದಲಿತ ಸಮುದಾಯಗಳ ವಿದ್ಯಾರ್ಥಿಗಳು ಸ್ಪರ್ಧಿಸಬೇಕಾಗುತ್ತದೆ. ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣ ಪಡೆಯಲು ಸಾಮಾನ್ಯವಾಗಿ ದಲಿತರಿಗೆ ಕಷ್ಟವಿದೆ. ಹೀಗಿದೆ ಸ್ಥಿತಿ ಎಂದು ಇಂಗ್ಲಿಷ್ ಭಾಷೆಯನ್ನು ತಿರಸ್ಕರಿಸುವಂತಿಲ್ಲ. ದಲಿತರೂ, ಶೂದ್ರರೂ ತಮಗೆ ಇಂಗ್ಲಿಷ್ ಬೇಕು ಎಂದು ಹೇಳುವ ವಾತಾವರಣವೂ ಇದೆ.

ಉದ್ಯೋಗಕ್ಕೆ ಸೇರಿದ ದಲಿತರಿಗೆ ನಗರವು ಆಕರ್ಷಣೆಯನ್ನು ಮಾಡಿತು. ಅವರು ತಮ್ಮ ಹಿಂದಿನ ಬದುಕಿನ ಸಾಂಸ್ಕೃತಿಕ ಚಲನವಲನಗಳಿಂದ ಬೇರೆಯಾಗಿ ನಿಂತರು. ನಗರಗಳಲ್ಲಿ ಸಿಗುವ ಸೌಕರ್ಯಗಳನ್ನು ಎಟುಕಿಸಿಕೊಳ್ಳಲು ಯಾರು ಶಕ್ತರೋ ಅವರಿಗೆ ಅವುಗಳು ಪಾಲಾಯಿತು. ಇಲ್ಲಿ ತಮ್ಮ ಆರ್ಥಿಕ ಸುಧಾರಣೆಯ ಪ್ರಮಾಣ ಹೆಚ್ಚಾದಂತೆ ಮತ್ತೂ ಸೌಲಭ್ಯಗಳನ್ನು ಅಪೇಕ್ಷಿಸತೊಡಗಿದರು. ಇಂಥವರ ಮಕ್ಕಳು ಗ್ರಾಮೀಣ ದಲಿತ ಮಕ್ಕಳಿಗಿಂತ ಭಿನ್ನವಾಗಿರುತ್ತಾರೆ. ವ್ಯವಸ್ಥಿತ ಕುಟುಂಬಗಳ ನಗರ ಪ್ರದೇಶದ ದಲಿತ ವಿದ್ಯಾರ್ಥಿಗಳು ಉನ್ನತ ಶಿಕ್ಷಣ, ತಾಂತ್ರಿಕ ಹಾಗೂ ವೈದ್ಯಕೀಯ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಆದರೆ ಗ್ರಾಮೀಣ ದಲಿತರಿಗೆ ಈ ಯಾವ ಅವಕಾಶಗಳಿಲ್ಲದೆ, ವ್ಯವಸ್ಥಿತ ಪರಿಸರವಿಲ್ಲದೆ ಪರಿತಪಿಸುವ ಸ್ಥಿತಿ ಇನ್ನೂ ಇದೆ. ಇದಕ್ಕೆ ಜಾತಿ, ಬಡತನ, ಅಜ್ಞಾನವಷ್ಟೇ ಕಾರಣವಿರಲಾರದು. ಈ ಸಂಮಸ್ಯೆಯನ್ನು ಶೋಧಿಸಬೇಕಾದ ಸವಾಲು ಇಂದು ನಮ್ಮ ಶಿಕ್ಷಣತಜ್ಞರ ಮೇಲಿದೆ.

ಖಾಸಗೀ ಶಿಕ್ಷಣ ಸಂಸ್ಥೆ ಮತ್ತು ಸರ್ಕಾರಿ ಶಿಕ್ಷಣ ಸಂಸ್ಥೆಗಳಲ್ಲಿನ ಶಿಕ್ಷಣದ ವಿಷಯಗಳು, ಪಠ್ಯಕ್ರಮ ಮತ್ತು ಅವುಗಳ ಆರ್ಥಿಕ ವೆಚ್ಚ, ಬೇರೆ ಬೇರೆ ರೀತಿಯದೇ ಆಗಿರುತ್ತದೆ. ಖಾಸಗೀ ಸಂಸ್ಥೆಯಲ್ಲಿ ತೆರೆಯುವ ಹೊಸ ಶಿಕ್ಷಣದ ಕೋರ್ಸ್‌ಗಳು ದಲಿತ ಕುಟುಂಬಗಳಿಗೆ ಸಾಮಾನ್ಯವಾಗಿ ಪರಿಚಯವೇ ಇರುವುದಿಲ್ಲ, ಸರ್ಕಾರದ ಸಾಮಾನ್ಯ ಸೌಲಭ್ಯಗಳಿಂದ ಓದಿದ ದಲಿತ ಕುಟುಂಬಗಳು ಆರ್ಟ್ಸ್(Arts) ವಿಷಯವನ್ನು ಓದುತ್ತಾರೆ. ಇದರಿಂದ ಸ್ಪರ್ಧೆಗಳು ಇವರಲ್ಲೇ ನಿರ್ಮಿತವಾಗುತ್ತದೆ. ತಾಂತ್ರಿಕ, ವೈದ್ಯಕೀಯ ಶಿಕ್ಷಣವನ್ನು ಪಡೆಯಲು ಆಗದೆ; ಪಡೆದರೂ ಸ್ಪರ್ಧಿಸಲು ಆಗದಂತೆ ಫೇಲಾಗುತ್ತಾರೆ. ಅದಕ್ಕೆ ಪರ್ಯಾಯ ಸಿದ್ಧತೆ, ಉತ್ತಮ ಪರಿಸರ ಇಲ್ಲದೆ ಮತ್ತೊಂದು ರೀತಿಯ ಸಮಸ್ಯೆಗಳು ದಲಿತರಲ್ಲಿ ಸೃಷ್ಟಿಯಾಗುತ್ತವೆ. ಸರ್ಕಾರ ಮತ್ತು ಖಾಸಗೀಕರಣದ ನಡುವಿನ ಶಿಕ್ಷಣದ ಬೋಧನೆ ಇಂದು ಹಲವು ಸಮಸ್ಯೆಗಳನ್ನು ಸೃಷ್ಟಿಸಿದೆ.

ಇಂದು ದಲಿತ ಯುವಕ/ಯುವತಿಯರು ತೀವ್ರವಾದ ನಿರುದ್ಯೋಗ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಇದಕ್ಕೆ ಕೆಲವು ಕಾರಣಗಳನ್ನು ನೋಡುವಾಗ ಈ ದಲಿತ ಯುವಕ/ಯುವತಿಯರು ಯಾವ, ಯಾವ ಶಿಕ್ಷಣವನ್ನು ಪಡೆದು ನಿರುದ್ಯೋಗಿಗಳಾಗಿದ್ದಾರೆ ಎಂಬ ತಾತ್ವಿಕ ಪ್ರಶ್ನೆಯು ಉಗಮಗೊಳ್ಳುತ್ತದೆ. ಏಕೆಂದರೆ ದಲಿತರು ಹೆಚ್ಚಿನ ಸಂಖ್ಯೆಯಲ್ಲಿ ಅವಿದ್ಯಾವಂತರಿದ್ದಾರೆ. ದಲಿತರಲ್ಲಿ ಅನಕ್ಷರತೆ ಇದೆ. ಅಲ್ಲದೆ ದಲಿತರು ವಿದ್ಯಾವಂತರಾದ ತಕ್ಷಣ ಅವರಿಗೆ ನೌಕರಿಯ ಸೌಲಭ್ಯ ಸಿಗುತ್ತವೆ ಎಂಬ ಭ್ರಮೆ ಇದೆ. ಅದು ಇತ್ತು ಒಂದು ಕಾಲದಲ್ಲಿ. ಅಂದರೆ ಇಪ್ಪತ್ತು ಮುವತ್ತು ವರ್ಷಗಳ ಹಿಂದೆ ಈ ಮಾತು ನಡೆಯುತ್ತಿತ್ತು. ಇಂದು ಅಸಂಖ್ಯಾತ ದಲಿತ ಯುವಕ/ಯುವತಿಯರು ಶಿಕ್ಷಣವನ್ನು ಪಡೆದು ನಿರುದ್ಯೋಗಿಗಳಾಗಿದ್ದಾರೆ. ಅವರು ಎಸ್.ಎಸ್.ಎಲ್.ಸಿ.ಯಿಂದ ಹಿಡಿದು ಎಂ.ಎ. ಪಿ.ಎಚ್.ಡಿ.ಯವರೆಗೆ ಇರುವವರನ್ನು ನೋಡುತ್ತೇವೆ. ಇವರ ಈ ಹೊತ್ತಿನ ಸಾಂಸ್ಕೃತಿಕ ಸಮಸ್ಯೆಗಳು ಬೇರೆಯದೇ ರೀತಿಯಲ್ಲಿವೆ. ಶಿಕ್ಷಣ ಮತ್ತು ಉದ್ಯೋಗ ಎರಡೂ ಇಂದು ಖಾಸಗೀಕರಣಗೊಳ್ಳುತ್ತಿರುವುದರಿಂದ ಈ ಬಿರುಕು ತೀವ್ರವಾಗಿ ಕಾಣಿಸಿಕೊಂಡಿದೆ.

ಮೊದಲೇ ಚರ್ಚಿಸಿದ ಹಾಗೆ ದಲಿತರಿಗೆ ಶಿಕ್ಷಣ ಎಂದರೆ ಬಹುತೇಕವಾಗಿ ಪಿಯುಸಿ ಆರ್ಟ್ಸ್, ಬಿ.ಎ. ಆರ್ಟ್ಸ್, ಎಂ.ಎ. ಕನ್ನಡ, ಇತಿಹಾಸ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರ ಮುಂತಾದ ಆರ್ಟ್ಸ್ ವಿಭಾಗಕ್ಕೆ ಸೇರಿರುತ್ತವೆ. ಏಕೆಂದರೆ ಇದನ್ನು ಬಿಟ್ಟು ಬೇರೆಯ ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣಕ್ಕೆ ಅನೇಕ ರೀತಿಯ ತೊಂದರೆಗಳಿರುತ್ತವೆ. ಆದರೆ ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿರುವ ದಲಿತೇತರರು ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣವನ್ನು ಪಡೆದು ಇಂದಿನ ಪ್ರಸ್ತುತ ಕಾಲಮಾನಕ್ಕೆ ತಕ್ಕಂತೆ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಹಾಗಾಗಿ ಸರ್ಕಾರದ ಕೆಲವು ಇಲಾಖೆಗಳಲ್ಲಿ ಉನ್ನತ ಶ್ರೇಣಿಯ ಹುದ್ದೆಗಳನ್ನು ಪಡೆಯಲು ಮೇಲ್ಜಾತಿಯವರಿಗೆ ಅನುಕೂಲ ಮತ್ತು ಅವಕಾಶವಿದೆ.

ಉನ್ನತ ಶಿಕ್ಷಣವನ್ನು ಪಡೆದ ದಲಿತರು ಮೇಲೆ ಸೂಚಿಸಿದಂತೆ ಆರ್ಟ್ಸ್ ವ್ಯಾಸಂಗ ಮಾಡಿ ನಿರುದ್ಯೋಗಿಗಳಾಗುತ್ತಾರೆ. ಇವರು ಮೂಲಭೂತವಾಗಿ ಸಾಕಷ್ಟು ಸಮಸ್ಯೆಗಳನ್ನು ಎದುರಿಸುತ್ತಾರೆ. ಏಕೆಂದರೆ ತಮ್ಮ ಪ್ರಾಥಮಿಕ ಸಮಸ್ಯೆಯನ್ನು ಪೂರೈಸಿಕೊಳ್ಳಲು ಆರ್ಥಿಕ ಮೂಲಗಳಿರುವುದಿಲ್ಲ. ಅಲ್ಲದೆ ಇವರೆಲ್ಲಾ ಬಹುಪಾಲು ಗ್ರಾಮೀಣ ಪ್ರದೇಶದವರು ಆಗಿರುತ್ತಾರೆ. ವಿದ್ಯಾಭ್ಯಾಸದ ಅವಧಿಯಲ್ಲಿ ಹಾಸ್ಟೆಲ್ ಜೀವನದಲ್ಲಿ ಶಿಕ್ಷಣವನ್ನು ಪೂರೈಸಿರುತ್ತಾರೆ. ಹಾಸ್ಟೆಲ್ ಜೀವನವು ಪ್ರತಿಯೊಬ್ಬ ದಲಿತ ವಿದ್ಯಾರ್ಥಿಗೂ ಆತ್ಮಸ್ಥೈರ್ಯವನ್ನು ತುಂಬಿರುತ್ತದೆ. ಈ ಸಂದರ್ಭದಲ್ಲಿ ತಮ್ಮ ಸಮುದಾಯಗಳ

ವಿದ್ಯಾವಂತ ಸ್ನೇಹಿತರ ಪರಿಚಯವಾಗುತ್ತದೆ. ಶೋಷಿತ ಸಮಾಜದಿಂದ ಬಂದ ಇವರಿಗೆ ಹಾಸ್ಟೆಲ್, ಅಲ್ಲಿನ ಗೆಳೆಯರ ಶಕ್ತಿ, ಮತ್ತು ದಲಿತ ಸಂಘಟನೆಗಳ ಪರಿಚಯವು ಇವರಲ್ಲಿ ಸ್ವಾಭಿಮಾನವನ್ನು ಬೆಳೆಸುತ್ತದೆ. ಮುಖ್ಯವಾಗಿ ಅಂಬೇಡ್ಕರ್ ಒಬ್ಬ ಧೀಮಂತ ವ್ಯಕ್ತಿಯಾಗಿ ನಿಲ್ಲುತ್ತಾರೆ. ದೇವರು, ಧರ್ಮಗಳ ಬಗ್ಗೆ ನಿರ್ಲಕ್ಷ್ಯವು ಮೂಡುತ್ತದೆ. ಶೋಷಕ ಸಮುದಾಯಗಳು ಶತ್ರುರೂಪವಾಗಿ ಕಾಣತೊಡಗುತ್ತವೆ. ಜಾತೀಯತೆಯ ವಿಷಯ ಬಂದಾಗ ಇವರು ಭಾವುಕರಾಗುತ್ತಾರೆ. ತಮ್ಮ ವಾಸ್ತವ ಸ್ಥಿತಿಯು ಅನಿವಾರ್ಯ ಬದುಕಿನೊಂದಿಗೆ ಸರಿದೂಗಿಸಲು ತಮ್ಮ ಒಟ್ಟು ಶೋಷಿತ ಸಮುದಾಯ ಪರವಾದ ಪ್ರೇಮವು ಇವರಲ್ಲಿ ಬೆಳೆಯುತ್ತದೆ.

ದಲಿತ ಯುವಕ/ಯುವತಿಯರು ಹಾಸ್ಟೆಲ್ ಜೀವನ ಮುಗಿಯುತ್ತಿದ್ದಂತೆ, ಪರೀಕ್ಷಾ ಫಲಿತಾಂಶವು ಹೊರಬೀಳುತ್ತಿದ್ದಂತೆ ನಿಜವಾದ ಸಂಕಟಕ್ಕೆ ಗುರಿಯಾಗುತ್ತಾರೆ. ಏಕೆಂದರೆ ಹಾಸ್ಟೆಲ್ ಇವರ ಜೀವನದ ತಿರುವಿನ ಕೇಂದ್ರ. ಈ ಸಂದರ್ಭದಲ್ಲಿ ತಾವು ಬದುಕುವ ಸಾಮಾಜಿಕ ವ್ಯವಸ್ಥೆಯನ್ನು ಅದರ ನೀತಿ ನಿಯಮಾವಳಿಗಳನ್ನು ಬಹಿಷ್ಕರಿಸುತ್ತಾರೆ. ಅಲ್ಲದೆ ತಮ್ಮ ಹಿರಿಯ ತಲೆಮಾರಿನವರು ಅನಿವಾರ್ಯವಾಗಿ ಹೊಂದಿಕೊಂಡು ಹೋಗುತ್ತಿರುವುದು ಇವರ ಮನಸ್ಸಿಗೆ ಒಗ್ಗುವುದಿಲ್ಲ. ತಮ್ಮ ಊರು, ತಮ್ಮ ಹಳ್ಳಿ ಈ ಯುವಕ/ಯುವತಿಯರಿಗೆ ಬೇಡವೆನಿಸುತ್ತದೆ. ಏಕೆಂದರೆ ಅದನ್ನು ಸರಿಪಡಿಸಲು ಇವರಿಗೆ ಪಟ್ಟಭದ್ರ ಹಿತಾಸಕ್ತಿಗಳು ಬಿಡದ ಕಾರಣದಿಂದ. ವಿದ್ಯಾಭ್ಯಾಸ ಮುಗಿಸಿದ ದಲಿತ ಯುವಕ/ಯುವತಿಯರು ನಿರುದ್ಯೋಗಿಗಳ ಹಾಗೆ ಸಿಟಿ ಮತ್ತು ತಮ್ಮ ಊರಿಗೆ ಅಲೆಯಲು ಪ್ರಾರಂಭ ಮಾಡುತ್ತಾರೆ. ನಂತರದಲ್ಲಿ ಬದುಕು ಅನಿವಾರ್ಯವಾಗಿ ಬೆಳವಣಿಗೆಯನ್ನು ಹೊಂದುತ್ತಿರುವ ಕೈಗಾರಿಕಾ ನಗರಗಳಿಗೆ ಸೇರುತ್ತಾರೆ. ಅಲ್ಲಿ ಇತ್ತ ಸುಖವಾಗಿ ಬದುಕಲಾರದೆ, ಅತ್ತ ಹೀನ ಸ್ಥಿತಿಯಲ್ಲೂ ಬದುಕಲಾರದೆ ಒಂದಕ್ಕೆ ಆದರೆ ಮತ್ತೊಂದಕ್ಕೆ ಸಾಕಾಗದೆ ಇರುವ ಪರಿಸ್ಥಿತಿಗೆ ಬರುತ್ತಾರೆ. ಇದಕ್ಕೆ ಹಲವಾರು ಕಾರಣಗಳುಂಟು. ಅದರಲ್ಲಿ ಭೂಮಿ ಇಲ್ಲದಿರುವುದು ಇರಬಹುದು, ಆರ್ಥಿಕ ಮೂಲಗಳು ಇಲ್ಲದೆ ಇರುವುದು ಇರಬಹುದು ಅಥವಾ ಸಾಮಾಜಿಕ ಕಾರಣಗಳೂ ಇರಬಹುದು. ಇದು ಯುವಕರ ಸಮಸ್ಯೆಯಾದರೆ ದಲಿತ ಯುವತಿಯರ ಸಮಸ್ಯೆ ಇನ್ನಷ್ಟು ಪಜೀತಿಯದು. ಇವರಿಗೆ ಗಂಡು ಮಕ್ಕಳಷ್ಟು ಸ್ವಾತಂತ್ರ್ಯ ಇರುವುದಿಲ್ಲ. ಇವರು ಹಾಸ್ಟಲ್ ಜೀವನದಲ್ಲಿ ಆಧುನಿಕ ಆಕರ್ಷಣೆಗೆ ಒಳಾಗಾಗಿರುತ್ತಾರೆ. ಉಡುಗೆತೊಡುಗೆಯಲ್ಲಿ ಗ್ರಾಮೀಣ ಜೀವನಕ್ಕಿಂತ ಭಿನ್ನತೆಯು ನಗರದ ಹಾಸ್ಟೆಲ್ ಜೀವನವೂ ಕೊಟ್ಟಿರುತ್ತದೆ. ಕಾಲೇಜಿನ ವಾತಾವರಣ ಮತ್ತು ನಗರದ ಗೆಳತಿಯರ ಸ್ನೇಹವು ಮಾತಿನಲ್ಲೂ ಬದಲಾವಣೆಯನ್ನು ತಂದಿರುತ್ತದೆ. ಇವರು ತಮ್ಮ, ತಮ್ಮ ಜನಾಂಗದ ಶೋಷಣೆಯನ್ನು ಅರಿತಿರುತ್ತಾರೆ. ಶಿಕ್ಷಣ ಮುಗಿದ ನಂತರದಲ್ಲಿ ಅನಿವಾರ್ಯವಾಗಿ ತಾನು ಒಲ್ಲದ ಮನಸ್ಸಿನಲ್ಲಿ, ಪಟ್ಟಭದ್ರ ಸಾಮಾಜಿಕ ವ್ಯವಸ್ಥೆಗೆ ಸೇರಿಕೊಳ್ಳಬೇಕಾಗುತ್ತದೆ. ಏಕೆಂದರೆ ಯುವಕರಷ್ಟು ಹೊರಗೆ ಹೇಗೋ ಕಾಲಕಳೆಯುವ ಅವಕಾಶ, ಸ್ವಾತಂತ್ರ್ಯ ಇವರಿಗೆ ಇರುವುದಿಲ್ಲ. ವಿದ್ಯಾವಂತ ದಲಿತ ಹೆಣ್ಣುಮಕ್ಕಳೆಲ್ಲರೂ ಉದ್ಯೋಗಸ್ಥ ಇಲ್ಲವೆ ಆರ್ಥಿಕ ಸದೃಢವಾದ ಕುಟುಂಬವನ್ನು ಸೇರುವ ಪರಿಸ್ಥಿತಿ ಇಲ್ಲ. ಉದ್ಯೋಗ ಸಿಕ್ಕಿ ಅಲ್ಪ ಸ್ವಲ್ಪ ತಮ್ಮ ಸಮಸ್ಯೆ ಸುಧಾರಿಸುವ ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆ. ಈ ಮೇಲಿನ ರೀತಿಯಲ್ಲಿ ದಲಿತರ ಬದುಕಿನಲ್ಲಿ ಶಿಕ್ಷಣದ ಪಾತ್ರವು ಇದೆ.

## ದಲಿತರು ಮತ್ತು ನೌಕರಿ

ಮಾನವನ ಬದುಕಿನಲ್ಲಿ ಅಗತ್ಯವಾದದ್ದು ಗಾಳಿ ನೀರನ್ನು ಬಿಟ್ಟರೆ ನಂತರದಲ್ಲಿ ಊಟ, ಬಟ್ಟೆ, ವಸತಿ ಮುಖ್ಯವಾದವುಗಳು. ಅಂದರೆ ಅವನ ಜೀವನ ಪರಿಯಂತ ಉಣ್ಣಲು ಯಾರಾದರೂ ದುಡಿದು ಇಟ್ಟಿರಬೇಕು; ಇಲ್ಲವೆ

ಅವನಿಗೆ ದುಡಿಮೆ ಇರಬೇಕು. ದುಡಿಯದ ಹೊರತು ಜೀವನ ಸಾಧ್ಯವೇ ಇಲ್ಲ. ದುಡಿಮೆಯಲ್ಲಿ ನಾನಾ ವಿಧಗಳಿವೆ. ಅದೇ ರೀತಿಯಲ್ಲಿ ಆಸ್ತಿ ಉಳ್ಳವರು ದುಡಿಸಿಕೊಳ್ಳುವವರೂ ಇದ್ದಾರೆ.

ದಲಿತರು ಇಂದು ಸರ್ಕಾರಿ ನೌಕರಿಗಳಿಗೆ ಏಕೆ ಹಾತೊರೆಯುತ್ತಿದ್ದಾರೆ? ಅದಕ್ಕೆ ಅವರ ಸಾಮಾಜಿಕ, ಆರ್ಥಿಕ, ರಾಜಕೀಯ ಹಿನ್ನೆಲೆ ಎಂತಹದು ಎಂಬುದನ್ನು ಗಮನಿಸಬೇಕು. ಇಲ್ಲಿಯ ಸರ್ಕಾರಿ ವ್ಯವಸ್ಥೆ ಎಂತಹದು ಎಂಬುದೂ ಕೂಡ ಮುಖ್ಯವಾಗುತ್ತದೆ. ಇಂದು ದಲಿತರು ಹಳ್ಳಿಗಳಿಂದ ನಗರಕ್ಕೆ ಬರುವುದು ಕಂಡುಬರುತ್ತಿದೆ. ಅದಕ್ಕೆ ಎರಡು ಕಾರಣಗಳಿವೆ. ಒಂದು ಶಿಕ್ಷಣಕ್ಕೆ ಸಂಬಂಧಿಸಿದಂತೆ; ಮತ್ತೊಂದು ದುಡಿಮೆಗೆ ಸಂಬಂಧಿಸದಂತೆ. ಸಾಮಾಜಿಕ ಬಿಕ್ಕಟ್ಟುಗಳಿರುವ ಹಳ್ಳಿಗಳಲ್ಲಿ, ಅಸಮಾನತೆ, ಶೋಷಣೆ, ದಬ್ಬಾಳಿಕೆ, ದೌರ್ಜನ್ಯಗಳಿಗೆ ಪ್ರತಿಭಟಿಸಲು ಆಗದೆ, ಅವರೊಂದಿಗೆ ಹೊಂದಿಕೊಂಡು ಬಾಳ್ವೆ ಮಾಡಲು ಆಗದ ಯುವ ಪೀಳಿಗೆ ಶಿಕ್ಷಣದ ಮೂಲಕ ನಗರ ಸೇರುತ್ತಿದ್ದಾರೆ. ನಗರವನ್ನು ಸೇರಿದರೆ ದಲಿತರಿಗಿರುವ ಸಾಮಾಜಿಕ ಅಸಮಾನತೆ ದೌರ್ಜನ್ಯಗಳು ತಪ್ಪುತ್ತವೆಯೆ? ಹುಟ್ಟಿದ ಊರಲ್ಲಿ ಪ್ರತಿಭಟಿಸಲು ಏಕೆ ಆಗುವುದಿಲ್ಲ ಎಂಬುದಕ್ಕೆ ಹಲವಾರು ಕಾರಣಗಳು ಸಿಗುತ್ತವೆ. ಇವರು ಹಳ್ಳಿಯ ಸಂಬಂಧವನ್ನು ಕಳೆದುಕೊಳ್ಳಲಾರದ, ನಗರ ಜೀವನದಲ್ಲಿ ಹೊಂದಿಕೊಂಡು ಹೋಗಲಾರದಂತೆ ಸ್ಥಿತಿಯನ್ನು ತಲುಪುತ್ತಾರೆ. ನಗರದಲ್ಲಿ ಸೇರಿದ ದಲಿತರಿಗೆ ತಮಗೆ ಅನುಕೂಲಕ್ಕೆ ತಕ್ಕಂತೆ ಉದ್ಯೋಗಳು ದೊರೆಯುವುದಿಲ್ಲ. ಆದ್ದರಿಂದ ಇವರು ಇರುವ ವ್ಯವಸ್ಥೆಯೊಂದಿಗೆ ಹೊಂದಿಕೊಂಡು ಹೋಗುವುದು ಅನಿವಾರ್ಯವಾಗುತ್ತದೆ. ನಗರದಲ್ಲಿ ಮುಖ್ಯವಾಗಿ ದಲಿತ ಜನಾಂಗದ ಅವಿದ್ಯಾವಂತ, ಹಿರಿಯ ತಲೆಮಾರಿನವರಿಗೆ ಎದುರಾಗುವುದು ಸಂವಹನದ ಸಮಸ್ಯೆ. ತಮ್ಮ ಪರಿಸರಕ್ಕಿಂತ ಭಿನ್ನವಾದ ಭಾಷೆಯ ಸಂವಹನದ ಸಮಸ್ಯೆಯು ಅನಿವಾರ್ಯವಾಗಿ ಪರಕೀಯ ಭಾವನೆಯನ್ನು ಮೂಡಿಸುತ್ತದೆ. ಅಲ್ಲದೆ ನಗರ ವಾಸಿಗಳಿಗೆ ಮತ್ತು ಗ್ರಾಮದ ವಾಸಿಗಳಿಗೆ ಸಾಂಸ್ಕೃತಿಕವಾಗಿ ಈಗಾಗಲೇ ಅಂತರ ನಿರ್ಮಿತವಾಗಿರುವುದರಿಂದ ಅಲ್ಲದೆ ಸಂವಹನ, ಕೆಲಸ, ದುಬಾರಿಯ ಜೀವನದ ಭಾಗಿತ್ವಕ್ಕೆ ತೊಡಕುಂಟಾಗುತ್ತದೆ. ಆದ್ದರಿಂದ ಗ್ರಾಮೀಣ ಪ್ರದೇಶಗಳಲ್ಲಿನ ಅವಿದ್ಯಾವಂತ ದಲಿತ ಪೀಳಿಗೆಯು ತಮ್ಮ ಶೋಷಿತ ಬದುಕಲ್ಲಿ ಹೇಗೋ ಹಾಗೆ ಹೊಂದಿಕೊಂಡು ಬದುಕುವ ಸ್ಥಿತಿ ಇದೆ.

ಅಕ್ಷರ ಜ್ಞಾನವನ್ನು ಪಡೆದ ಇಂದಿನ ದಲಿತ ಯುವ ತಲೆಮಾರಿನ ಜನಾಂಗಗಳೆಲ್ಲವು ತಮ್ಮ ತಂದೆ ಅಥವಾ ಹಿರಿಯ ತಲೆಮಾರಿನ ವ್ಯವಸ್ಥೆಯೊಂದಿಗೆ ಹೊಂದಿಕೆಯಾಗುವುದು ಕಷ್ಟ. ಅವರ ಜೀವನಕ್ಕಿಂತ ಉತ್ತಮವೆಂದು ಭಾವಿಸಿದ ಯುವಪೀಳಿಗೆ ಆಕರ್ಷಿತ ನಗರ ಜೀವನಕ್ಕೆ, ಸಿಕ್ಕ ವೃತ್ತಿಗಳಿಗೆ ತೊಡಗಿಸಿಕೊಂಡು ಇರುವುದು ಕಂಡುಬರುತ್ತದೆ. ಅಂದರೆ ಅವರ ತೀರ್ಮಾನದಲ್ಲಿ ಭೂಮಾಲೀಕರ ಮನೆಯಲ್ಲಿ ದುಡಿಯುವುದಕ್ಕಿಂತ, ಅನ್ಯರ ಮನೆಯ ಕೃಷಿಯ ಹಳ್ಳಿಯ ಬದುಕಿಗಿಂತ ಕೊನೇಪಕ್ಷ ನಗರದ ಹೋಟೆಲಿನಲ್ಲಿ ಕೆಲಸಮಾಡುವುದು ಲೇಸು ಎಂಬುದಾಗಿದೆ. ಹಳ್ಳಿಯಲ್ಲಿ ಬದುಕುವ ಹಲವು ಸಮುದಾಯಗಳಲ್ಲಿ ಸಿಗದ ಸ್ವತಂತ್ರವು ನಗರದಲ್ಲಿ ಸಿಗುವುದು ಇದಕ್ಕೆ ಮುಖ್ಯವಾದ ಕಾರಣವಾಗಿರಬಹುದು. ಆದರೂ ಇನ್ನೂ ಅನೇಕ ಕಾರಣಗಳಿಂದ ಹಳ್ಳಿಗಳಿಂದ ನಗರಕ್ಕೆ ನೌಕರಿಗೋಸ್ಕರ ಕೆಲವು ದಲಿತರು ಬರುತ್ತಿರುವುದು ಕಂಡುಬರುತ್ತದೆ.

ಇಂದು ಕೆಲವು ದಲಿತರು ಸರ್ಕಾರಿ ಮತ್ತು ಖಾಸಗಿ ವಲಯಗಳ ನೌಕರಿಯಲ್ಲಿ ಸೇರಿ ಹೋಗಿದ್ದಾರೆ. ಇವರಿಗೆ ಸರ್ಕಾರಿ ನೌಕರಿಯ ಮೇಲೆ ಅದಮ್ಯ ಕನಸುಗಳಿವೆ. ಏಕೆಂದರೆ ಇದರಲ್ಲಿ ಜೀವನಕ್ಕೊಂದು ಆಶ್ರಯ ಇರುತ್ತದೆ ಎಂದು. ಈ ಸಮುದಾಯಗಳ ಉದ್ಯೋಗಸ್ಥರು ಹಾಗೂ ನಿರುದ್ಯೋಗಿಗಳನ್ನು ನೋಡುವಾಗ ದಲಿತರಿಗೆ ಯಾವ ಕೆಲಸ ಸಿಗುತ್ತದೆ? ಯಾರಿಗೆ ಸಿಗುತ್ತದೆ? ಇಂದು ಏಕೆ ನಿರುದ್ಯೋಗಿಗಳು ದಲಿತರಲ್ಲಿ ಹೆಚ್ಚಾಗಿ ಕಂಡು ಬರುತ್ತಿದ್ದಾರೆ. ಹಾಗೆಯೆ ಇವರ ಸಮಸ್ಯೆ ಎಂತಹದು? ಇವರ ಭವಿಷ್ಯವೇನು ಎಂಬ ಪ್ರಶ್ನೆಗಳು ಎದುರಾಗುತ್ತವೆ. ಹಾಗಾಗಿ ಇವರು ಪಡೆಯುವ ಶಿಕ್ಷಣಕ್ಕೆ ಎಂತಹ ಉದ್ಯೋಗಳು ಕೈಗೆ ಎಟಕುತ್ತವೆ? ಇಂದಿನ ವಿದ್ಯಮಾನಕ್ಕೆ ದಲಿತರು ಶಿಕ್ಷಣ ಪಡೆಯುವ ಯಾವ ಪರಿಸರವನ್ನು ಹೊಂದಿದ್ದಾರೆ ಎಂಬುದನ್ನು ಈ ಹಿಂದೆ ಚರ್ಚಿಸಲಾಗಿದೆ.

ದಲಿತರ ಸಮಸ್ಯೆ ಕಾಲದಿಂದ ಕಾಲಕ್ಕೆ ಸ್ವರೂಪದಲ್ಲಿ ಬದಲಾವಣೆಯನ್ನು ಹೊಂದುತ್ತಿದೆ. ದಲಿತ ಸಮುದಾಯಗಳ ತಲೆಮಾರುಗಳಲ್ಲಿ ಅನುಭವಿಸುತ್ತಿರುವ ಸಮಸ್ಯೆಗಳು ಏಕ ಸ್ವರೂಪವನ್ನು ಹೊಂದಿಲ್ಲ. ಅವು ಭಿನ್ನತೆಯಿಂದ ಕೂಡಿವೆ. ಸಾಮಾನ್ಯವಾಗಿ ಹೇಳುವುದಾದರೆ ೩೦-೪೦ವಯಸ್ಸಿನವರು ಯಾವುದಾದರೂ ದುಡಿಮೆ ಮಾಡಿ ಬದುಕು ಸಾಗಿಸಲು ರಕ್ತವನ್ನು ಬೆವರಾಗಿ ಹರಿಸುತ್ತಿದ್ದಾರೆ. ಅಷ್ಟೇ ಅಲ್ಲದೆ ಆಳುವ ವರ್ಗಗಳ ಸವಾಲನ್ನು ಎದುರಿಸುತ್ತಿದ್ದಾರೆ. ಈ ಪೀಳಿಗೆಯ ದಲಿತ ಯುವ ಸಮುದಾಯ ನಿರುದ್ಯೋಗವನ್ನು ಅನುಭವಿಸುತ್ತಿದೆ. ನಿರುದ್ಯೋಗ ಮತ್ತು ಬದುಕಲ್ಲಿ ದಲಿತರು ಅತಂತ್ರ ಸ್ಥಿತಿಯನ್ನು ತಲುಪಿದ್ದಾರೆ. ಹಾಗಾಗಿ ಇವರ ಬದುಕಲ್ಲಿ ನೌಕರಿಯು ಡೋಲಾಯಮಾನ ಸ್ಥಿತಿಯನ್ನು ಇಂದು ತಂದುಕೊಟ್ಟಿದೆ.

ಇಂದು ಕೆಲವು ದಲಿತ ಕುಟುಂಬಗಳಿಂದ ಮೊದಲನೆ, ಎರಡನೆ ಅಥವಾ ಮೂರನೆಯ ತಲೆಮಾರಿನ ನೌಕರರನ್ನು, ವಿದ್ಯಾವಂತರನ್ನು ಕಾಣುತ್ತೇವೆ. ಇದು ಸಾರ್ವತ್ರಿಕವಾಗಿ ಅಲ್ಲ; ಅಲ್ಲಲ್ಲಿ ಕಂಡುಬಂದಿದ್ದಾರೆ. ಮತ್ತೆ ಇದನ್ನು ಕರ್ನಾಟಕದಾದ್ಯಂತಕ್ಕೆ ಹೇಳಲು ಬರುವುದಿಲ್ಲ. ಇದು ಪ್ರಾದೇಶಿಕವಾಗಿ ಭಿನ್ನತೆಯನ್ನು ಹೊಂದಿದೆ. ಅದಕ್ಕೆ ಅವರು ಬದುಕುವ ಪರಿಸರದ ಸಂಪನ್ಮೂಲಗಳು ಕಾರಣ ಇರಬಹುದು. ಇಲ್ಲವೆ ಅದಕ್ಕೆ ಪ್ರೇರಕ ಮತ್ತು ಇತರೆ ಕಾರಣಗಳು ಇರಬಹುದು. ಕರ್ನಾಟಕದಲ್ಲಿ ದಲಿತರ ನೌಕರಿಗೆ ಸಂಬಂಧಪಟ್ಟಂತೆ ಇರುವ ಅಂಶಗಳನ್ನು ಹೀಗೆ ಹೇಳಬಹುದು. ಮೈಸೂರು, ಮಂಡ್ಯ, ಚಾಮರಾಜನಗರ, ಬೆಂಗಳೂರು, ಕೋಲಾರ ಮುಂತಾದ ಭಾಗಗಳಲ್ಲಿ ಮೂರನೇ ತಲೆಮಾರಿನ ವಿದ್ಯಾವಂತರನ್ನು (ಶಿಕ್ಷಣ ಹೊಂದಿದವರನ್ನು), ಮಡಿಕೇರಿ, ಹಾಸನ, ಮಂಗಳೂರು, ಚಿತ್ರದುರ್ಗ, ತುಮಕೂರು, ಶಿವಮೊಗ್ಗ, ಚಿಕ್ಕಮಗಳೂರು, ಧಾರವಾಡ ಮುಂತಾದ ಭಾಗಗಳಲ್ಲಿ ಎರಡನೇ ತಲೆಮಾರಿನ ವಿದ್ಯಾವಂತರನ್ನು ಕಾಣಬಹುದು. ಇನ್ನೂ ಉತ್ತರಕರ್ನಾಟಕ್ಕೆ ಬಂದಂತೆ ಗುಲ್ಬರ್ಗ, ಬೀದರ್, ರಾಯಚೂರು, ಬಿಜಾಪುರ, ಬೆಳಗಾವಿ, ಬಳ್ಳಾರಿ, ಉತ್ತರಕನ್ನಡ ಮುಂತಾದ ಭಾಗಗಳಲ್ಲಿ ಮೊದಲ ತಲೆಮಾರಿನ ವಿದ್ಯಾವಂತರು ಕಾಣಸಿಗುತ್ತಾರೆ. ಇದನ್ನು ಸಂಪೂರ್ಣವಾಗಿ ಸಾರ್ವತ್ರಿಕಗೊಳಿಸಲು ಬರುವುದಿಲ್ಲ. ಉದಾಹರಣೆಯಾಗಿ ನೋಡಬಹುದು. ಇಂದು ಮೊದಲ ತಲೆಮಾರಿನ ವಿದ್ಯಾವಂತ ದಲಿತ ಕುಟುಂಬಗಳ ಯುವಕರು ನೌಕರಿಯನ್ನು ಪಡೆಯುವುದು ಕಷ್ಟವೇ ಸರಿ. ಅದಕ್ಕೆ ಹಲವು ಕಾರಣಗಳು ಉಂಟು. ಈ ಹೊತ್ತಿನ ಜಾತಿಕೇಂದ್ರಿತ ದೃಷ್ಟಿಯಿಂದ, ಶಕ್ತಿ ರಾಜಕಾರಣದಲ್ಲಿ ಸೀಟುಗಳ ಹಂಚಿಕೆಯೂ ನಡೆದಿರುತ್ತದೆ. ಅದು ತಮ್ಮ ಜಾತಿಕೇಂದ್ರಿತ ಸಂಘಟನೆಯನ್ನು ಬಲಪಡಿಸುತ್ತಾ ಬಂದಿರುತ್ತದೆ. ದಲಿತ ಸಮುದಾಯಗಳ ಒಳಗೇ ಇರುವ ಮಾದಿಗ, ಹೊಲೆಯ, ಮೋಚಿ, ಸಮಗಾರ, ತಳವಾರ, ಬೋವಿ, ನಾಯಕ, ಲಂಬಾಣಿ, ಕೊರವ,

ದೊಂಬ ಮುಂತಾದ ನೂರಾರು ಜಾತಿಗಳಲ್ಲಿ ನೌಕರಿಯ ಪೈಪೋಟಿ ನಡೆಯುತ್ತವೆ. ಇವು ತಮ್ಮ ಜನಾಂಗಗಳ ಜನಸಂಖ್ಯೆಯ ಆಧಾರದ ಮೇಲೆ ನಡೆಯುತ್ತಿವೆ. ಮಾದಿಗ ದಂಡೋರ ಮೀಸಲಾತಿ ಸಮಿತಿ, ಅಖಿಲ ಕರ್ನಾಟಕ ಚಲವಾದಿ ಸಂಘ ಮುಂತಾದವು ತಮ್ಮ ಜನಾಂಗಗಳ ಉದ್ಯೋಗದ ಮೀಸಲಾತಿಯನ್ನು ಕೇಳುತ್ತಲಿವೆ. ಅದಕ್ಕೆ ಸಂಬಂದಿಸಿದ ಈಗಾಗಲೇ ಇರುವ ಅಧಿಕಾರಿಗಳು ಮತ್ತು ಅವರಲ್ಲೇ ಉತ್ತಮ ಸ್ಥಿತಿಯಲ್ಲಿ ಇರುವವರನ್ನು ಪತ್ತೆ ಹಚ್ಚಿ ಸಂಘಟಿತರಾಗುತ್ತಿದ್ದಾರೆ. ಹೀಗೆ ಈ ದಲಿತ ಸಮುದಾಯದ ಒಳಗೆಯೇ ಪ್ರಾರಂಭವಾದ ಪೈಪೋಟಿ ಬಲಿಷ್ಠರನ್ನು ಮುಂದಕ್ಕೆ ತರುತ್ತಿದೆ.

ನೌಕರಿ ಆಯ್ಕೆಯಲ್ಲಿ ಇಂದು ಎರಡು ರೀತಿಯನ್ನು ಕಾಣುತ್ತೇವೆ. ಒಂದು: ಉತ್ತಮ ಅಂಕಗಳಿಂದ, ಮತ್ತೊಂದು ಅಂಕಗಳ ಜೊತೆಗೆ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಸಂದರ್ಶನದ ಮೂಲಕ. ವಸ್ತು ಸ್ಥಿತಿ ಏನೆಂದರೆ ಕಡಿಮೆ ಇರುವ ಹುದ್ದೆಗಳು ಮತ್ತು ಅದಕ್ಕೆ ಬಂದ ಹಲವಾರು ಅರ್ಜಿಗಳು ಈ ಸ್ಪರ್ಧಾತ್ಮಕತೆಯಲ್ಲಿ ಅನಿವಾರ್ಯವಾಗಿ ಶೋಧಿಸಲೇ ಬೇಕಾಗುತ್ತದೆ. ಈ ಶೋಧನೆಯಲ್ಲಿ ಗೆಲ್ಲಲು ಅಭ್ಯರ್ಥಿಗಳು ತನ್ನ ಮಿತಿಯಲ್ಲಿನ ಆಡಳಿತ ಮತ್ತು ರಾಜಕೀಯ ಒತ್ತಡಗಳನ್ನು ತಂದು ಒಡ್ಡುತ್ತಾರೆ. ಇದರಲ್ಲಿ ಶಕ್ತಿಹೀನರು ಹಿಂದೆ ಉಳಿಯುತ್ತಾರೆ. ಆರ್ಥಿಕವಾಗಿ, ರಾಜಕೀಯ ಒತ್ತಡಗಳಿರುವ ನೌಕರಿ ಅಥವ ವ್ಯವಸ್ಥಿತ ಕುಟುಂಬಗಳಿಂದ ಬಂದ ವ್ಯಕ್ತಿಗಳು ಸುಲಭವಾಗಿ ನೌಕರಿಯನ್ನು ಪಡೆಯುತ್ತಾರೆ. ಇದು ಇಂದು ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದ ಪ್ರಭಾವಗಳ ಹಿನ್ನಲೆಯಿಂದ ಕಂಡು ಬರುವಂತಹದು. ಆದರೆ ಇಲ್ಲಿ ನೌಕರಿ ಯಾರಿಗೆ ಸಿಗುತ್ತದೆ ಎಂಬುದಕ್ಕೆ ವ್ಯಕ್ತಿಯ ಬೌದ್ಧಿಕತೆ ಮತ್ತು ಅವನ ಪರಿಸರದ ವಾಸ್ತವಿಕತೆ ಎಂತಹದು ಎಂಬುದನ್ನು ನೋಡುವುದಿಲ್ಲ. ಸರ್ಕಾರದ ನಿಯಮಗಳು ನೋಡಲು ಸರಿಯಾಗಿಯೇ ಇರುತ್ತವೆ. ಆದರೆ ಆ ನಿಯಮಗಳು ಎಷ್ಟು ಜನೋಪಕಾರಿಯಾದವು; ಮತ್ತು ಅವು ಈ ಹೊತ್ತಿನಲ್ಲಿ ಎಷ್ಟು ಪ್ರಸ್ತುತವಾದವು ಎಂಬವುಗಳು ದಲಿತರ ನೌಕರಿಯ ವಾಸ್ತವದಲ್ಲಿ ಕಂಡುಬರುತ್ತದೆ.

ದಲಿತರ ಸಮಸ್ಯೆಯು ಇಂದು ಬರೀ ಗ್ರಾಮೀಣ ಪ್ರದೇಶದ ಯಜಮಾನಿಕೆಯಿಂದ, ಅಥವಾ ನಗರದ ಆಳುವ ವರ್ಗಗಳಿಂದ ಅಳೆಯಲು ಸಾಧ್ಯವಿಲ್ಲ. ಅದು ತನ್ನ ಮಜಲುಗಳನ್ನು ಬದುಕಿನ ಎಲ್ಲಾ ಆಯಾಮಗಳಿಗೆ ವಿಸ್ತೃತವಾಗಿ ಆವರಿಸಿಕೊಂಡಿದೆ. ಆದ್ದರಿಂದ ಅಸ್ಪೃಶ್ಯತೆ ಮತ್ತು ಶೋಷಣೆಗೆ ಸಂಬಂಧಿಸಿದಂತೆ ದಲಿತರ ಸಮಸ್ಯೆಗಳು ಚರ್ಚೆಗೆ ಎಷ್ಟು ಪ್ರಸ್ತುತಗೊಳ್ಳುತ್ತಿವೆಯೋ, ಅಷ್ಟೇ ಪ್ರಮಾಣದಲ್ಲಿ ದಲಿತರ ನೌಕರಿಗೆ ಸಂಬಂಧಿಸಿದಂತೆ ಚರ್ಚಿಸುವುದು ಅಗತ್ಯ. ಇಂದು ದೇಶದ ನಿರುದ್ಯೋಗ ಸಮಸ್ಯೆಯಲ್ಲಿ ದಲಿತ ನಿರುದ್ಯೋಗಿಗಳ ಪಾತ್ರ ಎಂತಹದು, ಅವುಗಳು ಎಂತಹ ನಿರುದ್ಯೋಗವನ್ನು ಅನುಭವಿಸುತ್ತಿವೆ ಎಂಬುವುಗಳು ಅವುಗಳ ಅಧ್ಯಯನಗಳಿಂದ ಕಂಡುಬರುತ್ತದೆ.

## ದಲಿತರು ಮತ್ತು ರಾಜಕೀಯ

ರಾಜಕೀಯ ವ್ಯವಸ್ಥೆಯಲ್ಲಿ ದಲಿತರ ಪಾತ್ರವನ್ನು ಕುರಿತು ಇಲ್ಲಿ ಚರ್ಚಿಸಲಾಗುವುದು.

ದಲಿತರ ರಾಜಕಾರಣ ಎಂತಹದು? ಅದು ಹೇಗಿದೆ? ಈ ದಲಿತ ರಾಜಕಾರಣವು ದಲಿತರ ಬದುಕಿನಲ್ಲಿ ಹೇಗೆ ಆಪುತ್ತಿದೆ? ಎಂಬುದನ್ನು ಇಲ್ಲಿ ಚರ್ಚಿಸಲಾಗುವುದು. ದಲಿತರ ರಾಜಕಾರಣದ ಪ್ರಶ್ನೆ ಬಂದಾಗ ಹಳ್ಳಿಯ ದಲಿತರ

ರಾಜಕಾರಣಿಯಿಂದ ಹಿಡಿದು ರಾಷ್ಟ್ರಮಟ್ಟದ ದಲಿತ ಉನ್ನತ ರಾಜಕಾರಣಿಯವರೆಗೂ ವಿಸ್ತರಿಸಿಕೊಳ್ಳುತ್ತದೆ. ಇದನ್ನು ಇಲ್ಲಿ ವಿಭಾಗಿಸಿಕೊಂಡು ಚರ್ಚಿಸಬಹುದು.

ದಲಿತರ ರಾಜಕೀಯವನ್ನು ಇಂದಿನ ರಾಜಕೀಯದ ಎಲ್ಲಾ ಹಂತಗಳಲ್ಲಿ ನೋಡಬಹುದು. ಇದರಲ್ಲಿ ಮೀಸಲಾತಿಯ ಸೌಲಭ್ಯವು ಪ್ರಮುಖವಾಗಿದೆ. ರಾಜಕಾರಣಕ್ಕೆ ದಲಿತರು ಬರುವಾಗ ಅವರ ಚುನಾವಣಾ ಕ್ಷೇತ್ರ ಯಾವುದು ಎಂಬುದು ಮುಖ್ಯವಾಗುತ್ತದೆ? ಅಂದರೆ ದಲಿತರ ಮೀಸಲು ಕ್ಷೇತ್ರ ಇವರ ಚುನಾವಣೆ ಕ್ಷೇತ್ರ ಆಗಿರುತ್ತವೆ. ಈ ಕ್ಷೇತ್ರದಿಂದಲೇ ದಲಿತರು ಆಯ್ಕೆಯಾಗಿ ರಾಜಕಾರಣಿಗಳಾಗಬೇಕು. ಈ ಮೀಸಲು ಕ್ಷೇತ್ರವನ್ನು ಬಿಟ್ಟು ಬೇರೆ ಕ್ಷೇತ್ರಗಳಲ್ಲಿ ದಲಿತರು ಸ್ಪರ್ಧಿಸಿದರೂ ಚುನಾಯಿತರಾಗಲು ಸಾಧ್ಯವಿಲ್ಲ. ದಲಿತ ಮತದಾರರ ಸಂಖ್ಯೆಗೆ ಅನುಗುಣವಾಗಿ ಚುನಾವಣೆಗಳಲ್ಲಿ ಕೆಲವು ಕ್ಷೇತ್ರಗಳನ್ನು ದಲಿತರಿಗೆ ಮೀಸಲಿಡುತ್ತಾರೆ.

ಮೀಸಲು ಕ್ಷೇತ್ರದಿಂದ ಚುನಾಯಿತರಾದ ವ್ಯಕ್ತಿಗಳು ಸಾಮಾನ್ಯವಾಗಿ ರಾಜಕೀಯದಲ್ಲಿ ಮುಂದಿನ ಹಂತಗಳಿಗೆ ಹೋಗುತ್ತಾರೆ. ಇದು ಮೀಸಲು ಕ್ಷೇತ್ರದವರಿಗೆ ಮಾತ್ರ ಸೀಮಿತವಿರದೆ ಬೇರೆ ಕ್ಷೇತ್ರದವರಿಗೂ ಅನ್ವಯಿಸುತ್ತದೆ. ಮೀಸಲು ಕ್ಷೇತ್ರದಿಂದ ಚುನಾಯಿತ ವ್ಯಕ್ತಿಯು ತನ್ನ ಸಮುದಾಯ(ಜನಾಂಗ)ದ ನಾಯಕನಾಗಿ ಮಾತ್ರ ಇರುವುದಿಲ್ಲ. ಅವನು ಇಡೀ ಕ್ಷೇತ್ರದ ಎಲ್ಲಾ ಸಮುದಾಯಗಳ ಪ್ರತಿನಿಧಿ ಆಗಿರುತ್ತಾನೆ. ಅಂದರೆ ಇವನು ಜಾತಿಯಿಂದ ದಲಿತ ಸಮುದಾಯದವನಾಗಿದ್ದರೂ ರಾಜಕೀಯದಿಂದ ಬರೀ ದಲಿತ ಸಮುದಾಯಕ್ಕೆ ಮಾತ್ರ ಸೀಮಿತನಾಗಿರುವುದಿಲ್ಲ. ಈ ನಾಯಕನಿಗೆ ಇಡೀ ಎಲ್ಲಾ ಸಮುದಾಯಗಳ ಜವಾಬ್ದಾರಿ ಬೀಳುತ್ತದೆ. ಇಲ್ಲಿ ಇವನು ಪ್ರದೇಶದ ಗ್ರಾಮ ಪಂಚಾಯ್ತಿಯ ಸದಸ್ಯನಿಂದ ಹಿಡಿದು ಎಂ.ಪಿಯವರೆಗೆ ಆಗಬಹುದು. ಇಲ್ಲಿ ಬಂದ ದಲಿತ ರಾಜಕೀಯ ನಾಯಕರು ಈ ಪ್ರದೇಶಗಳ ಪ್ರಭಾವಿತ ಸಮುದಾಯಗಳ ಪ್ರಭಾವಕ್ಕೆ ಅನಿವಾರ್ಯವಾಗಿ ಸಿಕ್ಕಿ ಬೀಳುತ್ತಾರೆ. ಅಂದರೆ ಚುನಾವಣೆಯ ಪೂರ್ವಯೋಜಿತದಲ್ಲಿ ಹಾಗೂ ನಂತರದ ಸಾಮಾಜಿಕ ಬದುಕಿನಲ್ಲಿ ಈ ಪ್ರಭಾವಿತ ವರ್ಗದ ಒತ್ತಡಕ್ಕೆ ಸಿಗದೆ ಇರಲು ಸಾಧ್ಯವೇ ಇಲ್ಲ. ಇಂಥ ಬಿಕ್ಕಟ್ಟುಗಳು ದಲಿತ ರಾಜಕಾರಣದಲ್ಲಿ ಎದುರಾಗುತ್ತವೆ. ದಲಿತ ರಾಜಕಾರಣಿಗಳು ದಲಿತರ ಸಮಸ್ಯೆಯನ್ನು ಮಾತ್ರ ಯೋಚಿಸುವಂತವರು ಎಂಬುದನ್ನು ಕೂಡ ಇವರಿಗೆ ಕಟ್ಟಿಬಿಡುತ್ತಾರೆ. ಅಲ್ಲದೆ ಈ ದಲಿತೇತರ ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿರುವ ಸಮುದಾಯಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ದಲಿತ ರಾಜಕಾರಣಿಗಳನ್ನು ಬಳಸಿಕೊಳ್ಳುತ್ತಾರೆ. ಈ ದಲಿತೇತರ ಸಮುದಾಯಗಳ ಪಟ್ಟಭದ್ರ ಹಿತಾಸಕ್ತಿಗೆ ಎದುರು ನಿಂತರೆ ದಲಿತ ರಾಜಕಾರಣಿಗಳು ಅನೇಕ ಬಿಕ್ಕಟ್ಟುಗಳನ್ನು ಎದುರಿಸಬೇಕಾಗುತ್ತದೆ.

ಇಂದು ದೇಶದ ರಾಜಕೀಯ ಆಡಳಿತದಲ್ಲಿ ದಲಿತ ಎಂ.ಎಲ್.ಎ, ಎಂ.ಪಿ., ಮಂತ್ರಿ, ಮುಖ್ಯಮಂತ್ರಿಗಳನ್ನು ಕಂಡಿದ್ದೇವೆ. ಅಲ್ಲದೆ ದೇಶದ ಪ್ರಥಮ ಪ್ರಜೆ ಎಂದು ಹೇಳಲಾಗುವ ರಾಷ್ಟ್ರಪತಿಯನ್ನೂ ಕಂಡಿದ್ದೇವೆ. ಈ ಸಂದರ್ಭದಲ್ಲಿ ಎಲ್ಲಾ ಪಕ್ಷಗಳು ಸಹಮತವನ್ನು ನೀಡಿ ರಾಷ್ಟ್ರಾಧ್ಯಕ್ಷ ದಲಿತನನ್ನೇ ಆಯ್ಕೆ ಮಾಡಿದ್ದಾರೆ. ಅಂದರೆ ಇಲ್ಲಿ ದಲಿತರ ಸಾಮಾಜಿಕ ಸ್ಥಾನಮಾನ, ಆರ್ಥಿಕ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ಚರ್ಚಿಸಲಾಗುವುದು. ದಲಿತರಿಗೆ ರಾಜಕೀಯ ಶಕ್ತಿ ಸಿಕ್ಕರೆ ದಲಿತರ ವಿಮೋಚನೆ ಸಾಧ್ಯ ಎಂಬ ವಾದವಿದೆ. ಮೀಸಲಾತಿಯ ಅಡಿಯಲ್ಲಿ ಎಂ.ಎಲ್.ಎ, ಎಂ.ಪಿ ಗಳಿದ್ದಾರೆ; ಅಲ್ಲದೆ ಈ ದೇಶವು ಒಬ್ಬ ದಲಿತ ಮುಖ್ಯಮಂತ್ರಿ (ಉತ್ತರಪ್ರದೇಶದ ಮಾಯಾವತಿ) ಯನ್ನೂ ಕಂಡಿದೆ. ಅಲ್ಲದೆಯೂ

ರಾಷ್ಟ್ರಪತಿಯನ್ನೂ ಕಂಡಿದೆ. ಅಂದರೆ ದಲಿತರ ಉದ್ಧಾರವು ಹೀಗೆ ಉನ್ನತ ಪದವಿಯನ್ನು ಹೊಂದಿದರೆ ಸಾಧ್ಯವೇ? ಎಂಬುದು ಪ್ರಶ್ನೆಯಾಗುತ್ತದೆ. ಈ ರೀತಿ ಉನ್ನತ ಅಧಿಕಾರ ಮತ್ತು ಉನ್ನತ ಸ್ಥಾನಮಾನವನ್ನು ಕೊಟ್ಟರೆ ದಲಿತರ ವಿಮೋಚನೆಯಾದ ಹಾಗೆ ಆಗುತ್ತದೆಯೇ? ಹಾಗಾದರೆ ದಲಿತರಿಗೆ ಇಂಥ ಪದವಿಯನ್ನು ಕೊಟ್ಟು ಆಳುವ ವರ್ಗಗಳು ಕೂರಿಸುವುದು ಏತಕ್ಕೆ ಎಂಬ ಚರ್ಚೆಗಳನ್ನು ಎತ್ತಬಹುದು. ಶೋಷಿತ ದಲಿತರ ವಾಸ್ತವ ಬದುಕಲ್ಲಿ ಬದಲಾವಣೆಯು ಏನಾದರೂ ಕಂಡಿದೆಯೇ? ಅವರು ತಮ್ಮ ಅಕ್ಕಪಕ್ಕ ದಲಿತೇತರ ಭೂಮಾಲೀಕರ ಬಂಡವಾಳಗಾರರ ಬದುಕಿನೊಂದಿಗೆ ಸಮಾನ ಸ್ಥಿತಿಗೆ ಬಂದಿದ್ದಾರೆಯೇ ಎಂಬವುಗಳನ್ನು ಗುರ್ತಿಸಲು ಈ ದಲಿತ ರಾಜಕಾರಣವು ಪ್ರಶ್ನೆಯಾಗುತ್ತದೆ. ಇಲ್ಲಿ ಕೆಲವು ದಲಿತರು ಬದಲಾವಣೆಯನ್ನು ಕಂಡದ್ದು ಉಂಟು. ಅದು ಅವರ ಹಿಂದಿನ ಬದುಕು ಮತ್ತು ಪ್ರಸ್ತುತ ಬದುಕಿನ ಹಿನ್ನೆಲೆಯಲ್ಲಿ. ಅವರು ದಲಿತ ರಾಜಕಾರಣಿಗಳು ಮತ್ತು ದಲಿತ ಅಧಿಕಾರಿ ವರ್ಗದವರು. ಇವರಲ್ಲಿ ಅವರ ಶ್ರಮವೂ ಇರಬಹುದು. ಆದರೆ ಅವರು ದಲಿತ ಸಮುದಾಯಗಳ ಪಟ್ಟಿಯಿಂದ ತಮ್ಮನ್ನು ಗುರ್ತಿಸಿಕೊಂಡರು ಅಷ್ಟೆ. ತಮ್ಮ ಅಧಿಕಾರ, ಪದವಿ ಅವುಗಳಿಂದ ಸಿಕ್ಕ ಪುರಸ್ಕಾರ ಎಂಬುದನ್ನು ಮರೆತರು. ಇದು ಬಹುಪಾಲು ದಲಿತ ಅಧಿಕಾರಿಗಳ, ನಾಯಕರ ಮಿತಿಯಾಗಿದೆ. ಶೋಷಿತ ಸಮುದಾಯಗಳು ಹಾಗೆಯೇ ಉಳಿದಿವೆ. ಅವರ ಶೋಷಣೆ ಇಂದಿಗೂ ನಡೆಯುವುದು ತಪ್ಪಿಲ್ಲ. ಇವರು ದಲಿತ ರಾಜಕಾರಣಿಗಳ ಕೆಲವು ದಲಿತೇತರ ರಾಜಕೀಯ ನಾಯಕರುಗಳ ಮಾತನಾಡಲು ವಸ್ತುಗಳಾದವು. ದಲಿತ ರಾಜಕಾರಣಿಗಳು, ಅಧಿಕಾರಿಗಳು ಮೊದಲು ಬಹುಪಾಲು ತಮ್ಮ ಸಮುದಾಯಗಳ ಒಳಗೇ ಇದ್ದರು. ಇವರು ರಾಜಕಾರಣಕ್ಕೆ ದುಮುಕಿದ ನಂತರದಲ್ಲಿ ಸಮುದಾಯದಿಂದ ಹೊರ ನಿಂತರು. ಆದರೂ ಸಮುದಾಯ ಮತ್ತು ಅದರ ಸೌಲತ್ತುಗಳನ್ನು ಪಡೆಯುವಲ್ಲಿ ಕ್ರಿಯಾಶೀಲರಾದರು. ದಲಿತ ರಾಜಕಾರಣ, ಅಧಿಕಾರವು ವ್ಯಕ್ತಿಗೆ ಒಳಿತಾದಂತೆ ಅವರ ಸಮುದಾಯಕ್ಕೆ ಒಳಿತಾಗಲಿಲ್ಲ.

ರಾಜಕಾರಣಕ್ಕೆ ಮುಖ್ಯವಾಗಿ ಎರಡು ಕಡೆಯಿಂದ ಬಂದು ಸೇರಿದ ದಲಿತರನ್ನು ಕಾಣುತ್ತೇವೆ. ಅವುಗಳಲ್ಲಿ ಮೊದಲನೆಯವರು ಶಿಕ್ಷಣವನ್ನು ಪಡೆದು ರಾಜಕೀಯಕ್ಕೆ ಸೇರಿದವರು. ಎರಡನೆಯವರು ಮೊದಲು ದಲಿತ ಚಳುವಳಿಯಲ್ಲಿ ಇದ್ದು ಆನಂತರ ರಾಜಕೀಯಕ್ಕೆ ದುಮುಕಿದವರು. ಈ ಹೊತ್ತಿನಲ್ಲಿ ಈ ದಲಿತ ಅಧಿಕಾರಿಗಳು, ರಾಜಕಾರಣಿಗಳು ಮತ್ತು ಚಳುವಳಿಯ ನಾಯಕರು ತಮ್ಮ ಸಮುದಾಯಗಳ ಸಂಪರ್ಕವನ್ನು ಬಹುತೇಕ ಕಡಿದುಕೊಂಡಿದ್ದಾರೆ. ಇವರು ಬಹುಸಂಖ್ಯಾತ ದಲಿತ, ದಲಿತ ಸಮುದಾಯವನ್ನು ವಸ್ತುವನ್ನಾಗಿ ಮಾಡಿಕೊಂಡಿದ್ದಾರೆ. ಇವರ ದಲಿತ ಕಾಳಜಿಗಳು ಭಾಷಣಕ್ಕೆ ಸೀಮಿತಗೊಂಡಿವೆ. ವಾಸ್ತವವಾಗಿ ದಲಿತರ ಸಮಸ್ಯೆಗಳು ಹಾಗೇ ಇವೆ.

## ದಲಿತ ಜಮೀನುದಾರರು

ದಲಿತರು ಮತ್ತು ಭೂಮಿಗೆ ಸಂಬಂಧಿಸಿದಂತೆ ಇಲ್ಲಿ ಚರ್ಚಿಸಲಾಗುವುದು. ದಲಿತರು ಜಮೀನನ್ನು ಪಡೆದದ್ದೇ ಈಚೆಗೆ. ಹಾಗಾದರೆ ದಲಿತರಿಗೆ ಈ ಮುಂಚೆ ಭೂಮಿ ಇರಲಿಲ್ಲವೇ? ಎಂಬುದು ಪ್ರಶ್ನೆಯಾಗುತ್ತದೆ. ಸ್ವಾತಂತ್ರ್ಯ ನಂತರದಲ್ಲಿ ಅದರಲ್ಲೂ ದಲಿತ ಸಂಘಟನೆಗಳು ನಡೆಸಿದ ಭೂಹೋರಾಟದ ಫಲವಾಗಿ ಕೆಲವು ದಲಿತರು ಭೂಮಿಯನ್ನು ಪಡೆದರು. ಅದನ್ನು ಕರ್ನಾಟಕ ಸಂದರ್ಭದಲ್ಲಿನ ಎಲ್ಲಾ ಭಾಗಕ್ಕೂ ಸಾರಾಸಗಟಾಗಿ ಹೇಳಲು ಬರುವುದಿಲ್ಲ. ಎಲ್ಲೆಲ್ಲಿ ವ್ಯವಸ್ಥೆಯ ಪಟ್ಟಭದ್ರ ಹಿತಾಸಕ್ತಿಗಳ ಸಡಲಿಕೆ ಇತ್ತೋ ಅಲ್ಲಲ್ಲಿ ಇದ್ದ ಸರ್ಕಾರಿ ಜಮೀನುಗಳನ್ನು ಮಾಡಿಕೊಂಡರು. ಅದು

ಸಂಪೂರ್ಣವಾಗಿ ದಲಿತರಿಗೆ ಸೇರಲಿಲ್ಲ. ವ್ಯವಸ್ಥೆಯ ದಲಿತೇತರು ಉತ್ತಮ ಭೂಮಿಯನ್ನು ಆಕ್ರಮಿಸಿ ಬೇಡದ ಸತ್ವಹೀನ ಭೂಮಿಯನ್ನು, ಭೂಮಿಯ ಬಗ್ಗೆ ಒಲವಿದ್ದವರು, ಹಾಗೆಯೇ ಭೂಮಿ ಸಂಬಂಧದ ಬಗ್ಗೆ ಮತ್ತು ಆಸ್ತಿಯ ಬಗ್ಗೆ ಕಾಳಜಿ ಇದ್ದ ಕೆಲವು ದಲಿತರು ಪಡೆದರು. ಇಂದು ಕರ್ನಾಟಕದ ದಲಿತರಲ್ಲಿ ಸುಮಾರು ಶೇಕಡ ೫ ರಿಂದ ೧೦ರಷ್ಟು ದಲಿತರು ಮಾತ್ರ ಭೂಮಿಯನ್ನು ಹೊಂದಿರಬಹುದು. ಇವರು ಹೊಂದಿರುವ ಭೂಮಿಯ ಪ್ರಮಾಣದಲ್ಲಿ ಭಿನ್ನತೆ ಇದೆ. ಅದನ್ನು ಮುಂದೆ ಚರ್ಚಿಸಲಾಗಿದೆ.

ದಲಿತರು ವೃತಿಯಲ್ಲಿ ಕೃಷಿಕರು. ಇಂದು ಅಲ್ಲಲ್ಲಿ ಅನ್ಯ ವೃತ್ತಿಗಳಲ್ಲಿ ಹರಿದು ಹಂಚಿ ಹೋಗಿದ್ದಾರೆ. ಎಸ್.ಎಸ್.ಹಿರೇಮಠರು ತಮ್ಮ 'ಹಬ್ಬಗಳು' ಮತ್ತು 'ಜಾತ್ರೆಗಳು' ಎಂಬ ಕೃತಿಗಳಲ್ಲಿ ಈ ನಾಡಿನ ಮೂಲ ಕೃಷಿಕರು ಹೊಲೆಮಾದಿಗರು. ಅವರೇ ಭೂಮಿಯನ್ನು ಹೊಂದಿದವರು. ಅವರು ಕೃಷಿಯನ್ನು ತಂದವರು, ಭೂಮಿಯ ಒಡೆಯರು, ಕಾಲಾನಂತರದಲ್ಲಿ ಇಂದು ಭೂಮಿಯನ್ನು ಹೊಂದಿರುವ ವ್ಯವಸ್ಥಿತ ಜಾತಿಗಳು ಅವರಿಂದ ಕಸಿದುಕೊಂಡು ಅವರನ್ನು ಶೋಷಣೆ ಮಾಡುತ್ತಿವೆ ಎಂಬುದನ್ನು ಚರ್ಚಿಸಿದ್ದಾರೆ. (ವಿವರಣೆಗೆ ಪುಟ:೧೮೪ 'ಜಾತ್ರೆಗಳು' ಎಸ್.ಎಸ್.ಹಿರೇಮಠ, ಸಮತಾ ಪ್ರಕಾಶನ, ಹೊಸಪೇಟೆ ೧೯೯೩) ಇದು ಅವರ ವಾದ. ಇದನ್ನು ತಮ್ಮ ಸಂಶೋಧನೆಯ ಮೂಲಕ ಮಂಡಿಸಿದ್ದಾರೆ.

ದಲಿತರು ಬಹುಪಾಲು ಕೃಷಿಯನ್ನು ವೃತ್ತಿಯನ್ನಾಗಿ ಮಾಡಿಕೊಂಡು ಬಂದವರೇ ಆಗಿದ್ದಾರೆ. ಕಾಲಾನಂತರದಲ್ಲಿ ದಲಿತರು ಛಿದ್ರವಾಗಿ ಹಲವು ವಿವಿಧ ವೃತ್ತಿಗಳಲ್ಲಿ ಹರಡಿಕೊಂಡಿದ್ದಾರೆ. ಇಂದು ಬಹುಸಂಖ್ಯಾತ ದಲಿತರ ವೃತ್ತಿಯು ಕೃಷಿ ಎಂದು ಹೇಳಿದರೆ ತಪ್ಪಾಗಲಾರದು. ದಲಿತರು ಕೃಷಿಯನ್ನೇನೋ ಮಾಡುತ್ತಿದ್ದಾರೆ ನಿಜ, ಆದರೆ ಕೃಷಿಗೆ ಸಂಬಂಧಿಸಿದ ಭೂಮಿಯು, ಅದರ ಆದಾಯವು ಯಾರ ಒಡೆತನಕ್ಕೆ ಸೇರಿದೆ ಎಂಬುದು ಮುಖ್ಯವಾಗುತ್ತದೆ.

ದಲಿತೇತರ ಜಾತಿಯ ಭೂಮಾಲಿಕರ ಮನೆಯಲ್ಲಿ ಬಹುತೇಕವಾಗಿ ಕೂಲಿ ಮಾಡುತ್ತಾರೆ. ಜೀತ ಮತ್ತು ಕೂಲಿಯ ಪರಿಸ್ಥಿತಿಯಲ್ಲಿ ಬದುಕುತ್ತಿರುವ ಇವರು ತಮ್ಮ ಬದುಕಿನ ಸಂಕಷ್ಟಗಳ ವಾಸ್ತವ ಅರಿವನ್ನು ಭೂಮಾಲಿಕರೊಂದಿಗೆ ತುಲನೆಮಾಡಿಕೊಂಡು ನೋಡುವುದೇ ಇಲ್ಲ. ಅದನ್ನು ತಮ್ಮ ಬದುಕಿನ ಅನಿವಾರ್ಯ ಹಾಗೂ ತಮ್ಮ ಸ್ಥಿತಿಯೇ ಇಂತಹದು ಎಂದು ಬದುಕನ್ನು ಸಾಗಿಸುತ್ತಾರೆ. ಆಧುನಿಕತೆಯ ಮತ್ತು ಶಿಕ್ಷಣದ ಅರಿವು ಇದ್ದಾಗ ಮಾತ್ರ ಸಾಮಾಜಿಕ ವಾಸ್ತವದ ಅರಿವು ದಲಿತರಿಗೆ ಮೂಡುತ್ತದೆ. ಸಾಮಾಜಿಕ ವಾಸ್ತವವು ದಲಿತರಿಗೆ ಮನದಟ್ಟಾಗಬೇಕು. ಮನದಟ್ಟಾಗುವುದು ಕಷ್ಟದ ವಿಚಾರ. ಅದಕ್ಕೆ ಅವರೊಬ್ಬರೇ ಕಾರಣಕರ್ತರಲ್ಲ; ಅದಕ್ಕೆ ಅವರು ಬದುಕುವ ಪರಿಸರದ ಕಾರಣವೂ ಮುಖ್ಯವಾಗುತ್ತದೆ.

**ಕುಳುವಾಡಿ ಜಮೀನು:** ಊರಿಗೆ ಒಬ್ಬ ಕುಳುವಾಡಿ ಇರುತ್ತಾನೆ. ಊರ ನಿಯಂತ್ರಿಸುವ ಯಜಮಾನನಿದ್ದಂತೆ ಊರಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಕುಳುವಾಡಿ ಇರುತ್ತಾನೆ. ಅವನಿಗೆ ಕುಳುವಾಡಿ ಜಮೀನು ಇರುತ್ತದೆ. ಇವನಿಗೆ ಈ ಜಮೀನನ್ನು ಅನುಭವಿಸಲು ಕೆಲಸ ಕಾರ್ಯಗಳಲ್ಲಿ ನಿರಂತರವಾಗಿ ತೊಡಗಿರಬೇಕು. ಈ ಜಮೀನಿನ ಒಡೆತನವು ಗ್ರಾಮಕ್ಕೆ ಸೇರಿರುತ್ತದೆ. ಇದಕ್ಕೆ ಯಾವುದೇ ದಾಖಲೆಗಳು ಇರುವುದಿಲ್ಲ. ನಿಗದಿಪಡಿಸಿರುವ ಭೂಮಿಯು ಅರ್ಧ ಎಕರೆಯಿಂದ ಹೆಚ್ಚೆಂದರೆ ಎರಡು ಎಕರೆ ಇರುತ್ತದೆ. ಈ ಭೂಮಿಯನ್ನು ಅನುಭವಿಸಬೇಕೆಂದರೆ ಕುಳುವಾಡಿ

ಊರ ಕರ್ಮ ಕೆಲಸಗಳಲ್ಲಿ ತೊಡಗಿರಬೇಕು. ಜೊತೆಗೆ ಊರಿನೊಂದಿಗೆ ತನ್ನ ಸಂಬಂಧವನ್ನು ಚೆನ್ನಾಗಿ ಇಟ್ಟುಕೊಂಡಿರಬೇಕು. ಊರ ಸುದ್ದಿಯನ್ನು ಸಾರುವುದು, ಊರ ಸ್ವಚ್ಛತೆಯ ಕೆಲಸವನ್ನು ಮಾಡುವುದು, ಸತ್ತ ಜಾನುವಾರುಗಳನ್ನು ಊರ ಹೊರಗೆ ಸಾಗಿಸುವುದು, ಸತ್ತವರಿಗೆ ಗುಂಡಿ ತೋಡುವುದು ಹೀಗೆ ಮುಂತಾದ ಊರ ಕಟ್ಟಳೆಗೆ ಸಂಬಂಧಪಟ್ಟ ಕೆಲಸವನ್ನು ಮಾಡುವುದು ಆಗಿರುತ್ತದೆ. ಊರ ಕುಳುವಾಡಿಯು ಊರ ಪ್ರಮುಖರೆಲ್ಲರ ಮಾತಿನಂತೆ ನಡೆದುಕೊಂಡು ಅವರು ತೋರಿಸಿದ ಕೆಲಸಗಳನ್ನು ಮಾಡಿ ಕೊಡಬೇಕಾಗಿರುತ್ತದೆ. ಆ ಕೆಲಸಗಳಲ್ಲವೂ ಶ್ರಮದಾಯಕ ಮತ್ತ ಅಸಹ್ಯವನ್ನು ಹುಟ್ಟಿಸುವಂತವುಗಳಾಗಿರುತ್ತದೆ. ಊರ ನಿಯಮವನ್ನು ತಪ್ಪಿದರೆ ಸಾಗುವಳಿ ಮಾಡುವ ಕುಳುವಾಡಿ ಜಮೀನು ಊರಲ್ಲಿನ ಕೇರಿಯ ಮತ್ತೊಬ್ಬ ಇಂತಹ ಕೆಲಸಗಾರನಿಗೆ ವರ್ಗಾಯಿಸಲ್ಪಡುತ್ತದೆ. ಇದು ಕರ್ನಾಟಕದಲ್ಲಿ ಬಹುತೇಕವಾಗಿ ಕಂಡುಬರುವಂತಹ ಗ್ರಾಮಗಳಲ್ಲಿನ ಕುಳುವಾಡಿ ಜಮೀನಲ್ಲಿನ ಪದ್ದತಿ. ಕೆಲವು ಊರುಗಳಲ್ಲಿ ಕುಳುವಾಡಿಗಳಿಗೆ ಜಮೀನು ಇರುವುದಿಲ್ಲ. ಇಂಥ ಸಂದರ್ಭಗಳಲ್ಲಿ ಸುಗ್ಗಿಯ ಸಮಯದಲ್ಲಿ ಇಂತಿಷ್ಟು ದವಸ ಧಾನ್ಯ ಎಂತಲೂ ನೇಮಿಸಿರುತ್ತಾರೆ. ಮತ್ತೆ ಕೆಲವು ಕಡೆ ದಾಕ್ಷಿಣ್ಯಕ್ಕೆ ಈ ಕುಳುವಾಡಿ ಕೆಲಸವನ್ನು ಮಾಡಿಸಿಕೊಳ್ಳಲಾಗುತ್ತದೆ. ಈ ಕುಳುವಾಡಿ ಎಂಬ ಪದವು ಪ್ರಾದೇಶಿಕವಾಗಿ ಬೇರೆ ಬೇರೆ ಹೆಸರಿನಲ್ಲಿ ಬಳಸುತ್ತಿರಬಹುದು.

**ಬಗರ್ ಹುಕುಂ (ದರಕಾಸ್ತು ಜಮೀನು) :** ಬಹುತೇಕ ಕಡೆಗಳಲ್ಲಿ ಇಂದು ದರಕಾಸು ಜಮೀನನ್ನು ಪಡೆಯಲು ಭೂಮಿ ಇಲ್ಲ. ಏಕೆಂದರೆ ಅನಗತ್ಯ ಅರಣ್ಯೀಕರಣ, ಬಹುರಾಷ್ಟ್ರೀಯ ಕಂಪನಿಗಳಿಗೆ ವ್ಯವಸಾಯಯೋಗ್ಯ ಭೂಮಿಯನ್ನು ಆಳುವ ಸರ್ಕಾರಗಳು ಕೊಡುತ್ತಿದೆ. ಭೂಮಿಯ ಹಂಚಿಕೆಯಿಂದ ದರಕಾಸು ಜಮೀನನ್ನು ಬಹುತೇಕರು ತಮ್ಮ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡರು. ಇದರಲ್ಲಿ ದಲಿತೇತತರು ಸಮೃದ್ಧಿಯಾಗಿ ಈ ಭೂಮಿಯನ್ನು ಪಡೆದುಕೊಂಡರು. ಅವರು ದರಕಾಸು ಜಮೀನನ್ನು ಮಾಡಿ ಉಳಿದ ಭೂಮಿಗೆ ಕೆಲವು ಕಡೆ ಮಾತ್ರ ದಲಿತರು  ಕಾಲಾಕಿ ಜಮೀನನ್ನು ಮಾಡಿಕೊಂಡಿದ್ದಾರೆ. ಅದು ತಾವು ಬದುಕುವ ಸ್ಥಳಗಳಿಂದ ತುಂಬಾ ದೂರ ಇದ್ದು ಅನುಕೂಲಕ್ಕೆ ಅಡ್ಡಿಯನ್ನು ಹೊಂದಿವೆ. ಈ ದರಕಾಸು ಜಮೀನನ್ನು ದಲಿತರು ಸಾರ್ವತ್ರಿಕವಾಗಿ ಹೊಂದಿದ್ದಾರೆ ಎಂದು ಹೇಳಲು ಬರುವುದಿಲ್ಲ. ಇಲ್ಲಿ ದರಕಾಸು ಜಮೀನನ್ನು ಪಡೆಯಲೂ ಸಹ ಕೆಲವು ಸಾಮರ್ಥ್ಯಗಳು ಬೇಕು. ಇದಕ್ಕೆ ಕನಿಷ್ಠ ಆರ್ಥಿಕ ಬಲವನ್ನಾದರೂ ಹೊಂದಿರಬೇಕು. ಆ ನಂತರದಲ್ಲಿ ಸಾಗುವಳಿ ಮಾಡಲು ಕೃಷಿಯ ಸಲಕರಣೆಗಳು ಬೇಕು. ಈ ಹಂತವನ್ನು ಪೂರೈಸಿದ ನಂತರದಲ್ಲಿ ಜಮೀನು ಉಳುವ ಯತ್ನಕ್ಕೆ ಕೈ ಹಾಕುತ್ತಾನೆ. ಜಮೀನನ್ನು ಸಾಗುವಳಿ ಮಾಡಲು ಸಾಮಾನ್ಯವಾಗಿ ಬದುಕಿನ ಪ್ರಾಥಮಿಕ ಪೂರೈಕೆಯನ್ನು ವ್ಯಕ್ತಿ ಹೊಂದಲೇಬೇಕಾಗುತ್ತದೆ. ಇದನ್ನೂ ದಾಟದವನು ಆಹಾರ,ಬಟ್ಟೆ, ಪೂರೈಸುಕೊಳ್ಳುವಲ್ಲಿ ಕಾಲಕಳೆಯುತ್ತಾನೆ. ಇದು ಊರಲ್ಲಿ ಮನೆ, ಮತ್ತು ಸಾಗುವಳಿ ಸಾಮರ್ಥ್ಯವನ್ನು ಪೂರೈಸುವ ದಲಿತನಿಗೆ ಮಾತ್ರ ಸಾಧ್ಯವಾಗುತ್ತದೆ. ಅದೂ ಕೂಡ ಊರ ಯಜಮಾನಿಕೆಯ ಮಿತಿಯನ್ನು ಅವಲಂಬಿಸಿರುತ್ತದೆ. ಸಾಗುವಳಿಗೆ ಸಾಮಗ್ರಿಗಳೇ ಇಲ್ಲದ ದಲಿತ ನೇಗಲನ್ನು ಹೊಡೆಸಿ ಗುರುತು ಮಾಡಿಕೊಂಡ ಜಮೀನುಗಳು ಅವನು ಮಾಡಲು ಆಗದೆ ಆ ಭೂಮಿಗಳೆಲ್ಲವೂ ದಲಿತೇತರ ಪಾಲಾದದ್ದು ಉಂಟು. ಈ ದರಕಾಸು ಜಮೀನು ಬಹುಪಾಲು ದಲಿತೇತರರು ಆಯ್ದು ಬಿಟ್ಟ ಕಲ್ಲಚಿಟ್ರು, ಸತ್ವಹೀನ ಭೂಮಿಯಾಗಿರುತ್ತವೆ.

**ಉಳುವವನೆ ಭೂಮಿಯ ಒಡೆಯ :** ದೇವರಾಜ ಅರಸರ ಕಾಲದಲ್ಲಿ ಕೇಂದ್ರದ ಕಾಂಗ್ರೆಸ್ ಆಡಳಿತದಲ್ಲಿ ಬಂದ ಕಾನೂನಿದು. ಈ ಸಂದರ್ಭದಲ್ಲಿ ಕೆಲವು ದಲಿತರಿಗೆ ಈ ಭೂಮಿಯು ದೊರೆಯಿತು. ಇಲ್ಲಿ ಅಲ್ಪ ಪ್ರಮಾಣದಲ್ಲಿ

ಕೆಲವು ದಲಿತರಿಗೆ ಭೂಮಿ ಸಿಕ್ಕಿತು. ಅದರಲ್ಲೂ ದಲಿತರು ತಾವು ಬದುಕುವ ಸಮಾಜದ ಎದುರು ನಿಲ್ಲುವ ಶಕ್ತಿ ಇಲ್ಲವಾಗಿ ಅವುಗಳೂ ಕೂಡ ಭೂಮಿಯನ್ನು ಹೊಂದಿದ ಧಣಿಗಳ ಪಾಲಾಯಿತು. ಈ ಭೂಮಿಯನ್ನು ಹೊಂದಿದ ಭೂಮಾಲೀಕರು ಉಳುವವನ ಎದುರಲ್ಲೇ ಇದ್ದು ಯಾವುದೇ ದಾಖಲೆಗಳು ಇರದ ಕಾರಣ ಅನಿವಾರ್ಯವಾಗಿ ತಾವು ಉಳುವ ಭೂಮಿಯ ಹಕ್ಕನ್ನು ದಲಿತರು ಕೇಳದಂತಾದರು. ಈ ಕಾಯ್ದೆ ಪ್ರಕಾರ ಕಾನೂನಿನಲ್ಲಿ ಜಮೀನಿಲ್ಲದವರಿಗೆ ತಮ್ಮ ಉಳುಮೆಯ ಭೂಮಿಯನ್ನು ದೊರಕಿಸಿದರೂ ಅಲ್ಲಿ ಭೂಮಾಲೀಕರ ಭಯ ಇತ್ತು. ಈ ಕಾನೂನಿನಲ್ಲಿ ಅನುಕೂಲ ಆದದ್ದು ಯಾರಿಗೆಂದರೆ ಭೂಮಿಯನ್ನು ಉಳುಮೆ ಮಾಡುವವನಿಗೆ ಬಿಟ್ಟು ನಗರವನ್ನು ಸೇರಿದ; ಮತ್ತು ಅದರ ಕಂದಾಯ ಪಾಣಿ ಪಟ್ಟೆಯನ್ನು ಉಳುವವನು ಹೊಂದಿದವನಿಗೆ ಮಾತ್ರ ದೊರೆಯಿತು. ಹಾಗೆಯೇ ಅಕ್ಷರ ಕಲಿತವನಿಗೆ, ಸ್ವಲ್ಪ ವ್ಯವಹಾರ, ಸಮಾಜದ ಜ್ಞಾನ ಇದ್ದವನಿಗೆ ಉಳುಮೆಯ ಭೂಮಿಯನ್ನು ಪಡೆಯಲು ಸಾಧ್ಯವಾಯಿತು. ಭೂಮಿಯನ್ನು ಕಳೆದುಕೊಳ್ಳಲು ಇಷ್ಟಪಡದ ಭೂಮಾಲೀಕರು ಕಾನೂನು ಕಟ್ಟಲೆಗಳೆಂದು ಕೋರ್ಟಿಗೆ ಹಾಕಿದರು. ಇದರಿಂದ ಹಲವು ವರ್ಷಗಳು ಉರುಳಿದವು. ಕೊನೆಗೂ ಭೂಮಾಲೀಕರು ಜಮೀನನ್ನು ತಮ್ಮಂತೆ ಮಾಡಿಕೊಂಡರು. ಇದರಲ್ಲಿ ಗೆಲ್ಲುವ ಉಳುಮೆಗಾರರೂ  ಹೋರಾಡಿ ಗೆದ್ದರು. ಸೋತವರು ಭೂಹೀನರಾದರು.

**ಸಣ್ಣ ಪ್ರಮಾಣದ ಭೂಮಿಯನ್ನು ಹೊಂದಿದವರು:** ಭೂಮಿಯನ್ನು ಕೊಳ್ಳುವುದು ಎಷ್ಟು ಕಷ್ಟವೋ ಅಷ್ಟೇ ಸುಲಭ. ಆರ್ಥಿಕತೆಯು ಇದಕ್ಕೆ ಮುಖ್ಯವಾದದ್ದು. ದಲಿತರು ದಲಿತೇತರರಿಂದ ಜಮೀನನ್ನು ಕೊಂಡುಕೊಂಡಿರುವುದು ಕಡಿಮೆ. ದಲಿತ ಸಮುದಾಯದ ಆರ್ಥಿಕ ಸ್ಥಿತಿವಂತರು ದಲಿತ ಸಮುದಾಯದವರಿಂದಲೇ ಕೊಂಡುಕೊಂಡಿರುವುದು ಹೆಚ್ಚು. ಸಣ್ಣ ಪ್ರಮಾಣದ ಭೂಮಿಯನ್ನು ಹೊಂದಿದವರು ದಲಿತರ ಪ್ರಮಾಣದಲ್ಲಿ ಹೆಚ್ಚು. ಇವರು ಹೆಚ್ಚೆಂದರೆ ಎರಡು ಎಕರೆ ಹೊಲ ಅಥವಾ ಹತ್ತುಕುಂಟೆ ಗದ್ದೆಯನ್ನು ಹೊಂದಿರುತ್ತಾರೆ. ಇದರಲ್ಲಿ ಪಿತ್ರಾರ್ಜಿತ ಜಮೀನಾಗಿರಬಹುದು, ದರಕಾಸಿನ ಜಮೀನಾಗಿರಬಹುದು, ಕುಳವಾಡಿ ಜಮೀನಾಗಿರಬಹುದು, ಕೊಂಡಿರುವುದೂ ಆಗಿರಬಹುದು. ಇವರ ಬದುಕಿಗೆ ಜಮೀನೇ ಆಧಾರವಲ್ಲ. ಏಕೆಂದರೆ ಇದು ಬದುಕಿಗೆ ಸಾಕಾಗದೆ ಇವರು ಬೇರೆ ಮೂಲವನ್ನು ಹೊಂದಿ ಬದುಕುತ್ತಿರುತ್ತಾರೆ. ಅದರಲ್ಲಿ ಕೂಲಿ, ಜೀತ ಮುಂತಾದ ಕೆಲಸಗಳು ಸೇರಿರಬಹುದು. ಇವರು ಹೊಂದಿರುವ ಭೂಮಿಯು ಕಡಿಮೆ ಇರುವುದರಿಂದ ಸಂಪೂರ್ಣವಾಗಿ ಇದನ್ನು ಅವಲಂಬಿಸಿದೆ ಕೃಷಿ ಸಂಬಂಧಿಸಿದ ಕೂಲಿಯ ಕಾಲದಲ್ಲಿಯೇ ಬಿಡುವನ್ನು ಮಾಡಿಕೊಂಡು ಸಾಗುವಳಿ ಮಾಡುತ್ತಾರೆ.

**ಮಧ್ಯಮ ಜಮೀನ್ದಾರರು :** ಆರ್ಥಿಕತೆಯು ಬಲಗೊಂಡಂತೆ ಅದಕ್ಕೆ ಸುತ್ತುವರೆದ ಭೌತಿಕ ವಸ್ತುಗಳು ಆಕರ್ಷಣೀಯವಾಗುತ್ತವೆ. ಮಧ್ಯಮ ದಲಿತ ಜಮೀನ್ದಾರರು ತಮ್ಮ ಬೌದ್ಧಿಕ ಹಿನ್ನೆಲೆಯಲ್ಲಿ ದರಕಾಸಿನ ಜಮೀನನ್ನು, ಅಥವಾ ಸರ್ಕಾರದ ಜಮೀನನ್ನು ಮಾಡಿಕೊಂಡು ಮಧ್ಯಮ  ವರ್ಗದ ಜೀವನವನ್ನು ಸಾಗಿಸುವವರಾಗಿರುತ್ತಾರೆ. ಇಲ್ಲವೆ ಈ ಜಮೀನದ್ದಾರರು ಸರ್ಕಾರಿಯ ನೌಕರಿಯಲ್ಲಿದವರು. ಇವರು ಜಮೀನನ್ನು ಸಂಪಾದಿಸುವ ಹೊತ್ತಿಗೆ ತಮ್ಮ ಬದುಕಲ್ಲಿ ಶೇಖರಿಸಿದ ಹಣವನ್ನು ಪ್ರಮುಖ ಪಾತ್ರವನ್ನಾಗಿ ಮಾಡಿಕೊಳ್ಳುತ್ತಾರೆ. ಅಷ್ಟು ಹೊತ್ತಿಗೆ ತಾವು ದುಡಿಯುವ ಶಕ್ತಿ ಕಡಿಮೆಯಾಗಿರುತ್ತದೆ. ಅಲ್ಪ ಸ್ವಲ್ಪ ಜಮೀನನ್ನು ಹೊಂದಿ ಸಮಸ್ಯೆಯಲ್ಲಿರುವ ದಲಿತರ ಭೂಮಿಯು ಇವರ ಪಾಲಾಗುತ್ತದೆ. ಮತ್ತು ಸಮಸ್ಯೆಯಲ್ಲಿರುವ, ಅಥವಾ ಹೆಚ್ಚಾಗಿರುವ ಭೂಮಾಲೀಕರಿಂದಲೂ ಇವರು ಭೂಮಿಯನ್ನು ಪಡೆದಿರಬಹುದು. ಈ ಮಧ್ಯಮ ವರ್ಗದ ದಲಿತ ಜಮೀನ್ದಾರರು ತಾವು ಭೂಮಿಯಲ್ಲಿ ತೊಡಗಿಸುವ ಖರ್ಚು ಮತ್ತು

ತೆಗೆಯುವ ಆದಾಯವು ಸಮಪ್ರಮಾಣದಲ್ಲಿರುತ್ತದೆ. ಕೆಲವೊಮ್ಮೆ ಆದಾಯವೂ ಬರಬಹುದು ಮತ್ತೆ ಕೆಲವೊಮ್ಮೆ ನಷ್ಟವೂ ಆಗಬಹುದು. ಇಂಥ ಮಧ್ಯಮ ಜಮೀನ್ದಾರ ದಲಿತರು ಹಳ್ಳಿಗಳಲ್ಲಿ ಮತ್ತು ನಗರದಲ್ಲಿ ತಮ್ಮ ವ್ಯವಸ್ಥೆಯನ್ನು ಕಟ್ಟಿಕೊಂಡಿರುತ್ತಾರೆ. ಇವರು ನೀರಾವರಿ ಸೌಕರ್ಯವನ್ನು ಮಾಡಿಕೊಂಡಿರುತ್ತಾರೆ. ಬೇರೆಯ ಕಡೆ ಕೂಲಿ ನಾಲಿಗೆ ಕೆಲಸಕ್ಕೆ ಹೋಗದ ರೀತಿಯಲ್ಲಿ ಇವರ ಬದುಕು ಇರುತ್ತದೆ. ಇವರು ಸುಮಾರು ಹತ್ತರಿಂದ ಹದಿನೈದು ಎಕರೆ ಜಮೀನನ್ನು ಹೊಂದಿರುತ್ತಾರೆ.

**ದೊಡ್ಡ ಜಮೀನ್ದಾರರು :** ಇವರು ಕರ್ನಾಟಕದಲ್ಲಿ ಸಿಗುವುದು ಕೈ ಬೆರಳೆಣಿಕೆಯಷ್ಟು ಮಾತ್ರ. ಈ ದೊಡ್ಡ ದಲಿತ ಜಮೀನ್ದಾರರು ಹೊಂದಿರುವ ಜಮೀನು ಪಿತ್ರಾರ್ಜಿತ ಆಸ್ತಿಯಲ್ಲ. ಅದು ಸಂಪೂರ್ಣವಾಗಿ ತಮ್ಮ ಇಂದಿನ ಗಳಿಕೆಯ ಮೂಲವಾಗಿರುತ್ತದೆ. ಇತ್ತ ಅವರು ರಾಜಕಾರಣಿಗಳಾಗಿರುತ್ತಾರೆ. ಇಲ್ಲವೆ ಉನ್ನತ ಅಧಿಕಾರಿಗಳಾಗಿರುತ್ತಾರೆ. ಇವರು ಬೇರೆ ಜಾತೀಯ ಭೂಮಾಲೀಕರಂತೆ ಸಮರ್ಥವಾಗಿ ಕೂಲಿ, ಜೀತ, ಆಶ್ರಿತ ಬದುಕುವ ಸಮುದಾಯಗಳನ್ನು ದುಡಿಸಿಕೊಳ್ಳುತ್ತಾರೆ. ಇವರು ಹೆಸರಿಗೆ ಮಾತ್ರ ದಲಿತರಾಗಿದ್ದುಕೊಂಡು ಆರ್ಥಿಕವಾಗಿ ಸಾಮಾಜಿಕ ಮತ್ತು ಸಾಂಸ್ಕೃತಿಕವಾಗಿ ಉತ್ತಮ ಸ್ಥಿತಿಯಲ್ಲಿರುತ್ತಾರೆ. ಇವರ ಯುವ ಪೀಳಿಗೆಗೆ ಸಂಪೂರ್ಣವಾಗಿ ದಲಿತ, ದಲಿತ ಸಂಸ್ಕೃತಿಯ ಅರಿವು ಇರುವುದೇ ಇಲ್ಲ. ಆಧುನಿಕ ಎಲ್ಲಾ ಸೌಲಭ್ಯಗಳನ್ನು ಇವರು ಹೊಂದಿದ್ದಾರೆ.

ಇಷ್ಟಾಗಿಯೂ ಕರ್ನಾಟಕದಲ್ಲಿ ಭೂಹೀನ ದಲಿತರು ಬಹು ದೊಡ್ಡ ಸಂಖ್ಯೆಯಲ್ಲಿದ್ದಾರೆ. ಇವರ ಸ್ಥಿತಿ ಚಿಂತಾಜನಕವಾಗಿದೆ. ಜಮೀನು ಪಡೆಯುವುದಾಗಲೀ ಅಥವಾ ಇನ್ನಾವುದೇ ಆರ್ಥಿಕ ಮೂಲವನ್ನು ಹಿಡಿಯುವುದಾಗಲೀ ಇವರಿಗೆ ಸಾಧ್ಯವಾಗಿಲ್ಲ. ದಿನದ ಇಡೀ ಸಮಯವು ಅಂದಂದಿನ ಹೊಟ್ಟೆಪಾಡಿಗಾಗಿ ಮಾತ್ರವೇ ವ್ಯಯವಾಗುತ್ತಿದೆ. ಇದರಿಂದಾಗಿ ಭವಿಷ್ಯವನ್ನು ರೂಪಿಸಿಕೊಳ್ಳುವ ಅವಕಾಶಗಳು ಸಾಧ್ಯತೆಗಳು ಇವರಿಗೆ ದೂರವಾಗಿವೆ.

## ದಲಿತರು ಮತ್ತು ಕೂಲಿ

ಕೂಲಿಯು ದಲಿತರಿಗೆ ಆಶ್ರಯವನ್ನು ನೀಡುತ್ತಿದೆ. ಅದು ಇವರ ಪ್ರಾಥಮಿಕ ಸಮಸ್ಯೆಯನ್ನು ಪೂರೈಸಿಕೊಳ್ಳುವಲ್ಲಿ ಮಹತ್ತರ ಪಾತ್ರವನ್ನು ವಹಿಸುತ್ತದೆ. ಹಾಗೆಯೇ ಕೂಲಿಯು ಇವರಿಗೆ ಅನಿವಾರ್ಯ. ಕೂಲಿ ಇಲ್ಲದೆ ಬದುಕೇ ಇಲ್ಲ. ಬಹುತೇಕ ದಲಿತರು ಭೂಮಾಲೀಕರ ಅಥವಾ ಬಂಡವಾಳಶಾಹಿಗಳಲ್ಲಿ ಕೂಲಿಗಳಾಗಿ, ಕೂಲಿ ಕಾರ್ಮಿಕರಾಗಿ ಕೆಲಸವನ್ನು ನಿರ್ವಹಿಸುತ್ತಾರೆ. ಈ ಭೂಮಾಲೀಕರು ಮತ್ತು ಬಂಡವಾಳಗಾರರು ಬಹುತೇಕ ದಲಿತೇತರ ಸಮುದಾಯದವರಾಗಿರುತ್ತಾರೆ. ಅವರಲ್ಲಿ ಒಕ್ಕಲಿಗ, ಲಿಂಗಾಯಿತ, ಕುರುಬ, ಈಡಿಗ, ಬ್ರಾಹ್ಮಣ, ವಿಶ್ವಕರ್ಮ ಜನಾಂಗಗಳು, ಶೆಟ್ಟಿ, ಬಂಟ್ಸ್, ರೈ ಮುಂತಾದ ಸಮುದಾಯದವರು ಆಗಿರುತ್ತಾರೆ.

ದಲಿತರು ಎಲ್ಲಿ ಕೂಲಿ ಕೆಲಸವನ್ನು ಮಾಡುತ್ತಾರೆ. ಅವರು ಎಂತಹ ಕೂಲಿ ಕೆಲಸವನ್ನು ಮಾಡುತ್ತಾರೆ ಎಂಬುದನ್ನು ನೋಡಬೇಕು. ಆಗ ಅವುಗಳ ವಿಭಾಗ ಕ್ರಮಗಳು ಕಾಣಸಿಗುತ್ತವೆ. ಅವುಗಳು ಪ್ರಮುಖವಾಗಿ ಪ್ರಾದೇಶಿಕವಾಗಿ ಎರಡು ರೀತಿಯಲ್ಲಿರುತ್ತವೆ.

ಅ) ಗ್ರಾಮೀಣ ಪ್ರದೇಶದಲ್ಲಿನ ಕೂಲಿ ಬ) ನಗರ ಪ್ರದೇಶದಲ್ಲಿನ ಕೂಲಿ

ಈ ಎರಡು ಪ್ರಾದೇಶಿಕ ದಲಿತ ಕೂಲಿಗಳು ವಿಭಿನ್ನ ಬದುಕನ್ನು ಬದುಕುತ್ತಿದ್ದಾರೆ. ಅದಕ್ಕೆ ಅವರ ಆರ್ಥಿಕ ಸ್ಥಿತಿಯೇ ಕಾರಣ. ಬಹುವಾಗಿ ಗ್ರಾಮೀಣ ಬದುಕಿನ ಕೂಲಿಯು ಕೃಷಿಗೆ ಸಂಬಂಧಿಸಿರುತ್ತದೆ.

**ಅ) ಗ್ರಾಮೀಣ ಪ್ರದೇಶದಲ್ಲಿನ ಕೂಲಿ :** ಹಳ್ಳಿಗಳಲ್ಲಿ ದಲಿತರು ಕೂಲಿಯ ಹಲವು ಮೂಲಗಳನ್ನು ಅವಲಂಬಿಸಿದ್ದಾರೆ. ಅದು ಭೂಮಾಲೀಕರ ಮತ್ತು ಖಾಸಗಿ ಗುತ್ತಿಗೆದಾರರ, ಸರ್ಕಾರಿ ಗುತ್ತಿಗೆದಾರರ ಕೆಲಸಗಳಿಗೆ ಸಂಬಂಧಿಸಿರುತ್ತದೆ. ಅಲ್ಲದೆ ಗ್ರಾಮಗಳಿಂದ ಗ್ರಾಮಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ವಲಸೆ ಹೋಗಿ ನಡೆಸುವ ಕೃಷಿ ಸಂಬಂಧದ ಕೂಲಿಯೂ ಉಂಟು.

ಕೃಷಿಗೆ ಸಂಬಂಧಿಸಿದಂತ ಕೂಲಿಯು ಸಾರ್ವಕಾಲಿಕವಾಗಿರುವುದಿಲ್ಲ. ಅದು ವಾರ್ಷಿಕ ಋತುಚಕ್ರದ ಕೆಲವೇ ತಿಂಗಳನ್ನು ಒಳಗೊಂಡಿರುತ್ತದೆ. ಉಳಿದಂತೆ ತಿಂಗಳು ಕೃಷಿಯಲ್ಲಿ ಕೆಲಸವಿಲ್ಲದೆ ಅನ್ಯ ಕೆಲಸಗಳಿಗೆ ತೊಡಗಿಕೊಳ್ಳುತ್ತಾರೆ. ಹಾಗೆಯೇ ಈ ಗ್ರಾಮೀಣ ಪ್ರದೇಶದಲ್ಲಿ ಸಿಗುವ ಕೂಲಿಯ ಹಣವು ಒಂದೇ ಪ್ರಮಾಣದಲ್ಲಿ ಇರುವುದಿಲ್ಲ. ಇದು ಪ್ರಾದೇಶಿಕವಾಗಿ ಭಿನ್ನತೆಯನ್ನು ಹೊಂದಿರುತ್ತದೆ. ಕರ್ನಾಟಕ ಭೌಗೋಳಿಕ ಪ್ರದೇಶವನ್ನು ನೋಡಿದರೆ ಒಟ್ಟು ಭೂ ಭಾಗವನ್ನು ಮೂರು ಭಾಗವಾಗಿ ವಿಂಗಡಿಸಬಹುದು. ಅವು (i) ಒಣ ಭೂಮಿಯ ಪ್ರದೇಶ, (ii) ಕರಾವಳಿ ತೀರದ, ಮಲೆನಾಡಿನ ಭೂ ಪ್ರದೇಶ (iii) ನೀರಾವರಿ ಭೂಮಿಯ ಪ್ರದೇಶ.

ಒಣ ಭೂಮಿ ಅಥವಾ ಬಯಲು ಪ್ರದೇಶದಲ್ಲಿ ಕೂಲಿಯು ಹೆಚ್ಚಾಗಿ ಮಳೆಯನ್ನು ಅವಲಂಬಿಸಿರುತ್ತದೆ. ಮಳೆ ಇಲ್ಲದ ಸಂದರ್ಭದಲ್ಲಿ ಕೂಲಿ ಸಿಗುವುದು ತುಂಬಾ ಕಡಿಮೆ. ಆಗ ಕೆಲವೇ ನಿಯಮಿತ ಜನಕ್ಕೆ ಕೂಲಿಯ ಕೆಲಸ ಸಿಗುತ್ತದೆ. ಅಂದರೆ ತೋಟಗಳಿಗೆ ಮಣ್ಣು, ಗೊಬ್ಬರ ಹೇರಿಸುವುದು, ಭೂಮಿಯನ್ನು ಪೈರಿಗಾಗಿ ಹದಗೊಳಿಸುವ ಕಾರ್ಯವು ನಡೆಯುತ್ತದೆ. ಈ ಬಯಲು ಪ್ರದೇಶದಲ್ಲಿ ಭೂ ಮಾಲೀಕರು ಮತ್ತು ಬಂಡವಾಳಶಾಹಿಗಳು ಕೊಳವೆ ಬಾವಿಗಳ ಮೂಲಕ ನೀರನ್ನು ಕೃಷಿಗೆ ಬಳಸುತ್ತಾರೆ. ಇಂಥ ಮನೆಗಳಲ್ಲಿ ಕೂಲಿಯ ಕೆಲಸ ಸಿಗುತ್ತದೆ. ಈ ಪ್ರದೇಶಗಳಲ್ಲಿನ ತಗ್ಗು ಪ್ರದೇಶಗಳಲ್ಲಿ ತೆಂಗು ಮುಂತಾದ ತೋಟಗಳನ್ನು ಮಾಡಿಕೊಂಡು ಇರುತ್ತಾರೆ. ಈ ತೋಟಗಳಲ್ಲಿಯೇ ನೇಮ್ಕಿತ ಕೂಲಿಗಳ ಕುಟುಂಬಗಳು ಕಂಡುಬರುತ್ತವೆ. ಇವರು ಕೂಲಿಯು ಸಿಗದ ಸಂದರ್ಭದಲ್ಲಿ ವಲಸೆ ಹೋಗುತ್ತಾರೆ. ಕಾಫೀ, ಟೀ, ಏಲಕ್ಕಿ, ಮೆಣಸು ಮುಂತಾದವುಗಳು ಇರುವ ಮಲೆನಾಡಿಗೆ ಹೋಗುತ್ತಾರೆ. ಅಲ್ಲಿನ ಪ್ಲಾಂಟರ್ಸ್‌ಗಳು ಇವರಿಗೆ ಕೂಲಿಯ ಕೆಲಸವನ್ನು ಕೊಡುತ್ತಾರೆ. ಹೀಗೆ ವಲಸೆ ಹೋದವರಿಗೆ ಪರಿಸರ ಬದಲಾಗಿ, ವಾತಾವರಣಕ್ಕೆ ಅನಿವಾರ್ಯವಾಗಿ ಹೊಂದಿಕೊಂಡು ಆರೋಗ್ಯವನ್ನು ಹದಗೆಡಿಸಿಕೊಳ್ಳುತ್ತಾರೆ. ನಂತರದಲ್ಲಿ ಕಾಯಿಲೆಗಳು ಮೀರಿ ವ್ಯಕ್ತಿಗಳು ಸಾವನ್ನು ಅಪ್ಪುತ್ತಾರೆ.

ಕರಾವಳಿ ಮತ್ತು ಮಲೆನಾಡು ಪ್ರದೇಶಗಳಲ್ಲಿ ದಟ್ಟವಾದ ಅರಣ್ಯವಿದ್ದು ಈ ಅರಣ್ಯಗಳು ಬಹುಪಾಲು ಕಾಫಿ, ಟೀ, ಏಲಕ್ಕಿ, ಮೆಣಸು ಮುಂತಾದವುಗಳನ್ನು ಬೆಳೆಯಲು ಅನುಕೂಲ ಮಾಡಿಕೊಂಡಿದ್ದಾರೆ. ಇವುಗಳ ನಡುವೆ ಅಡಿಕೆ ಮತ್ತು ಎಲೆಯ ತೋಟಗಳು ಕಂಡು ಬರುತ್ತವೆ. ಇವು ಪ್ರಾಕೃತಿಕ ಸಂಪನ್ಮೂಲ ಮತ್ತು ಅದರ ಆಧುನಿಕ ಜಲಸಂಪನ್ಮೂಲಗಳನ್ನು ಹೊಂದಿವೆ. ಈ ಪ್ರದೇಶದಲ್ಲಿ ವರ್ಷ ಪೂರ್ತಿ ಕೆಲಸ ಸಿಗುವ ಸಾಧ್ಯತೆಗಳು ಇವೆ. ಇಲ್ಲಿ ಕೂಲಿ ಕೆಲಸ ಮಾಡುವ ದಲಿತ ಕೂಲಿಯವರು ಸ್ಥಳೀಯವರಾಗಿರುತ್ತಾರೆ. ಮತ್ತೆ ಕೆಲವರು ಈ ಪ್ರದೇಶಕ್ಕೆ ಉದ್ಯೋಗವನ್ನು ಅರಸಿ ಬಂದವರಾಗಿದ್ದಾರೆ. ಈ ತೋಟಗಳಲ್ಲಿ ಖಾಯಂ ಕೆಲಸಗಾರರು ಇರುತ್ತಾರೆ. ಮತ್ತೆ ಕೆಲವರು ತಾತ್ಕಾಲಿಕ ಕೆಲಸಗಾರರು

ಇರುತ್ತಾರೆ. ಅದು ತೋಟದ ಕೆಲಸಕ್ಕೆ ಸಂಬಂಧಪಟ್ಟಿರುತ್ತದೆ. ಅದರ ಆಡಳಿತ ವರ್ಗದವರಿಗೆ (ರೈಟರ್, ಮೇಸ್ತ್ರಿಗಳು) ಕೂಲಿ ಕೆಲಸಗಾರರನ್ನು ಕಳುಹಿಸುವ ಮತ್ತು ಕರೆಸಿಕೊಳ್ಳುವ ನಿರ್ಧಾರವನ್ನು ತೋಟದ ಕೆಲಸಕ್ಕೆ ಸಂಬಂಧಪಟ್ಟಂತೆ ನಿರ್ಧರಿಸುತ್ತಾರೆ.

ನೀರಾವರಿ ಭೂಪ್ರದೇಶದಲ್ಲಿನ ಕೂಲಿಯು ಸಾಮಾನ್ಯವಾಗಿ ಒಂದು ಬೆಳೆಯನ್ನು ಕಡ್ಡಾಯವಾಗಿ ಹೊಂದಿರುತ್ತದೆ. ಈ ಸಂದರ್ಭದಲ್ಲಿನ ಕೂಲಿಯು ಇಂದು ಕೆಲವು ಪ್ರದೇಶಗಳಲ್ಲಿ ಕಸುಬಿಗೆ ತಕ್ಕಂತೆ ಇರುತ್ತವೆ. ಈ ನೀರಾವರಿ ಪ್ರದೇಶವು ಕೆರೆಯ ಹಿಂದಲ ಪ್ರದೇಶ, ಜಲಾಶಯದ ನಾಲೆಯ ಪ್ರದೇಶವಾಗಿರುತ್ತದೆ. ಕೆರೆಯ ನೀರಿನ ಸಂಗ್ರಹಣೆಯು ಅದಕ್ಕೆ ತಕ್ಕಂತೆ ಸೀಮಿತ ಭೂಪ್ರದೇಶವನ್ನು ಹೊಂದಿರುತ್ತದೆ. ಮತ್ತು ಅದೇ ಭೂ ಪ್ರದೇಶದಕ್ಕೆ ಬೀಳುವ ಮಳೆಯನ್ನು ಅವಲಂಬಿಸಿರುತ್ತದೆ. ಆದರೆ ಜಲಾಶಯಕ್ಕೆ ಬಂದು ಸಂಗ್ರಹವಾಗುವ ಜಲಮೂಲಗಳು ನೂರಾರು ಕಿಲೋಮೀಟರ್‌ಗಳ ಅಂತರವಿರುತ್ತವೆ. ಆದ್ದರಿಂದ ಜಲಾಶಯದ ಜಲಮೂಲಗಳು ಜಲಾಶಯದ ಭೂ ಭಾಗವೇ ಆಗ ಬೇಕಿಲ್ಲ. ಇದರ ನೀರಿನ ಸಾಮರ್ಥ್ಯ ಹೆಚ್ಚಾಗಿರುತ್ತದೆ. ಇಲ್ಲಿಯ ನೀರಾವರಿಯ ಭೂ ಭಾಗವನ್ನು ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿದ ಸಮುದಾಯಗಳ ಭೂ ಮಾಲಿಕರೇ ಆಗಿರುತ್ತಾರೆ. ಇಲ್ಲಿ ಸಿಗುವ ಕೂಲಿಯು ಬಯಲು ಪ್ರದೇಶಕ್ಕಿಂತ ಪ್ರಮಾಣದಲ್ಲಿ ಹೆಚ್ಚಾಗಿರುತ್ತದೆ.

ಯಾವ ಭೂ ಭಾಗದಲ್ಲಿ ದಲಿತ ಕೂಲಿಗಳು ಹೆಚ್ಚು ವಾಸಿಸುತ್ತಾರೋ ಅಲ್ಲಿ ದಲಿತರಿಗೆ ಸಿಗುವ ಕೂಲಿಯ ದರವು ಕಡಿಮೆ ಇರುತ್ತದೆ. ಇದು ಶಿಕ್ಷಣದ ಜೊತೆಗೂ ಸಂಬಂಧವನ್ನು ಹೊಂದಿದೆ. ಶಿಕ್ಷಣವನ್ನು ಹೊಂದಿದ, ಸರ್ಕಾರಿ ಅನುಕೂಲತೆಗಳನ್ನು ಪಡೆಯುತ್ತಿರುವ ಪ್ರದೇಶಗಳಲ್ಲಿ ದಲಿತರು ಸಾಮಾಜಿಕ ವಾಸ್ತವ ತಿಳಿಯುತ್ತಾ ಬಂದು ತಮ್ಮ ಬದುಕಿನ ಸರಿ ತಪ್ಪುಗಳನ್ನು ಗುರ್ತಿಸಿಕೊಂಡಿದ್ದಾರೆ. ಅವರು ಬೇರೆ ಬೇರೆ ಮಾರ್ಗೋಪಾಯಗಳನ್ನು ಕಂಡುಕೊಳ್ಳುತ್ತಿದ್ದಾರೆ. ಮೈಸೂರು ಭಾಗ ಅಥವಾ ದಕ್ಷಿಣ ಕರ್ನಾಟಕಕ್ಕಿಂತ ಹೈದ್ರಾಬಾದ್ ಕರ್ನಾಟಕ ಅಥವಾ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ದಲಿತ ಕೂಲಿಗಳು ಹೆಚ್ಚು ಇರುವುದು ಕಂಡುಬರುತ್ತದೆ. ಈ ಭಾಗಗಳಲ್ಲಿ ಮಧ್ಯಮ ವರ್ಗಗಳು ಇರುವುದು ಕಡಿಮೆ. ಬಾರಿ ಭೂಮಾಲೀಕರು ಮತ್ತು ದುಡಿಯುವ ವರ್ಗಗಳು ಇಲ್ಲಿ ಹೆಚ್ಚು. ದಲಿತರು ದುಡಿಯುವ ವರ್ಗಕ್ಕೆ ಸಂಪೂರ್ಣವಾಗಿ ಸೇರಿರುತ್ತಾರೆ. ತಮ್ಮ ಬದುಕಿನ ಪ್ರಾಥಮಿಕ ಅಗತ್ಯವನ್ನೇ ಪೂರೈಸಿಕೊಳ್ಳಲು ಇವರ ದುಡಿಮೆ ಇರುವುದಿಲ್ಲ. ಆದರೆ ದಕ್ಷಿಣ ಕರ್ನಾಟಕ ಅಥವಾ ಮೈಸೂರು ಭಾಗದಲ್ಲಿ ದಲಿತರು ಅಲ್ಪ ಸ್ವಲ್ಪ ಜಮೀನನ್ನು ಹೊಂದಿ ಉತ್ತರ ಕರ್ನಾಟಕದವರಿಗಿಂತ ಭಿನ್ನವಾಗಿದ್ದಾರೆ. ಈ ಭಿನ್ನತೆಯನ್ನು ಪ್ರಾದೇಶಿಕವಾಗಿ ಅವರ ಬದುಕನ್ನು ನೋಡಿದಾಗ ಕಂಡು ಬರುತ್ತದೆ.

ಮುಂದುವರೆದು ಇಂದು ಕೂಲಿಯ ಸ್ಥಿತಿ ಏನಾಗಿದೆ ಎಂಬುದನ್ನು ನೋಡಿದರೆ ಕೂಲಿ ಕೆಲಸದ ಮಧ್ಯೆ ಆಧುನಿಕತೆ ಮತ್ತು ಯಾಂತ್ರಿಕ ಜಗತ್ತು ಪ್ರವೇಶ ಮಾಡಿದೆ. ನೂರು ಜನರು ಮಾಡುವ ಕೆಲಸವನ್ನು ಒಂದು ಯಂತ್ರ ಮಾಡುವ ತಂತ್ರಜ್ಞಾನದ ಬಳಕೆಯು ಕೃಷಿಯ ಕೆಲಸದಲ್ಲಿ ಬಂದಿದೆ. ಈ ಯಂತ್ರಗಳ ತಂತ್ರಜ್ಞಾನವನ್ನು ಬಂಡವಾಳವನ್ನು ಹೊಂದಿದ ಭೂಮಾಲೀಕರು ತಾಂತ್ರಿಕತೆಯನ್ನು ಬಳಸಿಕೊಂಡು ತಮ್ಮ ಕೃಷಿಯ ಸಂಬಂಧಿಸಿದ ಕೆಲಸವನ್ನು ನಿರ್ವಹಿಸಿಕೊಳ್ಳುತ್ತಿದ್ದಾರೆ. ಇದು ಮತ್ತೆ ದುಡಿಯುವ ಕೂಲಿಗಳಿಗೆ ಕೆಲಸವಿಲ್ಲದೆ ಅತಂತ್ರ ಸ್ಥಿತಿಯನ್ನು ತಲುಪಿ ಉಲ್ಬಣಿಸುತ್ತಿರುವ ಬಡತನ ಹಸಿವು

ದರಿದ್ರ ಕೊಳಕು ನಿರ್ಮಾಣವಾಗಲು ಕಾರಣವಾಗುತ್ತಿದೆ. ಆಧುನಿಕತೆಯ ತಂತ್ರಜ್ಞಾನ ಮತ್ತು ಯಂತ್ರ ಬಳಕೆಯು ಆರ್ಥಿಕ ಭದ್ರತೆಯನ್ನು ಹೊಂದಿದವರಿಗೆ ವರವಾಗುತ್ತದೆ. ಹಾಗಾದರೆ ಆಧುನಿಕ ತಂತ್ರಜ್ಞಾನಗಳ ಅಗತ್ಯ ಬೇಕೇ ಬೇಡವೇ ಎಂಬುದರ ಪ್ರಶ್ನೆಯಲ್ಲ. ಅದರ ಚರ್ಚೆಯು ಬೇರೆ ರೀತಿಯದು. ಇದನ್ನು ಭೂವಿಕೇಂದ್ರೀಕರಣವಾಗದೇ ಇರುವ ಬದುಕಿನ ಹಿನ್ನೆಲೆಯಿಂದ ಇಲ್ಲಿ ಅರ್ಥೈಸಲಾಗಿದೆ.

ಹಳ್ಳಿಗಳಲ್ಲಿ ಕೂಲಿಯ ಮೂಲಗಳು ಬೇರೊಂದು ಬಗೆಯಲ್ಲಿ ಇಂದು ಸೃಷ್ಟಿಗೊಳ್ಳುತ್ತಲಿವೆ. ಅವು ಸರ್ಕಾರಿ ಕೆಲಸಗಳು. ಅವುಗಳನ್ನು ಖಾಸಗಿ ಕಂಟ್ರ್ಯಾಕ್ಟರು ವಹಿಸಿಕೊಂಡು ಕೆಲಸವನ್ನು ನಿರ್ವಹಿಸುತ್ತಾರೆ. ಅದು ಕೆರೆಯ ಕೆಲಸ, ರಸ್ತೆ ಕೆಲಸ, ಕಟ್ಟಡಗಳ ಕೆಲಸ ಮುಂತಾದ ಕಾಮಗಾರಿ ಕೆಲಸಗಳು ಸರ್ಕಾರಿ ಯೋಜನೆಯಲ್ಲಿ ರೂಪುಗೊಳ್ಳುತ್ತಲಿವೆ. ಇವುಗಳಿಗೆ ಅನಿವಾರ್ಯವಾಗಿ ದುಡಿಯುವ ಶಕ್ತಿ ಬೇಕು. ಇಲ್ಲಿ ಭೂಹೀನ ದಲಿತರು ತಮ್ಮ ಬದುಕಿಗೆ ಕೂಲಿಯ ಕೆಲಸವನ್ನು ನಿರ್ವಹಿಸಲು ತೊಡಗುವುದು ಕಂಡುಬರುತ್ತದೆ.

**ಬ) ನಗರ ಕೂಲಿ :** ನಗರಗಳಲ್ಲಿನ ಕೂಲಿಯನ್ನು ನಗರಗಳಲ್ಲಿ ವಾಸಿಸುವ ದಲಿತರು ನಿರ್ವಹಿಸುತ್ತಾರೆ. ಅದಲ್ಲದೆ ದಲಿತರು ಹಳ್ಳಿಗಳಿಂದ ಕೂಲಿಗೆ ನಗರಕ್ಕೆ ಬರುತ್ತಿದ್ದಾರೆ. ಇವರು ಮಾಡುವ ಕೂಲಿಯ ಕೆಲಸವೆಂದರೆ ಗಾರೆಯ ಕೆಲಸ, ಮನೆಯ ಕೆಲಸ, ಹೋಟೇಲು ಬಾರ್‌ಗಳಲ್ಲಿನ ಕೆಲಸ, ಖಾಸಗಿ ಫ್ಯಾಕ್ಟರಿಗಳಲ್ಲಿನ ಕೆಲಸ, ಅಂಗಡಿಗಳಲ್ಲಿನ ಕೆಲಸ, ಹೀಗೆ ಮುಂತಾದ ಕೆಲಸಗಳಿಗೆ ಹಳ್ಳಿಗಳಿಂದ ಪ್ರತಿದಿನ ಕೆಲಸಕ್ಕೆ ಬರುವ ದಲಿತ ಸಮುದಾಯಗಳಿವೆ. ಬಂಡವಾಳವನ್ನು ಹೊಂದಿರುವ ನಗರವಾಸಿಗಳು ತಮ್ಮ ಅಂತಸ್ತಿಗೆ ತಕ್ಕಂತೆ ತಮ್ಮ ಸಮಾಜದ ಬದುಕನ್ನು ನಿರ್ಮಾಣ ಮಾಡಿಕೊಂಡಿರುವುದು ಕಂಡುಬರುತ್ತದೆ. ಇವರು ಆರ್ಥಿಕ ಹಿನ್ನೆಲೆಯನ್ನು ಉಳ್ಳಂತವರು. ಅದಕ್ಕೆ ವಿರುದ್ಧವಾಗಿ ನಗರ ಜೀವನವು ಗ್ರಾಮೀಣ ಜೀವನಕ್ಕಿಂತ ಕಷ್ಟವಿರುತ್ತದೆ. ಅದಕ್ಕೆ ಆರ್ಥಿಕ ಮೂಲಗಳು ಬೇಕಿರುತ್ತವೆ. ಇದನ್ನು ದಲಿತರ ಬದುಕಿನ ಸಂಕಷ್ಟಗಳ ಹಿನ್ನೆಲೆಯಲ್ಲಿ ಹೇಳಬಹುದು. ಅಂದರೆ ಅಧಿಕ ಬೆಲೆಯ ಮನೆಯ ಬಾಡಿಗೆ, ಪ್ರತಿಯೊಂದು ವಸ್ತುವನ್ನು ಕೊಳ್ಳುವುದು, ನೀರಿನ ತೆರಿಗೆ, ವಿದ್ಯುತ್ ಖರ್ಚು ಮುಂತಾದ ಖರ್ಚುಗಳನ್ನು ನಿಭಾಯಿಸಲು ಶಕ್ತಿ ಇರಬೇಕಾಗುತ್ತದೆ. ಸಾಮಾನ್ಯವಾಗಿ ಯಾವ ಸರಿಯಾದ ಆರ್ಥಿಕ ಮೂಲಗಳು ಇಲ್ಲದೆಯೇ ಇರುವುದು ನಗರದ ದಲಿತ ಕೂಲಿಗಳ ಕಷ್ಟಸ್ಥಿತಿಗೆ ಕಾರಣವಾಗಬಹುದು. ಆಧುನಿಕತೆಯು, ನಗರೀಕರಣದ ಆಕರ್ಷಣೆಗೆ ಗ್ರಾಮೀಣ ಪ್ರದೇಶದವರಿಗಿಂತ ನಗರ ಪ್ರದೇಶದವರಿಗೆ ಹೆಚ್ಚು ಆಕರ್ಷಣೆಯನ್ನು ತಂದುಕೊಡುತ್ತವೆ. ಏಕೆಂದರೆ ಅವರು ಆಧುನಿಕ ಜಗತ್ತಿನ ವಹಿವಾಟಿಗೆ ಹತ್ತಿರವಾದವರು. ಗ್ರಾಮೀಣರೂ ಹತ್ತಿರವಾದಂತೆ ಆಕರ್ಷಿತರಾಗುತ್ತಾರೆ. ಈ ಆಧುನಿಕ ವಹಿವಾಟಿನೊಂದಿಗೆ ಬದುಕುವುದು ದಲಿತರಿಗೆ ಕಷ್ಟಕರವಾದದೂ ಕೂಡ. ಆದರೂ ಆಧುನಿಕತೆಯ ಜಾಗತಿಕ ಆಕರ್ಷಣೆಯು ಎಲ್ಲಾ ಜನ ವರ್ಗವನ್ನು ಸೆಳೆಯುವಂತೆ ದಲಿತ ಸಮುದಾಯವನ್ನು ಸೆಳೆಯುತ್ತದೆ. ಆದ್ದರಿಂದ ದಲಿತ ಹೆಣ್ಣು ಮಕ್ಕಳೂ ಸಹ ತಮಗೆ ಅವಕಾಶ ಸಿಕ್ಕಿದಲ್ಲಿ ಪಟ್ಟಣಗಳಲ್ಲಿನ ಗಾರೆಕೆಲಸ, ಶ್ರೀಮಂತರ ಮನೆಯಲ್ಲಿ ಪಾತ್ರೆ ತೊಳೆಯುವುದು, ಬಟ್ಟೆತೊಳೆಯುವ ಕೆಲಸಗಳಿಗೆ ತೊಡಗಿಕೊಳ್ಳುತ್ತಾರೆ. ಇದರ ಕೂಲಿಯ ಪ್ರಮಾಣವು ತೀರಾ ಕಡಿಮೆ ಇರುತ್ತದೆ. ಹಾಗೆಯೇ ಅದರಲ್ಲಿಯೇ ಅನಿವಾರ್ಯವಾಗಿ ಬದುಕು ಅನುಭವಿಸುತ್ತಾದ್ದಾರೆ.

## ಕಸುಬು

ದಲಿತರ ಬದುಕಿನಲ್ಲಿ ಕಸುಬುಗಳು ಬಹಳ ವಿಶಿಷ್ಟವಾದವು. ಅಂದರೆ ಸಮಾಜದ ಘನತೆಯನ್ನು ಹೊತ್ತ ಕಸುಬುಗಳಲ್ಲ. ಅವುಗಳಿಗೆ ಸಮಾಜವು ಉನ್ನತ ಸ್ಥಾನದ ಪುರಸ್ಕಾರವನ್ನು ಕೊಟ್ಟಿಲ್ಲ. ದಲಿತೇತರರು ಇವುಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ನಡೆಸಿಕೊಂಡು ಬಂದಂತವರು. ಅವುಗಳು ಕಸುಬಾಗಿ ಉಳಿದಿವೆ. ಕಸುಬಲ್ಲಿ ಕೃಷಿಯ ಕೆಲಸವನ್ನು ಇವರು ಹೊಂದಿರುವುದು ಮುಖ್ಯವಾಗಿ ಕಂಡುಬರುತ್ತದೆ. ಇವರ ಕಸುಬಲ್ಲಿ ಶ್ರಮ ಮತ್ತು ಅಸಹ್ಯವೆಂದು ಗುರ್ತಿಸಿರುವ ಕಸುಬುಗಳೆಲ್ಲವನ್ನು ದಲಿತರು ಮಾಡುತ್ತಾ ಬಂದಿದ್ದಾರೆ. ಇವರ ಕಸುಬುಗಳಲ್ಲಿ ಕೃಷಿಗೆ ಸಂಬಂಧಿಸಿದನ್ನು ಬಿಟ್ಟರೆ ಚರ್ಮದ ಕೆಲಸ. ಚರ್ಮವನ್ನು ಸುಲಿಯುವುದು ಅದನ್ನು ಹದಮಾಡುವುದು ಮತ್ತು ಹದಗೊಂಡ ಚರ್ಮವನ್ನು ವಸ್ತುವಾಗಿ ತಯಾರಿಸುವ ಕೆಲಸವನ್ನು ಮಾಡುತ್ತಾರೆ. ದಲಿತ ಸಮುದಾಯಗಳಲ್ಲಿ ಎಲ್ಲರೂ ಎಲ್ಲಾ ಕಸುಬನ್ನು ಮಾಡುವುದಿಲ್ಲ. ಆಯಾ ಕಸುಬನ್ನು ಮಾಡಿಕೊಂಡು ಬಂದವರೇ ಬಹುತೇಕವಾಗಿ ಮುಂದುವರೆಸುತ್ತಾರೆ. ಕಲ್ಲನ್ನು ಒಡೆಯುವವರು, ಮಣ್ಣನ್ನು ಅಗೆಯುವ ಕೆಲಸವನ್ನು ಮಾಡುವವರು ವಡ್ಡರು, ಬೋವಿಗಳು. ಚರಂಡಿ ಸ್ವಚ್ಛ ನಗರ ಶೌಚಾಲಯಗಳ ಶುಚಿಯಾಗಿಡುವವರು ಕರ್ಮಚಾರಿಗಳು. ಮಂಕರಿ, ಪರಕೆ, ಬುಟ್ಟಿಯನ್ನು ಹೆಣೆಯುವ ಕೊರವರು, ಕೊರಚರು. ಊರ ಕಾಯುವವರು ತಳವಾರರು. ಚರ್ಮದ ಕೆಲಸವನ್ನು ಮಾಡುವವರು ಮಾದಿಗರು. ಕೃಷಿ ಮತ್ತು ಕುಳುವಾಡಿ ಕೆಲಸಮಾಡುವವರು ಹೊಲೆಯರು. ಹೀಗೆ ಮುಂತಾದ ದಲಿತ ಸಮುದಾಯಗಳು ತಾವು ಹಿಂದಿನ ತಲೆಮಾರಿನವರು ಮಾಡಿದನ್ನು ಮುಂದುವರೆಸಿಕೊಂಡು ಬಂದುದನ್ನು ನೋಡಬಹುದು. ಇನ್ನೂ ಕೆಲವರು ಈ ಕಸುಬುಗಳನ್ನು ಮುಂದುವರೆಸುತ್ತಿದ್ದಾರೆ. ಆಧುನಿಕತೆಯ ಪ್ರಭಾವವು ಕೆಲವರ ಕುಲಕಸುಬನ್ನು ಬಿಡಿಸಿದೆ. ಅವು ಕೆಲವು ಆಧುನಿಕತೆಯ ತಂತ್ರಜ್ಞಾನದಲ್ಲಿ ಸೇರಿಕೊಂಡಿವೆ.

## ಜೀತ

ವರ್ಷಾನುಗಟ್ಟಲೆ ತಲೆ ತಲೆಮಾರುಗಳಲ್ಲಿ ಕೆಲವು ದಲಿತ ಕುಟುಂಬಗಳು ಜೀತದಲ್ಲಿವೆ. ಜೀತಕ್ಕೆ ಇಂತಿಷ್ಟು ಎಂದು ಅವಧಿಯ ಮಿತಿ ಉಂಟು. ಆದರೆ ಅನಿವಾರ್ಯ ಪ್ರಸಂಗಗಳು ಬಂದೊದಗಿ ಜೀತಗಾರ ಜೀತದಲ್ಲಿಯೇ ಇದ್ದು, ಪಡೆದ ಹಣಕ್ಕೆ ಜೀತವಿರಬೇಕಾಗಿರುತ್ತದೆ. ಹಿರಿಯ ತಲೆಮಾರಿನವರು ಮಾಡಿದ ಸಾಲವನ್ನು ತೀರಿಸಲು ವರ್ಷಾನುಗಟ್ಟಲೆ ಇದ್ದು ಜೀತವನ್ನು ಮಾಡಿ ತೀರಿಸಬೇಕಿರುತ್ತದೆ. ದಲಿತರಿಗೆ ಹಣ ಪಡೆಯುವ ಪ್ರಸಂಗಗಳು ಈ ರೀತಿ ಮಾಡಿವೆ. ಅವು ಮಕ್ಕಳ ಮದುವೆ, ಉಳಿಯಲು ಸೂರು, ಕಲಿತ ಚಟಗಳಿಗೆ, ಕಾಯಿಲೆ ಕಸಾಲೆಗಳು ಬಂದೊದಗಿದ ಸಂದರ್ಭದಲ್ಲಿ, ಕಷ್ಟ- ಸಾವು ಮುಂತಾದ ಸಂದರ್ಭಗಳಲ್ಲಿ ಹಣವನ್ನು ಪಡೆಯುವವರು. ಇವುಗಳನ್ನು ತೀರಿಸಲು ತಲೆಮಾರುಗಳೇ ಕಳೆಯಬಹುದು. ಬಹುಮುಖ್ಯವಾಗಿ ದಲಿತ ಕುಟುಂಬಗಳಿಗೆ ಆಹಾರದ ಸಮಸ್ಯೆ ಮುಖ್ಯವಾದುದು, ಈ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ಹುಟ್ಟಿದ ಮಕ್ಕಳು ಅಥವಾ ಮನೆಯ ಹಿರಿಯವರು ಭೂಮಾಲೀಕರ ಮನೆಗಳಲ್ಲಿ ಅಥವಾ ಬಂಡವಾಳ ಹೊಂದಿದವರ ಮನೆಯಲ್ಲಿ ಜೀತಕ್ಕೆ ಸೇರಿಕೊಳ್ಳುತ್ತಾರೆ. ಈ ಜೀತಕ್ಕೆ ದಲಿತರ ಮುಂತಾದ ಕಾರಣಗಳು ಸಿಗುತ್ತವೆ.

ಜೀತ ಮತ್ತು ಕೂಲಿ ಎರಡೂ ಒಂದೇ ಕ್ರಿಯೆಯನ್ನು ಹೊಂದಿದ್ದರೂ ಅವುಗಳ ನಿಯಮದಲ್ಲಿ ಭಿನ್ನತೆಯನ್ನು ಹೊಂದಿವೆ. ಜೀತಕ್ಕೆ ಜೀತಗಾರನ ನಿರಂತರ ಶ್ರಮವಿರುತ್ತದೆ. ಅದು ದುಡಿಯುವ-ದುಡಿಸಿಕೊಳ್ಳುವ ವ್ಯಕ್ತಿಯ ನಡುವಿನ

ವ್ಯವಹಾರಿಕ ಸಂಬಂಧದ ಅನ್ವಯದಲ್ಲಿ ವಿಸ್ತರಣೆಯನ್ನು ಪಡೆಯುತ್ತಿರುತ್ತದೆ. ಅದು ತಿಂಗಳುಗಳಿಂದ ವರ್ಷಗಟ್ಟಲೆ ಹಿಡಿಯಬಹುದು. ಆದರೆ ಕೂಲಿಯಲ್ಲಿ ಕೂಲಿಯ ಪ್ರಮಾಣ, (ಹಣದಲ್ಲಿ) ಅವಧಿ (ಗಂಟೆ)ಯು ನಿರ್ದಿಷ್ಟವಾಗಿರುತ್ತದೆ. ಜೀತಕ್ಕಿಂತ ಕೂಲಿಯಲ್ಲಿ ಸ್ವಾತಂತ್ರ್ಯವಿರುತ್ತದೆ. ಕೂಲಿ ಕೆಲಸಗಾರನಿಗಿಂತ ಜೀತಗಾರನಿಗೆ ಜವಾಬ್ದಾರಿ ಹೆಚ್ಚಿರುತ್ತದೆ. ಜೀತದಲ್ಲಿ ರಜೆ ಅನ್ನೋದು ಇರುವುದಿಲ್ಲ.

ಜೀತಗಾರ ಪಡೆಯುವ ಕೂಲಿಯು ಕಡಿಮೆ ಪ್ರಮಾಣದಲ್ಲಿರುತ್ತದೆ. ರಜೆ ಎಂದರೆ ಆರೋಗ್ಯ ಕೆಟ್ಟಾಗ ಮಾತ್ರವೇ ಸುಧಾರಿಸಿಕೊಳ್ಳಲು ಬಿಡುವು ಇರುತ್ತದೆ. ಜೀತಗಾರನಿಗೆ ಜೀತಮಾಡುವ ಬಹುತೇಕ ಮನೆಗಳಲ್ಲಿನ ಸ್ಥಳಗಳಲ್ಲಿ ಪ್ರತ್ಯೇಕ ಸಂಚಾರ ಇರುತ್ತದೆ. ಹಾಗೆಯೇ ಪ್ರತ್ಯೇಕ ಊಟದ ಸ್ಥಳವನ್ನು ನಿಗದಿಪಡಿಸಲಾಗಿರುತ್ತದೆ. ಶ್ರಮ ಮತ್ತು ದುಡಿಮೆಗೆ ಸಂಬಂಧಿಸಿದಂತೆ ಮಡಿ-ಮೈಲಿಗೆ ಇರುವುದಿಲ್ಲ. ಇದನ್ನು ಮನೆಯ ಒಳಗೆ ಮನೆಯ ಹೊರಗೆ ಎಂದು ವಿಭಾಗಿಸಿಕೊಳ್ಳುತ್ತಾರೆ. ಮನೆಯ ಒಳಗೆ ಮಡಿ-ಮೈಲಿಗೆ; ಮನೆಯ ಹೊರಗೆ ಶ್ರಮ ಮತ್ತು ದುಡಿಮೆಯ ಸ್ಪರ್ಶವಿರುತ್ತದೆ. ಇವರು ದುಡಿಯುವುದರೊಂದಿಗೆ ನಿಕಟ ಸಂಬಂಧವನ್ನು ಹೊಂದಿರುತ್ತಾರೆ.

ಹಿಂದೆ ದಲಿತರಿಗೆ ಅಕ್ಷರದ ಅರಿವು ಇರಲಿಲ್ಲ. ಇವರಿಗೆ ತಮ್ಮ ಸಮಾಜದಲ್ಲಿ ತಮ್ಮ ಸ್ಥಾನ ಏನು? ಎಂಬುದರ ಪ್ರಶ್ನೆ ಹುಟ್ಟಿರಲಿಲ್ಲ. ಜೀತಕ್ಕೆ ಕಟ್ಟುಬಿದ್ದವರಿಗೆ ಅದೊಂದು ಕರ್ತವ್ಯವಾಗಿ, ಅನಿವಾರ್ಯವಾಗಿದ್ದು ಧಣಿ ನಿಷ್ಠೆಗೆ ಬದ್ಧರಾಗಿದ್ದರು. ಇದಕ್ಕೆ ಪಟ್ಟಭದ್ರ ಹಿತಾಸಕ್ತಿಯು ತನ್ನ ಬಿಗಿಯನ್ನು ದಲಿತ ಸಮುದಾಯಗಳ ಮೇಲೆ ಹೊಂದಿತ್ತು. ಹಾಗಾಗಿ ದಲಿತ ಕಟುಂಬಗಳಿಗೆ ಜೀತ ವಂಶಪಾರಂಪರ್ಯವಾಗಿತ್ತು.

ಆದರೂ ಜೀತಕ್ಕೆ ಇಂದೂ ಏಕೆ ಸೇರುತ್ತಿದ್ದಾರೆ ಎಂದರೆ ಅದಕ್ಕೆ ಹಲವಾರು ಕಾರಣಗಳು ಇವೆ. ಅವುಗಳನ್ನು ಹೀಗೆ ಕ್ರೋಡೀಕರಿಸಬಹುದು. (ಅ) ಇನ್ನೂ ಒದಗದ ಅಗತ್ಯವಾದ ಸಾಮಾಜಿಕ ಸೌಕರ್ಯಗಳು, (ಬ) ಗ್ರಾಮಗಳ ಆಡಳಿತವನ್ನು, ಅದರ ಯಜಮಾನಿಕೆಯನ್ನು ಕಾಪಾಡಿಕೊಂಡು ಬರುತ್ತಿರುವ ಗ್ರಾಮವ್ಯವಸ್ಥೆ. ಅದರಲ್ಲಿನ ಶ್ರೇಣೀಕೃತ ವ್ಯವಸ್ಥೆಯ ಕ್ರಮಬದ್ಧ ಜಾರಿ (ಕ) ಇತರರಂತೆ ಬದುಕುವ ಹಂಬಲ. ಇವುಗಳೊಂದಿಗೆ ಕುಟುಂಬಗಳ ಆಹಾರ, ವಸತಿ, ಮದುವೆ, ಕಾಯಿಲೆ ಬದುಕುವ ಹಂಬಲ, ಇವುಗಳೊಂದಿಗೆ ಕುಟುಂಬಗಳ ಆಹಾರ, ವಸತಿ, ಮದುವೆ ಕಾಯಿಲೆ, ಹಬ್ಬಹರಿದಿನಗಳು, ದೇವರು ಮುಂತಾದವುಗಳ ಪೂರೈಕೆಗೆ ಹಣದ ಕೊರತೆ. ಇವುಗಳ ಪೂರೈಕೆಗೆ ಅನಿವಾರ್ಯವಾಗಿ ಆರ್ಥಿಕವಾಗಿ ಮುಂದುವರೆದವರ ಅದಕ್ಕೆ ಸಂಬಂಧಿಸಿದವರ ಜೊತೆಗೆ ಜೀತದ ಬದ್ಧತೆಯನ್ನು ಮಾಡಿಕೊಳ್ಳುತ್ತಾರೆ. ದಲಿತರ ಹತ್ತಿರ ಉಳಿದಿರುವುದು ಎಂದರೆ ಅವರ ದೇಹದ ಶಕ್ತಿ ಒಂದೇ. ಇವರಿಗೆ ಈ ಶಕ್ತಿ ಇರುವ ತನಕ ತಮ್ಮ ಬದುಕನ್ನು ನಡೆಸುವ ಕುಂದದ ಧೈರ್ಯವಿರುತ್ತದೆ. ಇವರ ದೇಹವು ದುಡಿಯುವ ಶಕ್ತಿಗಾಗಿ ಪರರ ಮನೆಯನ್ನು ಮತ್ತು ಆ ಮನೆಯ ಊಟವನ್ನು ಆಶ್ರಯಿಸುತ್ತವೆ. ಹೀಗೆ ಬದುಕುವ ದಲಿತರು ಅತಂತ್ರ ಸ್ಥಿತಿಯನ್ನು ತಲುಪಿದ್ದಾರೆ. ಇದೊಂದು ತಿರುಗುವ ಚಕ್ರದ ಸ್ವರೂಪವನ್ನು ಹೊಂದಿರುತ್ತದೆ. ಹಣ ಪಡೆಯುವುದು ಮತ್ತು ಅದನ್ನು ದುಡಿದು ತೀರಿಸುವುದು. ಆರ್ಥಿಕ ಭದ್ರತೆ ಇರುವವರು ಸುಖಮಯ ಜೀವನವನ್ನು ನಡೆಸಿ ಶ್ರಮದಾಯಕ ಜೀವನಕ್ಕೆ ದಲಿತ ಸಮುದಾಯದವರನ್ನು ಇಟ್ಟುಕೊಂಡಿದ್ದಾರೆ. ಇಲ್ಲಿನ ಯಜಮಾನನಿಗೆ ಮಾನವೀಯ ಸಂಬಂಧದ ಪ್ರಾಥಮಿಕ ಅರಿವೂ ಇರುವುದಿಲ್ಲ. ಹಾಗೆಯೇ ದಲಿತ ಕುಟುಂಬಗಳು ಸಹ ತಮ್ಮ ವಾಸ್ತವ ಸ್ಥಿತಿ ಎಂತಹದು; ಅದಕ್ಕೆ ಪರಿಹಾರವೇನು? ತಮ್ಮ ಬದುಕಿಗೆ

ಪರ್ಯಾಯವೇನು? ಎಂಬುದನ್ನು ಯೋಚಿಸುವುದೂ ಇಲ್ಲ. ಹಾಗೆ ಯೋಚನೆ ಮಾಡದ ಹಾಗೆ ಪಟ್ಟಭದ್ರ ಹಿತಾಸಕ್ತಿಗಳು ತಮ್ಮ ವ್ಯವಸ್ಥೆಯೊಳಗೆ ದಲಿತರನ್ನು ಹಿಡಿದುಕೊಂಡಿವೆ.

ದಲಿತರು ವೃತ್ತಿಯಲ್ಲಿ ಶ್ರಮವನ್ನು ಆಯ್ಕೆ ಮಾಡಿಕೊಂಡವರು. ಆದ್ದರಿಂದ ಶ್ರಮದ ತಾತ್ಕಾಲಿಕ ನಿವಾರಣೆಗೆ ಇವರು ಮದ್ಯಪಾನಕ್ಕೆ ಬಲಿಯಾಗಿರುವವರು. ಇಂದು ಕುಡಿಯುವುದು ಚಟವಾಗಿದೆ. ಫ್ಯಾಷನ್ ಆಗಿದೆ. ಅದರ ಅರ್ಥವು ಬೇರೆ ಬೇರೆ ರೀತಿಯಲ್ಲಿ ಬಳಕೆಯಾಗುತ್ತಿದೆ. ದಲಿತರ ಕುಡಿತದ ಸಂಬಂಧವು ಬೇರೆಯದೇ ರೀತಿಯ ಅರ್ಥವನ್ನು ಹೊಂದಿರುವಂತಹದು. ತಾವು ವೃತ್ತಿಯಲ್ಲಿ ನಿರ್ವಹಿಸುವ ಹೇಸಿಗೆ ಕೆಲಸ ಮತ್ತು ಶ್ರಮದಾಯಕ ಕೆಲಸವು ಮತ್ತನ್ನು ಅಪೇಕ್ಷಿಸುತ್ತದೆ. ಅದರಿಂದ ವಿಶ್ರಾಂತಿಯನ್ನು ಅಪೇಕ್ಷಿಸುತ್ತದೆ. ಇದರಲ್ಲಿ ತಪ್ಪು, ಸರಿ ಎನ್ನುವುದು ಬೇರೆಯ ಚರ್ಚೆಯನ್ನು ತಂದೊಡ್ಡುತ್ತದೆ.

## ದಲಿತ ಕಾರ್ಮಿಕರು

ಈ ಹೊತ್ತಿನಲ್ಲಿ ದಲಿತ ಯುವ ಪೀಳಿಗೆಯು ವಿದ್ಯಾವಂತರಾಗುತ್ತಿದ್ದಾರೆ. ಇವರಿಗೆ ಸಿಗದ ಉದ್ಯೋಗ, ಇರದ ಭೂಮಿ ಮತ್ತು ಬಂಡವಾಳ ತೊಡಕನ್ನು ನಿರ್ಮಿಸುತ್ತಿದೆ. ವಿದ್ಯಾವಂತರು ಗ್ರಾಮಗಳಿಂದ ನಗರಕ್ಕೆ ವಲಸೆ ಬರುತ್ತಿದ್ದಾರೆ. ಬಂಡವಾಳಶಾಹಿಗಳ ಕಾರ್ಖಾನೆಗಳಿಗೆ ಸೇರುತ್ತಿದ್ದಾರೆ. ಈ ಖಾಸಗೀ ಕಾರ್ಖಾನೆಯಲ್ಲಿ ಸೇರುವ ದಲಿತರಿಗೆ ಸಂಬಂಧಿಸಿದ ಉತ್ತಮ ಅನುಭವವಿದ್ದರೂ, ನಂತರದಲ್ಲಿ ಮತ್ತಷ್ಟು ಅನುಭವವಾದರೂ ಅಲ್ಲಿಯ ಹುದ್ದೆಗಳಿಗೆ ಕಾನೂನಿನನ್ವಯ ದಾಖಲೆಗಳನ್ನು ಈ ಕಾರ್ಖಾನೆಗಳು ಮಾಡಿಕೊಳ್ಳುವುದಿಲ್ಲ. ತಮ್ಮ ಗ್ರಾಮೀಣ ಬದುಕಿಗಿಂತ ಸಮಾನತೆ ಮತ್ತು ಸ್ವಾತಂತ್ರ್ಯದಲ್ಲಿ ಸ್ವಲ್ಪ ಉತ್ತಮವೆಂದು ನಗರಕ್ಕೆ ದಲಿತ ಯುವ ಪೀಳಿಗೆಯವರು ಬರುತ್ತಾರೆ. ನಗರಕ್ಕೆ ಬಂದವರು ಕೂಲಿಕಾರ್ಮಿಕರಾಗುತ್ತಾರೆ. ಹೀಗೆ ನಗರಕ್ಕೆ ಬಂದು ವಾಸಿಸುವ, ಕಾರ್ಖಾನೆಗಳಿಗೆ ಸೇರುವ ದಲಿತರಿಗೆ ಆರ್ಥಿಕ ವಹಿವಾಟಿಗೆ ತಕ್ಕಂತೆ ಬದುಕಬೇಕಾಗುತ್ತದೆ. ಇವರಿಗೆ ಉತ್ತಮ ಬಡಾವಣೆಗಳಲ್ಲಿ ಬದುಕಲು ತಮ್ಮ ಆರ್ಥಿಕತೆಯು ಅಡ್ಡ ಬರುತ್ತದೆ. ಇವರಿಗೆ ವಾಸಿಸಲು ಸರಿಯಾದ ಸ್ಥಳಗಳು ಸಿಗದೆ ಕೊಳಚೆ ಪ್ರದೇಶಗಳಲ್ಲಿ ನೆಲಸಬೇಕಾಗುತ್ತದೆ. ನಿರ್ಲಕ್ಷಿತವಾಗಿರುವ ಪಟ್ಟಣಗಳ ಕೊಳಕು ನೀರು ಹರಿವ ಪ್ರದೇಶಗಳಿಗೆ ಸೇರುತ್ತಿದ್ದಂತೆ ಕೊಳಗೇರಿಯ ಎಲ್ಲಾ ಲಕ್ಷಣಗಳಿಗೆ ಬಲಿಯಾಗುತ್ತಾರೆ. ತಾವು ದುಡಿಯುವ ಹಣವು ತಮ್ಮ ನಗರ ಪ್ರದೇಶದ ಆಧುನಿಕ ಬದುಕಿಗೆ ಸಾಕಾಗದೆ ಸುಲಭವಾಗಿ ಗಳಿಸಬಹುದಾದ ಕೆಲವು ವೃತ್ತಿಗಳಿಗೆ ಕೆಲವರು ತೊಡಗುವುದೂ ಉಂಟು. ಕಾರ್ಮಿಕರಿಗೆ ನಗರವನ್ನು ಸೇರುವ ಸಂದರ್ಭದಲ್ಲಿ ತನ್ನ ಹಿಂದೆ ಇದ್ದ ಊರ ರಕ್ತ ಸಂಬಂಧಿಗಳೊಂದಿಗಿನ ತಮ್ಮ ಜವಾಬ್ದಾರಿಯು ಅಷ್ಟಕ್ಕೇ ಉಳಿಯುತ್ತದೆ. ಗಳಿಕೆಯನ್ನು ಅವರ ಬದುಕಾಟಕ್ಕೇ ಸರಿಹೊಂದಿಸಿಕೊಳ್ಳುವುದು ಕಷ್ಟಕರವಾಗಿರುತ್ತದೆ. ತಮ್ಮ ಹಳ್ಳಿಗಳಿಗೆ ವರ್ಷಕ್ಕೊಮ್ಮೆ ಹೋಗಿಬರುವುದೂ ಕಷ್ಟಕರವಾಗಿರುತ್ತದೆ. ಕಾನೂನಿನನ್ವಯ ದಾಖಲೆಗಳಿಲ್ಲದೆ ದಲಿತರು ಕಾರ್ಖಾನೆಗಳಲ್ಲಿ ಕೂಲಿ ಕಾರ್ಮಿಕರಾಗಿ ದುಡಿಯುವುದು ಅನಿವಾರ್ಯವಾಗುತ್ತದೆ. ಬಂಡವಾಳ ಹೂಡಿದ ಕಾರ್ಖಾನೆಯ ಮಾಲೀಕರಿಗೆ ಇಂಥ ಅತಂತ್ರ ಸ್ಥಿತಿಯನ್ನು ಹೊಂದಿರುವವರು ಬೇಕಾಗಿರುತ್ತದೆ. ಅವರಿಗೆ ದಲಿತ ಯುವಪೀಳಿಗೆಯವರು ಬಲಿಯಾಗುತ್ತಾರೆ.

ಕೆಲವು ದಲಿತ ಕಾರ್ಮಿಕರು ಸರ್ಕಾರಿ ಕಾರ್ಖಾನೆಗಳ ಕಾರ್ಮಿಕರೂ ಇದ್ದಾರೆ. ಅವರ ಸ್ಥಿತಿಯು ಖಾಸಗಿ ಕಾರ್ಖಾನೆಗಳ ಕಾರ್ಮಿಕರಿಗಿಂತ ಸ್ವಲ್ಪ ಉತ್ತಮವಿರುತ್ತದೆ. ಅವರ ಬದುಕು ಈ ಹೊತ್ತಿನ ಆಧುನಿಕ ಆಕರ್ಷಣೆಯ ಜಗತ್ತಿನ ಬದುಕಿಗೆ

ಸ್ಪಂದಿಸಲಾಗದೆ ಶೋಚನೀಯವಾಗಿದೆ. ಅಲ್ಲದೆ ಈ ಕಾರ್ಖಾನೆಗಳ ನಷ್ಟವನ್ನು ಅನುಭವಿಸುವ ಸಂದರ್ಭದಲ್ಲಿ ಮುಚ್ಚುವ ಸಾಧ್ಯತೆಗಳು ಇರುತ್ತವೆ. ಮುಚ್ಚಿದಾಗ ಪರ್ಯಾಯ ವ್ಯವಸ್ಥೆಗೆ ಇದ್ದವರು ತಮ್ಮ ಬದುಕನ್ನು ಸಲೀಸಾಗಿ ನಿರ್ವಹಿಸಿಕೊಳ್ಳುತ್ತಾರೆ. ಅನ್ಯಮಾರ್ಗವಿಲ್ಲದ ಕಾರ್ಮಿಕರು ಪಡುವ ಯಾತನೆಯೇ ಬೇರೆಯ ಸ್ವರೂಪದ್ದಾಗಿರುತ್ತವೆ. ಹೀಗೆ ಭಿನ್ನ ಸ್ವರೂಪದ ಸಮಸ್ಯೆಯನ್ನು ದಲಿತ ಕಾರ್ಮಿಕರು ಹೊಂದಿರುತ್ತಾರೆ.

### ಅಸ್ಪೃಶ್ಯತೆ

ಅಸ್ಪೃಶ್ಯತೆಗೆ ಶ್ರಮದ ಆಧಾರಿತ ವೃತ್ತಿಯ ವಿಭಜನೆಯು ಕಾರಣವಾಗಿದೆ. ಹಲವು ಸಮುದಾಯಗಳಲ್ಲಿನ ಕಸುಬುಗಳ ಆಧಾರದಿಂದ ಜಾತಿಗಳು ನಿರ್ಮಾಣಗೊಂಡವು. ಈ ಜಾತಿಗಳಲ್ಲಿಯೇ ಪಟ್ಟಭದ್ರ ಹಿತಾಸಕ್ತಿಗಳು ಹುಟ್ಟಿಕೊಂಡವು. ಅವು ಸಮುದಾಯ ಕೇಂದ್ರದಿಂದ ಮತ್ತು ಆರ್ಥಿಕ ಮೂಲಗಳಿಂದ ಬಲಗೊಂಡವು. ಸಮಾಜದಲ್ಲಿನ ಸಮುದಾಯಗಳು ಸಾಮಾಜಿಕ ಏರುಪೇರನ್ನು ಹೊಂದಿದವು. ಶ್ರೇಣೀಕೃತ ವ್ಯವಸ್ಥೆಯು ಸಮಾಜದಲ್ಲಿ ರೂಪುಗೊಂಡಿತು. ಹಾಗಾಗಿ ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿದ ಸಮುದಾಯಗಳಿಂದ ಮತ್ತು ಪ್ರತಿಷ್ಠಿತ ಸಮುದಾಯಗಳಿಂದ ದಲಿತ ಸಮುದಾಯಗಳನ್ನು ಪ್ರತ್ಯೇಕವಾಗಿ ಇಡಲಾಯಿತು. ತಮ್ಮ ಅನುಕೂಲಕ್ಕೆ ತಕ್ಕಂತೆ ದಲಿತ ಸಮುದಾಯದವರನ್ನು ಉಪಯೋಗಿಸಿಕೊಳ್ಳಲಾಯಿತು.

ಜಾತಿಯ ಶ್ರೇಣೀಕರಣದಿಂದ ವ್ಯಕ್ತಿಯ ಸ್ಥಾನಮಾನಗಳನ್ನು ಗುರ್ತಿಸಿಕೊಳ್ಳಲಾಗಿದೆ. ಸಮುದಾಯ-ಸಮುದಾಯಗಳ ನಡುವೆ ಮಡಿ ಮೈಲಿಗೆಗಳು ಸೃಷ್ಟಿಯಾಗಿವೆ. ಅವುಗಳು ವೈವಾಹಿಕ ಸಂಬಂಧದಲ್ಲಿನ ಬದುಕಿನ ಮುಂದುವರಿಕೆಯಲ್ಲಿ ನಡೆದುಕೊಂಡು ಬಂದಿವೆ. ದಲಿತೇತರರು ಉಳಿದ ಸಮುದಾಯದವರನ್ನು ಅಸ್ಪೃಶ್ಯರನ್ನಾಗಿ ಮಾಡುವ ತಂತ್ರವನ್ನು ಮಾಡಿಕೊಂಡು ಬಂದಿದ್ದಾರೆ. ದಲಿತರನ್ನು ಮನೆಯ, ಊರಿನ ಕೆಲಸದಲ್ಲಿ ತೊಡಗುವಂತೆ ಬದ್ಧಗೊಳಿಸುವುದು, ಹಸಿವು ಕೊಡುವುದು, ಕೆಲಸಗಳಲ್ಲಿ ತೊಡಗಿಸಿ ಅವರ ಆರ್ಥಿಕ ಪ್ರಗತಿಯ ಕಡೆಗೆ ಗಮನ ಹರಿಸದಂತೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಹಾಗೆಯೇ ಪ್ರತ್ಯೇಕವಾಗಿ ವಾಸ ಮಾಡಲು ದಲಿತರನ್ನು ಊರಿನಿಂದ ದೂರ ಇಟ್ಟಿರುವುದೂ ಕೂಡ ನೋಡಬಹುದು. ಇಲ್ಲಿ ದಲಿತರಿಗೆ ಹಸಿವು ಮುಖ್ಯವಾಯಿತು. ಸ್ವಚ್ಛತೆಯು ಅವರ ಬದುಕಿನಲ್ಲಿ ಎರಡನೆಯ ಸ್ಥಾನವನ್ನು ಪಡೆಯಿತು. ದಲಿತೇತರ ಸಮಾಜವೇ ಅಸ್ಪೃಶ್ಯನನ್ನಾಗಿ ಇರುವಂತೆ ಎಲ್ಲಾ ರೀತಿಯ ಕಾರ್ಯಾಚರಣೆಯನ್ನು ವ್ಯವಸ್ಥಿತ ಚಾಲನೆಯ ಬದುಕಿನಲ್ಲಿ ನಡೆಸಿದರು. ದಲಿತರ ಅಸ್ಪೃಶ್ಯತೆಗೆ ದಲಿತೇತರರೇ ಕಾರಣರಾದರು. ಜೊತೆಗೆ ದಲಿತರು ಇರುವ ರೀತಿಗೆ ದಲಿತೇತರರು ಅಸ್ಪೃಶ್ಯತೆಯ ದೃಷ್ಟಿಯನ್ನು ತುಂಬಿಕೊಂಡು ನಡೆಸಿಕೊಂಡು ಬಂದರು. ಮಲವನ್ನು ಹೊತ್ತು, ಹೊಲವನ್ನು ಉತ್ತು, ಬಿತ್ತಿ, ಬೆಳೆಯನ್ನು ತೆಗೆದು ಕಣಜವನ್ನು ತುಂಬಿ, ಮನೆಯನ್ನೂ ಕಟ್ಟಿ, ತಮ್ಮ ಶ್ರಮಕ್ಕೆ ಬೇಕಾದ ಶೇಂದಿ, ಸರಾಪನ್ನು ಕುಡಿಯಲು, ಸತ್ತ ಜಾನುವಾರುಗಳನ್ನು ತಿನ್ನಲು ಹಿನ್ನೆಲೆಯು ಚಾರಿತ್ರಿಕವಾಗಿ ದಲಿತೇತರರಿಂದಲೇ ದಲಿತರಿಗೆ ಒದಗಿ ಬಂತು. ಈ ಪಟ್ಟಭದ್ರ ಸಮುದಾಯಗಳು ತಾವು ವಾಸಿಸುವ ಸ್ಥಳದಿಂದ ದೂರ ಇಟ್ಟು ಮುಟ್ಟಿಸಿಕೊಳ್ಳದೇ ಅಸ್ಪೃಶ್ಯತೆಯಿಂದ ನಡೆಸಿಕೊಂಡು ಬಂದರು. ಇಂದು ಕೆಲವು ದಲಿತ ಕುಟುಂಬಗಳಾದರೂ ಸಮಾಜದಲ್ಲಿ ಆರ್ಥಿಕ ವ್ಯವಸ್ಥೆಯನ್ನು ಹೊಂದಿದರೂ ಸಾಮಾಜಿಕವಾಗಿ ಸಮಾಜದಲ್ಲಿ ಅಸ್ಪೃಶ್ಯತೆಯ ನೋವನ್ನು ಅನುಭವಿಸುತ್ತಿರುವುದು ಕಂಡುಬರುತ್ತದೆ.

### ಸಾಮಾಜಿಕ ಬಹಿಷ್ಕಾರ

ಇದು ಒಂದು ಸಾಮಾಜಿಕ ಪದ್ಧತಿ. ಇದು ಹಳ್ಳಿಗಳ ಜಾತಿ ಸಮಾಜಕ್ಕೆ ಅಂಟಿಕೊಂಡಿದೆ. ಆಯಾ ಜಾತಿಗಳಲ್ಲಿ ಒಬ್ಬ ವ್ಯಕ್ತಿ ಅಥವಾ ಕುಟುಂಬದವರು 'ತಪ್ಪು ಮಾಡಿದರೆ' ಅಂತವರಿಗೆ ಆಯಾ ಜಾತಿಯ ಸಮುದಾಯದವರು ಬಹಿಷ್ಕಾರ ಹಾಕುತ್ತಾರೆ. ಇದಲ್ಲದೆ ಮೇಲ್ಜಾತಿ ಮತ್ತು ಕೀಳು ಜಾತಿಗಳು ಒಂದೇ ಹಳ್ಳಿಯಲ್ಲಿದ್ದರೆ ಮೇಲ್ಜಾತಿಯವರ ನಿಯಮಗಳನ್ನು ಮೀರಿದರೆಂಬ ಕಾರಣಕ್ಕೆ ದಲಿತರಿಗೆ ಸಾಮಾಜಿಕ ಬಹಿಷ್ಕಾರ ಹಾಕಲಾಗುತ್ತದೆ. ಇದು ದಲಿತರ ಎಲ್ಲಾ ಬಗೆಯ ಸಾಮಾಜಿಕ ಆರ್ಥಿಕ ಚಟುವಟಿಕೆಗಳನ್ನು ನಿರ್ಬಂಧಿಸುತ್ತದೆ.

ಹಳ್ಳಿಗಳ ಶ್ರೇಣೀಕೃತ ವ್ಯವಸ್ಥೆಯಲ್ಲಿ ಜಾತಿಗೆ ಸಂಬಂಧಿಸಿದಂತೆ ಊರಲ್ಲಿ ಏರುಪೇರುಗಳಿರುತ್ತವೆ. ಇಲ್ಲವೆ ಯಾವ ಸಮುದಾಯದವರು ಹೆಚ್ಚು ಸೌಲತ್ತುಗಳನ್ನು ಪಡೆದಿರುತ್ತಾರೆಯೋ ಅವರ ಕೈಯಲ್ಲಿ ಸಮಾಜದ ಹಿಡಿತವು ಇರುತ್ತದೆ. ದಲಿತ ಸಮುದಾಯಗಳಿಗೆ ಊರವರು ನಿರ್ಮಿಸಿರುವ ನಿಯಮಗಳು ಇರುತ್ತವೆ. ಈ ನಿಯಮವನ್ನು ಮೀರಿದವರು ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗುತ್ತಾರೆ. ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾದವರಿಗೆ ಸಾಮಾಜಿಕ ಸಂಬಂಧವನ್ನು ಕಡಿದು ಹಾಕಲಾಗುತ್ತದೆ. ಸಾಮಾಜಿಕ ಬಹಿಷ್ಕಾರವು ಎಚ್ಚರಿತ ದಲಿತನ ಉತ್ತರವಾಗಿ ಹಾಕಲಾಗುತ್ತದೆ.

ದಲಿತರಿಗೆ ಬಿಟ್ಟಿ ಕೆಲಸವು ಪ್ರಧಾನ ಪಾತ್ರವನ್ನು ಹೊಂದಿರುತ್ತದೆ. ಅವುಗಳಿಗೆ ನಿರ್ಲಕ್ಷ್ಯ ತೋರಿ, ಹಾಗೂ ಅವುಗಳನ್ನು ನಿರಾಕರಿಸಿ ಸಮಾನತೆಯನ್ನು ಕೇಳಿದರೆ ಸಮಾಜದ ಪ್ರಬಲ ವರ್ಗವು ಬಹಿಷ್ಕಾರಕ್ಕೆ ಒಳಗು ಮಾಡುತ್ತದೆ. ಇದೊಂದು ರೀತಿಯ ದಲಿತರು ಒಳಗೊಳ್ಳುವ ಶಿಕ್ಷೆಯೂ ಹೌದು. ಬಹಿಷ್ಕೃತನನ್ನು ಸಮಾಜದ ಆಚೆ ಇಟ್ಟು, ಊರಿನ, ಅವನ ಕೇರಿಯ ಸಮುದಾಯದ ಜನರಿಂದಲೇ ಬೇರ್ಪಡಿಸಿ ಕರುಳುಬಳ್ಳಿಯ ಸಂಬಂಧದ ಬಗೆಗಿನ ಮಾನಸಿಕ ಹಿಂಸೆಯನ್ನು ಕೊಡುವಂತಹದ್ದೂ ಆಗಿರುತ್ತದೆ.

ಸಾಮಾಜಿಕ ಬಹಿಷ್ಕಾರ ಆದವರನ್ನು ಸಮಾಜದಿಂದ, ಅವರ ಕುಟುಂಬದಿಂದ ಬಹಿಷ್ಕರಿಸಲಾಗುತ್ತದೆ. ಜೊತೆಗೆ ಅದಕ್ಕೆ ಸಂಬಂಧಿಸಿದಂತೆ ಬಹಿಷ್ಕೃತನಾದವನು ದಂಡವನ್ನೂ ಕಟ್ಟುವುದೂ ಉಂಟು. ಇವನು ಊರು ಬಿಡಬೇಕಾಗುತ್ತದೆ. ಇಲ್ಲವೆ ಊರಲ್ಲೇ ಇದ್ದರೂ ಊರಲ್ಲಿ ಯಾರೊಂದಿಗೂ ಮಾತನಾಡುವ ಹಕ್ಕನ್ನೂ ಹೊಂದಿರುವುದಿಲ್ಲ. ಊರವರೂ ಕೂಡ ಬಹಿಷ್ಕೃತಗೊಂಡವನನ್ನೂ ಮಾತನಾಡಿಸುವ ಹಾಗೆ ಇರುವುದಿಲ್ಲ. ಹಾಗೇನಾದರೂ ಮಾತನಾಡಿಸಿದರೆ ಇಬ್ಬರಿಗೂ ದಂಡ ವಿಧಿಸುವುದುಂಟು. ಅದು ಅವರು ಬದುಕುವ ಪ್ರದೇಶಗಳ ಆಳ್ವಿಕೆಯ ಯಜಮಾನಿಕೆಗೆ ಸಂಬಂಧಪಟ್ಟಿರುವುದು ಆಗಿರುತ್ತದೆ.

### ಹಲ್ಲೆ

'ದಲಿತರ ಮೇಲಿನ ಹಲ್ಲೆ, ಅತ್ಯಾಚಾರ, ಹಿಂಸೆ ಅವರ ಬದುಕಿನ ಸ್ಥಿತಿಗೂ ಆರ್ಥಿಕವಾಗಿ ಹಿಂದುಳಿದಿರುವುದಕ್ಕೂ ನಿಕಟ ಸಂಬಂಧವಿದೆ'[9]. ಜಾತಿ ವ್ಯವಸ್ಥೆಯ ಭಾರತದಲ್ಲಿ ಹಲ್ಲೆಗಳಿಗೆ ಒಳಗಾಗಿರುವವರು ದಲಿತರು, ಮತ್ತು ಅವರ ಸಮುದಾಯಗಳು. ದಲಿತೇತರ ಸಮುದಾಯಗಳ ಕುಟುಂಬಗಳು ತಮ್ಮದೇ ಆದ ಸಾಮಾಜಿಕ ಅಂತಸ್ತನ್ನು ಹೊಂದಿರುತ್ತವೆ. ಹಾಗೆ ಹಿಂದಿನಿಂದಲೂ ಸಮಾಜದ ಒಳಗಿನ ತಮ್ಮ ಸ್ಥಾನವನ್ನು ಕಟ್ಟಿಕೊಳ್ಳುತ್ತಾ ಬಂದಿರುತ್ತಾರೆ. ಈ

ಸಾಮಾಜಿಕ ಶ್ರೇಣಿಯ ಜಾತಿಯ, ಜನಾಂಗಗಳ ಸಮುದಾಯಗಳು ತಮ್ಮ ಅನುಕೂಲಗಳನ್ನು ಅನುಭವಿಸಲು ಮತ್ತು ಬಳಸಿಕೊಳ್ಳಲು ಸಹಜವಾಗಿ ಸಿಗುವವರು ದಲಿತರು. ಹೀಗಾಗಿ ಎಲ್ಲಾ ಜನಾಂಗಗಳು ತಮ್ಮ ದೌರ್ಜನ್ಯಕ್ಕೆ, ಹಲ್ಲೆಗೆ ದಲಿತರನ್ನು ಗುರಿಮಾಡುತ್ತಾರೆ. ದಲಿತರ ಮೇಲೆ ಹಲ್ಲೆಯನ್ನು ನಡೆಸಲು ಹಲವು ಕಾರಣಗಳಿವೆ. ಅವುಗಳನ್ನು ಈ ರೀತಿಯಲ್ಲಿ ಕ್ರೋಡೀಕರಿಸಬಹುದು.

ಅ. ಭೂಮಿ ಇಲ್ಲದ ಕಾರಣ ದಲಿತರು ದಲಿತೇತರರಿಗೆ ಅಧೀನರಾಗಿರುವುದು.

ಆ. ದಲಿತೇತರರಿಂದ ದಲಿತರ ಮೇಲೆ ಹಲ್ಲೆ ನಡೆದಾಗ ತಪ್ಪಿತಸ್ಥ ದಲಿತೇತರರಿಗೆ ಶಿಕ್ಷೆ ಆಗದಿರುವುದು.

ಇ. ಶಿಕ್ಷೆ ಕೊಡಬೇಕಾದ ಸರ್ಕಾರ, ಕಾನೂನುಗಳು ನಿಷ್ಪ್ರಯೋಜಕವಾಗಿರುವುದು. ಇಲ್ಲವೆ ತಪ್ಪಿತಸ್ಥ ದಲಿತೇತರರಿಗೆ ಕುಮ್ಮಕ್ಕು ಕೊಡುವುದು.

ಈ. ದಲಿತರ ಮೇಲೆ ನಡೆದ ಹಲ್ಲೆಯನ್ನು ಸಮರ್ಥವಾಗಿ ಪ್ರತಿಭಟಿಸಲು ಸಂಘಟನಾತ್ಮಕ ಶಕ್ತಿಯನ್ನು ದಲಿತರು ಮೈಗೂಡಿಸಿ ಕೊಂಡಿಲ್ಲದಿರುವುದು.

ಉ. ಹಲ್ಲೆ ಕೊಲೆ ನಡೆದಾಗ ತಪ್ಪಿತಸ್ಥರಿಗೆ ಶಿಕ್ಷೆಯಾಗುವಂಥ ರಚನಾತ್ಮಕ ಕಾರ್ಯಕ್ರಮಗಳು ದಲಿತ ಸಂಘಟನೆಯೊಳಗೆ ಇಲ್ಲದಿರುವುದು.

ಊ. ಹಲ್ಲೆ ಕೊಲೆ ನಡೆದಾಗ ತಪ್ಪಿತಸ್ಥರಿಗೆ ಶಿಕ್ಷೆ ಆಗುವ ಕಡೆಗೆ ಗಮನ ನೀಡದೆ ಪರಿಹಾರ ಕೇಳದ ನಿರ್ವೀಯತೆ.

ಋ. ದಲಿತ ಸಂಘಟನೆಯ (ಕೆಲವರು) ನಾಯಕರು ದಲಿತರ ಮೇಲೆ ಹಲ್ಲೆ ಕೊಲೆ ನಡೆದಾಗ ತಮ್ಮ ಸ್ವಾರ್ಥಕ್ಕೆ ಅವನ್ನು ದುರುಪಯೋಗಪಡಿಸಿಕೊಳ್ಳುತ್ತಿರುವುದು.

ಎ. ದಲಿತ ಸಂಘಟನೆಯ ನಾಯಕರು ಹಲ್ಲೆಗೊಳಗಾದ ಮುಗ್ಧ ದಲಿತರನ್ನು ಹಲ್ಲೆ ಮಾಡಿರುವ ಕ್ರೂರ ಭೂಮಾಲೀಕರನ್ನು ಸೇರಿಸಿ ಸಂಧಾನ ಮಾಡುವುದು.

ಏ. ಹಲ್ಲೆ ಮಾಡಿದವರಿಗೆ ಇದುವರೆವಿಗೂ ಕಾನೂನು ರೀತಿಯಾಗಲಿ ದಲಿತ ಸಂಘಟನೆಯಿಂದಾಗಲೀ ಶಿಕ್ಷೆ ಆಗದೇ ಇರುವುದರಿಂದ ದಲಿತರ ಮೇಲೆ ಎಂಥಾ ಹಲ್ಲೆ ಕೊಲೆ ಮಾಡಲು ದಲಿತೇತರರಿಗೆ ಹೆದರಿಕೆ ಇಲ್ಲದಿರುವುದು.

## ದಲಿತರ ಮೇಲಿನ ಅತ್ಯಾಚಾರ

ಭೂಮಾಲೀಕರ ಬಂಡವಾಳಗಾರ ವ್ಯವಸ್ಥೆಯ ಅಧೀನದಲ್ಲಿ ಶ್ರಮದಾಯಕ ಬದುಕನ್ನು ಅನುಭವಿಸುತ್ತಿರುವ ಬಹುತೇಕ ಜನರು ದಲಿತರು ಮತ್ತು ಅವರ ಹೆಣ್ಣು ಮಕ್ಕಳು. ಇವರು ತಮ್ಮ ಬದುಕಿನ ಸ್ಥಿತಿಯ ಅವಲಂಬನೆಗೆ ಭೂಮಾಲೀಕ ಬಂಡವಾಳಗಾರರ ವ್ಯವಸ್ಥೆಯೊಂದಿಗೆ ಸೇರಿಕೊಂಡಿರುತ್ತಾರೆ. ಇಲ್ಲಿ ದಲಿತರ ಸ್ಥಿತಿಯಿಂದ ಅವರನ್ನು ಕಾಣುವ ದೃಷ್ಟಿಕೋನ ಭಿನ್ನವಾಗಿರುತ್ತವೆ. ದಲಿತ ಗಂಡಸರನ್ನು ದುಡಿಮೆಗಾರರನ್ನಾಗಿ ಮಾಡಿಕೊಳ್ಳುತ್ತಾರೆ. ದಲಿತ ಹೆಂಗಸರನ್ನು ಭೋಗ ವಸ್ತುವನ್ನಾಗಿ ನೋಡುತ್ತಾರೆ. ಇಲ್ಲಿ ಪ್ರತಿಭಟಿಸಲು ಆಗದಂತೆ ಇಕ್ಕಟ್ಟಿನಲ್ಲಿ ದಲಿತ ಹೆಣ್ಣುಮಕ್ಕಳು ಇರುತ್ತಾರೆ. ಕೆಲವು ಸಂದರ್ಭಗಳಲ್ಲಿ ಅತ್ಯಾಚಾರಕ್ಕೊಳಗಾದ ಹೆಣ್ಣು ಸಮಾಜದಲ್ಲಿ ಪ್ರತಿಭಟಿಸಿ ಅವಮಾನವನ್ನು ಎದುರಿಸಿ ಬದುಕಲಾರದೆ ಅನಿವಾರ್ಯವಾಗಿ ತಮ್ಮ ಸಂಕಷ್ಟಗಳನ್ನು ಒಡಲಿಗೆ ಹಾಕಿಕೊಂಡು ಬದುಕು ಅನುಭವಿಸಬೇಕಾಗುತ್ತದೆ. ದಲಿತರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ಅತ್ಯಾಚಾರಕ್ಕೆ ಮುಖ್ಯಕಾರಣವೆಂದು ಹೇಳಬಹುದು. ಮಡಿ- ಮೈಲಿಗೆಯನ್ನು ಮಾಡುವ ದಲಿತೇತರರಿಗೆ ಭೋಗದಲ್ಲಿ ಮಡಿ-ಮೈಲಿಗೆ ಇಲ್ಲ. ದಲಿತರೊಂದಿಗೆ ಒಡನಾಟದಲ್ಲಿ ಮಡಿ ಮೈಲಿಗೆ, ಕಟ್ಟುಪಾಡುಗಳನ್ನು

ಇಟ್ಟುಕೊಂಡಿದ್ದಾರೆ. ಆದರೆ ದಲಿತ ಹೆಣ್ಣುಮಕ್ಕಳ ಜೊತೆಗಿನ ಲೈಂಗಿಕ ಅತ್ಯಾಚಾರದಲ್ಲಿ ಕಟ್ಟುಪಾಡುಗಳನ್ನು ಕಟ್ಟಿಕೊಂಡಿಲ್ಲ. ದೌರ್ಜನ್ಯ ಹಾಗೂ ದಬ್ಬಾಳಿಕೆಗಳಲ್ಲಿ ಕೈಗೊಳ್ಳುವ ಅತ್ಯಾಚಾರವು ಅಕ್ರಮವೆಂದು ಭಾವಿಸುವುದೂ ಇಲ್ಲ. ಇಲ್ಲಿ ಜಾತಿ ವ್ಯವಸ್ಥೆಯನ್ನು, ಮಡಿ-ಮೈಲಿಗೆ ಅಸ್ಪೃಶ್ಯತೆಯನ್ನು ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿರುವ ಮೇಲ್ವರ್ಗಗಳು ದಲಿತ ಸಮುದಾಯಗಳನ್ನು ತಮ್ಮ ಅನುಕೂಲಕ್ಕೆ ಬೇಕೆಂತಲೇ ಬಳಸಿಕೊಂಡಿರುವುದು ಕಂಡುಬರುತ್ತದೆ. ಇದು ಸಮಾನತೆಯನ್ನು ಬಯಸದ ಸಮಾಜದ ಜಡಸ್ಥಿತಿಯೂ ಹೌದು. ಅದಕ್ಕೆಂತಲೇ ಸೃಷ್ಟಿಗೊಂಡ ಸಂಪ್ರದಾಯ ನಂಬಿಕೆಗಳು ಸಮುದಾಯಗಳಲ್ಲಿ ಸೇರಿಕೊಂಡಿವೆ. ಅವುಗಳನ್ನು ನಂಬಿಕೆಯಲ್ಲಿ ಸಮಾಜವು ಕಾಪಾಡುತ್ತಾ ಬಂದಿದೆ.

## ದಲಿತರ ನಗರ ಜೀವನ

ದಲಿತರ ಬದುಕಲ್ಲಿ ನಗರ ಜೀವನವು ಇಂದು ಮಹತ್ತರ ಪಾತ್ರವನ್ನು ವಹಿಸುತ್ತಿವೆ. ಹಳ್ಳಿಗಳಲ್ಲಿ ದಲಿತರ ಬದುಕನ್ನು ಒಂದು ರೀತಿಯಲ್ಲಿ ನೋಡಿದರೆ; ನಗರ ಜೀವನದಲ್ಲಿ ಮತ್ತೊಂದು ರೀತಿಯಲ್ಲಿ ಕಾಣಸಿಗುತ್ತದೆ. ಆಧುನಿಕತೆಯ ಪ್ರಭಾವದಿಂದ ಇಂದು ನಗರಗಳು ವಿಸ್ತಾರಗೊಂಡಿವೆ. ಇಂದು ಬದುಕುತ್ತಿರುವ ನಗರವಾಸಿಗಳು ಬಹುತೇಕವಾಗಿ ವಲಸೆ ಹೊಂದಿದವರೇ ಆಗಿದ್ದಾರೆ. ನಂತರದ ಕೆಲವು ವರ್ಷಗಳಿಂದ ಕೆಲವರು ನಗರವಾಸಿಗಳಾಗಿ ಉಳಿದಿದ್ದಾರೆ.

ಗ್ರಾಮಗಳಲ್ಲಿ ಬದುಕುತ್ತಿರುವ ದಲಿತರು ಇಂದು ಶಿಕ್ಷಣ ಮತ್ತು ಉದ್ಯೋಗಕ್ಕೆ ನಗರವನ್ನು ಸೇರುತ್ತಿದ್ದಾರೆ. ಈ ದಲಿತರು ಹಳ್ಳಿಗಳಲ್ಲಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಶ್ರಮವನ್ನು ಹಾಕುತ್ತಿದ್ದಾರೆ. ನಗರಗಳಲ್ಲಿಯೂ ದಲಿತರು ದೈಹಿಕ ಮತ್ತು ಮಾನಸಿಕವಾಗಿ ಶ್ರಮವನ್ನು ಹಾಕುತ್ತಿದ್ದಾರೆ. ದಲಿತರಿಗೆ ನಗರ ಜೀವನದಲ್ಲಿನ ವಸತಿ ಸಮಸ್ಯೆಯು ಬಹಳವಾಗಿ ಕಾಡುತ್ತದೆ. ನಗರಗಳಲ್ಲಿ ಉದ್ಯೋಗಕ್ಕೆಂದು ಸೇರಿದವರು ಅನಿವಾರ್ಯವಾಗಿ ನಗರಗಳಲ್ಲಿಯೇ ಬದುಕಬೇಕಿರುತ್ತದೆ. ಇವರು ಬಾಡಿಗೆ ಮನೆಯನ್ನು ಹಿಡಿಯುವುದು ಮೊದಲನೆಯ ಸಮಸ್ಯೆ. ಬಾಡಿಗೆ ಮನೆಯನ್ನು ಕೇಳಲು ಹೋದಾಗ ಮೊದಲು ಎದುರಾಗುವುದು ಜಾತಿಯ ಪ್ರಶ್ನೆ. ತನ್ನ ಜಾತಿಯನ್ನು ಹೇಳಿಕೊಂಡರೆ ದಲಿತೇತರರು ಮನೆಯನ್ನು ಕೊಡುವುದೇ ಇಲ್ಲ. ಇಂಥ ಪರಿಸ್ಥಿತಿಯಲ್ಲಿ ದಲಿತರು ಜಾತಿಯ ಹೆಸರನ್ನು ಸುಳ್ಳು ಹೇಳಿ ಮನೆಯನ್ನು ಪಡೆಯಬೇಕಾಗುತ್ತದೆ. ಇದು ಮನೆಯ ಮಾಲೀಕನಿಗೆ ಗೊತ್ತಾದರೆ ಅವನು ಹಲವು ಕಾರಣಗಳನ್ನು ಕೊಟ್ಟು ಮನೆಯನ್ನು ಬಿಡಿಸುತ್ತಾನೆ. ಇಲ್ಲವೆಂದರೆ ಜಾತಿ ಗೊತ್ತಾಗದ ಹಾಗೆ ಬದುಕನ್ನು ನಡೆಸಬೇಕಾಗುತ್ತದೆ. ಜಾತಿಯ ಹೆಸರನ್ನು ಸುಳ್ಳು ಹೇಳಲು ಹಿಂಜರಿದವನು, ಸ್ವಾಭಿಮಾನಿಯಾದವನು, ಜಾತೀಯತೆಯಿಂದ ಮುಕ್ತತೆಯನ್ನು ಹೊಂದಿದ ಬಾಡಿಗೆ ಮನೆಯ ಮಾಲೀಕ ಹುಡುಕಬೇಕಾಗುತ್ತದೆ. ಇಲ್ಲವೆ ತಮ್ಮ ಜಾತಿಯವರು ಇರುವ ಪ್ರದೇಶಕ್ಕೆ ಹೋಗಿ ವಾಸಿಸಬೇಕಾಗುತ್ತದೆ. ಅನ್ಯ ಜಾತಿಯವರು ವಾಸಿಸುವ ಪ್ರದೇಶಗಳಲ್ಲಿ ದಲಿತರು ಸೇರಿ, ಅವರ ಜಾತಿ ಆ ಪ್ರದೇಶದವರಿಗೆ ಗೊತ್ತಾದರೆ ಅವರನ್ನು ನೋಡುವವರ ದೃಷ್ಟಿಕೋನವು ಬೇರೆಯಾಗಿರುತ್ತದೆ. ಅದು ದಲಿತರಿಗೆ ಮಾನಸಿಕ ಹಿಂಸೆಯನ್ನು ಉಂಟುಮಾಡುತ್ತದೆ. ಮುಖ್ಯವಾಗಿ ಮನೆ ಮಾಲೀಕನ ಜಾತಿ ದೃಷ್ಟಿಕೋನ ಮಾತ್ರ ಕಾರಣ ಎಂದು ಹೇಳಲಾಗುವುದಿಲ್ಲ. ಯಾಕೆಂದರೆ ಇಂತಹ ಸ್ಥಿತಿಯನ್ನು ಇಡೀ ವ್ಯವಸ್ಥೆಯೇ ತಂದೊಡ್ಡಿದೆ.

ದಲಿತರು ಸಮಾಜದ ಪುರಸ್ಕಾರವನ್ನು ಅಪೇಕ್ಷಿಸಿರುತ್ತಾರೆ. 'ಇಂದಿಗೂ ಸಹ ಭಾರತದ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡರಲ್ಲೂ ವಿವಿಧ ಜಾತಿಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಪ್ರದೇಶಗಳಿರುವುದನ್ನು ಕಾಣಬಹುದಾಗಿದೆ. ಈ

ಅಂಶವು ಬೊಂಬಾಯಿ, ಬೆಂಗಳೂರು ಮುಂತಾದ ಮಹಾ ನಗರಗಳಲ್ಲಿಯೂ ಕಂಡುಬರುತ್ತದೆ ಎಂದು ಹೆರಾಲ್ಡ್ ಐಸಾಕ್ ರವರು ಅಭಿಪ್ರಾಯಪಟ್ಟಿದ್ದಾರೆ. ಚಂದ್ರಶೇಖರಯ್ಯನವರು ಕೈಗೊಂಡ ಅಧ್ಯಯನಗಳಲ್ಲಿ ನಗರ ಪ್ರದೇಶಗಳಲ್ಲಿ ಶೇಕಡ ೮೫ರಷ್ಟು ಅಸ್ಪೃಶ್ಯರು ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ೧೦೦ರಷ್ಟು ಅಸ್ಪೃಶ್ಯರು ತಮ್ಮದೇ ಆದಂತಹ ಪ್ರದೇಶಗಳಲ್ಲಿ ನೆಲೆಸಿರುವುದನ್ನು ಕಾಣಬಹುದಾಗಿದೆ'.[3] 'ಗ್ರಾಮ ಸಮಾಜ' ಕೃತಿಯಲ್ಲಿ ಡಾ.ಜೋಗನ್ ಶಂಕರ್ ಅವರು ಉಲ್ಲೇಖಿಸಿದ್ದಾರೆ. ನಗರಗಳು ಹೆಚ್ಚಿದರೆ ಅಸ್ಪೃಶ್ಯತೆ ಜಾತೀಯತೆ ತೊಲಗುತ್ತದೆ ಎಂಬುದು ಸುಳ್ಳು. ಪ್ರಮಾಣದಲ್ಲಿ ಕಡಿಮೆಯಾಗಿ ಜಾತೀಯತೆಗೆ ಸಂಬಂಧಿಸಿದ ರೂಪ, ಸ್ವರೂಪದಲ್ಲಿ ಬದಲಾವಣೆಯನ್ನು ಹೊಂದಬಹುದು. ನಗರಗಳಲ್ಲಿ ಕೇಳುವ ಜಾತಿಯ ಹೆಸರೇಳಿಕೊಂಡು ದಲಿತರು ತಮ್ಮ ಪ್ರದೇಶವನ್ನು ಬಿಟ್ಟು ಬೇರೆ ಪ್ರದೇಶಲ್ಲಿ ವಾಸಿಸಲು ಆಗುವುದಿಲ್ಲ. ಮತ್ತು ಆ ಪ್ರದೇಶಲ್ಲಿ ವಾಸಿಸಲು ದಲಿತರಿಗೆ ಮನೆಯನ್ನು ಕೊಡುವುದಿಲ್ಲ.

ಇತ್ತೀಚಿನ ದಿನಗಳಲ್ಲಿ ನಗರ ಜೀವನಕ್ಕೆ ಹೆಚ್ಚಾಗಿ ಬರುತ್ತಿರುವವರೆಲ್ಲರೂ ತಮ್ಮ ಆರ್ಥಿಕ ಬದುಕಿನ ವಹಿವಾಟಿಗೆ ತಕ್ಕಂತೆ ಪ್ರದೇಶಗಳಲ್ಲಿ ವಾಸಿಸುತ್ತಾರೆ. ನಗರಗಳ ಎಲ್ಲಾ ಪ್ರದೇಶಗಳು (ಬಡವಾಣೆ) ಒಂದೇ ಮಾದರಿಯಲ್ಲಿರುವುದಿಲ್ಲ. ಒಂದೊಂದು ಪ್ರದೇಶಗಳಿಗೆ ತಕ್ಕಂತೆ ಒಂದೊಂದು ರೀತಿಯಲ್ಲಿ ಮನೆಗಳು ಹಾಗೂ ಅವುಗಳ ಬಾಡಿಗೆ ಮತ್ತು ಆರ್ಥಿಕ ವಹಿವಾಟು ಭಿನ್ನವಾಗಿರುತ್ತವೆ. ಅಭಿವೃದ್ಧಿ ಹೊಂದಿದ ಪ್ರದೇಶಗಳು ಹೆಚ್ಚಿದಂತೆಲ್ಲಾ ನಗರಗಳಲ್ಲಿ ಕೊಳಕು ಪ್ರದೇಶವು ಪ್ರತ್ಯೇಕವಾಗಿ ಪ್ರಾರಂಭವಾಗುತ್ತವೆ. ಅಭಿವೃದ್ಧಿ ಹೊಂದಿದ ಪ್ರದೇಶಗಳಲ್ಲಿ ವಾಸಿಸಲು ಸಾಮರ್ಥ್ಯ ಇಲ್ಲದವರು ಕೊಳಗೇರಿಗಳಲ್ಲಿ ಅನಿವಾರ್ಯವಾಗಿ ತಮ್ಮ ಬದುಕು ಸಾಗಿಸುತ್ತಾರೆ. ಅಲ್ಲಿ ಉತ್ಪತ್ತಿಯಾಗುವ ಎಲ್ಲಾ ರೋಗಗಳಿಗೆ ತುತ್ತಾಗುತ್ತಾರೆ. ಅಲ್ಲಿ ನಡೆಯುವ ಅನ್ಯ ಕಾರ್ಯ ಚಟುವಟಿಕೆಗಳಿಗೆ ತೊಡಗಿಸಿಕೊಳ್ಳುತ್ತಾರೆ. ಅದಕ್ಕೆ ತಕ್ಕಂತೆ ಎಲ್ಲಾ ಕೆಲಸಗಳಿಗೆ ತೊಡಗಿಸಲು ಎಲ್ಲಾ ಸೌಕರ್ಯವುಳ್ಳ ಶಕ್ತಿಯು ಅವರನ್ನು ಬಳಸಿಕೊಳ್ಳುತ್ತದೆ. ಇಲ್ಲಿ ವಾಸಿಸುವ ಬಹುತೇಕ ಕುಟುಂಬಗಳು ದಲಿತ ಸಮುದಾಯದವರು ಆಗಿರುತ್ತಾರೆ.

## ದಲಿತರ ಮನೆಗಳ ಸ್ಥಿತಿ

ಹಳ್ಳಿಗಳಲ್ಲಿನ ಮನೆಗಳನ್ನು ನೋಡಿದರೆ ಅವು ನೋಟಕ್ಕೆ ಯಾವ ಕೇರಿ ಎಂದು ಹೇಳಬಹುದು. ಅಂದರೆ ಇದು ದಲಿತ ಕೇರಿಯೋ ದಲಿತೇತರ ಕೇರಿಯೋ ಎಂಬಂತೆ ಮನೆಯ ಬಾಹ್ಯ ರೂಪವು ಕಟ್ಟಿಕೊಡುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿನ ದಲಿತರ ಮನೆಗಳು ಎರಡು ರೀತಿಯಲ್ಲಿ ಕಾಣಸಿಗುತ್ತದೆ. ಅವುಗಳಲ್ಲಿ ಮೊದಲನೆಯದು ತಾವು ಸ್ವತಃ ಕಟ್ಟಿಕೊಂಡಿರುವಂತಹದ್ದು, ಎರಡನೆಯ ರೀತಿಯ ಮನೆಗಳು ಸರ್ಕಾರವು ಕಟ್ಟಿಸಿಕೊಟ್ಟಿರುವ ಮನೆಗಳು. ಈ ಎರಡು ರೀತಿಯ ಮನೆಗಳು ರೂಪದಲ್ಲಿ ಭಿನ್ನತೆ ಇರುವುದು ಕಾಣುತ್ತವೆ. ಹಾಗೆಯೇ ಈ ಮನೆಗಳು ದಲಿತರ ಮನೆಗಳಂತೆ ಕಾಣುತ್ತವೆ. ಇವು ಊರಲ್ಲಿನ ಹೊಲಗೇರಿ, ಮಾದಿಗಕೇರಿ ಎಂಬಂತೆ ಎದ್ದು ಕಾಣುತ್ತವೆ.

ಮೊದಲನೆಯದು ಬಹುತೇಕವಾಗಿ ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ಕಟ್ಟಿಕೊಂಡಿರುವಂತವುಗಳು. ಇಲ್ಲಿ ಸೋಗೆ, ಹುಲ್ಲು, ಮತ್ತು ಹಂಚಿನ ಮನೆಗಳು ಕಾಣಸಿಗುತ್ತವೆ. ಇವು ವಿಸ್ತೀರ್ಣದಲ್ಲಿ ಬಹಳ ಕಡಿಮೆ ಇದ್ದು ಪುಟ್ಟ, ಪುಟ್ಟ ಮನೆಗಳಿರುತ್ತವೆ. ಹಾಗೆಯೇ ಇವುಗಳು ಇರುವ ಕೇರಿಯ ಪ್ರದೇಶವು ವಿಸ್ತಾರವಾಗಿರದೆ ಒಂದಕ್ಕೊಂದು ಅಂಟಿಕೊಂಡಿರುತ್ತವೆ. ದಲಿತರ ಮನೆಗಳು ಬಹುತೇಕ ಊರ ಹೊರಗೆ ಇರುತ್ತವೆ. ಪಟ್ಟಭದ್ರ ಹಿತಾಸಕ್ತಿಯ

ಸಂಪ್ರದಾಯಸ್ಥರಿರುವ ಊರಲ್ಲಿ ದಲಿತರ ಮನೆಗಳು ಊರ ದಕ್ಷಿಣ ಭಾಗಕ್ಕೆ ಇರುತ್ತವೆ. ಈ ಮನೆಗಳ ಅಗತ್ಯಕ್ಕೆ ತಕ್ಕಂತೆ ಸಾಕಾಗದ ಮನೆಯ ವಸ್ತುಗಳನ್ನು ಹೊಂದಿರುತ್ತವೆ. ಅವುಗಳ ಪೂರೈಕೆಗೆ ತಕ್ಕಂತೆ ಅವರ ಸ್ಥಿತಿ ಇರುತ್ತದೆ. ಅದು ಅವರ ಮನೆಯ ಸ್ಥಿತಿಯಿಂದಲೂ ಗೋಚರಿಸುತ್ತದೆ. ತಮ್ಮ ವಹಿವಾಟಿಗೆ ತಕ್ಕಂತೆ ಮಣ್ಣಿನ ಮಡಿಕೆಯಂತ ಸಾಮಗ್ರಿಗಳನ್ನು ಮನೆಯು ಹೊಂದಿರುತ್ತದೆ. ಇದು ಆ ಮನೆಯಲ್ಲಿ ಬದುಕುವವರ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿರುತ್ತದೆ. ಎರಡನೆಯ ರೀತಿಯ ಮನೆಗಳು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣ ನಿಧಿಯಿಂದ ಕಟ್ಟಲ್ಪಟ್ಟ ಮನೆಗಳು. ಇವು ಆಶ್ರಯ ಯೋಜನೆ, ಜನತಾ ಮನೆ, ಅಂಬೇಡ್ಕರ್ ಯೋಜನೆ - ಮುಂತಾದ ಯೋಜನೆಯ ಮನೆಗಳಾಗಿರುತ್ತವೆ.

ಸರ್ಕಾರದವರು ಕಟ್ಟಿಸಿಕೊಟ್ಟ ಮನೆಗಳು ವಿಸ್ತೀರ್ಣದಲ್ಲಿ ಬಹಳ ಕಡಿಮೆ ಇರುತ್ತವೆ. ಇವುಗಳನ್ನು ಕಟ್ಟಿ ಕೆಲವೇ ವರ್ಷಗಳು ಕಳೆದರೂ ಅವುಗಳ ಸ್ಥಿತಿಯನ್ನು ಹತ್ತಿರದಿಂದಲೇ ನೊಡಬೇಕು. ಆಗ ಅವುಗಳ ವಾಸ್ತವ ಚಿತ್ರಣ ಗೊತ್ತಾಗುತ್ತದೆ. ಗುತ್ತಿಗೆದಾರರ ಭ್ರಷ್ಟತೆಯಿಂದ ನಿರ್ಮಿತವಾದ ಈ ಮನೆಗಳು ಕೆಲವೇ ತಿಂಗುಳುಗಳಲ್ಲಿ ಬಿದ್ದು, ಮುರಿದು ಮಳೆಯಿಂದ ಕುಸಿದು ಅವುಗಳ ರೂಪವೇ ಬದಲಾಗಿರುತ್ತದೆ. ಕಳಪೆ ಗುತ್ತಿಗೆದಾರರ ಬೇಜವಾಬ್ದಾರಿತನವು ಈ ಮನೆಗಳ ಸ್ಥಿತಿಗೆ ಕಾರಣವಾಗಿರುತ್ತವೆ. ಇವರಿಗೆ ಈ ಮನೆಯ ಕೆಲಸಗಳಿಂದ ಹಣವನ್ನು ದೋಚುವುದು ಮಾತ್ರವೇ ಮುಖ್ಯವಾಗಿರುತ್ತದೆ. ಮನೆಯ ಕಟ್ಟಲು ಹಣದ ಮಂಜೂರಾತಿಗೆ ಸಂಬಂಧಿಸಿದಂತೆ ಇಂಜೀನೀಯರ್‌ನಿಂದ ಹಿಡಿದು ಸಂಬಂಧಿಸಿದ ಮಂತ್ರಿಗಳವರೆಗೆ ಪರ್‌ಸಂಟೇಜನ್ನು ಕೊಡಬೇಕು ಎಂಬ ಈ ಕಳಪೆ ಗುತ್ತಿಗೆದಾರರಿಂದ ಆರೋಪವಿದೆ. ಅಲ್ಲಿಂದ ಕಡಿದು ಕಡಿದು ಬಂದ ಹಣದಲ್ಲಿ ಗುತ್ತಿಗೆದಾರ ಕೆಲಸವನ್ನು ಮಾಡಿಸಿ ಉಳಿಸಿಕೊಳ್ಳುತ್ತಾನೆ. ಮನೆಗಳು ಕಳಪೆಯಾಗುತ್ತವೆ. ಇದು ಗುತ್ತಿಗೆದಾರನ ಸಮಸ್ಯೆ ಎಂದು ಹೇಳಿದರೆ ತಪ್ಪಾಗಲಾರದು. ಇದರ ಹಣಕ್ಕೆ ಮತ್ತು ಅದರ ಉಪಯೋಗಕ್ಕೆ ಒಂದು ಚಕ್ರದ ರೀತಿಯಲ್ಲಿ ಕಾರ್ಯ ಜರುಗುತ್ತಿರುತ್ತದೆ. ಒಟ್ಟು ವ್ಯವಸ್ಥೆಯೇ ತನ್ನ ಕಾರ್ಯಾಚರಣೆಗೆ ಸಂಬಂಧಿಸಿದಂತೆ ರೂಪರೇಷೆಗಳನ್ನು ರೂಪಿಸಿಕೊಂಡಿರುತ್ತದೆ. ಕೋಟ್ಯಾಂತರ ರೂಪಾಯಿಗಳ ದಲಿತರ ಅನುಕೂಲಕ್ಕೆ ಮಾಡುವ ಖರ್ಚಿನ ಹಣವು ವ್ಯವಸ್ಥಿತವಾಗಿ ನಿಗದಿಸಿದ ಕೆಲಸಗಳಿಗೆ ಬಳಕೆಯಾಗುತ್ತಿಲ್ಲ. ಮೇಲೆ ನೀಡಿದ್ದು ಒಂದು ಉದಾಹರಣೆಯಷ್ಟೆ. ಅದು ಅವುಗಳ ಕಾರ್ಯರೂಪದಲ್ಲಿ ಗೊತ್ತಾಗುತ್ತದೆ. ಈ ಮನೆಗಳು ವಾಸಿಸಲೂ ಆಗದಂತ ಸ್ಥಿತಿಯಲ್ಲಿರುತ್ತವೆ. ಈ ಬಿದ್ದ ಮನೆಗಳಿಗೆ ಅದಕ್ಕೆ ನೆರಕೆಯನ್ನು ಕಟ್ಟಿಕೊಂಡು ಸೋಗೆಯನ್ನು ಮುಚ್ಚಿಕೊಂಡು ದಲಿತರು ಬದುಕು ಅನುಭವಿಸುತ್ತಾರೆ. ಈ ಮನೆಗಳನ್ನು ಸರ್ಕಾರವು ಕಟ್ಟಿಕೊಡುವ ಹಿನ್ನೆಲೆಯ ಕಳಪೆ ಮನೆಗಳ ಆಡಳಿತ ಮತ್ತು ರಾಜಕೀಯಾತ್ಮಕ ಚರ್ಚೆಯು ಬೇರೆ ರೀತಿಯದು. ಈ ಮನೆಗಳ ಅನ್ವೇಷಣೆಯಲ್ಲಿ ತೊಡಗಿದರೆ ಅವುಗಳ ವಾಸ್ತವ ಚಿತ್ರಗಳು ಗೊತ್ತಾಗುತ್ತದೆ. ಈ ರೀತಿಯಲ್ಲಿ ಹಳ್ಳಿಗಳಲ್ಲಿ ದಲಿತರು ಮನೆಗಳನ್ನು ಹೊಂದಿರುತ್ತಾರೆ.

ಅಡಿಟಿಪ್ಪಣಿಗಳು

೧. ಗಂಗಾರಾಂ ಚಂಡಾಳ 'ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್' ಪುಟ: ೮೧

೨. ಜೋಗನ್‌ಶಂಕರ, 'ಗ್ರಾಮ ಸಮಾಜ' ಪುಟ: ೬೫

## ೨.೨ ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಕರ್ನಾಟಕ ದಲಿತ ಚಳುವಳಿ

### ತಲೆಮಾರುಗಳಲ್ಲಿನ ವಿಭಿನ್ನತೆ

ದಲಿತ ಚಳುವಳಿಯನ್ನು ಅಧ್ಯಯನ ಮಾಡುವಾಗ ಒಟ್ಟು ದಲಿತ ಜನಸಮುದಾಯಗಳನ್ನು ನೋಡಬೇಕಾಗುತ್ತದೆ. ಈ ಜನಸಮುದಾಯಗಳಲ್ಲಿ ತಾತ್ವಿಕ ಭಿನ್ನತೆಗಳು ಇವೆ. ಈ ಭಿನ್ನತೆಗಳು ತಲೆಮಾರುಗಳ ಜನಸಮುದಾಯಗಳಲ್ಲಿ ಕಂಡುಬರುತ್ತವೆ. ಈ ತಲೆಮಾರಿನ ಜನರಲ್ಲಿ ಯಾವ ತಲೆಮಾರಿನವರು ಚಳುವಳಿಯಲ್ಲಿ ಇದ್ದಾರೆ; ಯಾವ ತಲೆಮಾರಿನವರು ಇಲ್ಲ ಎಂಬುದು ಒಡೆದುಕಾಣುತ್ತದೆ.

ಈ ಹೊತ್ತಿನಲ್ಲಿ ದಲಿತರು ಎರಡು ತಲೆಮಾರಿನವರಾಗಿ ಕಾಣಸಿಗುತ್ತಾರೆ. ಅವರಲ್ಲಿ ಮೊದಲನೆಯವರು ಹಿರಿಯ ತಲೆಮಾರಿನವರು. ಎರಡನೆಯವರು ವಿದ್ಯಾವಂತ ತಲೆಮಾರಿನವರು. ಈ ಎರಡು ತಲೆಮಾರಿನವರಲ್ಲೂ ಸಾಕಷ್ಟು ವಿಚಾರಗಳಲ್ಲಿ ಸಮ್ಮತಿ ಇರುವುದಿಲ್ಲ. ಇವರ ನಡುವೆ ವಿಷಯ ವಿಚಾರ ತರ್ಕಗಳಲ್ಲಿ ಭಿನ್ನತೆ ಇದೆ. ಈ ಭಿನ್ನತೆಯನ್ನು ನೋಡುವುದಾದರೆ ಹಿರಿಯ ಅಥವಾ ಅನಕ್ಷರಸ್ಥ ತಲೆಮಾರಿನವರು ಇವರು ಬಹುಪಾಲು ಕೂಲಿಯನ್ನು ಅಥವಾ ಜೀತವನ್ನು ಮಾಡುತ್ತಾರೆ. ಇದರಿಂದಲೇ ಜೀವನವನ್ನು ಸಾಗಿಸುತ್ತಾರೆ. ಇವರಿಗೆ ಆಧುನಿಕ ಜಗತ್ತಿನ ವ್ಯಾವಹಾರಿಕ ಜ್ಞಾನ ಕಡಿಮೆ. ಇವರು ಸಂಪ್ರದಾಯಸ್ಥರು. ನಂಬಿಕೆ, ಆಚರಣೆ ಲೋಕರೂಢಿಗಳನ್ನು ಪರಿಪಾಲಿಸುತ್ತಾ ಬಂದವರು. ಪಟ್ಟಭದ್ರ ಹಿತಾಸಕ್ತಿಯನ್ನು ಒಪ್ಪಿಕೊಂಡು ಬದುಕುವಂತವರು. ಸಮಾಜದಲ್ಲಿ ಇರುವ ಶ್ರೇಣೀಕೃತ ವ್ಯವಸ್ಥೆಯನ್ನು ತಪ್ಪೆಂದೂ; ಇದರಿಂದ ತಮಗೆ ಅನ್ಯಾಯವಾಗುತ್ತಿದೆ ಎಂದೂ; ಇದು ನಮ್ಮ ಹಕ್ಕೆಂದು ಕೇಳುವ ಅರಿವನ್ನು ಹೊಂದದವರು. ಇವರಿಗೆ ದಲಿತ ಸಂಘಟನೆಗಳ ಬಗ್ಗೆ ಅಷ್ಟಾಗಿ ವಿಶ್ವಾಸವಿಲ್ಲ. ಇವರ ವಿಚಾರಗಳಲ್ಲಿ, ನಂಬಿಕೆಗಳಲ್ಲಿ ಮತ್ತು ತಮ್ಮ ತಿಳುವಳಿಕೆಯಲ್ಲಿ ತಮ್ಮ ಊರು, ಕೇರಿ ಯಜಮಾನ, ತನ್ನ ಕೆಲಸ, ತನ್ನ ಊರ ದೇವತೆ, ತನ್ನ ಮನೆ ದೇವರುಗಳ ಮೇಲೆ ನಂಬಿಕೆ ಇರುತ್ತದೆ. ಹಾಗೆಯೇ ಅವುಗಳು ಹಿಂದಿನಿಂದ ನಡೆದುಬಂದದ್ದರ ಮೇಲೆ ಅತಿಯಾದ ವಿಶ್ವಾಸವನ್ನು ತುಂಬಿಕೊಂಡಿರುತ್ತಾರೆ. ಇವರು ಬುದ್ಧ, ಬಸವ, ಅಂಬೇಡ್ಕರರ ಫೋಟೋಗಳನ್ನು ದೇವರ ಫೋಟೋ ಜೊತೆ ಇಟ್ಟು ಪೂಜೆಯನ್ನು ಮಾಡುತ್ತಾರೆ. ಈ ಕೆಲವು ವರ್ಷಗಳಿಂದ ದಲಿತ ಸಂಘಟನೆ ಬಗ್ಗೆ ಅದು ಯಾವ ಪ್ರಮಾಣದ ಬದಲಾವಣೆಯನ್ನು ಮಾಡಿದೆ? ಎಂಬುದರ ಬಗ್ಗೆ ತೀರಾ ಅನುಮಾನದ ಅಸಮಾಧಾನ ಇದೆ. ತಾವು ಕೈಗೊಂಡು ನಡೆಸುತ್ತಿರುವ ಕೆಲಸಗಳ ಬಗ್ಗೆ ನಾವು ಪಡೆದು ಬಂದುದೆಂಬ ದೃಢಸಂಕಲ್ಪವನ್ನು ಹೊಂದಿರುತ್ತಾರೆ. ಆದ್ದರಿಂದ ಇವರು ಸಾಮಾನ್ಯವಾಗಿ ಆಗಲೇ ರೂಡಿಯಲ್ಲಿರುವ ಸಂಪ್ರದಾಯ, ನಂಬಿಕೆ, ಆಚರಣೆಗಳನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ.

ಎರಡನೆ ತಲೆಮಾರಿನವರು ಇಪ್ಪತ್ತು ವರ್ಷಗಳಿಂದೀಚೆಗೆ ಕಂಡು ಬಂದಂತವರು. ಇವರು ಶಿಕ್ಷಣವನ್ನು ಪಡೆದಂತವರು. ಶಿಕ್ಷಣದಿಂದಲೇ ಜ್ಞಾನ ಬರುತ್ತದೆ ಎಂದು ನಂಬಿದವರು. ಬಹುತೇಕ ನಾಸ್ತಿಕರು. ಸಂಘಟನೆಯ ವಿಚಾರಗಳನ್ನು ನಂಬಿದವರು. ಶಿಕ್ಷಣವೇ ತಮ್ಮ ಜನಾಂಗಕ್ಕೆ ಅಂತಿಮವೆಂದು ತಿಳಿದವರು. ಜಾತೀಯತೆಯನ್ನು ಪ್ರಬಲವಾಗಿ ವಿರೋಧಿಸುವಂತವರು. ಸಮಾಜದ ಶ್ರೇಣೀಕೃತ ವ್ಯವಸ್ಥೆಯನ್ನು ಸಂಪೂರ್ಣವಾಗಿ ಅಲ್ಲಗಳೆಯುವವರು. ನಗರ ಪ್ರದೇಶದ ಸಂಪರ್ಕವನ್ನು ಉಳ್ಳವರು. ತಮ್ಮ ಹಿರಿಯ ತಲೆಮಾರಿನ ಒಟ್ಟು ದುಡಿಮೆಯನ್ನು, ಅವರಿಗೆ ಆದ ಅನ್ಯಾಯ, ಅಕ್ರಮ-ಅತ್ಯಾಚಾರಗಳನ್ನು ನೆನಿಸಿಕೊಂಡು ದು:ಖವನ್ನು ತುಂಬಿಕೊಂಡವರು. ದೇಶದ ವ್ಯವಸ್ಥೆಯ ಇಂಥ ಸ್ಥಿತಿಯಲ್ಲಿ ನಾವು ನಮ್ಮ ಜನಾಂಗವಿದೆಯಲ್ಲಾ ಎಂಬುದನ್ನು ಹೇಳುತ್ತಾ ಕೊರಗಿ ಸಂಘಟನೆಯಲ್ಲಿ ತಮ್ಮ ಬಲವಾದ ಕೂಗನ್ನು ಕೂಗಿದ ಕೆಲವರು. ಆದಷ್ಟು ಅನಕ್ಷರಸ್ಥರಿಗೆ, ಶೋಷಿತರಿಗೆ, ದಲಿತರಿಗೆ ತಮ್ಮ ಸ್ಥಿತಿ ಎಂತಹದು ಎಂಬ ತಿಳಿವನ್ನು ಹೇಳುತ್ತಾ ಕಾಲಕಳೆದವರು. ಈ ಹೊತ್ತಿನ ನಿರುದ್ಯೋಗದ ಸಮಸ್ಯೆಯಲ್ಲಿ ಬೆಂದವರು. ತಮ್ಮ ಜಾತಿಯ ಬಗ್ಗೆ ಮೇಲುಜಾತಿಯವರು ಪ್ರತಿಕ್ರಿಯಿಸುವುದಕ್ಕೆ ಮಾನಸಿಕ ಹಿಂಸೆಯನ್ನು ಹೊಂದಿದವರು. ಗ್ರಾಮೀಣ ಬದುಕಿನಲ್ಲಿನ ತಾರತಮ್ಯಕ್ಕೆ ಬೇಸತ್ತು ನಗರದ ಆಧುನಿಕ ಇಕ್ಕಟ್ಟಿನಲ್ಲಿ ಸಿಕ್ಕವರು. ಈ ತಲೆಮಾರಿನವರು ಆಫೀಸು/ಕಛೇರಿಯ ಸಂಪರ್ಕವನ್ನು ಹೊಂದಿದ್ದಾರೆ. ತಮ್ಮ ಸಮುದಾಯಗಳಿಗೆ ಸರ್ಕಾರದಿಂದ ಬರುವ ಸೌಲಭ್ಯಗಳನ್ನು ಕೇಳಿ ಪಡೆಯುವ ಕಾರ್ಯದಲ್ಲಿರುತ್ತಾರೆ. ಇವರು ಊರ ಯಜಮಾನಿಕೆಯನ್ನು ವಿರೋಧಿಸುತ್ತಾ, ಅವರ ಮನೆಯ ಕೂಲಿಯನ್ನು, ಜೀತವನ್ನು ವಿರೋಧಿಸುತ್ತಾರೆ. ಇವರು ಮೊದಲು ಶಿಕ್ಷಣ ಪಡೆದು ನೌಕರಿಗಾಗಿ ಕಾಯುವುದು, ಸಿಗದಿದ್ದರೆ ಅನುಭವಿಸಲಾರದಂತ ನಿರುದ್ಯೋಗವನ್ನು ಅನುಭವಿಸಿ ಆರ್ಥಿಕ ಬಿಕ್ಕಟ್ಟು ಮತ್ತು ಅದರಿಂದಾಗುವ ಸಾಂಸಾರಿಕ ತೊಳಲಾಟವನ್ನು ಅನುಭವಿಸುವರು. ಇವರು ಶಿಕ್ಷಣ ಪಡೆಯುವುದು ಬರೀ ಜ್ಞಾನಾರ್ಜನೆಗೆ ಮಾತ್ರವಲ್ಲ. ಅಷ್ಟೇ ಪ್ರಮುಖವಾದಂತಹ ಸರ್ಕಾರಿ ನೌಕರಿಯನ್ನು ಪಡೆಯಲೋಸ್ಕರವೇ ಶಿಕ್ಷಣವನ್ನು ಪಡೆಯುತ್ತಾರೆ. ಇದಕ್ಕೆ ಕಾರಣವು ಹಲವಿವೆ. ಸಮಾಜದಲ್ಲಿ ಬದುಕಲು ಬೇರೆ ಮಾರ್ಗವಿಲ್ಲದೆ, ಅನಿವಾರ್ಯವಾಗಿ ಸರ್ಕಾರಿ ಕೆಲಸಕ್ಕೆ ಕಾಯುವ ಸ್ಥಿತಿ ಇರುತ್ತದೆ. ಇವರ ಬಗ್ಗೆ ಮತ್ತಷ್ಟು ವಿವರಿಸುವುದಾದರೆ; ಇವರ ತಂದೆ ತಾಯಿಯರು ಹಿಡಿಯುವ ಜಾಡನ್ನು ಹಿಡಿಯಲಾರದೆ ಪಡೆದ ಶಿಕ್ಷಣಕ್ಕೆ ಸರಿಯಾದ ಸ್ಥಾನ ಸಿಗಲಿಲ್ಲವೆಂದು ಪರಿತಪಿಸುವರು. ಇವರಿಗೆ ಊರ ಯಜಮಾನಿಕೆಯ ನಡುವಿನ ಸಂಬಂಧವು ಅಷ್ಟಾಗಿ ಸರಿ ಇರುವುದಿಲ್ಲ. ಇವರ ಮಾತುಗಳೆಲ್ಲವು ಗ್ರಾಮದ ಮುಖಂಡರಿಗೆ ತಲೆಹರಟೆ ಇಲ್ಲವೆ ವಿಪರೀತ ಬುದ್ಧಿಯ ಮಾತುಗಳಂತೆ ಕಾಣುತ್ತವೆ.

## ದಲಿತ ಚಳುವಳಿಯ ಶತ್ರು ಸ್ವರೂಪ ಮತ್ತು ಮಿತ್ರ ಸ್ವರೂಪ

ದಲಿತ ಚಳುವಳಿಯ ತೊಡಕುಗಳಲ್ಲಿ ಶತ್ರು ಸ್ವರೂಪ, ಮಿತ್ರ ಸ್ವರೂಪಗಳು ಇವೆ. ಈ ಚಳುವಳಿಯು ಯಾರ ವಿರುದ್ಧ ಶತ್ರುತ್ವವನ್ನು ಇಟ್ಟುಕೊಂಡಿದೆ; ಯಾರ ಪರವಾದ ಮಿತ್ರತ್ವವನ್ನು ಹೊಂದಿದೆ ಎಂಬುದನ್ನು ಗುರ್ತಿಸಿಕೊಂಡಿದೆ. ಈ ದಲಿತ ಚಳುವಳಿಯ ಸ್ವರೂಪಕ್ಕೆ ವ್ಯವಸ್ಥಿತ ಜಾತಿ ಸಮಾಜವಿದೆ. ಹಲವು ಜಾತಿಯ ನಾಯಕರು ನಡೆಸುತ್ತಿರುವ ಸರ್ಕಾರವಿದೆ. ಈ ಜಾತಿಗಳೆಲ್ಲವೂ ತಮ್ಮೊಳಗೆ ಏರುಪೇರಿನ ಅಂತಸ್ತನ್ನು ಹೊಂದಿವೆ.

ದಲಿತ ಚಳುವಳಿಯ ಶತ್ರುಸ್ವರೂಪ ಮಿತ್ರಸ್ವರೂಪ ಯಾವ ರೀತಿಯದು? ಇದು ಏಕ ಬಗೆಯದ್ದೇ, ಇಲ್ಲವೆ ಹಲವು ಬಗೆಯದ್ದೇ? ಇವರ ಶತ್ರುಗಳು ಯಾರು? ಮಿತ್ರರು ಯಾರು? ಎಂಬುದನ್ನು ನೋಡುವುದು ಮುಖ್ಯವಾದ

ಪ್ರಶ್ನೆಯಾಗುತ್ತದೆ. ದಲಿತ ಚಳುವಳಿಯ ಶತ್ರುಗಳು ಇದೇ ಶ್ರೇಣೀಕೃತ ವ್ಯವಸ್ಥೆಯ ಮೇಲ್ಜಾತಿಯವರೇ, ಇಲ್ಲವೆ ಬ್ರಾಹ್ಮಣರೆ, ಇಲ್ಲವೆ ಭೂಮಾಲಿಕರೇ, ಬಂಡವಾಳಶಾಹಿಗಳೇ ಎಂಬುವು ಚಳುವಳಿಯ ಶತೃ, ಮಿತ್ರ ಸ್ವರೂಪಕ್ಕೆ ಮುಖ್ಯವಾಗುತ್ತವೆ.

ದಲಿತ ಚಳುವಳಿಯು ತನಗೆ ಸಂಬಂಧಿಸಿದ ವಸ್ತುವಿನ ಕಾರಣ ಮತ್ತು ಫಲವನ್ನು ಕೇಳುವುದು ಯಾರನ್ನು? ಇಲ್ಲಿ ದಲಿತ ಚಳುವಳಿಕಾರರು ಒಂದು ಕಡೆಯಾದರೆ; ದಲಿತ ಶೋಷಿತ ಸಮುದಾಯಗಳಿಗೆ ಸಂಬಂಧಿಸಿದ ಘಟನೆಗಳು ಮತ್ತೊಂದು ಕಡೆ ಇರುತ್ತವೆ. ಚಳುವಳಿಯ ವಸ್ತು, ಚಳುವಳಿಕಾರರು, ಮತ್ತು ಅವರು ನಡೆಸುವ ಮುಷ್ಕರಗಳು ಇವುಗಳ ಸಂಬಂಧ ಒಂದೇ ಆಗಿದ್ದರೂ ಇವುಗಳು ನಡೆಯುವ ಕ್ರಿಯೆಯಲ್ಲಿ ವ್ಯತ್ಯಾಸ ಕಂಡುಬರುತ್ತವೆ. ಚಳುವಳಿಯ ವಸ್ತು ವಿಷಯಕ್ಕೆ ಸಂಬಂಧಪಟ್ಟಂತೆ ನ್ಯಾಯದ ಫಲವನ್ನು ಭಾರತದ ಸಂಸದೀಯ ಕಾನೂನು ವ್ಯವಸ್ಥೆಯ ಚೌಕಟ್ಟಿನ ಮೂಲಕ ಪಡೆಯುವುದು ಆಗಿರುತ್ತದೆ. ಈ ನಿಯಮವು ಯಾವುದೇ ಅಪರಾಧಿಗೆ ನಿರಪರಾಧಿ ಶಿಕ್ಷೆಯನ್ನು ವಿಧಿಸುವಂತಿಲ್ಲ; ಕಾನೂನನ್ನು ಕೈಗೆ ತೆಗೆದುಕೊಳ್ಳುವಂತಿಲ್ಲ. ಅದು ನಿರಪರಾಧಿ ಎಂತಹ ನೋವನ್ನು ಅನುಭವಿಸಿದರೂ ತನ್ನ ಪರಿಹಾರವನ್ನು ಕಾನೂನಿನ ಅಡಿಯಲ್ಲಿಯೇ ಬಗೆಹರಿಸಿಕೊಳ್ಳಬೇಕು. ಇದು ಪ್ರಜಾಪ್ರಭುತ್ವ ವ್ಯವಸ್ಥೆಯಡಿಯ ಕಾನೂನಿನ ಚೌಕಟ್ಟಿನ ಸಾಮಾನ್ಯ ನಿಯಮ.

ದಲಿತರ ಶೋಷಣೆಗೆ ಬಹುವಾಗಿ ಕಾರಣವಾಗಿರುವವರು ಎಲ್ಲಾ ದಲಿತೇತರ ಜನಾಂಗದವರಾಗಿರುತ್ತಾರೆ. ಪ್ರಾದೇಶಿಕತೆಯಲ್ಲಿ ಯಾವ ಜನಾಂಗವು ತನ್ನ ಯಜಮಾನಿಕೆಯನ್ನು ಇನ್ನೊಬ್ಬರ ಮೇಲೆ ಸಾಧಿಸುತ್ತಿರುತ್ತಾರೋ ಅವರ ಶೋಷಣೆಗೆ ದಲಿತರು ಒಂದಲ್ಲ ಒಂದು ರೀತಿಯಲ್ಲಿ ಒಳಗಾಗಿರುತ್ತಾರೆ. ಇವರನ್ನು ಶತ್ರು ಸ್ವರೂಪದವರೆಂದು ಸಾಮಾನ್ಯವಾಗಿ ಗುರ್ತಿಸಬಹುದು. "ಶತ್ರು ಯಾರು ಎಂಬುದನ್ನು ಮೊದಲೇ ನಿರ್ಧರಿಸಿಕೊಂಡು ವಸ್ತುಸ್ಥಿತಿಯ ವಿಶ್ಲೇಷಣೆಗೆ ಹೊರಡುವುದು ಒಂದು ವಿಧಾನ, ವಸ್ತುಸ್ಥಿತಿಯ ವಿಶ್ಲೇಷಣೆಯ ಆಧಾರದ ಹಿನ್ನೆಲೆಯಲ್ಲಿ ಶತ್ರು ಯಾರು ಎಂದು ಗುರ್ತಿಸುವುದು ಮತ್ತೊಂದು ವಿಧಾನ. ಇದರಲ್ಲಿ ಮೊದಲನೆಯದು ಅತ್ಯಂತ ವೈಜ್ಞಾನಿಕವಾದದ್ದು. ದುರಂತವೆಂದರೆ ದಲಿತ ಸಂಘರ್ಷ ಸಮಿತಿಯ ಆಲೋಚನಾ ವಿಧಾನ ಮೊದಲನೇ ಮಾದರಿಯದು. 'ಬ್ರಾಹ್ಮಣರು ಶತ್ರುಗಳು' ಎಂಬ ತೀರ್ಮಾನ ಅಂತಿಮವಾಗಿತ್ತು. ಇದರಿಂದ ಈ 'ಶತ್ರುಗಳು' ಎಲ್ಲೆಲ್ಲಿ, ಎಷ್ಟೆಷ್ಟು ಜನ ಇದ್ದಾರೆ ಎಂಬ ಯಾಂತ್ರಿಕವಾದ ಲೆಕ್ಕ ಶುರುವಾಯಿತು. ಅಗೋ ನೌಕರಿಯಲ್ಲಿ ೭೦% ಜನ! ಅಗೋ ರಾಜಕಾರಣದಲ್ಲಿ ಶೇ. ೭೫ಜನ! ಹಾಗಾದರೆ ಅವರ ಒಟ್ಟು ಸಂಖ್ಯೆ? ಇಂಡಿಯಾದಲ್ಲಿ ಕೇವಲ ೪%. ಕೇವಲ ಇಷ್ಟು ಸಂಖ್ಯೆಯ ಬ್ರಾಹ್ಮಣರು ಇಡೀ ಇಂಡಿಯಾವನ್ನು ಆಳುತ್ತಿದ್ದಾರಲ್ಲ? ಇದರಿಂದಲೇ ಈ ದೇಶದಲ್ಲಿ ಜಾತಿ-ಅಸ್ಪೃಶ್ಯತೆ ತಾಂಡವಾಡುತ್ತಿದೆ. ಅವರು ನಾಶವಾಗದ ಹೊರತು ಜಾತಿ ನಾಶವಾಗದು"[೪]. ದಲಿತ ಚಳುವಳಿಗೆ ಸಂಬಂಧಿಸಿದ ಶತ್ರುಗಳ ಹಿನ್ನೆಲೆಯನ್ನು ನೋಡುವಾಗ ದಲಿತೇತರರು ಅಥವಾ ಬ್ರಾಹ್ಮಣ ವಿರೋಧಿ ಚಟುವಟಿಕೆಯ ಗುಂಪಂತೆ ದಲಿತರೂ ಕೂಡ ಸಾಮಾನ್ಯ ನಿರ್ಣಯಕ್ಕೆ ಬರಲಾಗಿದೆ. ಇಲ್ಲಿ ಉದ್ಯೋಗ ಹಂಚಿಕೆಯಲ್ಲಿ, ರಾಜಕೀಯದ ಅಸ್ತ್ರವನ್ನು ಹಿಡಿದು ಅಂಕಿಅಂಶವನ್ನು ನೋಡಹೊರಟರು. ಬ್ರಾಹ್ಮಣ ವಿರೋಧಿ ಚಟುವಟಿಕೆಯ ತೀರ್ಮಾನವನ್ನು ಒಪ್ಪಿಕೊಂಡರು. ಇದು ದಲಿತ ಚಳುವಳಿಯ ತೊಡಕುಗಳಲ್ಲಿ ಒಂದು ಎಂದು ಹೇಳಬಹುದು. ಬ್ರಾಹ್ಮಣರ ಪ್ರಭುತ್ವದ ಪ್ರಶ್ನೆಯೊಂದಿಗೆ ದಲಿತರ ನಿಜವಾದ ಶತ್ರುಗಳು ಯಾರು

ಎಂಬುವು ಮರೆಯಾದವು. ಸಾಮಾಜಿಕ ವ್ಯವಸ್ಥೆಯ ಯಜಮಾನಿಕೆಯ ಪ್ರಭುತ್ವದಲ್ಲಿ ಬ್ರಾಹ್ಮಣ ಸಮುದಾಯಗಳು ಮಾತ್ರವೇ ಸೇರಿದೆ. ಈ ವ್ಯವಸ್ಥೆಯಲ್ಲಿ ಬ್ರಾಹ್ಮಣೇತರ ಭೂಮಾಲಿಕ ಮತ್ತು ಬಂಡವಾಳ ಹೊಂದಿದ ಅನೇಕ ಸಮುದಾಯಗಳು ದಲಿತ ಸಮುದಾಯಗಳನ್ನು ಶೋಷಣೆ ಮಾಡುತ್ತಲೇ ಬಂದಿರುವುದು ತಿಳಿದುಬರುತ್ತದೆ. ''ಇಂಡಿಯಾದ ೫ ಲಕ್ಷ ಹಳ್ಳಿಗಳ ಜಗತ್ತಿನಲ್ಲಿ ದಲಿತರ ಶತ್ರುಗಳಾರು? ಅವರು ಭೂಮಾಲಿಕರು ಎಂಬುದು ಸ್ಪಷ್ಟ. ಚರಿತ್ರೆಯಲ್ಲಿ ಹಾಗೂ ವರ್ತಮಾನದಲ್ಲಿ ದಲಿತರಿಗೆ ಅವಮಾನ, ಕೊಲೆ-ಸುಲಿಗೆ, ಅತ್ಯಾಚಾರಗಳಾಗಿದ್ದರೆ, ಮಲ ತಿನ್ನಿಸಿದ್ದೂ ಸೇರಿದಂತೆ, ಅದು ಭೂಮಾಲಿಕರಿಂದಲೇ ಅಥವಾ ಭೂಮಾಲಿಕ ವರ್ಗದವರಿಂದಲೇ ಆಗಿದೆ. ಈ ಸಂಗತಿಯನ್ನು ಸಂಘಟನೆಯ ಆಲೋಚನೆಗಳು ಸಂಪೂರ್ಣವಾಗಿ ಮುಚ್ಚಿಟ್ಟವು; ಮರೆಮಾಚಿದವು. ಮಾತೆತ್ತಿದರೆ ಸಾಕು ಸವರ್ಣೀಯರು ಮೇಲುಜಾತಿಯವರು, ಬ್ರಾಹ್ಮಣಶಾಹಿಗಳು ಎಂಬ ಪದಗಳು ಉದುರತೊಡಗಿದವು''[೨]. ದಲಿತ ಚಳುವಳಿಗೆ ಪೂರಕವಾಗಿ ದಲಿತೇತರರಿಂದ ದಲಿತ ವಿಚಾರವಾದಿಗಳಿಂದ ಶತ್ರು ನಿರ್ಧಾರದಲ್ಲಿ ಗೊಂದಲವನ್ನು ದಲಿತ ಚಳುವಳಿ ಉಂಟು ಮಾಡಿಕೊಂಡಿದೆ.

ಭಾರತದ ಸಂಸದೀಯ ಕಾನೂನು ವ್ಯವಸ್ಥೆ ಮತ್ತು ಪ್ರಜಾಸತ್ತಾತ್ಮಕ ಆಡಳಿತ ಮತ್ತು ಅದರ ಸಂವಿಧಾನವು ವ್ಯಕ್ತಿಗೆ ಮೂಲಭೂತ ಹಕ್ಕನ್ನು ನೀಡಿದೆ. ಈ ಹಕ್ಕುಗಳನ್ನು ಪಡೆಯುವುದು ವ್ಯಕ್ತಿಗಳಿಗಿರುತ್ತದೆ. ಇವು ದಲಿತ ಚಳುವಳಿಯ, ಅವುಗಳ ಸಮುದಾಯಗಳ, ಅವುಗಳ ಹೋರಾಟದ ಪರವಾಗಿರುತ್ತದೆ. ಇದರ ವಾಸ್ತವ ಕುರಿತ ಫಲಿಸದ ಚರ್ಚೆಯು ಬೇರೆಯ ರೂಪವನ್ನು ಪಡೆಯುವಂತಹದು.

## ದಲಿತ ಚಳುವಳಿಯ ತಾತ್ವಿಕ ವಿಚಾರಗಳು

ದಲಿತ ಚಳುವಳಿಯನ್ನು ಅಧ್ಯಾಯ ಎರಡರಲ್ಲಿ ಗುರ್ತಿಸಿದಂತೆ ಇದು ಎರಡು ದಶಕಕ್ಕೂ ಹೆಚ್ಚಿನ ಹಿನ್ನೆಲೆಯನ್ನು ಹೊಂದಿದೆ. ಕರ್ನಾಟಕದಲ್ಲಿ ದಲಿತ ಚಳುವಳಿಯು ಚೈತನ್ಯವನ್ನು ಹೊಂದಿ ಪ್ರಖರತೆಯನ್ನು ಹರಡಿಸುವ ಹೊತ್ತಿಗೆ ನೆರೆರಾಜ್ಯಗಳಲ್ಲಿ ಆಗಲೇ ಈ ಪ್ರಕ್ರಿಯೆಯು ಪ್ರಾರಂಭವಾಗಿ ಹಲವು ವರ್ಷಗಳು ಕಳೆದಿದ್ದವು. ''ಸಾಮಾನ್ಯವಾಗಿ ಭಾರತದ ಪರಿಸ್ಥಿತಿಯೂ, ನಿರ್ದಿಷ್ಟವಾಗಿ ಕರ್ನಾಟಕದ ಪರಿಸ್ಥಿತಿಯೂ ದಲಿತ ಸಂಘರ್ಷ ಸಮಿತಿಯ ಹುಟ್ಟಿಗೆ ಕಾರಣಗಳಾಗಿವೆ. ದಲಿತ ಸಂಘರ್ಷ ಸಮಿತಿ ಹುಟ್ಟಿದಾಗ, ಭಾರತಕ್ಕೆ ಅಧಿಕಾರ ಹಸ್ತಾಂತರವಾಗಿ ಕಾಲುಶತಮಾನ ಕಳೆದಿತ್ತು. ಕಾಂಗ್ರೆಸ್ಸಿನ ಭದ್ರಕೋಟೆ ರಾಜ್ಯಭಾರ ನಡೆದಿತ್ತು. ೬೦ರ ದಶಕಗಳಲ್ಲಿ ರೂಪಾಯಿಗಳ ಅಪಮೌಲ್ಯ ಧಾರಾಕಾರವಾಗಿ ಹರಿದು ಬರುತ್ತಿದ್ದ ಸಾಮ್ರಾಜ್ಯಶಾಹಿಗಳ ಸಾಲಗಳು, ಭೀಕರವಾದ ಬರಗಾಲ - ಇವು ಇಂಡಿಯಾದ ಶರೀರದ ನರನಾಡಿಗಳನ್ನು ಕಂಪಿಸುವಂತೆ ಮಾಡಿದವು''[೩]. ಸ್ವಾತಂತ್ರ್ಯಾನಂತರದ ಭಾರತದಲ್ಲಿ ದಲಿತ ಚಳುವಳಿಯ ಅಗತ್ಯ; ಅದರ ಅನಿವಾರ್ಯತೆಯು ಚರ್ಚೆಗೆ ಒಳಪಟ್ಟಿತು. ''ಜಮೀನ್ದಾರಿ ಶೋಷಣೆಯ ಭಾಗವಾಗಿ, ದಲಿತರ ಮೇಲೆ ಹಲ್ಲೆ, ಕೊಲೆ, ಅವಮಾನ, ಅತ್ಯಾಚಾರಗಳು ನಡೆಯುತ್ತಿವೆ. ಇವು ಸ್ಥಳೀಯ, ನೇರ ಹಾಗೂ ಪ್ರತ್ಯಕ್ಷ ಸಮಸ್ಯೆಗಳಾಗಿವೆ. ಇವುಗಳನ್ನು ಎದುರಿಸಲು ಒಂದು ಹಳ್ಳಿಯ ಜನರಿಗೆ ಸಾಧ್ಯವಾಗದಂತ ಪರಿಸ್ಥಿತಿಗಳು ಇವೆ. ಹಾಗಾಗಿ ಇಂತವುಗಳನ್ನು ದಲಿತರ ಸಂಘಟನಾತ್ಮಕ ಶಕ್ತಿಯ ಹೋರಾಟದೊಂದಿಗೆ ಎದುರಿಸಬಹುದು ಇಲ್ಲವೆ ಅವು ನಡೆದ ಮೇಲೆ ಪ್ರತಿಭಟಿಸಬಹುದು ಎಂಬ ಒಂದು ಸಾಮಾನ್ಯ ಆಶಯ ಸಂಘಟನೆಯ ಆರಂಭಿಕ ಹಂತದಲ್ಲಿ ರೂಪ ಪಡೆಯಿತು''[೪]. ಕರ್ನಾಟಕ ದಲಿತ ಚಳುವಳಿಯ

ಉಗಮದ ಹೊತ್ತಿಗೆ ಸ್ವತಂತ್ರ ಭಾರತವು ಇಪ್ಪತ್ತೈದು ವರ್ಷಗಳನ್ನು ಕಳೆದಿತ್ತು. ಆ ಇಪ್ಪತ್ತೈದು ವರ್ಷಗಳಲ್ಲಿ ದಲಿತ ಸಂಘಟನೆಗೆ ಹಲವಾರು ಕಾರಣಗಳು ಪುಷ್ಟಿ ನೀಡಿದವು. ಅವುಗಳಲ್ಲಿ ದಲಿತರ ಕೆಲವು ಯುವಕರು ಪಡೆದಂತೆ ಕೆಲವು ಸೌಕರ್ಯಗಳು ಸೇರಿವೆ. ಅದು ತಮ್ಮ ನೆಲೆಯ ಬಗ್ಗೆ ಮತ್ತು ಸಮಾಜದ ಬಗ್ಗೆ ಅರಿವನ್ನು ಮೂಡಿಸಿತು. ಮೊದಲು ಶಾಲೆಯಲ್ಲಿ ಶಿಕ್ಷಣ ಕಲಿತರು. ನಂತರದ ಹಾಸ್ಟೆಲ್‌ನ ವಸತಿಯಲ್ಲಿ ನಡೆದದ್ದು ಸಂಘಟನೆ. ಇವು ನಂತರದ ಚಳುವಳಿಯ ನಿರಂತರತೆಯಲ್ಲಿ ಯುವಕರಲ್ಲಿ ಉತ್ಸಾಹವನ್ನು ತುಂಬಿತು. ಸಮಾಜದ ಕ್ರೂರವ್ಯವಸ್ಥೆಯ ಬಗ್ಗೆ ದ್ವೇಷ, ಮತ್ತು ತಮ್ಮ ಕಲ್ಪನೆಯ ಕನಸುಗಳು ಅದಮ್ಯ ಚೇತನಗಳಾದವು. ಶಿಕ್ಷಣ ಕಲಿತ ಮೊದಲ ತಲೆಮಾರಿನ ಕೆಲವು ದಲಿತರಿಗೆ ನೌಕರಿಯಾದದ್ದು ತಮ್ಮಲ್ಲಿ ಸ್ವಾಭಿಮಾನವನ್ನು ತಂದುಕೊಟ್ಟಿತು. ನೌಕರಿಗೆ ತಕ್ಕಂತೆ ನಗರದ ವಾಸಿಗಳಾದರು. ಗ್ರಾಮೀಣ ಜೀವನಕ್ಕಿಂತ ನಗರ ಜೀವನದ ಸುಧಾರಣೆ; ಹೋಟೆಲು ಮತ್ತು ಸಾರ್ವಜನಿಕ ಕೇಂದ್ರಗಳಲ್ಲಿ ಅಸ್ಪೃಶ್ಯತೆಯ ಪ್ರಮಾಣ ಕಡಿಮೆ ಇದ್ದದ್ದು; ಉದ್ಯೋಗಕ್ಕೆ ತಕ್ಕಂತೆ ಬಹುವಚನದ ಮರ್ಯಾದೆಯು ನಗರದಲ್ಲಿ ಲಭ್ಯವಾದದ್ದು ದಲಿತ ಚಳುವಳಿಯ ತಾತ್ವಿಕತೆಯ ವಿಚಾರಗಳಲ್ಲಿ ಒಂದು ಅಂಶವಾಗಿದೆ. ನೌಕರಸ್ಥ, ಶಿಕ್ಷಣ ಹೊಂದಿದ, ಚಳುವಳಿಯ ಚಿಂತನೆಯನ್ನು ತಿಳಿದ ದಲಿತನ ಮನಸ್ಸು ಆಧುನಿಕತೆಯನ್ನು ಹೊಂದುತ್ತಿರುವ ನಗರಗಳತ್ತ ಹಾಯಿತು. ಇವರು ಆಧುನಿಕತೆಯ ಅನುಭವದ ಹೊಸತನವನ್ನು ಬೇಗ ಒಪ್ಪಿಕೊಂಡರು. ಆಧುನೀಕರಣಗೊಳ್ಳುತ್ತಿರುವ ನಗರಗಳು; ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿದ್ದ ಗ್ರಾಮಗಳ ತುಲನಾತ್ಮಕ ತೀರ್ಪಿನಲ್ಲಿ ನಗರವು ಆಕರ್ಷಿಸಿತು. ವಿದ್ಯಾವಂತ ದಲಿತರಿಗೆ ಹಳ್ಳಿಗಳು ಬೇಡವಾದವು. ನಗರಗಳ ಬದುಕಿನಲ್ಲಿ ತಮ್ಮ ಅರ್ಹತೆಗೆ ತಕ್ಕಂತೆ ವೃತ್ತಿಯನ್ನು ಹಿಡಿದು ಅಭಿವೃದ್ಧಿ ಹೊಂದುತ್ತಿರುವ ಕಾರ್ಖಾನೆ ಮತ್ತು ಇತರೆ ಕೆಲಸಗಳನ್ನು ಹುಡುಕಿದರು.

ದಲಿತ ಚಳುವಳಿಯ ಕೆಲವು ತಾತ್ವಿಕ ವಿಚಾರಗಳನ್ನು ಡಾ.ಬಿ.ಎಂ.ಪುಟ್ಟಯ್ಯನವರು ತಮ್ಮ ಲೇಖನದಲ್ಲಿ ಹೀಗೆ ಕ್ರೋಡೀಕರಿಸಿದ್ದಾರೆ.

"* ಶಿಕ್ಷಣ ಜ್ಞಾನದ ಕಣ್ಣು; ವಿಮೋಚನೆಯ ಅಸ್ತ್ರ

* ಶಿಕ್ಷಣವನ್ನು ಎಲ್ಲರಿಗೂ ನೀಡಿದ ಬ್ರಿಟೀಷರು ಭೂಲೋಕದ ಕಲ್ಪವೃಕ್ಷ.

* ಶೂದ್ರರಿಗೆ ಶಿಕ್ಷಣ ನಿಷೇಧಿಸಿದ್ದ ಬ್ರಾಹ್ಮಣರು ದಲಿತರ ಹಾಗೂ ದೇಶದ ಆಜನ್ಮ ಶತ್ರುಗಳು

* ಬ್ರಾಹ್ಮಣರೇ ದೇವರನ್ನು ಜಾತಿಗಳನ್ನು ಸೃಷ್ಟಿಸಿದವರು.

ಮೇಲಿನ ವಿಶ್ಲೇಷಣೆಯ ಪರ್ಯಾಯ ಮಗ್ಗುಲಿನ ಮುಖ್ಯಾಂಶಗಳನ್ನು ಹೀಗೆ ಗುರ್ತಿಸಬಹುದು.

* ಶಿಕ್ಷಣ ಜ್ಞಾನದ ಕಣ್ಣಷ್ಟೇ ಅಲ್ಲ ವಿಮೋಚನೆಯ ಅಸ್ತ್ರವೂ ಅಲ್ಲ.

* ಆಳುವ ವರ್ಗವು ತನ್ನ ಶೋಷಣೆಯನ್ನು ಮುಂದುವರೆಸಿಕೊಂಡು ಹೋಗಲು ಒಂದು ಮಾಧ್ಯಮವಾಗಿದೆ ಅಷ್ಟೇ.

* ಶಿಕ್ಷಣ ನೀಡುವುದು ಬ್ರಿಟೀಷರ ಉದ್ದೇಶವಾಗಿರಲಿಲ್ಲ. ಅವರ ಶೋಷಣೆಗೆ ತಕ್ಕ ಗುಲಾಮರನ್ನು ಸೃಷ್ಟಿಸುವ ತುರ್ತು ಅವರಿಗಿತ್ತು.

* ಚರಿತ್ರೆಯಲ್ಲಿ ಶೂದ್ರರಿಗೆ ಶಿಕ್ಷಣ ನಿಷೇದಿಸಲಾಗಿತ್ತು ನಿಜ. ಅದಕ್ಕೆ ಕೇವಲ ಬ್ರಾಹ್ಮಣರಷ್ಟೇ ಕಾರಣರಲ್ಲ. ಶಿಕ್ಷಣದಿಂದ ವಂಚಿಸಲಾಗಿತ್ತು ಎಂದು ಗುರುತಿಸುವ ಜೊತೆಗೆ ಉತ್ಪಾದನಾ ಸಂಬಂಧಗಳಿಂದಲೂ ವಂಚಿಸಲಾಗಿತ್ತು ಎಂಬುದನ್ನು ಗುರ್ತಿಸಲೇಬೇಕು.

* ಬ್ರಾಹ್ಮಣರು ದೇವರನ್ನು ಜಾತಿಗಳನ್ನು ಸೃಷ್ಟಿಸಲಿಲ್ಲ. ಚಾರಿತ್ರಿಕ ಬೆಳವಣಿಗೆಯ ಅನಿವಾರ್ಯ ಫಲಿತಗಳಾಗಿ ಇವು ಸೃಷ್ಟಿಯಾದವು. ಯಾವುದನ್ನು ಉಳಿಸಿಕೊಂಡರೆ ಶೋಷಣೆಯನ್ನು ಮುಂದುವರಿಸಲು ಅನುಕೂಲವೋ ಅವನ್ನು ಶೋಷಕರು ಚರಿತ್ರೆಯುದ್ದಕ್ಕೂ ಹಾಗೆಯೇ ಉಳಿಸಿಕೊಂಡು ಬಳಸಿಕೊಂಡು ಬಂದರು''" .

ಹೀಗೆ ದಲಿತ ಚಳುವಳಿಯ ತಾತ್ವಿಕತೆಯನ್ನು ಚರ್ಚಿಸುತ್ತಾ; "D.S.S.ನ ತಾತ್ವಿಕತೆಯು ವಸ್ತುಸ್ಥಿತಿಯನ್ನು ವಕ್ರವಾಗಿ ಗ್ರಹಿಸಿದೆ. ಮೇಲುಸ್ತರದಲ್ಲಿ ಗ್ರಹಿಸಿದೆ. ಹಾಗಾಗಿ ಇದು ಅರಾಜಕತಾವಾದಿ ತಾತ್ವಿಕತೆ ಈ ವಿಧಾನವು ಶತ್ರುವಲಯಕ್ಕೆ ಹೆಚ್ಚು ಉಪಯುಕ್ತವಾದದ್ದು. ಯಾವುದೇ ಹೋರಾಟ / ಚಳುವಳಿಯಲ್ಲಿ ಸಿದ್ಧಾಂತ ಹಾಗೂ ಆಚರಣೆಗಳು ಒಂದನ್ನೊಂದು ಅವಲಂಬಿಸಿರುತ್ತವೆ".[೬] ಪೂರಕ ಹಾಗೂ ವಿರುದ್ಧದ ನೆಲೆಯಲ್ಲಿ ದಲಿತ ಚಳುವಳಿಯನ್ನು ನೋಡುವುದರಿಂದ ಅದರ ತಾತ್ವಿಕತೆ ಕಾಣಸಿಗುತ್ತದೆ.

ದಲಿತ ಚಳುವಳಿಗೆ ಜಾತೀಕೇಂದ್ರಿತ ಆಚರಣಾತ್ಮಕ ಕ್ರಿಯೆಯು ಒಂದು ರೀತಿಯಲ್ಲಿ ಅದಕ್ಕೊಂದು ಹೊಸ ಆಯಾಮವನ್ನು ತಂದುಕೊಟ್ಟರೆ ಇನ್ನೊಂದು ರೀತಿಯಲ್ಲಿ ಮಿತಿಮೀರಿದ ಜಾತೀಯತೆಯ ಅಂದಾಭಿಮಾನವು ಬೆಳೆಯಿತು. ದಲಿತ ಚಳುವಳಿಯಲ್ಲಿ ದಲಿತ ಜಾತಿಗಳೇ ಪ್ರಮುಖ ಕೇಂದ್ರವಾದವು. ಅವನ್ನು ಉಳಿಸುವಲ್ಲಿ ಸಮಸ್ಯೆಯನ್ನು ಎತ್ತುವಲ್ಲಿ ಚಳುವಳಿಯ ನಾಯಕರು ತೊಡಗಿದರು. ಆದರೆ ಮುಂದಿನ ಹಂತಗಳಲ್ಲಿ ಸಿದ್ಧಾಂತಗಳಿಗೆ ಸೈದ್ಧಾಂತಿಕವಾಗಿ ಈ ಚಳುವಳಿಯ ಪ್ರಮುಖರು ಅಧ್ಯಯನಕ್ಕೆ ತೊಡಗಿ ಚಳುವಳಿಯನ್ನು ಕಟ್ಟುವಲ್ಲಿ ಯಶಸ್ವಿಯಾಗಲಿಲ್ಲ. ಅದಕ್ಕಿಂತ ಮುಂಚಿನ ದಿನಗಳಲ್ಲಿ ನಡೆದ ಹೋರಾಟಗಳಲ್ಲಿ ಸಿಕ್ಕ ಫಲ, ಹಾಗೂ ಅದಕ್ಕೊಂದು ಚೌಕಟ್ಟು ಇದ್ದಷ್ಟು ೧೯೮೫ರ ನಂತರದಲ್ಲಿ ಕಂಡುಬರಲಿಲ್ಲ. ಕಾರಣ ಪ್ರಾರಂಭದಲ್ಲಿ ಹುಟ್ಟಿಕೊಂಡ ಚಳುವಳಿಯ ಆಶಯಕ್ಕಿಂತ ಭಿನ್ನವಾದ ರಾಜಕೀಯ ಪ್ರವೇಶ; ಈ ಪ್ರವೇಶವು ದಲಿತ ಚಳುವಳಿಗೆ ಆದ ತಕ್ಷಣ ಆದದ್ದು ಈ ನಾಯಕರಲ್ಲೇ ಅಧಿಕಾರದ ವ್ಯಾಮೋಹ. ಇದರಿಂದ ರಾಜಕೀಯ ಪಕ್ಷಗಳ ಸಮರ್ಥನೆಯಲ್ಲಿ ಆಳುವಪಕ್ಷಗಳಿಗೆ ಹಂಚಿಹೋದರು. ಜೊತೆಗೆ ದಲಿತ ಚಳುವಳಿಯೂ ಸಹ ನಡೆಯುತ್ತಾ ಬಂದಿತು. ಇಂದು ದಲಿತ ಚಳುವಳಿಯ ಬಿಕ್ಕಟ್ಟುಗಳು ಎಂದರೆ ದಲಿತ ಸಮುದಾಯಗಳ ಬಿಕ್ಕಟ್ಟುಗಳೇ ಆಗಿವೆ.

## ದಲಿತ ಚಳುವಳಿಯ ಸಾಧನೆಗಳು

ದಲಿತ ಚಳುವಳಿಯ ಸಾಧನೆಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು. ಮೊದಲನೆಯದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿನ ರಾಜಕೀಯ ಆಡಳಿತದಲ್ಲಿ ಸಿಕ್ಕ ಕೆಲವು ಸೌಲಭ್ಯಗಳು. ಎರಡನೆಯದು ಬೌದ್ಧಿಕತೆಗೆ ಸಂಬಂಧಿಸಿದ್ದು. ಅದು ದಲಿತ ವಿದ್ಯಾವಂತ ಸಮುದಾಯಗಳ ಮೂಲಕ ಸ್ವಾಭಿಮಾನ ಮತ್ತು ಆತ್ಮಸ್ಥೈರ್ಯವನ್ನು ತಂದುಕೊಟ್ಟಿತು.

**ಭೂ ಹೋರಾಟಗಳು:** ದಲಿತ ಸಮುದಾಯಗಳಿಗೆ ಭೂಮಿಯನ್ನು ಕೊಡಿಸುವಲ್ಲಿ ವಹಿಸಿದ ಪಾತ್ರವು ದಲಿತ ಚಳುವಳಿಯ ಸಾಧನೆಯಲ್ಲಿ ಮಹತ್ವಪೂರ್ಣವಾದದ್ದು. ಭೂಮಿ ಮತ್ತು ದಲಿತರ ನಂಟು ಇಂದು ನೆನ್ನೆಯದಲ್ಲ; ಶೋಷಣೆಯ ಬದುಕು ಸಮಾಜದಲ್ಲಿ ಎಂದಿನಿಂದ ಪ್ರಾರಂಭವಾಯಿತೋ ಅಂದಿನಿಂದಲೇ ದಲಿತರಿಗೂ ಭೂಮಿಗೂ ನಂಟು ಬೆಳೆದಿದೆ ಎಂದು ಹೇಳಬಹುದು. ಈ ನಾಡಿನ ಮೂಲ ಕೃಷಿಕರು ಭೂ ಒಡೆಯರು ಹೊಲೆಯ, ಮಾದಿಗರು.

ದಲಿತ ಚಳುವಳಿಯು ಕರ್ನಾಟಕದಲ್ಲಿ ಉಗಮಗೊಂಡ ನಂತರದಲ್ಲಿನ ತನ್ನ ಚಳುವಳಿಯ ಅಡಿಯಲ್ಲಿ ಭೂ ಹೋರಾಟಗಳನ್ನು ನಡೆಸಿತು. ಕೆಲವು ಭೂರಹಿತ ದಲಿತರಿಗೆ ಭೂಮಿಯನ್ನು ಕೊಡಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿತು. ಕ.ದ.ಸಂ.ಸ. ಕೆಲವು ನಡೆಸಿದ ಹೋರಾಟಗಳನ್ನು ನೋಡುವುದಾದರೆ:-

ಅ. ಸಿದ್ಲಿಪುರ ಭೂಹೋರಾಟ: ಇದು ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲೂಕಿನ ಒಂದು ಸಣ್ಣ ಹಳ್ಳಿ. ಸರ್ಕಾರವು ಮಂಜೂರು ಮಾಡಿದ ಜಮೀನನ್ನು ಆರ್.ಎಸ್.ಎಸ್. ಕಾರ್ಯಕರ್ತರು ಕಸಿದುಕೊಂಡ ಪರಿಣಾಮ ದಲಿತ ಸಂಘರ್ಷ ಸಮಿತಿಯ ನೆರೆಹೊರೆಯ ಹಳ್ಳಿಯ ದಲಿತರನ್ನು ಸಂಘಟಿಸಿ ಜಮೀನನ್ನು ಕಳೆದುಕೊಂಡ ಸಿದ್ಲಿಪುರ ದಲಿತರಿಗೆ ೩೩ ಎಕರೆ ಜಮೀನನ್ನು ಮಂಜೂರು ಮಾಡಿಸಿತು. ಹೀಗೆ

ಆ. ದೇವಲಾಪುರ / ಭೂಹೋರಾಟದಲ್ಲಿ ೩೦೦ ಎಕರೆ ಭೂಮಿಯನ್ನು ಕೊಡಿಸಿತು.*

ಇ. ಬಿದರೆಕಾವಲು / ಭೂಹೋರಾಟದಲ್ಲಿ ೮೦೦ ಎಕರೆ ಭೂಮಿಯನ್ನು ಕೊಡಿಸಿತು.*

ಈ. ಚಂದಗೂಡು ಹೋರಾಟದಲ್ಲಿ ೩೦೦ ಎಕರೆ ಭೂಮಿಯನ್ನು ಕೊಡಿಸಿತು,*

ಉ. ನಾಗಸಂದ್ರ ಭೂ ಹೋರಾಟದಲ್ಲಿ ದಲಿತರಿಗೆ ಮತ್ತು ಹಿಂದುಳಿದವರಿಗೆ ನೂರಾರು ಎಕರೆ ಭೂಮಿಯನ್ನು ಕೊಡಿಸಿತು.*

ಊ. ಮೆದಕಿನಾಳ ಭೂ ಹೋರಾಟದಲ್ಲಿ ೬೭ ಎಕರೆ ಭೂಮಿಯನ್ನು ಭೂರಹಿತ ದಲಿತರಿಗೆ ಮಂಜೂರು ಮಾಡಿಸಲಾಯಿತು.* ಮಹಮದ್ ನಗರ ಭೂ ಹೋರಾಟ, ಗುಳ್ಳಹಟ್ಟಿ ಭೂಹೋರಾಟ ಮುಂತಾದ ಭೂ ಹೋರಾಟಗಳನ್ನು ದಲಿತ ಚಳುವಳಿ ಸಾಧನಗಳೆಂದು ಹೇಳಬಹುದು. ಪರಿಣಾಮವಾಗಿ ಸಾವಿರಾರು ಎಕರೆ ಭೂಮಿಯು ಭೂರಹಿತ ದಲಿತರಿಗೆ ಮಂಜೂರಾಯಿತು. ಇದರಿಂದ ಕೆಲವೇ ಕೆಲವು ದಲಿತರಿಗಾದರೂ ಭೂಮಿಯ ಮೇಲಿನ ಹಕ್ಕು ಸಿಕ್ಕಂತಾಯಿತು. ವೈಯಕ್ತಿಕವಾಗಿ ಕಸಿದುಕೊಂಡ ಯಜಮಾನಿಕೆಯ ಅಕ್ರಮದಲ್ಲಿ ಕಸಿದುಕೊಂಡವರ ಕೆಲವು ಭೂಮಿಯನ್ನು ಕೊಡಿಸಲಾಯಿತು.*

ಋ. "ಹೊಳಲಗೋಡು, ಹಿಪ್ಪಲಿ, ಸುಳಗೋಡು, ಸೋಮಾರ, ಕತ್ತೀಮಲ್ಲೇನಹಳ್ಳಿ, ಬರಗೂರು ಗ್ರಾಮಗಳ ದಲಿತರಿಗೆ ಆದ ಭೂ ಅನ್ಯಾಯದ ಬಗ್ಗೆ ಸೂಕ್ತ ತನಿಖೆ ನಡೆಸಿ ನ್ಯಾಯ ದೊರಕಿಸಬೇಕೆಂದು ಸರ್ಕಾರಕ್ಕೆ ಒತ್ತಾಯ ಮಾಡಿತು."*

ಈ ಊರುಗಳಲ್ಲಿ ದಲಿತರಿಗೆ ಆದ ಅನ್ಯಾಯದ ವಾಸ್ತವವನ್ನು ದಲಿತ ಚಳುವಳಿ ಎತ್ತಿಹಿಡಿದು ಕೆಲವರಿಗೆ ಭೂಮಿಯನ್ನು ಕೊಡಿಸಲಾಯಿತು. (* ವಿವರಣೆಗೆ ಕೊನೆಟಿಪ್ಪಣಿ ನೋಡಿ)

ದಲಿತರಿಗೆ ತಮ್ಮ ಹಕ್ಕನ್ನು ಕೇಳುವಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯು ಒಂದು ವೇದಿಕೆಯಾಯಿತು. ಇದು ಮಾನಸಿಕವಾಗಿ ದೈಹಿಕವಾಗಿ ಬಲವನ್ನು ದಲಿತರಿಗೆ ತುಂಬಿತು. ಜಾತಿಯನ್ನು ಹೇಳಿಕೊಳ್ಳುವುದು ಅವಮಾನವೆಂದು ಬದುಕುತಿದ್ದ ದಲಿತರಿಗೆ ಜಾತಿಯನ್ನು ಹೇಳಿಕೊಳ್ಳಲು ಇದ್ದ ಕೀಳರಿಮೆಯನ್ನು ತೊಡೆದು ಹಾಕಿದ್ದು ದಲಿತ ಸಂಘಟನೆಗಳು ಎಂದು ಹೇಳಬಹುದು.

ಜಾತಿನಿಂದನೆ, ಅವಮಾನ, ಅತ್ಯಾಚಾರ, ಕೊಲೆ, ಸುಲಿಗೆ, ದೌರ್ಜನ್ಯ, ದಬ್ಬಾಳಿಕೆಗಳು, ದಲಿತ ಚಳುವಳಿಯಿಂದ ಬೆಳಕಿಗೆ ಬಂದವು. ಇವುಗಳ ವಿರುದ್ಧ ಹೋರಾಡಿ ಅನ್ಯಾಯಕ್ಕೆ ಒಳಗಾದ ದಲಿತರಿಗೆ ನ್ಯಾಯವನ್ನು ಒದಗಿಸುವಲ್ಲಿ ದಲಿತ ಚಳುವಳಿ ಮುಂದಾದವು. ದಲಿತ ಸಂಘಟನೆಯು ದಲಿತರ ಸಮಸ್ಯೆಯನ್ನು ಕೇಳುವಲ್ಲಿ, ಅನ್ಯಾಯವನ್ನು ಪ್ರತಿಭಟಿಸುವಲ್ಲಿ ದಲಿತ ಚಳುವಳಿಯ ಪ್ರಕ್ರಿಯೆಯಲ್ಲಿ ಸಾಗಿಬಂತು. ಜೊತೆಗೆ ಸಮಾಜದ ಅನಿಷ್ಟ ಸಂಪ್ರದಾಯಗಳ ವಿರುದ್ಧ ಹೋರಾಡಿ, ಸಮಾಜಕ್ಕೆ ಅರಿವನ್ನು ಮೂಡಿಸಿತು. ಬಾಲ್ಯವಿವಾಹ, ದೇವದಾಸಿ ಪದ್ಧತಿ, ವಿಧವಾವಿವಾಹ, ಬೆತ್ತಲೆಸೇವೆ, ಜೋಗಮ್ಮ ಮುಂತಾದವುಗಳ ವಿರುದ್ಧ ನ್ಯಾಯ ದೊರಕಿಸುವತ್ತ ಹೋರಾಡುವುದು ದಲಿತ ಚಳುವಳಿಯ ಸಾಧನೆಗಳು.

### ದಲಿತ ಚಳುವಳಿಯ ವಿಫಲತೆಗಳು

ಎರಡು ದಶಕವನ್ನೂ ಮೀರಿದ ಕರ್ನಾಟಕ ದಲಿತ ಚಳುವಳಿಯ ಹಾದಿಯಲ್ಲಿ ಹಲವಾರು ಬದಲಾವಣೆಗಳನ್ನು ಕಂಡಿದೆ. ಈ ಬದಲಾವಣೆಯಲ್ಲಿ ಸಫಲತೆ ಉಂಟು ವಿಫಲತೆಯೂ ಉಂಟು. ಅದಕ್ಕೆ ಕಾರಣವನ್ನು ನೋಡುವಾಗ ಕೆಲವು ಅಂಶಗಳು ಕಾಣಸಿಗುತ್ತವೆ. ಎಪ್ಪತ್ತರ ದಶಕದಲ್ಲಿ ಹುಟ್ಟಿದ ಈ ಚಳುವಳಿ ತನ್ನ ಬೆಳವಣಿಗೆಯಲ್ಲಿಯೇ ಭಿನ್ನತೆಯನ್ನು ಕಂಡಿದೆ. ಅದಕ್ಕೆ ಎರಡು ಮುಖ್ಯ ಕಾರಣಗಳನ್ನು ನೋಡಬಹುದು. ಮೊದಲನೆಯದು ಚಳುವಳಿಯ ನಾಯಕರನ್ನು/ಕಾರ್ಯಕರ್ತರನ್ನು ಕೇಂದ್ರವಾಗಿಟ್ಟು ನೋಡುವುದು. ಎರಡನೆಯದು ರಾಜಕೀಯ, ಸಾಮಾಜಿಕ, ಆರ್ಥಿಕ ಹಿನ್ನೆಲೆಯ ದೃಷ್ಟಿಯಿಂದ ದಲಿತರನ್ನು, ಅವರು ಬದುಕುವ ಸಮಾಜವನ್ನು ನೋಡುವುದು. ಇದಲ್ಲದೆ ದಲಿತ ವಿದ್ಯಾವಂತ ಯುವಕರು ರೂಢಿಸಿಕೊಂಡ ಕೆಲವು ಸಮಾಜದ ಬಗೆಗಿನ ಪ್ರತಿಕ್ರಿಯೆಗಳು ಅಭಿಪ್ರಾಯಗಳು ಎಂದು ಹೇಳಬಹುದು. ದಲಿತ ಸಂಘಟನೆಯ ಕಾರ್ಯಕರ್ತರಲ್ಲಿ/ದಲಿತ ವಿದ್ಯಾವಂತ ಯುವಕರಲ್ಲಿ ಜಾತೀಯ ಅಂದಾಭಿಮಾನದಂತೆ ಅದಕ್ಕೆ ವಿರುದ್ಧವಾದ ಅನಾವಶ್ಯಕ, ಅನಾರೋಗ್ಯಕರ ಸವರ್ಣೀಯರ ದ್ವೇಷ ಕಂಡುಬರುತ್ತದೆ. ದಲಿತ ಚಳುವಳಿಕಾರರಿಗೆ ಶತ್ರುಗಳು ಯಾರು? ಮಿತ್ರರು ಯಾರು? ಎಂಬುದರ ಗುರ್ತಿಸುವಿಕೆಯಲ್ಲಿ ಸಮಸ್ಯೆ ಕಂಡುಬರುತ್ತದೆ. ಶ್ರೇಣೀಕೃತ ವ್ಯವಸ್ಥೆಯ ಬ್ರಾಹ್ಮಣೇತರರೊಂದಿಗೆ ಸೇರಿ ನಡೆದ ಶತ್ರುವಿನ ನಿರ್ಣಯದಲ್ಲಿ ಬ್ರಾಹ್ಮಣನೇ ಕಟಿಬದ್ಧ ದ್ವೇಷಿಯಾಗಿ ಗುರ್ತಿಸಿಕೊಂಡಿದ್ದಾರೆ. ಬ್ರಾಹ್ಮಣೇತರ ಬಲಾಢ್ಯ ಸಮುದಾಯಗಳು ಬ್ರಾಹ್ಮಣರನ್ನು ಅವರ ಸಾಂಸ್ಕೃತಿಕ ದಬ್ಬಾಳಿಕೆಯನ್ನು ದೂಷಿಸುವ ದಾರಿಯಲ್ಲಿ ದಲಿತರೂ ನಡೆದರು. ಕೃಷಿ ಬದುಕಲ್ಲಿನ ಭೂಮಾಲೀಕರು, ಆಧುನಿಕತೆಯ ಹಿಡಿತವನ್ನು ಹೊಂದಿರುವ ಬಂಡವಾಳಗಾರರ ನೇರ ಶೋಷಣೆಗಳು ಇವರಿಗೆ ಪ್ರಮುಖವಾಗಲಿಲ್ಲ. ಹಾಗೆಯೇ ದಲಿತರು ಬ್ರಾಹ್ಮಣರ ವಿರುದ್ಧ ಹೋರಾಟಕ್ಕೆ ಸ್ಪಂದಿಸಿದಂತೆ ದಲಿತರಿಗೆ ಭೂಮಾಲೀಕರ ವಿರುದ್ಧ ಬಂಡವಾಳಶಾಹಿಗಳ ವಿರುದ್ಧ ಹೋರಾಡಲು ಸಹಕರಿಸಲಿಲ್ಲ. ದಲಿತರಿಗೆ ಭೂಮಾಲೀಕರನ್ನು ಎದುರಿಸಲು ಸಹಕಾರ ಸಾಕಾಗಲಿಲ್ಲ.

ಜಾತೀಯ/ಸಮುದಾಯಗಳ ಆಂತರಿಕ ಬಿಕ್ಕಟ್ಟು ಮತ್ತು ಸಂಕಷ್ಟಗಳು ಹಾಗೂ ಅವುಗಳ ಅರಿವು ದಲಿತ ಚಳುವಳಿಯಲ್ಲಿ ಇದ್ದ ಯುವ ದಲಿತರಲ್ಲಿ ಅಂದಾಭಿಮಾನವನ್ನು ಹುಟ್ಟಿಸಿದವು. ಜೊತೆಗೆ ದಲಿತೇತರರೊಂದಿಗೆ ಇದ್ದ ಅನಾವಶ್ಯಕ ದ್ವೇಷದ ವರ್ತನೆಯು ಅನಾರೋಗ್ಯಕರವಾಗಿತ್ತು. ಇದನ್ನು ದೌರ್ಬಲ್ಯವೆಂದರೆ ಸರಳೀಕರಿಸಿದಂತಾಗುತ್ತದೆ. ಸಮಸ್ಯೆಗಳನ್ನು ಒಳಗೊಂಡ ದಲಿತರ ಮೇಲೆ ಸವರ್ಣೀಯರು ಎಸಗುವ ಶೋಷಣೆಗಳು ಈ ತರಹದ ಮನೋಸ್ಥಿತಿಗೆ ಕಾರಣವಾಗಿರುತ್ತವೆ. ಆದ್ದರಿಂದ ತಮ್ಮ ಶೋಷಣೆಗೆ ರಾಜಕಾರಣದ, ಸಮಾಜದ ಶೋಷಕ ಸಮುದಾಯಗಳ ಬಂಡಾಯ ಚಿಂತಕರ ಪ್ರತಿಕ್ರಿಯೆಗಳು, ಅವರು ಬದುಕುವ ವಾಸ್ತವಿಕತೆಗೆ ಅವರು ಆಡುವ ಮಾತುಗಳು ಭಿನ್ನವಾಗಿರುವುದು ಕಂಡು ಬರುತ್ತದೆ. ಈ ಸವರ್ಣೀಯರು ಆಡುವ ಮಾತುಗಳು, ಮಾಡುವ ವರ್ತನೆಯು ದಲಿತರಿಗೆ ಸವರ್ಣೀಯರ ಬಗ್ಗೆ ಅನಾವಶ್ಯಕ ದ್ವೇಷಕ್ಕೆ ಗುರಿಯಾಗಿದೆ. ಮಾತಲ್ಲಿ ಮುತ್ತು ಸುರಿಸಿ ಮಾಡುವ ತಮ್ಮ ಅನಾಚಾರದ ಕೆಲಸವು ಹೆಚ್ಚಾಗುತ್ತಿರುವುದನ್ನು ತಮ್ಮ ಭಾವನೆಯಲ್ಲಿ ತುಂಬಿಕೊಳ್ಳುವುದು ಕಾರಣವೆಂದು ಹೇಳಬಹುದು. ಜೊತೆಗೆ ದಲಿತ ಚಳುವಳಿಯ ಕಾರ್ಯಕರ್ತರಲ್ಲಿ ಏಕಾಭಿಪ್ರಾಯದ ನಿರ್ಣಯವಿಲ್ಲದೆ ಒಡಕು ಉಂಟಾಗಿರುವುದು ವಿಫಲತೆಯಲ್ಲಿ ಮುಖ್ಯವಾದದ್ದು. ನಾಯಕತ್ವಕ್ಕಾಗಿ ಪೈಪೋಟಿ, ರಾಜಕೀಯ ಅಧಿಕಾರದ ಲಾಲಸೆ, ಕೆಲವು ಅವಕಾಶ ಆಕರ್ಷಣೆಗಳು ದಲಿತ ನಾಯಕರ/ಕಾರ್ಯಕರ್ತರ ಗಮನ ಸೆಳೆದವು. ಸಮುದಾಯಗಳ ಚಿಂತನೆಯನ್ನು, ಸಮಸ್ಯೆಗಳನ್ನು, ಅವುಗಳ ಪರಿಹಾರಗಳನ್ನು ಹೊತ್ತ ನಾಯಕರ / ಕಾರ್ಯಕರ್ತರ ಗಮನವು ತಮ್ಮ ಕುಟುಂಬಗಳ ಒಳಿತಿಗೆ ಮಾತ್ರ ಸೀಮಿತವಾದವು. ಕರ್ನಾಟಕ ದಲಿತ ಸಂಘರ್ಷ ಸಮಿತಿ (ಸಂಚಾಲಕ) ಇದ್ದದ್ದು ನಂತರದಲ್ಲಿ ದ.ಸಂ.ಸ. (ಸಂಯೋಜಕ), ಎಸ್.ಎಸ್.ಡಿ., ಪಿ.ವಿ.ಸಿ. ಮುಂತಾದ ದಲಿತ ಸಮುದಾಯಗಳ ಸಂಘಟನೆಗಳು ಉಗಮಗೊಂಡವು.

ದಲಿತ ಚಳುವಳಿಯು ಸಾಮಾನ್ಯವಾಗಿ ಹಿರಿಯ ತಲೆಮಾರನ್ನು ಒಳಗೊಳ್ಳಲಿಲ್ಲ. ಮಹಿಳೆಯರನ್ನು ಒಳಗೊಳ್ಳಲಿಲ್ಲ. ದಲಿತ ನೌಕರರ ಒಕ್ಕೂಟವು ಗ್ರಾಮೀಣ ದಲಿತರ ಮೇಲೆ ಅನಾಸಕ್ತಿಯನ್ನು ಉಂಟುಮಾಡಿತು. ಇದು ದಲಿತ ನೌಕರರ ಮೇಲೆ ಮಾತ್ರ ಆಸಕ್ತಿಯನ್ನು ಹೊಂದಿತ್ತು. ಇದು ಒಂದು ಹಂತದ ತನಕ ಹಕ್ಕನ್ನು ಮಾತ್ರ ಕೇಳುವಲ್ಲಿ ಯಶಸ್ವಿಯಾಯಿತು. ಇವರಲ್ಲಿ ಅವರವರ ಸಮಸ್ಯೆಗಳೇ ಭಾರವಾದವು. ದಲಿತರು ಅನುಭವಿಸುತ್ತಿರುವ ಕ್ರೂರ ಸಮಸ್ಯೆಗಳ ಕಡೆಗೆ ದಲಿತ ನೌಕರರ ಒಕ್ಕೂಟವು ತಮ್ಮ ಗಮನವನ್ನು ಹರಿಸಲಿಲ್ಲ.

''ಎಲ್ಲಿ ಶೋಷಣೆ ಕೇಂದ್ರೀಕರಿಸಲ್ಪಡುವುದೋ ಅಲ್ಲಿ ಹೆಚ್ಚು ಕ್ರಾಂತಿಕಾರಿ ಹೋರಾಟಗಳು ಭುಗಿಲೇಳುವವು. ಎಲ್ಲಿ ಕ್ರಾಂತಿಕಾರಿ ವರ್ಗ ಹೋರಾಟಗಳು ಹುರಿಗೊಳ್ಳುವುದೋ - ಅಲ್ಲಿಯೇ (N.G.O.S,) (VOS) ಗಳು ಜಾತಿ, ಭಾಷೆ, ಲಿಂಗಭೇದದ ಹೆಸರಿನಲ್ಲಿ ಜನ್ಮ ತಾಳಿದವು''.[೭] ಕರ್ನಾಟಕ ದಲಿತ ಸಂಘ, ರೈತ ಸಂಘಗಳ ಪತನ ಯಾರಿಂದ ಎಂಬುದನ್ನು ಮಾನಸಯ್ಯನವರು ವಿವರಿಸಿದ್ದಾರೆ. ಇವು ಕ್ರಾಂತಿಕಾರಿ ಶಕ್ತಿಯನ್ನು ಹತ್ತಿಕ್ಕುವಂತಾಗಿರುತ್ತವೆ. ''ಕರ್ನಾಟಕದಲ್ಲಿ ಕಳೆದ ಎರಡು ದಶಕಗಳಲ್ಲಿ ದಲಿತ ಹಾಗೂ ರೈತ ಸಂಘಟನೆಗಳು ಒಂದು ಸಮೂಹ ಚಳುವಳಿಯಾಗಿ ಅತಿ ದೊಡ್ಡ ಗಾತ್ರದಲ್ಲಿ ಬೆಳೆದು ಬಂದವು. ಈಗಾಗಲೇ ಹೇಳಿದಂತೆ ಇವು ಕ್ರಾಂತಿಕಾರಿ ತಿರುವು ಪಡೆಯದಂತೆ ತಡೆಯುವಲ್ಲಿ, ಒಂದೆಡೆ ತಡೆದು ಮತ್ತೊಂದೆಡೆ ಜನ ಸಮೂಹಶಕ್ತಿಗಳಾಗಿರುವುದೇ ಅಪಾಯವೆಂದು ಮನಗಂಡು ಆಳುವ ವರ್ಗ, ಇವುಗಳೊಳಗೆ ವಾಲೆಂಟರಿ ವಿಚಾರಧಾರೆಯನ್ನು ನೇರವಾಗಿ ಪ್ರಾಯೋಗಿಸುವುದರ ಮೂಲಕ ಕನಿಷ್ಠ ಪ್ರಜಾಸತ್ತಾತ್ಮಕ ಆಶಯಗಳನ್ನು ಹೊಂದಿ ಅವಿಭಕ್ತ ದಸಂಸವನ್ನು ಒಡೆದು ಹನ್ನೆರಡು ಚೂರುಗಳನ್ನಾಗಿ ಸೀಳಿ ಹಾಕಿತು''.[೮] ಮಾನಸಯ್ಯನವರು ಈ

ಹೊತ್ತಿನ ಜಾಗತೀಕರಣದ ಬದಲಾದ ವಿದ್ಯಮಾನಗಳಿಗೆ ದಲಿತ ಸಮುದಾಯಗಳು ಸ್ಪಂದಿಸಲಾಗದ್ದನ್ನು ವಿವರಿಸಿದ್ದಾರೆ. ಭಾರತೀಯ ತಾಂತ್ರಿಕತೆಯ ಸೌಲಭ್ಯಗಳಿಂದ ದೂರ ಇದ್ದ ದಲಿತ ಸಮುದಾಯಗಳು ಹೊಸ ತಾಂತ್ರಿಕ, ವೈಜ್ಞಾನಿಕ ಜಗತ್ತಿನ ಅರಿವಿನಿಂದಲೂ ದೂರ ಉಳಿದರು. ಸಮುದಾಯಗಳ ಸಂಘಟನೆಗಳನ್ನು ಒಡೆಯುವ ಕೆಲಸವನ್ನು ಆಳುವ ವರ್ಗಗಳು ಮಾಡಿದವು.

## ದಲಿತ ಚಳುವಳಿ ಏನಾಗುತ್ತಾ ಬಂತು

ಸಾಮಾಜಿಕ ಅಗತ್ಯಕ್ಕೆ ತಕ್ಕಂತೆ ದಲಿತ ಚಳುವಳಿ ಉಗಮಗೊಂಡಿತು. ದಲಿತ ಚಳುವಳಿಯ ಪ್ರಾರಂಭದಲ್ಲಿದ್ದ ಹುರುಪು ಮತ್ತು ಬೆಳವಣಿಗೆಯು ನಂತರದ ಕಾಲದಲ್ಲಿ ಹಾಗೆಯೇ ಮುಂದುವರೆಯಲಿಲ್ಲ. ಸಾಮಾಜಿಕ ಅರಿವನ್ನು ತಮ್ಮಲ್ಲಿ ತುಂಬಿಕೊಳ್ಳುತ್ತಾ, ಅದನ್ನು ಜನತೆಯತ್ತ ಮೂಡಿಸಲು ಪ್ರಯತ್ನವನ್ನು ಮಾಡಿದವು. ತಮ್ಮ ಜನಾಂಗಕ್ಕೆ ಆಗುತ್ತಿರುವ ಶೋಷಣೆಯನ್ನು ಶೋಷಣೆ ಎಂದು ತಿಳಿಸುವ ಕೆಲಸವು ನಡೆಯಿತು. ಇದಕ್ಕೆ ಒಂದು ರೂಪ ಬಂದದ್ದು ದಲಿತ ಚಳುವಳಿಯ ಪ್ರಾರಂಭದ ಬೆಳವಣಿಗೆಯಲ್ಲಿ.

ಪ್ರಾರಂಭದಲ್ಲಿದ್ದ ದಲಿತ ಸಂಘರ್ಷ ಸಮಿತಿಯು ನಂತರದ ದಿನಮಾನಗಳಲ್ಲಿ ಒಡೆದು ಛಿದ್ರವಾಗಿ ಪ್ರತ್ಯೇಕ ಸಂಘಟನೆಗಳಾದವು. ''೧೯೮೫ರವರೆಗೂ ಸಂಸದೀಯ ಮಾರ್ಗವನ್ನು ವಿರೋಧಿಸುತ್ತ ದ.ಸಂ.ಸ. ಒಮ್ಮೆಲೇ ಸಂಸದೀಯ ಕೊಚ್ಚೆಗೆ ಬಿದ್ದಿತು. ಕೆಳ ಹಂತದ ಕಾರ್ಯಕರ್ತರಿಂದ ಈ ಬಗ್ಗೆ ವಿರೋಧ ಬಂತು. ಅದನ್ನು ಅತ್ಯಂತ ದಬ್ಬಾಳಿಕೆಯಿಂದ ದಮನಿಸಲಾಯಿತು. ಇದರಿಂದ ದ.ಸಂ.ಸ. ಎರಡು ಹೋಳಾಗಿ ಒಡೆದುಹೋಯಿತು. ಸಂಸದೀಯ ಮಾರ್ಗವನ್ನು ವಿರೋಧಿಸಿದ ಬಣವು 'ಸಂಯೋಜಕ ಸಮಿತಿ' ಎಂದು ತನ್ನನ್ನು ಗುರ್ತಿಸಿಕೊಂಡು ಚಟುವಟಿಕೆಗಳನ್ನು ಮುಂದುವರೆಸಿತು. ಇದರ ಮುಂಚೂಣಿಯಲ್ಲಿದ್ದ ಆರ್.ಮಾನಸಯ್ಯ(ರಾಯಚೂರು), ಎಸ್.ವೆಂಕಟರಾಮಪ್ಪ(ಕೋಲಾರ), ಎಂ.ಶಿವಣ್ಣಕಂದೇಗಾಲ (ಮೈಸೂರು) ಮುಂತಾದವರಿದ್ದರು''[೯]. ತಮ್ಮ ಹೋರಾಟಾತ್ಮಕ ಹಕ್ಕನ್ನು ಪಡೆಯುವ ಸಂಸದೀಯ ವ್ಯವಸ್ಥೆಗೆ ತುಂಬಿಕೊಂಡಾಗ ಕೆಲವು ಸ್ವಾರ್ಥಗಳು ವ್ಯವಸ್ಥೆಯೊಂದಿಗೆ ಕೈ ಜೋಡಿಸುವ ಕೆಲಸವನ್ನು ಮಾಡಿದವು. ಪರಿಣಾಮವಾಗಿ ಸಂಘಟನೆಯಲ್ಲಿ ಭಿನ್ನ ಮಃನಸ್ಥಿತಿ ಶುರುವಾಯಿತು. ರಾಜಕೀಯ ಪ್ರವೇಶದ ಪ್ರಭಾವವು ಅನೇಕ ಆಸೆ ಆಮಿಷಗಳಿಗೆ ಗುರಿ ಮಾಡಿತು. ಇಲ್ಲಿ ಸಂಸದೀಯ ಮಾರ್ಗ ಹಿಡಿದ ದಲಿತ ಚಳುವಳಿಯ ನಾಯಕರಲ್ಲಿ ಯಜಮಾನಿಕೆಯ ಸ್ವಭಾವ ಮಿತಿಮೀರಿರುವುದನ್ನು ನೋಡುತ್ತೇವೆ.

ದಲಿತ ಸಂಘರ್ಷ ಸಮಿತಿಯು ಸಂಚಾಲಕ ಸಂಯೋಜಕ ಎಂದಾಗಿ ನಂತರದ ದಿನಗಳಲ್ಲಿ ಈ ಎರಡು ದಲಿತ ಸಂಘಟನೆಗಳಲ್ಲಿಯೇ ವೈಯಕ್ತಿಕ ಭಿನ್ನಾಭಿಪ್ರಾಯಗಳು ಬೆಳೆದುಬಂದವು. ಸಂಚಾಲಕ ದಸಂಸದವರು ನಮ್ಮದೇ ನಿಜವಾದ ದಲಿತ ಸಂಘರ್ಷ ಸಮಿತಿ ಎಂದರೆ; ಸಂಯೋಜಕ ದಸಂಸದವರು ನಮ್ಮದು ನಿಜವಾದ ದಲಿತ ಸಂಘರ್ಷ ಸಮಿತಿ ಎಂದು ಹೇಳುತ್ತಾ ಬಂದರು. ಇದಕ್ಕೆ ಅವರವರಿಗೆ ತಕ್ಕಂತೆ ಸಮರ್ಥನೀಯ ಮಾತುಗಳನ್ನು ಕೇಳುವ ಪರಿಸ್ಥಿತಿ ದಲಿತರಿಗೆ ಬಂತು. ಹೀಗೆ ಒಡಕಾದ ಸಂಘಟನೆಗಳಲ್ಲಿ ಪರಸ್ಪರ ವಿರೋಧದ ಮಾತುಗಳು ಎದ್ದವು. ಒಡೆದ ಸಂಘಟನೆಗಳು ತಮ್ಮ ತಮ್ಮ ನಿಯಮಗಳಿಗೆ ತಕ್ಕಂತೆ ಒಂದೊಂದು ಪ್ರತ್ಯೇಕ ಸಂಘಟನೆಗಳಾಗಿ ಬೆಳೆದವು. ಅವುಗಳಲ್ಲಿ ಸಮತಾ ಸೈನಿಕದಳ. ಪ್ರಜಾ ವಿಮೋಚನರಂಗ, (ಈಗ 'ಜನಾಂದೋಲನ'ವಾಗಿ ಬೆಳೆದಿದೆ) ಬಹುತೇಕ ಪ್ರತಿ ಊರಿನಲ್ಲೂ ಇರುವ ಅಂಬೇಡ್ಕರ

ಸಂಘಗಳು, ದಲಿತ ಪ್ಯಾಂಥರ್ಸ್ ಸಂಘಟನೆಗಳು ದಲಿತ ಚಳುವಳಿಯ ಸಂಘಟನೆಗಳಾಗಿ ಬೆಳೆದವು. ಇದರೊಂದಿಗೆ ದಲಿತ ಸಮುದಾಯಗಳ ಸಂಘಟನೆಗಳು ಹುಟ್ಟಿಕೊಂಡವು ಮತ್ತು ಹುಟ್ಟಿಕೊಳ್ಳುತ್ತಲಿವೆ. ಅವುಗಳಲ್ಲಿ ಮಾದಿಗ ದಂಡೋರ ಸಂಘ, ಮಾದಿಗ ಮೀಸಲಾತಿ ಹೋರಾಟ ಸಮಿತಿ, ಡೊಂಬರ ಸಂಘ, ಬೋವಿಗಳ ಸಂಘ, ಕರ್ಮಚಾರಿಗಳ ಸಂಘ, ಲಂಬಾಣಿಗಳ ಸಂಘ ಹೀಗೆ ಪ್ರತ್ಯೇಕವಾದ ಸಂಘಟನೆಗಳಾಗುತ್ತಿವೆ.

"ದ.ಸಂ.ಸ. ಚುನಾವಣೆಗೆ ಇಳಿದ ನಂತರ ಅದೊಂದು ಹೋರಾಟದ ಸಂಘಟನೆಯಾಗಿ ಉಳಿಯಲಿಲ್ಲ. ರಾಜಕೀಯ ಪಕ್ಷಗಳ ಬಾಲಂಗೋಚಿಯಾಗಿ ಪರಿಣಮಿಸಿತು. ಇದಕ್ಕೂ ಮೊದಲು, ಚಳುವಳಿಯ ಮೇಲೆ, ದಲಿತರ ವಿಮೋಚನೆ ಮೇಲೆ, ನಂಬಿಕೆ ಇಟ್ಟು ಎಂಥ ತ್ಯಾಗಕ್ಕೂ ಸಿದ್ಧರಿದ್ದ ಅನೇಕರು ನಿರಾಶೆಯಿಂದ ಮೂಲೆ ಸೇರಿದರು. ೧೯೮೭ರ ಜಿಲ್ಲಾ ಪರಿಷತ್, ಮಂಡಲ ಪಂಚಾಯತ್ ಚುನಾವಣೆಯಲ್ಲಿ ಆಯಾ ಮಟ್ಟದ ಕಾರ್ಯಕರ್ತರು ಚುನಾವಣೆಗೆ ನಿಂತು ಕೈತೊಳೆದುಕೊಂಡರು"[೧೦]. ದಲಿತ ಚಳುವಳಿಯ ಮೂಲ ಆಶಯವೇನು? ಅದರ ಗುರಿಯನ್ನು ನಾವು ತಲುಪಿದೆವಾ? ಎಂಬುದನ್ನು ದಲಿತ ಚಳುವಳಿಯ ನಾಯಕರು ಮರೆತರು. ಇವರು ತಮ್ಮ ಅಹವಾಲುಗಳಿಗೆ ಪುರಸ್ಕರಿಸುವ ಆಳುವ ವರ್ಗದೊಂದಿಗೆ ಸೇರಿಕೊಂಡರು. ಸಮುದಾಯದ ಫಲಾಪೇಕ್ಷೆಯನ್ನೂ, ತಮ್ಮ ಸಂಘಟನೆಯ ಸೈದ್ಧಾಂತಿಕತೆಯನ್ನೂ ದೂರ ಸರಿಸಿದರು. ದಲಿತೇತರ ಸಮುದಾಯಗಳ ವ್ಯಕ್ತಿಗಳಂತೆ ದಲಿತ ನಾಯಕರೂ ಆದರು. ಆಳುವ ವರ್ಗ ಸಂಘಟನೆಯನ್ನೂ ಈ ರೀತಿಯಾಗಿ ವ್ಯವಸ್ಥಿತವಾಗಿ ಒಡೆಯುತ್ತಿದೆ ಎಂಬುದನ್ನು ಮರೆತರು. ಈ ದಲಿತ ನಾಯಕರು ತಮ್ಮ ಸಂಘಟನೆಯ ಇಷ್ಟಾನಿಷ್ಟಗಳಿಗೆ ಬದ್ಧವಾದ ಸಂಘಟನೆಯನ್ನು ಕಟ್ಟಲಿಲ್ಲ, ಹಾಗೆಯೇ ರಾಜಕೀಯ ಪಕ್ಷವನ್ನೂ ಕಟ್ಟಲಿಲ್ಲ. ಬದಲಾಗಿ ಆಗಲೇ ಬೇರೂರಿರುವ ರಾಜಕೀಯ ಪಕ್ಷದೊಂದಿಗೆ ಸೇರಿಕೊಂಡರು.

ಹಾಗೆಯೇ ಇಂದು ಜಾತೀಯ ಸಂಘಟನೆಗಳು ಏಕೆ ಹುಟ್ಟುತ್ತಲಿವೆ? ಅವುಗಳ ಅಗತ್ಯವೇನು? ಎಂಬುದರ ಚರ್ಚೆ ಅಗತ್ಯ. ಈ ಹೊತ್ತಿನ ಬೌದ್ಧಿಕ ಚಿಂತನೆಯ ಚರ್ಚೆಯಲ್ಲಿ; ಪ್ರಜಾಪ್ರಭುತ್ವದ, ಸಮಾನತೆಯ, ಜಾತಿ ವಿನಾಶದ ದೃಷ್ಟಿಕೋನದ ಚರ್ಚೆಗಳು ನಡೆಯುತ್ತಿವೆ. ಈ ಎಲ್ಲಾ ಹಿನ್ನೆಲೆಯನ್ನು ಇಟ್ಟುಕೊಂಡು ಜಾತಿ ಸಂಘಟನೆಗಳು ಭದ್ರಗೊಳ್ಳುತ್ತಿರುವುದರಿಂದ ಚರ್ಚೆಯನ್ನು ತಾತ್ವಿಕ ಚರ್ಚೆಯಲ್ಲಿಟ್ಟು ನೋಡಿದರೆ ಅದಕ್ಕೊಂದು ಅರ್ಥ ದೊರೆಯಬಹುದು. ಇಂದು ರಾಜ್ಯದಲ್ಲಿ ನೆಡೆಯುತ್ತಿರುವ ಜಾತಿಕೇಂದ್ರಿತ ರಾಜಕೀಯವು ಪ್ರಬಲ ಜಾತಿಯ ಸಮುದಾಯಗಳನ್ನೂ ಒಳಗೊಂಡಿರುವಂತಹದು. ಅವರವರ ಸಮುದಾಯಗಳ ಬಹುಮತಗಳ ಆಳ್ವಿಕೆಯಲ್ಲಿ ಬಹುತೇಕ ನಡೆಯುತ್ತಿದೆ. ಇದು ಸಾಮಾನ್ಯವಾಗಿ ಶಕ್ತಿರಾಜಕಾರಣವನ್ನು ಒಳಗೊಂಡಿರುವಂತಹದು. ಇದು ರಾಜಕೀಯದಲ್ಲಿ ಮಾತ್ರವಲ್ಲ ಅಧಿಕಾರದಶಕ್ತಿ ಜಾತಿರಾಜಕಾರಣದಲ್ಲೂ ಕೆಲಸ ಮಾಡುತ್ತಿದೆ.

ಜಾತಿ ಸಂಘಟನೆಯ ಪ್ರಬಲತೆಗೆ ಕೆಲವು ಕಾರಣಗಳನ್ನು ಕೊಡಬಹುದು. ಅವುಗಳಲ್ಲಿ, ಜಾತಿಗಳು ತಮ್ಮ ಜಾತೀಯ ರಾಜಕೀಯ ನಾಯಕನನ್ನು ಬಯಸುತ್ತವೆ. ಹಾಗೂ ಧಾರ್ಮಿಕ ನಾಯಕನನ್ನು ಬಯಸುತ್ತವೆ. ಅದರ ಅಗತ್ಯವೇ ಎಂಬುದೂ ಪ್ರಶ್ನೆಯಾಗಿ ಹುಟ್ಟುತ್ತದೆ. ಅಗತ್ಯವೆಂದರೆ ಹಲವು ಸಮುದಾಯಗಳನ್ನು ಒಳಗೊಂಡ ಆಡಳಿತದಲ್ಲಿ, ರಾಜಕೀಯದಲ್ಲಿ ತಮ್ಮ ಸಮುದಾಯಗಳ ಸ್ಥಾನ ಎಂಥದ್ದು ಎಂಬುದು ಸಮುದಾಯದಲ್ಲೇ ಹುಟ್ಟುತ್ತದೆ. ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಮೀಸಲಾತಿಯಾಗಿ ಹಂಚಿ ಹೋಗಿರುವ ಜಾತೀಯ ಸಮುದಾಯಗಳಿವೆ. ಅವುಗಳು

ತಮ್ಮ ಸಮುದಾಯಗಳನ್ನು ಭದ್ರಪಡಿಸುವುದೇ ಆಗಿರುತ್ತದೆ. ಒಂದಾಗಿ ಇದ್ದ ದಲಿತ ಸಂಘಟನೆಯಲ್ಲಿನ ಸಮುದಾಯಗಳು ಶಿಕ್ಷಣ ಪಡೆದಂತೆ; ಪ್ರಾಪಂಚಿಕ ಜ್ಞಾನ ತಿಳಿದಂತೆ ಒಟ್ಟಾಗಿದ್ದ ಸಮುದಾಯಗಳಲ್ಲಿ ತಮ್ಮ ಸ್ಥಾನ ಏನು ಎಂದು ದಲಿತ ಸಂಘಟನೆಯ ಮುಂಚೂಣಿಯಲ್ಲಿದ್ದ ಹೊಲೆಯ, ಮಾದಿಗ, ಲಂಬಾಣಿ, ಬೋವಿ, ನಾಯಕ ಮುಂತಾದ ಜನಾಂಗಗಳು ನಾವು ಪಡೆಯುತ್ತಿರುವ ಸರ್ಕಾರದ ಸೌಲಭ್ಯ ಎಷ್ಟು? ಎಂಬ ಪ್ರಶ್ನೆಯನ್ನು ಹಾಕಿಕೊಂಡವು. ನಾವು ಪ್ರತೇಕ ಸಂಘಟನೆಯನ್ನು ಏಕೆ ಕಟ್ಟಬಾರದು; ನಮ್ಮ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಸಮಸ್ಯೆಯನ್ನು ಸರ್ಕಾರಕ್ಕೆ ಏಕೆ ಇಡಬಾರದು; ನಮ್ಮ ಸಮಸ್ಯೆಯ ಬಗ್ಗೆ ನಮ್ಮ ಜನರಿಗೆ ಏಕೆ ಪುನರ್‌ವಿಮರ್ಶೆ ಮಾಡಿಕೊಡಬಾರದು ಎಂಬುದರ ತಾತ್ವಿಕ ಅರಿವಿನಿಂದ ಒಂದೇ ಸಂಘಟನೆಯಲ್ಲಿ ಇದ್ದವರು ಒಡೆದರು. ತಮ್ಮ ತಮ್ಮ ಸಂಸ್ಕೃತಿಯನ್ನು ಬಿಂಬಿಸುವತ್ತಾ, ಅವುಗಳ ಚರಿತ್ರೆಯನ್ನು ಹುಡುಕುವತ್ತಾ ಸಮಾಜದಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಾನಮಾನಗಳಲ್ಲಿ ತಮ್ಮ ಜಾತಿಯ ಸ್ಥಾನ ಎಲ್ಲಿದೆ ಎಂಬ ಪ್ರಶ್ನೆಯನ್ನು ಮಾಡಿಕೊಂಡರು. ಅಲ್ಲದೆ ಅವರು ಪ್ರತ್ಯೇಕ ಸಂಘಟನೆಗಳನ್ನು ಹುಟ್ಟುಹಾಕಿದರು. ಇದು ಒಂದು ಕಾರಣ.

ಮತ್ತೊಂದು ಕಾರಣವು ಸಂಪೂರ್ಣವಾಗಿ ಸಮುದಾಯ ಅಥವಾ ಜಾತಿ ಕೇಂದ್ರದಲ್ಲಿ ಕಂಡುಬರುತ್ತದೆ. ಇದರಲ್ಲಿ ಶಕ್ತಿ ರಾಜಕಾರಣದ ಆಧಾರದ ಪ್ರಶ್ನೆ ಮುಖ್ಯವಾದದ್ದು. ದಲಿತ ಸಂಘಟನೆಯಿಂದ ಹೊರ ಬಂದ ದಲಿತ ನಾಯಕರು; ಮತ್ತು ಸೇರ್ಪಡೆಯಾದ ನವನಾಯಕರು ಕಟ್ಟಿಕೊಂಡಿರುವಂತಹದು. ಶಕ್ತಿ ರಾಜಕಾರಣದ ಜೊತೆಯಲ್ಲಿ ಈ ಹಿಂದಿನಿಂದಲೂ ಶಾಮೀಲಾಗಿ ನಡೆಸುತ್ತಿರುವುದನ್ನು ಪ್ರಶ್ನೆ ಮಾಡಿ ದಲಿತ ಸಂಘಟನೆಯ ಮೂಲ ಸ್ವರೂಪದ ತಾತ್ವಿಕತೆಯನ್ನು ಚರ್ಚೆಗೆ ಒಳಪಡಿಸಲಾಗುತ್ತಿದೆ. ಅಂದರೆ ಆಳುವ ಪಕ್ಷಗಳ ವಿರುದ್ಧವು ಒಂದು ಕಡೆಯಾದರೆ; ಮತ್ತೊಂದು ಕಡೆಯಲ್ಲಿ ಅದರಲ್ಲಿ ಸೇರಿರುವ ತಮ್ಮ ದಲಿತ ನಾಯಕರ ಪ್ರಶ್ನೆಯನ್ನು ಸೇರಿಸಿಕೊಳ್ಳುತ್ತಾರೆ. "ಈ ನಾಯಕರಲ್ಲಿ ಬಿ.ಕೃಷ್ಣಪ್ಪ, ಅಂಬೇಡ್ಕರ ಸಾಮಾಜಿಕ ಚಿಂತನೆಗೆ ಹತ್ತಿರವಾದರೆ ದೇವನೂರ ಮಹಾದೇವ ಬರೀ ಚುನಾವಣಾ ರಾಜಕೀಯ ಚಿಂತನೆಗೆ ಒಲಿದರು. ಸಿದ್ದಲಿಂಗಯ್ಯ ಅಂಬೇಡ್ಕರ್ ಚಿಂತನೆಗಳಲ್ಲಿ ಅನುಕೂಲ ಒದಗಿಸಿಕೊಡುವ ಯೋಚನೆಗಳಿಗೆ ಬೆಂಬಲಿಸಿದರು. ಈ ರೀತಿಯ ಅನುಕೂಲ ರಾಜಕಾರಣದಿಂದ ಚಳುವಳಿಯ ಸಮರಶೀಲತೆ ನಾಯಕರ ಹಿಂದೆ ಅಡಗಿ ಕೂತಿತು. ದೇವನೂರು ಮಹಾದೇವ, ಬಿ.ಕೃಷ್ಣಪ್ಪ, ಸಿದ್ದಲಿಂಗಯ್ಯ ಒಂದು ಆಲೋಚನೆಗಳಿಗೆ ಸಿದ್ಧಾಂತಗಳಿಗೆ ಒಪ್ಪಿಕೊಂಡವರಂತೆ ಮೇಲ್ನೋಟಕ್ಕೆ ತೋರಿದರೂ ವ್ಯವಸ್ಥೆಯ ಒಳಗೆ ಮಾತು ಹೋಗಲು ಕಾರಣವೇನು? ಇವರ ಆಸ್ತಿಪಾಸ್ತಿ ಆದಾಯಗಳು ಮಧ್ಯಮ ವರ್ಗದ ಜೀವನಕ್ಕೆ ತಳ್ಳಿದವು. ಇವರ ಚಿಂತನೆ ಇನ್ನಷ್ಟು ಸ್ವಾರ್ಥ ನಿರ್ಧಾರಗಳಿಗೆ ಕಾರಣವಾಗಿವೆ. ಆಳುವ ವರ್ಗದ ತೊಟ್ಟಿಲಲ್ಲಿ ತೂಗಿಸಿಕೊಳ್ಳಲು ಇಷ್ಟಪಟ್ಟ ಇವರು ಪ್ರಗತಿಪರ ಸಂಘಟನೆಯನ್ನು ಹಿನ್ನೆಡೆಸಿದರು"[೧೧]. ಗಂಗಾರಾಂ ಚಂಡಾಲರ ತಾತ್ವಿಕ ಯೋಚನೆಯಂತೆ ದಲಿತ ಸಂಘಟನೆಗಳ ಪ್ರಶ್ನೆಯು ಎದ್ದಿತು. ಆಳುವ ವರ್ಗಗಳ ಹಿತಾಸಕ್ತಿಯಲ್ಲಿ ತಮ್ಮ ಹಿತಾಸಕ್ತಿಯನ್ನು ಕೈಗೂಡಿಸಿದ್ದನ್ನು ಪ್ರಶ್ನಿಸಿ ಅದಕ್ಕೆ ಕಾರಣಗಳನ್ನು ಕೊಡುತ್ತಾ ಬಂದರು. ಹೀಗೆ ದಲಿತ ಚಳುವಳಿಯು ನಡೆದುಬಂದದ್ದನ್ನು ನೋಡುತ್ತೇವೆ. ರಾಜಕೀಯಕ್ಕೆ ಸಂಬಂಧಿಸಿದ ಆಯಾಮಗಳನ್ನು ಅಧ್ಯಾಯ ೪ರಲ್ಲಿ ರಾಜಕೀಯ ನೆಲೆಯಲ್ಲಿ ಚರ್ಚಿಸಲಾಗುವುದು.

## ದಲಿತ ಚಳುವಳಿ ಎಲ್ಲಿ? ಹೇಗೆ? ಏಕೆ? ನಡೆಯುತ್ತಿದೆ?

ದಲಿತ ಸಂಘಟನೆಯ ಬೇರುಗಳು ಎಲ್ಲೆಲ್ಲಿ ಬೇರು ಬಿಟ್ಟಿರುತ್ತವೆಯೋ ಆಯಾ ಕೇಂದ್ರಗಳಲ್ಲಿ ದಲಿತ ಚಳುವಳಿ ಕಾರ್ಯಕ್ರಮಗಳು ನಡೆಯುತ್ತವೆ. ಮತ್ತು ಅದು ಚಳುವಳಿಯ ವಿಷಯಕ್ಕೆ ಸಂಬಂಧಪಟ್ಟಂತೆ, ಪ್ರಕರಣದ (ವಸ್ತುವಿಷಯದ) ಆಧಾರದ ಮೆಲೆ ನಡೆಯುತ್ತದೆ. ಇದರ ವಿಸ್ತರಣೆಯ ವಿಷಯಕ್ಕೆ ತಕ್ಕಂತೆ ವಿಸ್ತರಣೆಯನ್ನು ಪಡೆಯುತ್ತದೆ. ಇದು ಗ್ರಾಮ ಪಂಚಾಯ್ತಿಯಿಂದ ರಾಜ್ಯದಾದ್ಯಂತದ ತನಕ ಮುಷ್ಕರವು ವಿಸ್ತರಿಸಬಹುದು. ವಿಷಯ ಸಾಮಾನ್ಯವಾಗಿದ್ದರೆ ಘಟನೆ ನಡೆದ ಕೇಂದ್ರದ ಆಡಳಿತವರ್ಗದ ಸಮ್ಮುಖದಲ್ಲಿ ನಡೆಯಬಹುದು. ಇಲ್ಲದೆ ಹೋದರೆ ಅದರ ವಿಸ್ತಾರವು ಮೇಲಿನ ಅಧಿಕಾರಿ ಅಥವಾ ಕಾನೂನಿನ ಆಡಳಿತದ ತನಕ ಹೋಗಬಹುದು.

ಸಾಮಾನ್ಯವಾಗಿ ದಲಿತ ಚಳುವಳಿಗಳ ಕಾರ್ಯಕ್ರಮಗಳು ತಾಲೂಕು ಕೇಂದ್ರದ ತಹಶೀಲ್ದಾರರ ಕಛೇರಿ. ಜಿಲ್ಲಾ ಕೇಂದ್ರದ ಜಿಲ್ಲಾಧಿಕಾರಿಗಳು ಕಛೇರಿಗಳ ಎದುರು ನಡೆದು ತಮ್ಮ ದೂರು ಸಲ್ಲಿಕೆಯನ್ನು ಸಲ್ಲಿಸುತ್ತಾರೆ. ಇದರಲ್ಲಿ ಸಂಬಂಧಪಟ್ಟ ಮಂತ್ರಿಗಳಿಗೆ, ಉನ್ನತ ಅಧಿಕಾರಿಗಳಿಗೆ ಪ್ರತಿಯನ್ನು ಹಾಕಲಾಗುತ್ತದೆ. ಪ್ರಕರಣವು ತೀವ್ರವಾಗಿದ್ದಲ್ಲಿ ಮುಖ್ಯಮಂತ್ರಿಗಳಿಗೆ ದೂರು ಸಲ್ಲಿಸುತ್ತಾರೆ. ಇದರಲ್ಲಿ ರಾಜ್ಯದ ದಲಿತ ಚಳುವಳಿಯ ಕಾರ್ಯಕರ್ತರು ಮತ್ತು ಸಂಬಂಧಿಸಿದ ಜನರು ವಿಧಾನಸೌಧದ ಮುಂದೆ ಸಂಬಂಧಿಸಿದ ಮುಷ್ಕರವನ್ನು ಕೈಗೊಳ್ಳುವುದೂ ಉಂಟು.

ದಲಿತ ಚಳುವಳಿಯು ನಡೆಯುವುದನ್ನು ಹೀಗೆ ಗುರ್ತಿಸಬಹುದು.




ದಲಿತ ಚಳುವಳಿಯಲ್ಲಿ ಶೋಷಿತರಿಗೆ ಪರಿಹಾರ ಅಥವಾ ನ್ಯಾಯ ದೊರಕಿಸಿಕೊಳ್ಳುವ ಕೇಂದ್ರ ಯಾವುದು ? ಇದು ಯಾರನ್ನು ನ್ಯಾಯ ಕೇಳುತ್ತದೆ? ಎಂಬುದು ಮುಖ್ಯವಾಗುತ್ತದೆ. ಈ ರೀತಿಯ ಚಳುವಳಿಯ ರೂಪ ಏಕೆ ? ಈ ರೀತಿಯ

ವ್ಯವಸ್ಥೆಯನ್ನು ಏಕೆ ರೂಪಿಸಲಾಗಿದೆ? ಎಂಬ ಪ್ರಶ್ನೆಗಳನ್ನು ಎತ್ತುವುದು ಒಳ್ಳೆಯದು. ದಲಿತರು / ಅವರ ಸಮುದಾಯಗಳ ಮೇಲೆ ಒಂದು ಘಟನೆ ಯಾವುದೋ ಸ್ಥಳದಲ್ಲಿ ನಡೆದರೆ ಅದಕ್ಕೆ ಸಂಬಂಧಿಸಿದ ಮುಷ್ಕರವು ಮತ್ತೆಲ್ಲಿಯೋ ನಡೆಯುತ್ತದೆ. ಹೀಗೆ ನಡೆಯುವ ದಲಿತ ಚಳುವಳಿಯು ಸಮಾಜ ಮತ್ತು ಸರ್ಕಾರದ ನಡುವೆ ಇರುವ ನಿಕಟ ಸಂಬಂಧವನ್ನು ಹೊಂದಿರುತ್ತದೆ. ಸಮಾಜದಲ್ಲಿ ಸಂಭವಿಸುವ ದಲಿತರ ಶೋಷಣೆಗೆ ಸಮಾಜದಲ್ಲಿಯೇ ಏಕೆ ಪರಿಹಾರವನ್ನು ಕೇಳುವುದಿಲ್ಲ? ಅದಕ್ಕೆ ಅವರು ಆಡಳಿತಾತ್ಮಕ ಸಂಸದೀಯ ಕಾನೂನಿನ ಅಡಿಯಲ್ಲಿನ ಸರ್ಕಾರಕ್ಕೆ ಏಕೆ ಮೊರೆ ಹೋಗುತ್ತಾರೆ? ಎಂಬ ಪ್ರಶ್ನೆಗಳು ಬಹಳ ಮುಖ್ಯವಾಗುತ್ತವೆ. ಇಲ್ಲಿ ಮುಖ್ಯವಾಗಿ ಸಮಾಜದಲ್ಲಿ ಅಳಿಸಲಾರದಂತ ಶ್ರೇಣೀಕೃತ ವ್ಯವಸ್ಥೆಯ ತಾರತಮ್ಯಕ್ಕೆ ಸಮಾಜದ ಶೋಷಕರಿಗೆ ಸಮಾನತೆ ಬೇಕಿರುವುದಿಲ್ಲ. ಮೇಲು, ಕೀಳುಗಳನ್ನು ಸಮುದಾಯಗಳ ವ್ಯವಸ್ಥೆಯೇ ನಿರ್ಧರಿಸಲ್ಪಟ್ಟಿರುತ್ತವೆ. ಆದ್ದರಿಂದ ನಿಯಂತ್ರಣಕ್ಕೆ ಕಾನೂನು; ಆಡಳಿತಕ್ಕೆ ಆಳ್ವಿಕೆಯನ್ನು ದಲಿತ ಚಳುವಳಿ ಬಯಸುತ್ತದೆ.

ಸ್ವಾತಂತ್ರ್ಯ ಘೋಷಿತ ಐವತ್ತು ವರ್ಷಗಳನ್ನು ದೇಶವು ಕಳೆದರೂ; ಈ ಐವತ್ತು ವರ್ಷಗಳಲ್ಲಿ ಸಂವಿಧಾನಾತ್ಮಕವಾದ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗವನ್ನು ಒಪ್ಪಿಕೊಂಡು ರಾಜಕಾರಣಿಗಳನ್ನು ಆರಿಸಿ ಕಳುಹಿಸಿ ಆಡಳಿತ ನಡೆಸಿದರೆ ಚಳುವಳಿಗಳು ನಡೆಯುತ್ತಲಿವೆ. ಇಂತಹ ಚಳುವಳಿಗಳು ಪ್ರಸ್ತುತ ದಿನಮಾನಗಳಲ್ಲಿ ಇದ್ದರೂ ದಲಿತರ ಶೋಷಣೆಯು ಹಾಗೇ ಇವೆ. ಇಂದಿನ ದಿನಮಾನಗಳಲ್ಲಿ ಅವುಗಳೇ ಬೇರೆಯ ರೂಪವನ್ನು ಪಡೆಯುತ್ತಲಿವೆ. ಇಲ್ಲಿ ಪ್ರಜಾಪ್ರಭುತ್ವ ಮಾದರಿಯ ಆಡಳಿತ ಮತ್ತು ಬದುಕಿನಲ್ಲಿ ಹಲವು ಸಮುದಾಯಗಳ ಜನರು ಯಾವುದನ್ನು ಒಪ್ಪಿಕೊಂಡಿದ್ದಾರೆ; ಯಾವುದನ್ನು ಒಪ್ಪಿಕೊಂಡಿಲ್ಲ ಎನ್ನುವುದಕ್ಕೆ ಸಮಾಜದಲ್ಲಿ ನಡೆಯುವ ಘಟನೆಗಳು ಮತ್ತು ಸಾಮಾಜಿಕ ವಾಸ್ತವವು ತಿಳಿಸುತ್ತವೆ. ಇದರಲ್ಲಿ ಜಾತೀಯ ಸಮುದಾಯಗಳ ಬಗ್ಗೆ ಇರುವ ನಂಬಿಕೆ, ಇಂದಿನ ದಿನಗಳಲ್ಲಿ ನಡೆಯುತ್ತಿರುವ ಸಮುದಾಯಗಳ ಪುನರ್‌ಶೋಧ, ಸಂಶೋಧನೆಗಳು, ಹಾಗೂ ಕೆಲವು ಪಟ್ಟಭದ್ರ ಸಂಘಟನೆಗಳು ಎಲ್ಲೋ ಒಂದು ಕಡೆ ಮಿತಿಯನ್ನು ತಂದೊಡ್ಡುತ್ತಲಿವೆ. ಜಾತಿಕೇಂದ್ರಿತ ವ್ಯವಸ್ಥಿತ ಸಂಘಟನೆಗಳು ಮತ್ತು ಸಂಸ್ಥೆಗಳು, ಅವುಗಳಲ್ಲಿನ ಧರ್ಮಗಳು, ತಮ್ಮ ಜಾತೀಯ ಪ್ರತಿಷ್ಠತೆಯನ್ನು ಎತ್ತಿ ಹಿಡಿಯಲು ಮುಂದಿರುತ್ತವೆ. ವ್ಯವಸ್ಥಿತ ಸಮಾಜದ ಬದುಕಿನಲ್ಲಿ ತಮ್ಮ ಜನಾಂಗದ ಪ್ರತಿಷ್ಠೆ ಏನು? ಎಂಬುದರ ಅಧ್ಯಯನವೂ ನಡೆಯುತ್ತಲಿವೆ. ಇವು ಸಂಸ್ಕೃತಿ ಅಧ್ಯಯನಗಳ ಹಿನ್ನೆಲೆಯಲ್ಲಿ ಕಂಡುಬರುತ್ತಲಿವೆ. ಇಲ್ಲಿ ಒಂದು ರೀತಿಯಲ್ಲಿ ಎಲ್ಲರೂ ಸಮಾನರು ಎಂಬುದರ ವಿರುದ್ಧ ನೆಲೆಯಲ್ಲೂ ಕಂಡುಬರುತ್ತಿವೆ, ಇವುಗಳ ವೈರುಧ್ಯಗಳು ತಾತ್ವಿಕವಾದ ಪ್ರಶ್ನೆಯಾಗಿ ನಿಲ್ಲುತ್ತವೆ.

ದಲಿತ ಚಳುವಳಿ ತನ್ನ ಬೆಳವಣಿಗೆಯ ಹಾದಿಯಲ್ಲಿ ಹಲವಾರು ಹಂತದಲ್ಲಿ ತನ್ನ ಹೋರಾಟವನ್ನು ಮಾಡುತ್ತಾ ಬಂದಿದೆ. ಅದು ಭೂಮಿ ಸಂಬಂಧ, ಹಲ್ಲೆ, ಶೋಷಣೆ, ಅವಮಾನ, ಅತ್ಯಾಚಾರ ಮುಂತಾದವುಗಳಿಗೆ ಸಂಬಂಧಿಸಿದವುಗಳಾಗಿವೆ. ನಂತರದ ಬೆಳವಣಿಗೆಯಲ್ಲಿ ಈ ಚಳುವಳಿಯು ವಿದ್ಯಾವಂತ ದಲಿತರಿಗೆ ವಿದ್ಯಾಭ್ಯಾಸಕ್ಕೆ ತಕ್ಕಂತೆ ಉದ್ಯೋಗ ಬೇಕು ಎಂಬ ಬಗ್ಗೆ ಬೇಡಿಕೆ ಇಟ್ಟಿದೆ.

ಹೀಗಾಗಿ ದಲಿತ ಚಳುವಳಿಯು ಸರ್ಕಾರಿ ಸೌಲಭ್ಯಗಳತ್ತ ಮತ್ತು ಅವಕಾಶಗಳತ್ತ ಹೆಚ್ಚಿಗೆ ಗಮನವನ್ನು ಹರಿಸಿತು. ಈ ಸಂದರ್ಭಗಳಲ್ಲಿ ಯಾರು ಈ ಉಪಯೋಗವನ್ನು ಪಡೆದುಕೊಂಡರು; ಮತ್ತು ಯಾರು ಇಂದು ಪಡೆದುಕೊಳ್ಳುತ್ತಿದ್ದಾರೆ

ಎಂಬುದು ಮುಖ್ಯವಾಗುತ್ತದೆ. ಏಕೆಂದರೆ ಬಹುಪಾಲು ಸರ್ಕಾರಿ ಸೌಲಭ್ಯಗಳು ದಲಿತ ಚಳುವಳಿಯ ನಾಯಕರ, ದಲಿತ ಉದ್ಯೋಗಿಗಳ ಮತ್ತು ಅವರ ಸಂಬಂಧಿಕರ ಪಾಲಾಗುತ್ತಿವೆ ಎಂಬ ವಾದ ಕಂಡುಬರುತ್ತಿದೆ. ಹಾಗೇ ಹಣಕಾಸಿನ ವಹಿವಾಟಿಗೆ ಅಸಮರ್ಥರಾಗಿರುವ ವಿದ್ಯೆಯನ್ನು ಪಡೆದು ನಿರುದ್ಯೋಗಿಗಳಾಗಿರುವ ದಲಿತರು ಹಾಗೆಯೇ ಉಳಿಯುತ್ತಿದ್ದಾರೆ. ಅವಿದ್ಯಾವಂತ ದಲಿತರೂ ಸಹ ಅವಕಾಶಗಳಿಗೆ ವಂಚಿತರಾಗಿ ತಮ್ಮ ಸ್ಥಿತಿಯಿಂದ ಬದಲಾಗದೆ ಹಾಗೇ ಉಳಿದಿದ್ದಾರೆ.

ಮೀಸಲಾತಿಯ ಸೌಲಭ್ಯಗಳನ್ನು ಪಡೆಯುವತ್ತ, ಕೊಡಿಸುವತ್ತ ದಲಿತ ಚಳುವಳಿಯ ಕಾರ್ಯಗಳು ಇಂದು ನಡೆಯುತ್ತಿವೆ. ಹಾಗಾಗಿ ಅವುಗಳ ನಾಯಕರು ನಗರಗಳ ಸಂಪರ್ಕವನ್ನು ಹೊಂದಿದರು. ಅವಕಾಶ ವಂಚಿತರಾದ ದಲಿತ ಚಳುವಳಿಯ ಕಾರ್ಯಕರ್ತರು ದಲಿತ ಸಮುದಾಯಗಳ ಜೊತೆಯಲ್ಲಿ ಉಳಿದು ಜಿಲ್ಲಾಧಿಕಾರಿಗಳ ಕಛೇರಿ, ತಹಶೀಲ್ದಾರರ ಕಛೇರಿ, ಬಿ.ಡಿ.ಓ. ಕಛೇರಿ, ಎಸ್.ಸಿ/ಎಸ್.ಟಿ ಕಾರ್ಪೋರೇಷನ್, ಸಮಾಜ ಕಲ್ಯಾಣ ಇಲಾಖೆ ಇವುಗಳ ಸಂಪರ್ಕ ಹೊಂದಿ ಅವುಗಳಿಂದ ಸಿಗುವ ಸೌಲಭ್ಯಗಳನ್ನು ಸಮುದಾಯಗಳಿಗೆ ಕೊಡಿಸುವ ನಾಯಕರಂತೆ ಉಳಿದರು.

ದಲಿತ ಸಂಘರ್ಷ ಸಮಿತಿಯ ಕಾರ್ಯ ಚಟುವಟಿಕೆಗಳಲ್ಲಿ ಕೆಲವು ಕಾರ್ಯಕ್ರಮಗಳು ಖಾಯಂ ಆದವು. ತಮ್ಮ ಸಂಸ್ಕೃತಿಯ ನಾಯಕ ಅಂಬೇಡ್ಕರ್ ಹುಟ್ಟಿದ ದಿನ ಏಪ್ರಿಲ್ ೧೪ ಹಾಗೂ ಸ್ಮರಣೆಯ ದಿನ ಡಿಸೆಂಬರ್ ೬ ದಲಿತ ಸಂಘಟನೆಯು ಆಚರಿಸುವ ಕಾರ್ಯಕ್ರಮದ ದಿನವಾದವು. ಇಲ್ಲಿ ದಲಿತ ಸಮುದಾಯಗಳ ಜಾಗೃತಿ ಮತ್ತು ದೌರ್ಜನ್ಯ, ಶೋಷಣೆ ಮುಂತಾದವುಗಳನ್ನು ವಿರೋಧಿಸುವ ಆಚರಣೆಯು ಆಚರಣೆಯಾಗಿಯೇ ಉಳಿದವು. ಇವು ಬರೀ ಕಾರ್ಯಕ್ರಮಗಳಾದವು. ರಾಜಕೀಯ, ಅಧಿಕಾರಿಶಕ್ತಿಗಳ ಭಾಷಣಗಳ ವೇದಿಕೆಯಾದವು. ಇಂದು ದಲಿತ ಲೋಕದ ಒಳಗೆ ಶೋಷಣೆಯ ಬದುಕನ್ನು ಹೊಂದಿದವರಿಗೆ ಈ ದಿನಾಂಕಗಳ ಮಹತ್ವ ಗೊತ್ತಾಗಲಿಲ್ಲ. ಅದನ್ನು ದಲಿತ ಚಳುವಳಿಯ ನಾಯಕರು ಗೊತ್ತುಮಾಡಿಸಲಿಲ್ಲ.

### ಯಾವ, ಯಾವ ಕಾರಣಕ್ಕೆ ಚಳುವಳಿ ನಡೆದಿದೆ? ನಡೆಯುತ್ತಿದೆ?

ದಲಿತ ಚಳುವಳಿಯು ನಡೆಯುತ್ತಿರುವುದು ಬಹುಮುಖ್ಯವಾಗಿ ಪ್ರಜಾಸತ್ತಾತ್ಮಕ ಸಮಾಜದ ಬದುಕಿನಲ್ಲಿರುವ ಪ್ರಶ್ನೆಗಳನ್ನು ಎತ್ತುವುದಕ್ಕೆ. ಇವುಗಳು ದಲಿತ ಚಳುವಳಿಯ ಕಾರಣಗಳನ್ನು ನೋಡುವಾಗ ತಕ್ಷಣ ಕಾಣಸಿಗುತ್ತವೆ. ಮುಖ್ಯವಾಗಿ ದಲಿತೇತರರ ಸಾಮಾಜಿಕ, ಆರ್ಥಿಕ, ರಾಜಕೀಯ ಶೋಷಣೆಗಳು. ಇವರು ದಲಿತರನ್ನು ಮನುಷ್ಯರೆಂದು ಪರಿಗಣಿಸದೇ ಇರುವುದು ಒಂದು.

ದಲಿತ ಚಳುವಳಿ ನಡೆಸಿದ ಕಾರ್ಯಚಟುವಟಿಕೆಯ ಕಾರಣಗಳನ್ನು ಎರಡು ದೃಷ್ಟಿಕೋನಗಳಿಂದ ನೋಡಬಹುದು. ಮೊದಲನೆಯದು ದಲಿತ ಸಮುದಾಯಗಳ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ, ಹಾಗೂ ಸಾಂಸ್ಕೃತಿಕ ಸಮಸ್ಯೆಗಳಿಂದ ನೋಡುವುದು. ಇದನ್ನು ದಲಿತ ಚಳುವಳಿಯ ಪ್ರಾಥಮಿಕ ಸಮಸ್ಯೆಗಳೆಂದು ಹೇಳಬಹುದು. ಇವು ಅಗತ್ಯ ಮತ್ತು ಸಾಮಾಜಿಕ ಸ್ಥಾನಕ್ಕೆ ಸಂಬಂಧಿಸಿದೆ. ಹಾಗೇ ಸಮಾಜವು ನೋಡುವ ದೃಷ್ಟಿಕೋನಕ್ಕೂ ಸಂಬಂಧಿಸಿದೆ. ಎರಡನೆಯದು ತಮ್ಮ ಚಳುವಳಿಯು ದಲಿತ ಸಮುದಾಯಗಳನ್ನು ಒಳಗೊಂಡಂತೆ ಒಟ್ಟು ಸಮಾಜಕ್ಕೆ

ಆಕ್ರಮಣಕಾರಿಯಂತೆ ಇರುವ ಜಾಗತಿಕ ಪ್ರಕ್ರಿಯೆಯ ಸಮಸ್ಯೆಗಳಿಗೆ ಸಂಬಂಧಿಸಿದೆ. ಇದರಲ್ಲಿ ದೇಶೀ ಪ್ರಶ್ನೆ ಇರಬಹುದು, ಬದಲಾಗುತ್ತಿರುವ ಸಮಾಜ ಪ್ರಶ್ನೆಯೂ ಇರಬಹುದು. ಇವುಗಳ ಪ್ರಶ್ನೆಯು ಬಹುತೇಕವಾಗಿ ಹಿಂದುಳಿದ ವರ್ಗಗಳ ಹೋರಾಟದಲ್ಲಿ ಸಹಮತ ನೀಡಿ ಕೈಗೂಡಿಸಿರುವುದು ಆಗಿರುತ್ತದೆ. ಇವುಗಳು ದಲಿತ ಚಳುವಳಿಯ ಬೆಳವಣಿಗೆಯಲ್ಲಿ ಕಾಣಸಿಗುತ್ತವೆ. ದಲಿತ ಚಳುವಳಿಯ ಕಾರಣಕ್ಕೆ ಕೆಲವು ವಿಷಯಗಳು ಕೆಳಕಂಡಂತೆ ಇವೆ.

* ''ಪೋಲಿಸ್ ಕ್ರೂರ ಗೂಂಡಾಗಿರಿ ಖಂಡಿಸಿ ನ್ಯಾಯಕ್ಕಾಗಿ ಧರಣಿ ಸತ್ಯಾಗ್ರಹ ದಿನಾಂಕ : ೨೮-೧-೮೬ ಜಿಲ್ಲಾ ಪೋಲೀಸ್ ಕಛೇರಿ ಎದರು''.[೧೨]

* ''ಕೋಮುಶಕ್ತಿ ವಿರುದ್ದ ಚಳುವಳಿ: ದಲಿತ ಸಂಘರ್ಷ ಸಮಿತಿ ನಿರ್ಧಾರ-ಕೋಮುವಾದ ಗರ್ಭದಲ್ಲಿ ಹಿಂದುಯೇತರ ಜನರನ್ನು ಎರಡನೇ ದರ್ಜೆಯ ನಾಗರೀಕರೆಂದು ಪರಿಗಣಿಸಿ ರಾಷ್ಟ್ರೀಯವಾದವನ್ನು ತಿರಸ್ಕರಿಸಲಾಗಿದೆ. ಅಲ್ಲದೆ ಹಿಂದುತ್ವದ ಹೆಸರಿನಲ್ಲಿ ಉಚ್ಚ ಜಾತೀಯ ದಬ್ಬಾಳಿಕೆ ನಡೆಸಲು ಸನ್ನಾಹ ನಡೆಸಿದೆ ಎಂದು ಆಪಾದಿಸಿದರು''[೧೩]... ಬೀದರ್ ಜಿಲ್ಲಾ ದ.ಸಂ.ಸ ಸಂಚಾಲಕ ವೈಜನಾಥ ಸೂರ್ಯವಂಶಿ ಈ ಸಂದರ್ಭದಲ್ಲಿ ಹಾಜರಿದ್ದರು.

* ಪಂಚಾಯ್ತಿ ಚುನಾವಣೆಗಳಲ್ಲಿ ದಲಿತರಿಗೆ ಕನಿಷ್ಠ ಮೀಸಲಾತಿ ವಂಚನೆ - ಜನತಾ ದಳ ಸರ್ಕಾರದ ಸುಗ್ರೀವಾಜ್ಞೆ ವಿರುದ್ಧ. ರಾಜ್ಯಾದ್ಯಂತ ಜಿಲ್ಲಾಧಿಕಾರಿಗಳ ಕಛೇರಿ ಪಿಕೆಟಿಂಗ್[೧೪].

* ಪರಿಶಿಷ್ಟ ಜಾತಿಗಳಿಗೆ ವೈಜ್ಞಾನಿಕ ಮೀಸಲಾತಿ ಒತ್ತಾಯಿಸಿ ತಾಲೂಕು ಕಛೇರಿಯೆದರು ರಾಜ್ಯಾದ್ಯಂತ ಧರಣಿ ಸತ್ಯಾಗ್ರಹ[೧೫].

* ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಡಾ.ಬಾಬಾಸಾಹೇಬ ಅಂಬೇಡ್ಕರ್ ನಾಮಕರಣಕ್ಕೆ ಒತ್ತಾಯಿಸಿ ನಿರಂತರ ಹೋರಾಟಕ್ಕೆ ಕರೆ-[೧೬] ವಿಶ್ವವಿದ್ಯಾಲಯಕ್ಕೆ ಅಂಬೇಡ್ಕರ್ ಹೆಸರಿಡುವ ಮೂಲಕ ತಮ್ಮ ಸಾಂಸ್ಕೃತಿಕ ನಾಯಕನ ಹೆಸರು ಒಂದು ವಿಶ್ವವಿದ್ಯಾಲಯಕ್ಕೆ ಬರಲಿ ಎನ್ನುವ ಉದ್ದೇಶ. ಅಂಬೇಡ್ಕರ್ ಅವರು ಗುಲಬರ್ಗಾ ಜಿಲ್ಲೆಗೆ ಭೇಟಿ ನೀಡಿದ್ದು ಮುಖ್ಯ ಕಾರಣಗಳಲ್ಲೊಂದಾಗಿದೆ. ಇದು ದಲಿತ ಚಳುವಳಿಗೆ, ದಲಿತರಿಗೆ ಸ್ವಾಭಿಮಾನದ ಸಂಕೇತವಾಗಿದೆ.

* ಮೈಸೂರು ವಿಶ್ವವಿದ್ಯಾಲಯದ ಭ್ರಷ್ಟ ಕುಲಪತಿ ಪ್ರೊ. ಮಾದಯ್ಯನ ಮೇಲೆ ಕ್ರಮಕ್ಕಾಗಿ ಒತ್ತಾಯಿಸಿ ರಾಜ್ಯಾದ್ಯಂತ ಜಿಲ್ಲಾಧಿಕಾರಿ ಕಛೇರಿ ಎದುರು ಧರಣಿ ಸತ್ಯಾಗ್ರಹ[೧೭]. ಶಿಕ್ಷಣವು ದಲಿತರಿಗೆ ಬೆಳಕಿನ ಕಣ್ಣು. ಜ್ಞಾನದ ದೀಪ, ದಲಿತರಿಗೆ ಸವಲತ್ತುಗಳ ನೀಡಿಕೆಯಲ್ಲಿ ದುರುಪಯೋಗವಾಗುವ ಸಂದರ್ಭದಲ್ಲಿ ದಲಿತ ಸಂಘಟನೆಗಳು ಎತ್ತುವ ಪ್ರಶ್ನೆಗಳಾಗಿರುತ್ತವೆ.

* ಮೈಸೂರು ಕುಲಪತಿ ಮಾದಯ್ಯನವರ ವಜಾಕ್ಕಾಗಿ ಒತ್ತಾಯಿಸಿ ರಾಜ್ಯಭವನ್ ಚಲೋ[೧೮].

* ಮೀಸಲಾತಿ ರೋಸ್ಟರ್ ಪದ್ಧತಿ ಪಾಲಿಸದ ಖಾಸಗೀ ಶಿಕ್ಷಣ ಸಂಸ್ಥೆಗಳ ಮಾನ್ಯತೆ·ರದ್ದಿಗೆ ಒತ್ತಾಯಿಸಿ ದಲಿತ ಸಂಘರ್ಷ ಸಮಿತಿ ಧರಣಿ[೧೯].ಸರ್ಕಾರಿ ಅನುದಾನವನ್ನು ಪಡೆಯುವ ಖಾಸಗಿ ಶಿಕ್ಷಣ ಸಂಸ್ಥೆಗಳು ಮೀಸಲಾತಿ ರೋಸ್ಟರ್ ಪದ್ಧತಿಯನ್ನು ಪಾಲಿಸುತ್ತಿಲ್ಲ; ಎಂಬುದರ ಪ್ರಶ್ನೆಯು ಈ ಖಾಸಗಿ ಸಂಸ್ಥೆಗಳಲ್ಲಿ ಶಿಕ್ಷಣ ಮತ್ತು ಉದ್ಯೋಗದಲ್ಲಿ

ಮೀಸಲಾತಿಯನ್ನು ಪಾಲಿಸಿಲ್ಲ ಎಂಬುದಾಗಿದೆ. ಖಾಸಗಿ ಉದ್ಯೋಗವು ಶಿಕ್ಷಣ ಕ್ಷೇತ್ರಗಳಲ್ಲೊಂದು ಉದಾಹರಣೆ ಮಾತ್ರ. ಉಳಿದ ತಾಂತ್ರಿಕ, ವೈದ್ಯಕೀಯ, ಆಡಳಿತಾತ್ಮಕ ಖಾಸಗಿ ವಲಯಗಳ ವಿರುದ್ಧ ಮೀಸಲಾತಿಯ ರೋಸ್ಟರ್ ಪದ್ಧತಿಯ ಬಗ್ಗೆ ದಲಿತ ಚಳುವಳಿ ಪ್ರಶ್ನಿಸುತ್ತಲೇ ಬಂದಿದೆ.

* "ಯಳಂದೂರು ತಾಲೂಕು ಚಾಮರಾಜನಗರ ಜಿಲ್ಲೆಯಾದ್ಯಂತ ದಸಂಸ ಬೆಳವಣಿಗೆ ಸಹಿಸದ ಗೋಸುಂಬೆ ರಾಜಕಾರಣದ ಕೈಗೊಂಬೆಯಾಗಿರುವ ಭ್ರಷ್ಟ ದಲಿತ ಅಧಿಕಾರಿಗಳಿಂದ ಬಡವರಿಗೆ ಆಗುತ್ತಿರುವ ಅನ್ಯಾಯ ಖಂಡಿಸಿ ಚಾಮರಾಜನಗರ ಜಿಲ್ಲಾ ಕಛೇರಿ ಮುಂದೆ ದಸಂಸ ಧರಣಿ".[೨೦]

* "ಬಾಬಾ ಸಾಹೇಬ ಅಂಬೇಡ್ಕರ್ ಪ್ರತಿಮೆಗೆ ಅಪಚಾರ ಪ್ರತಿಭಟಿಸಿದ ದಲಿತರ ಮೇಲೆ ಗೋಲಿಬಾರ್. ಹಿಂದೂ ಕೋಮುವಾದಿಗಳೇ ಹುಷಾರ್. ರಾಜ್ಯಾದ್ಯಂತ ಎಲ್ಲಾ ಜಿಲ್ಲಾ ಕಛೇರಿಗಳ ಮುಂದೆ ಧರಣಿ ಸತ್ಯಾಗ್ರಹ."[೨೧] ಅಂಬೇಡ್ಕರ್ ಮತ್ತು ದಲಿತರ ನಡುವಿನ ಸಂಬಂಧವು ಭಾವನಾತ್ಮಕವಾದದ್ದು. ಅಂಬೇಡ್ಕರ್ ದಲಿತರ ಸ್ಫೂರ್ತಿ ಮತ್ತು ಚೇತನವೂ ಹೌದು. ಭಾರತದಲ್ಲಿ ಪ್ರಪ್ರಥಮ ಬಾರಿಗೆ ದಲಿತರ ಬದುಕಿನ ಬಗ್ಗೆ, ಅವರ ಶೋಷಣೆಯ ಮಗ್ಗಲುಗಳ ಬಗ್ಗೆ, ಬದುಕುವ ಸಾಮಾಜಿಕ, ಆರ್ಥಿಕ, ರಾಜಕೀಯ ಸಾಂಸ್ಕೃತಿಕ ಬದುಕಿನ ಬಗ್ಗೆ ಚರ್ಚಿಸಿ ಹೋರಾಡಿದ ಧೀಮಂತ. ದಲಿತರು ಹೀಗೆ ಪ್ರಶ್ನಿಸಲು ಅವರು ಪಡೆದ ಔಪಚಾರಿಕ ಶಿಕ್ಷಣ ಮತ್ತು ಸಾಮಾಜಿಕ ಅರಿವೇ ಮುಖ್ಯ ಕಾರಣ. ದಲಿತರು, ದಲಿತ ಯುವಕರು ಬೆಂಗಳೂರು ಮೆಡಿಕಲ್ ಕಾಲೇಜಿನ ಅಂಬೇಡ್ಕರ್ ಪ್ರತಿಮೆಯ ಮೇಲಿನ ಮದ್ಯಾಭಿಷೇಕಕ್ಕೆ ಪ್ರತಿಕ್ರಿಯಿಸಿದ್ದನ್ನು ನೋಡಬಹುದು. ಆಳುವ ಪಕ್ಷದ ನಾಯಕಿ ಬಿ.ಟಿ.ಲಲಿತಾನಾಯಕ್ ಮಗನ ತಪ್ಪನ್ನು ಮಾಡಿಯೇ ಇಲ್ಲವೆಂದು ಸಮರ್ಥಿಸಿಕೊಂಡದ್ದು ಮಂತ್ರಿ ಪದವಿಯನ್ನು ಕಳೆದುಕೊಳ್ಳಲು ಕಾರಣವಾಯಿತು. ಪ್ರಾರಂಭದಲ್ಲಿ ಆದ ಅಂಬೇಡ್ಕರ್ ಮದ್ಯಾಭಿಷೇಕವು ನಂತರದಲ್ಲಿ ಬೇರೆ ರೂಪವನ್ನು ಪಡೆಯುತ್ತಲಿದೆ. ಇದು ದಲಿತರ ಆವೇಶವನ್ನು ಹಾಗೂ ದಲಿತರ ಅಂಬೇಡ್ಕರ್‌ರ ನಡುವೆ ಇದ್ದ ಭಾವನಾತ್ಮಕ ಸಂಬಂಧವನ್ನು ಕೆರಳಿಸಲು ಇಂಥ ದುಷ್ಕೃತ್ಯಗಳನ್ನು ಮಾಡಲು ಜಾತಿವಾದಿ ಮುತ್ಸದ್ದಿಗಳಿಗೆ ಅವಕಾಶವಾಯಿತು.

ಎಲ್ಲೇ ಅಂಬೇಡ್ಕರ್ ವಿಗ್ರಹಕ್ಕೆ ಅಪಚಾರ / ಅವಮಾನವಾದರೂ ದಲಿತರು ತಮಗೆ ಅಪಚಾರವಾದಂತೆ ಭಾವಿಸುತ್ತಾರೆ. ಅವರಲ್ಲಿ ಇದು ರೋಷವನ್ನು ತುಂಬುತ್ತದೆ. ಅದನ್ನು ತೀರಿಸಿಕೊಳ್ಳಲು ಸಂಘಟನೆಯ ಮೂಲಕ ದಲಿತ ಜನತೆಗೆ ಮನವರಿಕೆ ಮಾಡುತ್ತಾರೆ. ಕೆಲವು ಸಂದರ್ಭಗಳಲ್ಲಿ ಈ ಹೋರಾಟವು ಇನ್ನೊಂದು ರೂಪವನ್ನು ಪಡೆಯುತ್ತದೆ. ಇದಕ್ಕೆಲ್ಲಾ ಕಾರಣ ಜಾತಿವಾದಿ ಶಕ್ತಿಗಳಿಗೆ ದಲಿತರನ್ನು ಕೆಣಕಲು ಇದು ವಸ್ತು ಎಂದು ಭಾವಿಸಿ ಇಂಥ ಪ್ರತಿಮೆಗಳ ಮೇಲೆ ಅವಮಾನ ಮಾಡಿರುವುದನ್ನು ನೋಡುತ್ತೇವೆ. ಇಂಥ ಅಂಬೇಡ್ಕರ್ ಪ್ರತಿಮೆಗೆ ಅವಮಾನ ಎಸಗಿದ ಸಂದರ್ಭದಲ್ಲಿನ ದಲಿತ ಚಳುವಳಿಯ ಹೋರಾಟದ ಫಲವಾಗಿ ರಾಜ್ಯದ ಬಹುತೇಕ ಕಡೆಗಳಲ್ಲಿ ಜಿಲ್ಲೆ, ತಾಲೂಕು, ಕೆಲವು ಹೋಬಳಿಯಲ್ಲಿವೂ ಅಂಬೇಡ್ಕರ್ ಪ್ರತಿಮೆಗಳು ಸ್ಥಾಪನೆಗೊಂಡಿವೆ.

"ಜಿಲ್ಲಾದ್ಯಂತ ಟಿ.ಎ.ಪಿ.ಸಿ.ಎಂ.ಎಸ್ ಮತ್ತು ಆಹಾರ ಮತ್ತು ನಾಗರಿಕ ಪೂರೈಕೆ ಇಲಾಖೆಗಳಲ್ಲಿ ನಡೆದಿರುವ ಅವ್ಯವಹಾರಗಳನ್ನು ತೀವ್ರವಾಗಿ ತನಿಖೆಗೊಳಪಡಿಸಲು ಒತ್ತಾಯಿಸಿ ದಿ.೧೦-೬-೯೭ ರಂದು ಸಾಂಕೇತಿಕ ಧರಣಿ

ಕಾರ್ಯಕ್ರಮ. ದಲಿತರ ದುಡಿಯುವ ವರ್ಗಗಳಿಗೆ ನೀಡಬೇಕಾದ ರಿಯಾಯಿತಿ ದರದ ಆಹಾರ ಪೂರೈಕೆಯಲ್ಲಿ ದೊರೆಯಬೇಕಾದದ್ದು ಸಿಗದೇ ಇರುವುದು ಕಾರಣವಾಗುತ್ತದೆ''.[೨೨]

''ಉನ್ನತ ಶಿಕ್ಷಣ ಸಚಿವರಾದ ಶ್ರೀ ಬಿ.ಸೋಮಶೇಖರ್‌ರವರ ರಾಜೀನಾಮೆ ಅಂಗೀಕರಿಸದಿರಲು ಒತ್ತಾಯಿಸಿ ಧರಣಿ''.[೨೩] ಕಾಫಿ ಹಗರಣದಲ್ಲಿ ಎದ್ದ ಆರೋಪವು ಸಚಿವ ಬಿ.ಸೋಮಶೇಖರರನ್ನು ರಾಜೀನಾಮೆಗೆ ಗುರಿಮಾಡಿತು. ಈ ಸಂದರ್ಭದಲ್ಲಿ ಬಿ.ಸೋಮಶೇಖರ್ ಅವರು ಉನ್ನತ ಶಿಕ್ಷಣ ಸಚಿವರಾಗಿದ್ದರು. ಈ ಹಗರಣದ ತೀರ್ಮಾನವು ಸೋಮಶೇಖರರನ್ನು ತಪ್ಪಿತಸ್ಥನಲ್ಲವೆಂದು ತೀರ್ಮಾನ ಮಾಡಿತು.

''ಕಾವೇರಿ ನ್ಯಾಯಕ್ಕಾಗಿ ರಾಜ್ಯಾದ್ಯಂತ ತಹಶೀಲ್ದಾರ ಕಛೇರಿ ಮುಂದೆ ಧರಣಿ''.[೨೪] ದಲಿತ ಚಳುವಳಿಯ ತೆಕ್ಕೆಯಲ್ಲಿ ಕೇವಲ ದಲಿತರ ಸಮಸ್ಯೆಯನ್ನು ಇಟ್ಟುಕೊಳ್ಳದೆ ಅದು ತನ್ನ ಆಯಾಮವನ್ನು ವಿಸ್ತರಿಸಿಕೊಂಡಿದೆ. ದಲಿತರು ಇತರ ಜನ ಸಮುದಾಯದಲ್ಲಿ ಬದುಕುತ್ತಿರುವಂತವರು. ಈ ಚಳುವಳಿಯ ವಿಶಾಲ ವ್ಯಾಪಕತೆಯ ಸಮಸ್ಯೆಯು ಇಡೀ ಕರ್ನಾಟಕಕ್ಕೆ ಸಂಬಂಧಿಸಲ್ಪಟ್ಟು ಅನ್ಯಾಯದ ವಿರುದ್ಧ ತನ್ನ ಕಾರ್ಯಚಟುವಟಿಕೆಯನ್ನು ಮಾಡುತ್ತಾ ಬಂದಿದೆ. 'ಕಾವೇರಿ ಜಲ ವಿವಾದದಲ್ಲಿ ಕೇಂದ್ರ ಸರ್ಕಾರದ ನ್ಯಾಯ ಮಂಡಲಿಯು ಮಧ್ಯಂತರ ತೀರ್ಪನ್ನು ಆತುರದಲ್ಲಿ ಪ್ರಕಟಿಸಿದ್ದರಿಂದ ಕರ್ನಾಟಕಕ್ಕೆ ಆದ ಅನ್ಯಾಯವನ್ನು ದಲಿತ ಚಳುವಳಿ ಪ್ರತಿಭಟಿಸಿದೆ.

''ಮಹಾರಾಷ್ಟ್ರದ ಮರಾಠವಾಡ ವಿಶ್ವವಿದ್ಯಾಲಯಕ್ಕೆ ಡಾ.ಬಾಬಾಸಾಹೇಬ್ ಅಂಬೇಡ್ಕರ್ ಹೆಸರಿಡಲು ಒತ್ತಾಯಿಸಿ ರಾಜ್ಯಾದ್ಯಂತ 'ವಿಶ್ವವಿದ್ಯಾಲಯ ಬಂದ್'. ಮಹಾರಾಷ್ಟ್ರದ ಮರಾಠವಾಡ ವಿಶ್ವವಿದ್ಯಾಲಯಕ್ಕೆ ಡಾ.ಅಂಬೇಡ್ಕರ್ ಹೆಸರನ್ನು ಇಡಬೇಕೆಂಬ ತೀರ್ಮಾನವನ್ನು ಶಾಸನ ಸಭೆ ೧೯೭೮ರಲ್ಲಿ ಕೈಗೊಂಡಿತ್ತು. ಆಗ ಯಾವ ಪಕ್ಷದ ಶಾಸಕರೂ ಕೂಡ ವಿರೋಧವನ್ನು ವ್ಯಕ್ತಪಡಿಸಲಿಲ್ಲ ಆದರೆ ತೀರ್ಮಾನವನ್ನು ಜಾರಿಗೊಳಿಸುವ ಕಾರ್ಯಕ್ಕೆ ಮರಾಠವಾಡ ಪ್ರದೇಶದ ಜಾತ್ಯಂಧ ಮನಸ್ಸುಗಳು ತೀವ್ರವಾಗಿ ಪ್ರತಿಭಟಿಸಿದವು. ಆಗ ನೂರಾರು ಮುಗ್ಧ ದಲಿತರು ಕೊಲೆಯಾದರು. ಸಹಸ್ರಾರು ಜನ ನಿರ್ಗತಿಕರಾದರು''[೨೫].

* ''ಶಿಕ್ಷಣ ಕ್ಷೇತ್ರದಲ್ಲಿ ದಲಿತ ವಿದ್ಯಾರ್ಥಿಗೆ ಆದ ಅನ್ಯಾಯವನ್ನು ಪ್ರತಿಭಟಿಸಿ ಗುಲಬರ್ಗಾ ವಿಶ್ವವಿದ್ಯಾಲಯದ ನಂದಿಹಳ್ಳಿ ಸ್ನಾತಕೋತ್ತರ ಕೇಂದ್ರಕ್ಕೆ ದಲಿತರಿಂದ ಮುತ್ತಿಗೆ''[೨೬].

''ಜನಾಂದೋಲನ ಸಮನ್ವಯ ಸಮಿತಿ 'ಪೆಪ್ಸಿ ಕೋಲ ಪುಡಿ ಪುಡಿ ಮಾಡಿ ಬಹುರಾಷ್ಟ್ರೀಯ ಕಂಪನಿಗಳನ್ನು ಬಹಿಷ್ಕರಿಸಿ''.[೨೭] ಬಹುರಾಷ್ಟ್ರೀಯ ಕಂಪನಿಗಳು ಭಾರತದಂತ ತೃತೀಯ ಜಗತ್ತಿನ ರಾಷ್ಟ್ರಗಳ ಮೇಲೆ ನಡೆಸುತ್ತಿರುವ ಸಾಮ್ರಾಜ್ಯಶಾಹಿಯ ಸ್ವರೂಪವನ್ನು ದಲಿತ ಚಳುವಳಿ ಖಂಡಿಸುತ್ತದೆ. ಬಹುರಾಷ್ಟ್ರೀಯ ಕಂಪನಿ ಹಾಗೂ ದಲಿತ ಚಳುವಳಿಯ ಸಂಬಂಧವು ಎತ್ತದಿಂದತ್ತಣ ಎಂಬ ಪ್ರಶ್ನೆಯು ಹುಟ್ಟಬಹುದು. ಇಲ್ಲಿ ಈ ಕಂಪನಿಗಳ ಆಗಮನವು ವ್ಯವಸ್ಥಿತವಾಗಿ ಹೇಗೋ ಹೊಂದಿಕೊಂಡು ಹೋಗುವ ಈ ದೇಶದ ಬದುಕಿಗೆ ದಿಢೀರನೆ ಪಶ್ಚಿಮದ ಶ್ರೀಮಂತ ರಾಷ್ಟ್ರಗಳ ತಂತ್ರಜ್ಞಾನ; ಅವುಗಳ ಸರಕುಗಳು ಮಾರುಕಟ್ಟೆಯಲ್ಲಿ ಬಂದರೆ ಅವುಗಳ ಪರಿಣಾಮಗಳು ತೀವ್ರತರವಾಗಿರುತ್ತವೆ. ಆದರೆ ಈ ಕಂಪನಿಗಳಿಂದ ನಿರುದ್ಯೋಗ, ಬಡತನ, ಪರಿಸರ ಹಾನಿ, ಹಾಗೂ ಅವರು ಉತ್ಪಾದಿಸಿದ ಉತ್ಪಾದನ ಸರಕುಗಳ

ಕೊಳ್ಳುವವರು ಎಂಥವರು? ಅದರಿಂದ ಉಂಟಾಗುವ ದುಷ್ಪರಿಣಾಮಗಳು ಯಾವ ಬಗೆಯವು ಎಂಬುದನ್ನು ವಿರೋಧಿಸುವ ಕೆಲಸವನ್ನು ದಲಿತ ಚಳುವಳಿ ಮಾಡುತ್ತಾ ಬಂದಿದೆ. ದಲಿತ ಚಳುವಳಿಯ ದೃಷ್ಟಿಯಲ್ಲಿ ತನ್ನ ಸಮುದಾಯಗಳ ಮೇಲೆ ಜಾತಿ ವ್ಯವಸ್ಥೆಯ ಒಟ್ಟಾರೆ ಶೋಷಣೆಯು ಎಷ್ಟು ಮುಖ್ಯವೊ, ಅಷ್ಟೇ ಮುಖ್ಯವಾಗಿ ಬಹುರಾಷ್ಟ್ರೀಯ ಕಂಪನಿಗಳಿಂದ ಉದ್ಭವಗೊಳ್ಳುವ ತಮ್ಮ ಸಮುದಾಯಗಳ ಸಮಸ್ಯೆಗಳನ್ನು ಪರಿಗಣಿಸಿ ಪ್ರತಿಭಟಿಸುತ್ತಿದೆ.

''ದಲಿತ ವಿದ್ಯಾರ್ಥಿಗಳಿಗೆ ಕಾಲೇಜ್ ಹಾಸ್ಟೆಲ್ ತೆರೆಯಲು ಒತ್ತಾಯಿಸಿ ಮುಖ್ಯ ಮಂತ್ರಿಗಳ ಗಮನಕ್ಕೆ''[೨೮]

''ಆಗಸ್ಟ್ ೧೫ರಂದು ಗ್ಯಾಟ್ ಷರತ್ತಿನ ಹೊಸ ಆರ್ಥಿಕ ನೀತಿಯ ವಿರುದ್ಧ ರಾಜ್ಯಾದ್ಯಂತ ಪ್ರತಿಭಟನೆ''.[೨೯] ಗ್ಯಾಟ್‌ನ ಹೊಸ ಆರ್ಥಿಕ ನೀತಿಯು ರೈತರಿಗೆ, ದಲಿತರಿಗೆ, ಹಿಂದುಳಿದ ಜಾತಿ ವರ್ಗಗಳಿಗೆ ಕಾರ್ಮಿಕರಿಗೆ ಗ್ಯಾಟ್ ಮಾರಕ ಅಸ್ತ್ರವಾಗಿದೆ. ಮುಕ್ತ ಮಾರುಕಟ್ಟೆಯಿಂದ ಆಗುವ ರೈತನ ಸಮಸ್ಯೆಗಳು ಈ ವಿರೋಧಕ್ಕೆ ಸೇರುತ್ತವೆ. ದೇಶದ ಮೂಲಭೂತ ಸಮಸ್ಯೆಗಳು ಹೊಸ ಆರ್ಥಿಕ ನೀತಿಗೆ, ಎಷ್ಟು ಪ್ರಸ್ತುತ ಎಂಬುದನ್ನು ದಲಿತ ಚಳುವಳಿಯ ಪ್ರಶ್ನೆಯಾಗಿದೆ.

''ಸಾಮ್ರಾಜ್ಯಶಾಹಿಯ ಆರ್ಥಿಕ-ಕೈಗಾರಿಕಾ ನೀತಿಯನ್ನು ವಿರೋಧಿಸಿ! IMF - WB ಸಾಲದ ಸಂಕೋಲೆಯಿಂದ ದೇಶವನ್ನು ವಿಮುಕ್ತಿಗೊಳಿಸಿ''[೩೦]. ದಲಿತ ಸಂಘಟನೆಗಳ ಆಶಯವು ದಲ್ಲಾಳಿ ಆಳುವವರ್ಗದ ಜನವಿರೋಧಿ, ಕ್ರೂರ ದಮನಕಾರಿ ನೀತಿಯಿಂದ ರೈತ ಕಾರ್ಮಿಕರ ಸುಲಿಗೆಗಳನ್ನು ವಿರೋಧಿಸುವುದಾಗಿರುತ್ತದೆ. ದೇಶದ ಸಾಲ ಜನಸಾಮಾನ್ಯರ ಸಾಲವೂ ಹೌದು.

ಈ ಮೇಲಿನ ಅಂಶಗಳು ದಲಿತ ಚಳುವಳಿಯಲ್ಲಿ ಬಂದ ಕೆಲವು ಉದಾಹರಣೆಗಳಷ್ಟೆ. ಮತ್ತೆ ಕೆಲವು ಉದಾಹರಣೆಗಳಿಗೆ ಗಂಗಾರಾಂ ಚಂಡಾಳರ 'ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್'* ಕೃತಿಯನ್ನು ನೋಡಬಹುದು. ಪುಟ.೮೧ರಿಂದ ೮೭ರವರೆಗೆ. ಜೊತೆಗೆ ಬೆಂಡಗೇರಿಯಲ್ಲಿ ಮಲ ತಿನ್ನಿಸಿದ ಪ್ರಕರಣ, ಬದನವಾಳಿನ ದುರಂತ, ಕಂಬಾಲಪಲ್ಲಿಯ ದಲಿತರ ಸಜೀವ ದಹನ ಇಂಥ ನೂರಾರು ಘಟನೆಗಳ ವಿರುದ್ಧ ದಲಿತ ಚಳುವಳಿ ತನ್ನ ಹೋರಾಟವನ್ನು ನಡೆಸುತ್ತಾ ಇದೆ.

## ದಲಿತ ಚಳುವಳಿ ಹೇಗೆ ನಡೆಯುತ್ತದೆ?

ದಲಿತ ಚಳುವಳಿಯು ತಮ್ಮ ಸಮುದಾಯಗಳಿಗೆ ದಲಿತೇತರ ಶೋಷಣೆಯ ಪ್ರತಿಫಲಕ್ಕೆ ಹಲವು ರೀತಿಯಲ್ಲಿ ಪ್ರತಿಭಟನೆಯನ್ನು ನಡೆಸಿದೆ. ಇದು ದಲಿತ ಚಳುವಳಿ ಮುಷ್ಕರದ ನಿರಂತರತೆ. ಇಲ್ಲಿನ ಎದುರು ಕೇಳಿಕೆಯು ಸರ್ಕಾರದ ಅಧಿಕಾರ ವರ್ಗ. ಈ ವರ್ಗದ ಮೂಲಕ ಶಕ್ತಿ ರಾಜಕಾರಣಕ್ಕೆ ಪ್ರಶ್ನೆಯಾಗಿರುತ್ತದೆ. ಆದ್ದರಿಂದ ಬಹುತೇಕ ಮುಷ್ಕರವು ತಾಲೂಕು ಕಛೇರಿ; ಜಿಲ್ಲಾಧಿಕಾರಿ ಕಛೇರಿ ಎದುರು ನಡೆಯುತ್ತದೆ. ನಂತರದಲ್ಲಿ ತಮ್ಮ ದೂರು ಅರ್ಜಿಯನ್ನು ಈ ಅಧಿಕಾರಿಗಳಿಗೆ ಸಲ್ಲಿಸಲಾಗುತ್ತದೆ. ಈ ಅಧಿಕಾರಿಗಳ ಮೂಲಕ ಆಳುವ ಪಕ್ಷಕ್ಕೆ ಒತ್ತು ಹಾಕಿಸಲಾಗುತ್ತದೆ.

ದಲಿತ ಚಳುವಳಿ ಯಾವ, ಯಾವ ರೀತಿಯಲ್ಲಿ ನಡೆಯುತ್ತಿದೆ? ಹೇಗೆ ನಡೆಯುತ್ತಿದೆ. ಅದಕ್ಕೆ ಕಾರಣವೇನು? ಎಂಬುವು

ಮುಖ್ಯವಾದ ಪ್ರಶ್ನೆಗಳು ಈ ಮುಷ್ಕರವು ಬಹುಪಾಲು ನಗರ ಪ್ರದೇಶದಲ್ಲಿ ನಡೆಯುತ್ತವೆ. ನಗರದ ಪ್ರಮುಖ ಬೀದಿಗಳಲ್ಲಿ ನಡೆಯುತ್ತವೆ. ನಗರದ ಪ್ರಮುಖ ಕಛೇರಿಯ ಎದುರು, ಬಂಡವಾಳಗಾರ ಅಂಗಡಿ ಮುಗ್ಗಟ್ಟುಗಳ ಮುಂದೆ, ಸರ್ಕಾರಿ ನೌಕರರ ಮುಂದೆ, ಹಾಗೂ ಸೌಲಭ್ಯವನ್ನು ಹೊಂದಿರುವ ದಲಿತೇತರ ವಸತಿಗಳ ಮಂದೆ ಮುಷ್ಕರದ ಮೆರವಣಿಗೆಗಳು ಇರುತ್ತವೆ. ಇಲ್ಲಿ ಬಗೆಬಗೆಯ ಹಾಡುಗಳು, ಘೋಷಣೆಗಳು, ಜೈಕಾರ, ಧಿಕ್ಕಾರಗಳ ಜೊತೆಯಲ್ಲಿ ರೋಷವನ್ನು ತುಂಬಿರುತ್ತವೆ.

ಇದಕ್ಕೆ ಕಾರಣವನ್ನು ನೋಡುವುದಾದರೆ ಸಮಸ್ಯೆಯ ವಿಷಯವು ಮೂಲದ್ದಾದರೆ, ಸಮುದಾಯದ ಸಂಘಟನಾತ್ಮಕ ಶಕ್ತಿಯನ್ನು ಗುರ್ತಿಸಿಕೊಳ್ಳಲು ಒಗ್ಗೂಡುವಿಕೆಯೂ ಮತ್ತೊಂದಾಗಿರುತ್ತದೆ. ದಲಿತ ಶಕ್ತಿಯು ಬೇರೆಯ ಸಮುದಾಯಗಳಿಗಿಂತ ಕಡಿಮೆಯೇನಿಲ್ಲ, ನಮ್ಮ ಶೋಷಣೆಯ ಅನ್ಯಾಯಕ್ಕೆ ನಮ್ಮಲ್ಲಿ ಒಮ್ಮತದ, ಸ್ವಾಭಿಮಾನದ ಒಗ್ಗೂಡುವಿಕೆ ಇದೆ ಎನ್ನುವುದು ಇದರ ಆಶಯವಾಗಿರುತ್ತದೆ. ಇಲ್ಲಿ ಹಲವು ಸಮುದಾಯ ಪರಂಪರೆಯ ಭಾವನೆಗಳಿಗೆ ಸಂಬಂಧಿಸಿರುತ್ತವೆ. ಮತ್ತು ಇಲ್ಲಿ ತಮ್ಮ ಸಂಸ್ಕೃತಿಯನ್ನು ಬಿಂಬಿಸುವಂತಹದೂ ಕೂಡ ಆಗಿರುತ್ತದೆ.

ದಲಿತ ಚಳುವಳಿಯು ಹೇಗೆ ನಡೆಯುತ್ತದೆ ಎಂಬುದನ್ನು ಹೀಗೆ ಕ್ರೋಡೀಕರಿಸಲಾಗಿದೆ.

* ಜಿಲ್ಲಾಧಿಕಾರಿಗಳ ಕಛೇರಿ, ತಹಶೀಲ್ದಾರರ ಕಛೇರಿ ಪಿಕೆಟಿಂಗ್.

* ಜಿಲ್ಲಾಧಿಕಾರಿ ಕಛೇರಿ ಮುಂದೆ, ತಹಶೀಲ್ದಾರರ ಕಛೇರಿ ಮುಂದೆ ಧರಣಿ ಸತ್ಯಾಗ್ರಹ.

* ಜಿಲ್ಲಾ ಕೇಂದ್ರ, ತಾಲೂಕು ಕೆಂದ್ರಗಳಲ್ಲಿ ಮೆರವಣಿಗೆ.

* ಆಯಾ ಸಮಸ್ಯೆಗೆ ಸಂಬಂಧಿಸಿದ ಆಫೀಸಿನ ಎದುರು ಪ್ರತಿಭಟನೆ ; ಇಲ್ಲವೆ ಧರಣಿ ಸತ್ಯಾಗ್ರಹ.

* ಏಪ್ರಿಲ್ ೧೪ ಅಂಬೇಡ್ಕರ್ ಜನ್ಮದಿನದ ಆಚರಣೆ ಹಾಗೂ ಅಂದು ಶೋಷಿತ ವಸ್ತು ವಿಷಯಕ್ಕೆ ಸಂಬಂಧಿಸಿದಂತ ಚರ್ಚೆ. ಅಂಬೇಡ್ಕರ್‌ರವರ ವಿಚಾರಧಾರೆಯ, ಹೋರಾಟದ ಕೆಲವು ವಿಷಯಗಳ ಪ್ರಸ್ತಾಪ.

* ಡಿಸೆಂಬರ್ ೬ರ ದಿನವು ಸ್ಮರಣ ದಿನ, ಶೋಷಿತ ಶಕ್ತಿಯ ಐಕ್ಯತಾ ದಿನ, ಮಹಾಪರಿನಿರ್ವಾಣ ದಿನ ಅಥವಾ ರಾಷ್ಟ್ರ ಪುನರ್‌ನಿರ್ಮಾಣಾ ಸಂಕಲ್ಪ ದಿನ.

* ದಲಿತರ ಸಾಂಸ್ಕೃತಿಕ ಐಕ್ಯತೆಗಾಗಿ ತಮಟೆಯ ಮೊಳಗು.

* ಶೋಷಿತ ದಿನ ರ‍್ಯಾಲಿ-ಬೆಂಗಳೂರಿಗೆ, ಅಥವಾ ಸಂಬಂಧಿಸಿದ ಕೇಂದ್ರಗಳಲ್ಲಿ.

* ರಸ್ತೆ ತಡೆ ಚಳುವಳಿ, ರೈಲುತಡೆ ಚಳುವಳಿ.

* ನಗರ ಬಂದ್, ಸಾರಿಗೆ ಬಂದ್‌ಗೆ ಕರೆ.

* ಪ್ರತಿಭಟನಾ ಧರಣಿ ಮತ್ತು ಮುತ್ತಿಗೆ ಕಾರ್ಯಕ್ರಮ.

* ರಕ್ತದಾಹ ಭಾರತದ ಪ್ರಧಾನಿಗೆ ದಲಿತರ ರಕ್ತಾರ್ಪಣೆ. ಚುಂಡೂರು ದಲಿತರಿಗಾಗಿ ಒಂದು ರೂಪಾಯಿ [೨೧] ತಮ್ಮ ಜನಾಂಗದ ರಕ್ತದಾಹವನ್ನು ಮಾಡಿದವರ ಪ್ರತಿಕಾರವಾಗಿ ತಮ್ಮ ರಕ್ತವನ್ನು ಭಾರತದ ಅತ್ಯುನ್ನತ ಆಡಳಿತ ಸ್ಥಾನದಲ್ಲಿರುವ ಪ್ರಧಾನಿಗೆ ಕೊಡುವ ಮೂಲಕ ಪ್ರತಿಭಟನೆ.

* ವಿಶ್ವವಿದ್ಯಾಲಯ ಬಂದ್.* [೩೨]

* ಮುಖ್ಯಮಂತ್ರಿ, ಮಂತ್ರಿಗಳ, ಶಾಸಕರ, ಸಂಬಂಧಿಸಿದ ಅಧಿಕಾರಿಗಳ ಮನೆಯ ಮುಂದೆ, ಕಛೇರಿ ಮುಂದೆ ಪಿಕೆಟಿಂಗ್.

* ದಸಂಸ ಅರೆಬೆತ್ತಲೆ ಮೆರವಣಿಗೆ.* [೩೩]

* ಹಳ್ಳಿಗಳ ಅರಿವಿನ ಆಂದೋಲನ - ಅಂಬೇಡ್ಕರ್ ೧೦೫ ನೇ ಹುಟ್ಟು ಹಬ್ಬದ ಪ್ರಯುಕ್ತ ದಸಂಸ ಮಂಡ್ಯದವರು ಪ್ರತಿ ತಾಲೂಕಿನ ೧೦೫ ಕಾರ್ಯಕರ್ತರು ಏಪ್ರಿಲ್ ೧೩ರಂದು ಹೊರಟು ೧೪ರಂದು ಜಿಲ್ಲಾ ಕೇಂದ್ರವನ್ನು ತಲುಪಿದ್ದಾರೆ. ಇದು ದಲಿತ ಚಳುವಳಿಯ ರೂಪು ರೇಷೆಗಳನ್ನು ತಿಳಿಸುತ್ತಾ, ಅಂಬೇಡ್ಕರ್ ವಿಚಾರವನ್ನು ಜನರಿಗೆ ತಿಳಿಸುವುದಾಗಿರುತ್ತದೆ. ಹಾಗೆಯೇ ದಲಿತರಿಗೆ ಮುಖ್ಯವಾಗಿ ಪಡೆಯಲೇಬೇಕಿರುವ ಶಿಕ್ಷಣದ ಮಹತ್ವವನ್ನು ಹಳ್ಳಿಗಳ ಅರಿವಿನ ಆಂದೋಲನದಲ್ಲಿ ಜನರಿಗೆ ಮೂಡಿಸಲಾಯಿತು.

* 'ತಮಟೆಯ ಕೂಗು' [೩೪] ಅಂಬೇಡ್ಕರ್ ಜನ್ಮದಿನದಂದು ನಡುರಾತ್ರಿಯಲ್ಲಿ ತಾಲೂಕು ಮತ್ತು ಜಿಲ್ಲಾ ಕೇಂದ್ರಗಳಲ್ಲಿ ನಡೆಸಲಾಗಿದೆ. ದಲಿತ ಚಳುವಳಿಯು, ತಮ್ಮ ಸಮುದಾಯದವರು ಸದ್ದುಮಾಡುವ ತಮಟೆಯನ್ನು ಸ್ವಾಭಿಮಾನದಿಂದ ಅದರ ಧನಿಯನ್ನು ನಡುರಾತ್ರಿಯಲ್ಲಿ ಮೊಳಗಿಸಿದರು. ಇದು ದಲಿತ ಚಳುವಳಿಯ ಇನ್ನೊಂದು ಮುಖ.

* ದಲಿತ ಮಹಿಳೆಯರ ಮೌನ ಮೆರವಣಿಗೆ. [೩೫]

ಕರ್ನಾಟಕ ದಲಿತ ಸಂಘರ್ಷ ಸಮಿತಿಯು ನಡೆಸುವ ತಮ್ಮ ಹೋರಾಟದ ಪ್ರಕ್ರಿಯೆಯಲ್ಲಿ ಅಂದರೆ ಧರಣಿ, ಮೆರವಣಿಗೆ ಮುಂತಾದ ಸಂದರ್ಭಗಳಲ್ಲಿ ಮೈಬೆಚ್ಚಿಸುವಂತ ಹೋರಾಟದ ಹಾಡುಗಳನ್ನು ಹಾಡುತ್ತಾರೆ. ಇವು ದಲಿತ ಯುವಕರನ್ನು ಯುವತಿಯರನ್ನು ದಲಿತ ಚಳುವಳಿಗೆ ದುಮುಕಲು ಸ್ಫೂರ್ತಿಯಾಗಿದೆ.

## ದಲಿತ ಚಳುವಳಿಯ ಕರಪತ್ರಗಳಲ್ಲಿನ ಕೆಲವು ಪ್ರಚಾರಿಕೆಗಳು

ದಲಿತ ಚಳುವಳಿಯಲ್ಲಿ ಕರಪತ್ರಗಳು ಬಹಳ ಮುಖ್ಯಪಾತ್ರವನ್ನು ವಹಿಸಿವೆ. ಇವುಗಳು ಚಳುವಳಿಯ ವಸ್ತುವಿಷಯದ ಪ್ರಚಾರದ ಮಾಧ್ಯಮವಾಗಿ ಕಾರ್ಯನಿರ್ವಹಿಸುತ್ತವೆ. ಯಾವ ಸಂಗತಿಯ ಆಧಾರದ ಮೇಲೆ, ಯಾವ ನ್ಯಾಯ ತೀರ್ಪಿನ ಆಧಾರದ ಮೇಲೆ, ಯಾವ ನಿರ್ಧಾರದಿಂದ, ಯಾವ ಉದ್ದೇಶದ ಗುರಿಯನ್ನು ಇಟ್ಟುಕೊಂಡು, ಯಾರ ವಿರುದ್ಧ ಚಳುವಳಿ ನಡೆಯುತ್ತದೆ ಎಂಬುದನ್ನು ಸ್ಪಷ್ಟವಾಗಿ, ನಿಖರವಾಗಿ ಕರಪತ್ರಗಳು ತಮ್ಮ ಪ್ರಚಾರದ ಮಿತಿಯಲ್ಲಿ ದಾಖಲೆಯನ್ನು ಕೊಡುತ್ತವೆ. ದಲಿತ ಚಳುವಳಿಯ ಎಲ್ಲಾ ಸಂದರ್ಭದಲ್ಲೂ, ಕರಪತ್ರಗಳು ತಮ್ಮ ಪಾಲನ್ನು ವಹಿಸಿಯೇ ಇರುತ್ತವೆ. ಇವು ಪ್ರಚಾರದಲ್ಲಿ ಜನರನ್ನು ತಲಪುತ್ತವೆ. ಅವುಗಳ ವಿಷಯ ಜನರಿಗೆ ತಲುಪಬೇಕು, ಅದರಿಂದ ಸಮಾಜದಲ್ಲಿನ ದಲಿತರ ಸ್ಥಿತಿಯನ್ನು ಓದುವ ಸಮುದಾಯಕ್ಕೆ ಮನವರಿಕೆ ಮಾಡಿಕೊಡಬೇಕು ಎಂಬುದು ದಲಿತ ಚಳುವಳಿಯ ಉದ್ದೇಶ ಆಗಿರುತ್ತದೆ.

ಹಾಗಾಗಿ ದಲಿತ ಚಳಿವಳಿಯಲ್ಲಿ ಕರಪತ್ರಗಳು ಪ್ರಾಮುಖ್ಯತೆಯನ್ನು ಪಡೆದಿವೆ, ಅಂದರೆ ಪ್ರತಿಭಟನೆ, ಪ್ರತಿರೋಧಗಳ ವಸ್ತು ವಿಷಯಗಳನ್ನು ಕರಪತ್ರಗಳು ಪ್ರಚಾರವನ್ನು ಮಾಡುತ್ತವೆ. ಇವುಗಳು ಇತರ ಹೋರಾಟಗಳ, ಚಳುವಳಿಗಳ ಕರಪತ್ರಗಳಿಗೂ, ದಲಿತ ಚಳುವಳಿಯ ಕರಪತ್ರಗಳಿಗೂ ಸಾಕಷ್ಟು ಭಿನ್ನತೆ ಕಾಣಿಸಿಗುತ್ತದೆ. ಇಲ್ಲಿ ಇತರ ಚಳುವಳಿಗಿಂತ ದಲಿತ ಚಳುವಳಿ ಭಿನ್ನ. ಏಕೆಂದರೆ, ಇತರ ಚಳುವಳಿಗಳಲ್ಲಿ ಸಮಾಜದಲ್ಲಿನ ಶ್ರೇಣೀಕೃತ ವ್ಯವಸ್ಥೆಯ ದಲಿತೇತರ ಸಮುದಾಯಗಳಿರುತ್ತವೆ. ಈ ದಲಿತೇತರರ ಸಮಸ್ಯೆಗಳು ಮತ್ತು ಅದರ ವಸ್ತು ವಿಷಯಗಳು ದಲಿತ ಸಮುದಾಯಗಳ ಸಮಸ್ಯೆಗಳ ವಸ್ತುವಿನಷ್ಟು ತೀವ್ರವಾಗಿರುವುದಿಲ್ಲ. ಇದನ್ನು ಮನುಷ್ಯ ಸಂಬಂಧದ ಜಾತಿವ್ಯವಸ್ಥೆಯಲ್ಲಿರುವ ತಾರತಮ್ಯದ ಅರ್ಥದಲ್ಲಿ ಗ್ರಹಿಸಲಾಗಿದೆ. ದಲಿತೇತರರ ಸಮಸ್ಯೆಗಳನ್ನು ಅವರ ಸಮುದಾಯಗಳ ಕೇಂದ್ರದಲ್ಲಿಟ್ಟು ನೋಡಿದಾಗ ಅದು ಅವರಿಗೆ ತೀವ್ರವಾಗಿರುತ್ತದೆ. ದಲಿತೇತರರ ಸಮಸ್ಯೆಯೊಂದಿಗೆ ದಲಿತರ ಸಮಸ್ಯೆಯನ್ನು ಇಟ್ಟಾಗ ದಲಿತರ ಸಮಸ್ಯೆಯ ತೀವ್ರತೆ ಗೊತ್ತಾಗುತ್ತದೆ. ಆದ್ದರಿಂದ ದಲಿತ ಕರಪತ್ರಗಳಲ್ಲಿನ ಪ್ರಚಾರಿಕೆಯ ವಸ್ತುವಿಷಯ ಅದರ ತೀವ್ರತೆಯು ದಲಿತ ಚಳುವಳಿಯ ಸಂದರ್ಭದಲ್ಲಿ ವಿಭಿನ್ನತೆ ಹಾಗೂ ವೈಶಿಷ್ಟ್ಯತೆಯನ್ನು ಹೊಂದಿರುತ್ತವೆ.

ದಲಿತ ಚಳುವಳಿಯಲ್ಲಿ ಕರಪತ್ರಗಳನ್ನು ಬಿತ್ತರಿಸುವ ಕೆಲವು ಕಾರ್ಯಾಚರಣೆಗಳ ಸಂದರ್ಭಗಳನ್ನು ನೋಡುವುದಾದರೆ ಈ ಕರಪತ್ರಗಳು ಎರಡು ಕಡೆಗಳಲ್ಲಿ ಬಹುಮುಖ್ಯವಾಗಿ ಬಿತ್ತರಿಸಲ್ಪಡುತ್ತವೆ. ಒಂದು ಜನ ಸಾಮಾನ್ಯರಿಗೆ ಅಥವಾ ಓದುವ ವರ್ಗಕ್ಕೆ ತಲುಪಿಸುವುದು. ಮತ್ತೊಂದು ಸಂಬಂಧಿಸಿದ ಅಧಿಕಾರಿಗಳಿಗೆ ವ್ಯವಸ್ಥಿತವಾಗಿ ತಲುಪಿಸುವುದು ಹಾಗೆಯೇ ಹಿಂದೆಯೇ ಹೇಳಿದಂತೆ ಅಧಿಕಾರಿಗಳ ಮೂಲಕ ಶಕ್ತಿ ರಾಜಕಾರಣಕ್ಕೆ ತಲುಪಿಸುವುದೂ ಆಗಿರುತ್ತದೆ. ಸಮಾಜದಲ್ಲಿನ ಬದುಕಿನ ಪ್ರತಿಯೊಂದು ಸಂದರ್ಭಕ್ಕೆ ಸಂಬಂಧಿಸಿದಂತೆ ದಲಿತರು ದಲಿತೇತರರಿಂದ ಅನುಭವಿಸುತ್ತಿರುವುದನ್ನು ಈ ಕರಪತ್ರಗಳು ಹೊಂದಿರುತ್ತವೆ. ಸಂಸದೀಯ ಶಾಸನಬದ್ಧ ಸರ್ಕಾರದ ನಿಯಮದಂತೆ ತಮ್ಮ ಹಕ್ಕಿನ ನೈತಿಕ ಪ್ರಶ್ನೆಯನ್ನು ಎತ್ತುವುದು, ಚರ್ಚಿಸುವುದು, ಹಾಗೂ ಬೇಡಿಕೆಯನ್ನು ಇಡುವುದು ಕರಪತ್ರಗಳ ಮುಖ್ಯ ವಿಷಯಗಳಾಗಿರುತ್ತವೆ. ಸಾಮಾನ್ಯ ಓದುಗನಿಗೆ ಸಮಾಜದ ವಿವಿಧ ಭಾಗಗಲ್ಲಿ ಆಗುತ್ತಿರುವ ಘಟನೆ, ಅಥವಾ ಸಮಾಜದ ಅಸಮಾನತೆಯ ಅರಿವನ್ನು ತಿಳಿಸುವುದು ಆಗಿರುತ್ತದೆ. ಇದು ಕಾನೂನು ನಿಯಮದ ಅನ್ವಯದಲ್ಲಿರುವುದನ್ನು ಕೇಳುವುದಾಗಿರುತ್ತದೆ. ಅಲ್ಲದೆ ಪ್ರತಿಭಟಿಸಿ ಕಾನೂನಾತ್ಮಕವಾಗಿ ಪಡೆಯುವುದಾಗಿರುತ್ತದೆ.

ದಲಿತ ಚಳುವಳಿಯ ಕರಪತ್ರಗಳ ಮೇಲೆ ಮೊದಲು ಉಲ್ಲೇಖಿಸುವ ಪದಗಳು 'ಶಿಕ್ಷಣ, ಸಂಘಟನೆ, ಮತ್ತು ಹೋರಾಟ'. ಈ ಮೂರು ಪದಗಳನ್ನು ಅಂಬೇಡ್ಕರ್ ಅವರು ದಲಿತ ಸಮುದಾಯಕ್ಕೆ ಹೇಳಿದ ಪ್ರಮುಖವಾದ ಮಾತುಗಳು. ದಲಿತರು ಮೊದಲು ಅಕ್ಷರಸ್ಥರಾಗಬೇಕು. ಅಕ್ಷರ ಕಲಿಯುವಿಕೆಯ ಸೋಂಕೆ ಇಲ್ಲದೆ ಬದುಕುತ್ತಿರುವ ದಲಿತ ಸಮುದಾಯಗಳು ಮೊದಲು ವಿದ್ಯಾವಂತರಾಗಬೇಕು. ಆಗ ಸಮಾಜದ ವಾಸ್ತವವೇನು? ಎಂಬ ಪ್ರಶ್ನೆಯು ಮೂಡುತ್ತದೆ. ನಾನು ಯಾರು? ಏಕೆ ನನ್ನನ್ನು ಸಮಾಜ ಹೀಗೆ ನೋಡುತ್ತಿದೆ? ಅದಕ್ಕೆ ಕಾರಣಗಳು ಏನು? ಇವರೊಂದಿಗೆ ನಾನು ಹೇಗೆ ಬದುಕಬೇಕು? ಈ ಸಮಾಜವನ್ನು ಹಿಡಿತದಲ್ಲಿಟ್ಟುಕೊಂಡಿರುವ ವ್ಯವಸ್ಥೆ ಎಂತಹದು? ಈ ವ್ಯವಸ್ಥೆಯಲ್ಲಿ ನನ್ನ ಪಾಲೇನು? ಅದನ್ನು ನಾನು ಹೇಗೆ ಪಡೆಯಬೇಕು ಎಂಬ ವಿಷಯಗಳನ್ನು ತಿಳಿಯಲು ದಲಿತರಿಗೆ ಶಿಕ್ಷಣವು ಅನಿವಾರ್ಯ. ದಲಿತ ಸಮುದಾಯದ ಒಬ್ಬ ಅನಕ್ಷರಸ್ಥನಿಗೆ ನಾನು ಬದುಕುವ ಸ್ಥಿತಿಯು ನಿಕೃಷ್ಟದಲ್ಲಿದೆ, ನಾನು ಶೋಷಣೆಗೆ ಒಳಗಾಗುತ್ತಿದ್ದೇನೆ, ನನಗೆ ಬದುಕಿನಲ್ಲಿ ಎಲ್ಲಾ ರೀತಿಯ ವ್ಯವಹಾರದ ಜ್ಞಾನದ ಹಕ್ಕು ನನಗಿದೆ ಎನ್ನುವುದು

ಗೊತ್ತಿರುವುದು ಔಪಚಾರಿಕ ಶಿಕ್ಷಣ ಪಡೆದ ನಂತರದಿಂದಲೆ, ಶಿಕ್ಷಣವು ಬದುಕಿನ ಎಲ್ಲಾ ವ್ಯವಸ್ಥೆಯ ಮಗ್ಗುಲನ್ನು ಪರಿಚಯಿಸುತ್ತದೆ. ದಲಿತರಿಗೆ ಶಿಕ್ಷಣ ಅಗತ್ಯವೆಂಬುದು ದಲಿತ ಚಳುವಳಿಯ ಕರಪತ್ರಗಳ ಪ್ರಚಾರವೂ ಕೂಡ ಆಗಿದೆ.

ಶಿಕ್ಷಣ ಪಡೆದ ದಲಿತನು ತಾನು ಬದುಕುವ ವ್ಯವಸ್ಥೆಯ ಸ್ಥಿತಿಯನ್ನು ಅರಿತು ಸಂಘಟನೆಯನ್ನು ಕಟ್ಟುವುದು ಅಥವಾ ಸೇರುವುದು ಕರಪತ್ರದ ಎರಡನೆಯ ಪ್ರಚಾರ. ಸಂಘಟನಾತ್ಮಕ ಚಟುವಟಿಕೆ ಇಲ್ಲಿದೆ. ವ್ಯಕ್ತಿ ಒಂಟಿಯಾಗಿ ತಮ್ಮ ಚಳುವಳಿಯ ರೂಪರೇಷೆಗಳನ್ನು ಸಿದ್ಧಪಡಿಸಲು ಆಗುವುದಿಲ್ಲ. ಯಾವುದೇ ಸಂಘಟನೆಯಲ್ಲಿ ತನ್ನ ನಿಯಮಗಳ ಪ್ರಣಾಳಿಕೆಗಳಿರುತ್ತವೆ. ಒಗ್ಗೂಡುವಿಕೆ ಇರುತ್ತದೆ, ಸಮಸ್ಯೆಗಳ ಚರ್ಚೆ, ಚಿಂತನೆ, ಧ್ಯೇಯ ಧೋರಣೆಗಳನ್ನು ಕುರಿತಂತೆ ಹೊಸ ಆಲೋಚನೆಗಳಿರುತ್ತವೆ. ಅಂತೆಯೇ ದಲಿತ ಸಂಘಟನೆಯಲ್ಲೂ ಇದೆ. ಹಾಗಾಗಿ ದಲಿತರ ಸಂಘಟನಾತ್ಮಕ ಆಲೋಚನೆಗಳು ಪಟ್ಟಭದ್ರಗಳು ಹಿತಾಸಕ್ತಿಯನ್ನು ಒಡೆಯುವ ಕೆಲಸ ಮಾಡಿದವು. ದಲಿತ ಚಳುವಳಿಯ ಪ್ರಣಾಳಿಕೆಯಲ್ಲಿ ಶಿಕ್ಷಣ ಎಷ್ಟು ಮುಖ್ಯವೋ, ಅಷ್ಟೇ ಸಂಘಟನೆ ಮುಖ್ಯ. ದಲಿತ ಚಳುವಳಿಯ ಕರಪತ್ರಗಳಲ್ಲಿನ ಮೂರನೆಯದು ಹೋರಾಟ. ಇಲ್ಲಿ ಶಿಕ್ಷಣ ಪಡೆದು ಸಂಘಟಿತರಾಗಿ ಹೋರಾಟಕ್ಕೆ ಇಳಿಯುವುದು ಆಗಿರುತ್ತದೆ. ಹೋರಾಟದಲ್ಲಿ ತಮ್ಮ ಸಮಸ್ಯೆಗಳ ಪರಿಹಾರವನ್ನು ಕಾನೂನಿನ ಅನ್ವಯ ಪಡೆಯುವುದಾಗಿರುತ್ತದೆ. ದಲಿತರಿಗೆ ಶಿಕ್ಷಣ, ಸಂಘಟನೆ, ಹೋರಾಟ ಇವುಗಳು ಪ್ರಾಥಮಿಕವಾದವುಗಳು. ಇವು ಕರಪತ್ರಗಳಲ್ಲಿನ ಚಳುವಳಿಯ ಆಶಯವೂ ಕೂಡ. ಕರಪತ್ರಗಳು ದಲಿತ ಚಳುವಳಿಯಲ್ಲಿ ಒಂದು ರೀತಿಯ ಪ್ರಬಲವಾದ ಅಸ್ತ್ರಗಳು.

## ಕರಪತ್ರಗಳಲ್ಲಿನ ಚಿತ್ರಗಳು

ದಲಿತ ಚಳುವಳಿಯ ಕರಪತ್ರಗಳಲ್ಲಿ ಹೆಚ್ಚಾಗಿ ಕಂಡುಬರುವ ಚಿತ್ರ ದಲಿತರ ಸಾಂಸ್ಕೃತಿಕ ನಾಯಕ ಡಾ.ಬಿ.ಆರ್.ಅಂಬೇಡ್ಕರರದು. ಭಾರತದಲ್ಲಿ ದಲಿತರ ಸರ್ವ ಸಮಸ್ಯೆಗಳ ಬಗ್ಗೆ ಪ್ರಪ್ರಥಮವಾಗಿ ಕೂಗೆಬ್ಬಿಸಿದ ನಾಯಕ ಈತ. ಡಾ.ಬಿ.ಆರ್.ಅಂಬೇಡ್ಕರ್ ದಲಿತ ಚಳುವಳಿಯ ಸ್ಫೂರ್ತಿಯ ಚೇತನವೂ ಆಗಿದ್ದಾರೆ. ದಲಿತ ಚಳುವಳಿಯ ಕರಪತ್ರಗಳಲ್ಲಿ ಅಂಬೇಡ್ಕರ್ ಅವರ ಮುಖ ಚಿತ್ರದಂತೆ ಜೊತೆಗೆ ಬುದ್ಧನ ಚಿತ್ರ, ಬಸವಣ್ಣ ಚಿತ್ರ, ಮಾರ್ಕ್ಸ್, ಪೆರಿಯಾರ್, ದೇವರಾಜ ಅರಸು, ಬಿ.ಕೃಷ್ಣಪ್ಪ, ಮುಂತಾದವರ ಚಿತ್ರಗಳು ಕಂಡುಬರುತ್ತವೆ. ಬೌದ್ಧ ಧರ್ಮಕ್ಕೆ ಪ್ರಭಾವಿತರಾದ ಅಂಬೇಡ್ಕರ್ ತಮ್ಮ ಕೊನೆಯ ದಿನಗಳಲ್ಲಿ ಬೌದ್ಧ ಧರ್ಮವನ್ನು ಸೇರಿದರು. ಹಿಂದೂ ಧರ್ಮದ ಶ್ರೇಣೀಕೃತ ವ್ಯವಸ್ಥೆಗಿಂತ ಸಮಾನತೆಯನ್ನು ಸಾರುವ ಬೌದ್ಧಧರ್ಮಕ್ಕೆ; ಧರ್ಮದ ಅರಿವನ್ನು ಹೊಂದಿದ ಕೆಲವು ದಲಿತರ ಮನಸ್ಸು ಬೌದ್ಧ ಧರ್ಮದ ಕಡೆಗೆ ವಾಲಿತು. ಬಸವಣ್ಣನ ವಿಚಾರಗಳು ಅವನ ಸಮಾನತೆಯ ಜಾತಿ ವರ್ಗದ ಕಲ್ಪನೆಯು ಹನ್ನೆರಡನೆಯ ಶತಮಾನದಲ್ಲಿ ಕ್ರಾಂತಿಯನ್ನು ಉಂಟುಮಾಡಿರುವಂತಹದ್ದು. ಬಸವಣ್ಣನ ಚಿಂತನೆಯು, ಅವನ ವಚನಗಳು ದಲಿತ ಚಳುವಳಿಯಲ್ಲಿ ಸೇರ್ಪಡೆಯಾಗುತ್ತವೆ. ಮಾರ್ಕ್ಸ್ ಚಿಂತನೆ, ದೇವರಾಜ ಅರಸರ ಆಡಳಿತದಲ್ಲಿ ದಲಿತರಿಗೆ ದೊರೆತ ಸೌಕರ್ಯಗಳು, ಕರ್ನಾಟಕದಲ್ಲಿ ದಲಿತ ಚಳುವಳಿಯ ನಾಯಕತ್ವದ ಮುಂಚೂಣಿಯಲ್ಲಿದ್ದ ಬಿ.ಕೃಷ್ಣಪ್ಪನವರು, ದಲಿತ ರಾಜಕಾರಣಿ ವಾಗ್ಮಿ ಬಿ.ಬಸವಲಿಂಗಪ್ಪನವರು, ತಮಿಳುನಾಡಿನಲ್ಲಿ ದಲಿತರ ಏಳಿಗೆಗಾಗಿ ಕೆಲಸ ಮಾಡಿದ ರಾಮಸ್ವಾಮಿ ಪೆರಿಯಾರರ ಚಿಂತನೆಗಳು ದಲಿತ ಚಳುವಳಿಯ ಕರಪತ್ರಗಳಲ್ಲಿ ಬಿಂಬಿಸಿದವು. ಚಳುವಳಿಗೆ ಇವರು ಸ್ವಾಭಿಮಾನದ ಸಂಕೇತಗಳಾಗಿದ್ದಾರೆ. ಇವರು ಕರಪತ್ರಗಳಲ್ಲಿ ಕಂಡು ಬರುವ ವ್ಯಕ್ತಿ ಚಿತ್ರಗಳು.

ದಲಿತ ಸಂಘರ್ಷ ಸಮಿತಿಯ ಗುರುತಾಗಿ ಪೊರಕೆ ಮತ್ತು ಪಿಕಾಸಿಯನ್ನು ಜೋಡಿಸಿರುವ ಚಿತ್ರವನ್ನು ತಮ್ಮ ಸಂಘಟನೆಯ ಗುರುತಾಗಿ ಮಾಡಿಕೊಂಡರು. ಈ ಚಿತ್ರವು ದಲಿತ ಚಳುವಳಿಯ ಕರಪತ್ರಗಳಲ್ಲಿ ಕಂಡುಬರುತ್ತವೆ. ಇವು ಭೂಮಿಯನ್ನು ಅಗೆಯುವ ಮತ್ತು ಸ್ವಚ್ಛ ಮಾಡುವುದನ್ನು ಸೂಚಿಸುತ್ತದೆ. ಈ ಚಿಹ್ನೆಯನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿಯು ಗುರುತಾಗಿ ಇಟ್ಟುಕೊಂಡಿದೆ. ಇದು ದಲಿತರ ಶ್ರಮದ ಸಂಕೇತವಾಗಿದೆ.ಇದು ಪೊರಕೆಯ ನಿರಾಕರಣೆಗೆ, ಪಿಕಾಸಿಯ ಸ್ವೀಕರಣೆಗೆ ಸಂಕೇತವೂ ಹೌದು.

## ಕರಪತ್ರಗಳಲ್ಲಿನ ಕೆಲವು ಆಯ್ದ ಹೇಳಿಕೆಗಳು

ದಲಿತ ಚಳುವಳಿಯ ಕರಪತ್ರಗಳ ಪ್ರಚಾರಿಕೆಯಲ್ಲಿ ಸಮಾನತೆಗೆ ಸಂಬಂಧಿಸಿದಂತೆ ಸಮಾಜದ ಕಟುವಾಸ್ತವಗಳು ಮೂಡಿ ಬಂದಿದೆ. ''ಯುಗಗಳ ಗುಲಾಮಗಿರಿಗೆ ಸಿಕ್ಕಿ ಬೆಂದುಹೋಗಿರುವ ದಲಿತ ವರ್ಗಗಳು ಈ ದೇಶ ಆಳುತ್ತಿರುವುದನ್ನು ಕಣ್ಣಾರೆ ಕಾಣಬೇಕೆಂಬುದೆ ನನ್ನ ಜೀವನದ ಪರಮಗುರಿ. ಈ ದೇಶದ ಸಮಸ್ತ ಸಂಪತ್ತಿಗೆ ಅವರು ಮಾತ್ರ ನಿಜವಾದ ಹಕ್ಕುದಾರರು. ಸಾಮಾಜಿಕ ಅನ್ಯಾಯಕ್ಕೆ ಒಳಗಾದ ದಲಿತರು, ಹಿಂದುಳಿದವರು, ಅಲ್ಪಸಂಖ್ಯಾತರು, ಪ್ರಜ್ಞಾವಂತರೆಲ್ಲರೂ ಒಂದಾಗಿ ಈ ಜಾತಿ ವ್ಯವಸ್ಥೆಯನ್ನು ಧ್ವಂಸ ಮಾಡಬೇಕು''[೨೫] (ಡಾ.ಬಾಬಾಸಾಹೇಬ್ ಅಂಬೇಡ್ಕರ್) ಅಂಬೇಡ್ಕರ ಅವರ ರಾಜಕೀಯ, ಸಾಮಾಜಿಕ ಚಿಂತನೆಯನ್ನು ಕರಪತ್ರಗಳಲ್ಲಿ ಕೊಡುವುದು, ಅದರ ಸಾರವನ್ನು ತಿಳಿಯಪಡಿಸುವುದು ಈ ನುಡಿಗಳ ಉದ್ದೇಶ.

(i) ಒಂದು ಸಮುದಾಯ ಎಲ್ಲಿಯವರೆಗೆ ಮತ್ತೊಂದು ಸಮುದಾಯವನ್ನು ವಿಪತ್ತೆಂದು ಪರಿಗಣಿಸುತ್ತದೆಯೋ ಅಲ್ಲಿಯವರೆಗೆ ಯಾವುದೇ ಸಾಮಾಜಿಕವಾದ ಪ್ರಗತಿಯು ಇರುವುದಿಲ್ಲ. ಸಾಂಪ್ರದಾಯಿಕ ರಕ್ಷಣೆಯ ಕೆಚ್ಚು ಎರಡು ಸಮುದಾಯಗಳ ವಿಚಾರ ಮತ್ತು ಕ್ರಿಯೆಗಳು ಅರಳುತ್ತಲೇ ಇರುತ್ತವೆ.

(ii) ತುಳಿತಕ್ಕೊಳಗಾದ ವರ್ಗದವರ ಹೋರಾಟ ಒಂದು ಮಾನವೀಯ ಹೋರಾಟವಾಗಿದೆ. ಹಿಂದೂ ಮತ್ತು ಭಾರತ ದೇಶಕ್ಕೆ ಅತ್ಯುಪಯುಕ್ತವಾಗಿದೆ.

(iii) ಹಲವು ಭಾಷೆಗಳು, ಸಂಸ್ಕೃತಿ ಮತ್ತು ಧರ್ಮಗಳನ್ನು ಹೊಂದಿರುವ ಅನೇಕ ರಾಷ್ಟ್ರಗಳು ಸ್ವಯಂ ಆಳ್ವಿಕೆಯಡಿ ಒಂದೇ ಸಮಾಜವಾಗಿ ಒಗ್ಗೂಡಿಸಿವೆ. ಆದುದರಿಂದ ಅದು ಭಾರತಕ್ಕೆ ಸಾಧ್ಯವಿಲ್ಲ ಎನ್ನುವುದು ಸರಿಯಲ್ಲ.

(iv) ವ್ಯಕ್ತಿಪೂಜೆ, ಶುದ್ಧೀಕರಣ ಮತ್ತು ಕರ್ತವ್ಯದ ಬಗ್ಗೆ ಉದಾಸೀನದಂತಹ ವಿಚಾರಗಳು ಹಿಂದೂ ಸಮಾಜವನ್ನು ನಾಶಮಾಡಿವೆ. ಮತ್ತು ಸಮಾಜದ ಅವನತಿಗೆ ಕಾರಣೀಭೂತವಾಗಿದೆ. (ಬಿ.ಆರ್.ಅಂಬೇಡ್ಕರ್)''[೨೬]

'' ಸ್ವಾಭಿಮಾನ ಶೂನ್ಯ ಬದುಕಿಗಿಂತ ಸಾವೇ ಮೇಲು - (ಬಿ.ಆರ್.ಅಂಬೇಡ್ಕರ್)''[೨೭] ದಲಿತ ಸಂಘರ್ಷ ಸಮಿತಿಯ ಕಾರ್ಯಕ್ರಮಗಳ ಆಹ್ವಾನ ಪತ್ರಿಕೆಗಳು ಕಾರ್ಯಕ್ರಮದ ಸೀಮಿತ ಉದ್ದೇಶವನ್ನು ಹೇಳುವುದು ಮಾತ್ರವಲ್ಲ ಅದು ತನ್ನ ಭೌತಿಕ ಚಟುವಟಿಕೆಯೊಂದಿಗೆ ಕಾರ್ಯಕ್ರಮದ ರೂಪರೇಷೆಗೆ ಹಿನ್ನೆಲೆಯ ಬೌದ್ಧಿಕ ಪ್ರೇರಣೆಯ ಚಿಂತನೆಯನ್ನು ಹೇಳುವಂತದ್ದಾಗಿರುತ್ತದೆ. ಭಾರತದ ಹಲವು ಸಮುದಾಯಗಳ ಶ್ರೇಣೀಕೃತ ವ್ಯವಸ್ಥೆಯಲ್ಲಿ ಯಾವುದೂ ಶ್ರೇಷ್ಠವಲ್ಲ,

ಯಾವುದೂ ಕನಿಷ್ಠವಲ್ಲ. ಇಲ್ಲಿ ಸಮಾನತೆಯು ಪ್ರಮುಖವಾದದ್ದು. ಇದು ಅಂಬೇಡ್ಕರರ ಕಲ್ಪನೆ. ಈ ಚಿಂತನೆಗಳು ಚಳುವಳಿಯನ್ನು ಘನರೂಪಕ್ಕೆ ತರಲು ಕಾರಣವಾದವು. ಅಂಬೇಡ್ಕರರನ್ನು ದಲಿತರು ದೇವರೆಂದು ಪರಿಗಣಿಸಿದ್ದಾರೆ ಕೂಡ. ಸಂವಿಧಾನದ ಶಿಲ್ಪಿ ಅಂಬೇಡ್ಕರ್ ಅವರು ದಲಿತರ, ಶೋಷಿತರ ಪರವಾದ ಕಾನೂನನ್ನು ಚರ್ಚಿಸಿ ರಚಿಸಿದವರು ಎಂಬ ಸ್ವಾಭಿಮಾನವನ್ನು ದಲಿತರು ಅಂತರಾಳದಲ್ಲಿ ತುಂಬಿಕೊಂಡಿದ್ದಾರೆ. ಆದ್ದರಿಂದ ಅಂಬೇಡ್ಕರ್ ಅವರ ಪ್ರತಿಮೆಗಳು ದಲಿತರಿಗೆ ದೈವತ್ವದ ಸ್ವರೂಪವಾಗಿದೆ. ಭಾರತದಲ್ಲಿನ ಹಲವು ದೇವರುಗಳ ಆರಾಧನೆಯಲ್ಲಿ ಮೂರ್ತಿಪೂಜೆಯು ಬಹಳ ವಿಶಿಷ್ಟವಾದದ್ದು. ದಲಿತರು ಅಂಬೇಡ್ಕರ್ ಪ್ರತಿಮೆಯನ್ನು ಆರಾಧ್ಯ ದೈವವನನ್ನಾಗಿ ಮಾಡಿಕೊಂಡಿದ್ದಾರೆ. ಅಂಬೇಡ್ಕರ್ ಅವರ ಹೋರಾಟ, ಚಿಂತನೆ, ಅವರ ಕೆಲಸಕಾರ್ಯ ಸಾಧನೆಗಳು ದಲಿತರಿಗೆ, ದಲಿತ ಚಳುವಳಿಯ ಕಾರ್ಯಕರ್ತರಿಗೆ ಸ್ಫೂರ್ತಿಯ ಚೈತನ್ಯವಿದ್ದಂತೆ. ಅನ್ಯ ಸಮುದಾಯಗಳು ತಮ್ಮ ಸಾಂಸ್ಕೃತಿಕ ನಾಯಕನನ್ನು ಗುರ್ತಿಸಿಕೊಂಡಂತೆ ದಲಿತರು ಅಂಬೇಡ್ಕರ್ ಅವರನ್ನು ತಮ್ಮ ಸಾಂಸ್ಕೃತಿಕ ನಾಯಕನನ್ನಾಗಿ ಗುರ್ತಿಸಿಕೊಂಡಿದ್ದಾರೆ. ಆದ್ದರಿಂದ ಅಂಬೇಡ್ಕರ್ ಪ್ರತಿಮೆಗೆ, ಭಾವಚಿತ್ರಕ್ಕೆ, ಅವರ ವಿಚಾರಗಳಿಗೆ ಅವಮಾನ ಮಾಡಿದರೆ ದಲಿತರು ಭಾವುಕರಾಗುತ್ತಾರೆ, ಮತ್ತು ಇಡೀ ದಲಿತ ಸಮುದಾಯಕ್ಕೆ ಅವಮಾನ ಆದಂತೆ ಎಂದು ಭಾವಿಸುತ್ತಾರೆ. ಇದು ದಲಿತರ - ಅಂಬೇಡ್ಕರ್ ನಡುವಿನ ಭಾವನಾತ್ಮಕ, ಆಧ್ಯಾತ್ಮಿಕ ಸಂಬಂಧವನ್ನು ತಿಳಿಸುವಂತಹದು.

ಕರ್ನಾಟಕ ಮೆಡಿಕಲ್ ಕಾಲೇಜು ಬೆಂಗಳೂರಿನಲ್ಲಿ ಅಂಬೇಡ್ಕರ್ ಪ್ರತಿಮೆಗೆ ಮದ್ಯವನ್ನು ಸುರಿದು ಅವಮಾನ ಮಾಡಿದ್ದು, ಹಾಗೂ ಮುಂಬೈಯಲ್ಲಿ ಅಂಬೇಡ್ಕರ್ ಪ್ರತಿಮೆಗೆ ಚಪ್ಪಲಿ ಹಾರ ಹಾಕಿ ಅವಮಾನ ಮಾಡಿದ್ದು ಕಂಡು ಬಂತು. ಇದರ ಪರಿಣಾಮವಾಗಿ ಮಹಾರಾಷ್ಟ್ರದ ರಮಾಬಾಯಿ ಅಂಬೇಡ್ಕರ್ ನಗರದವರು ಪ್ರತಿಭಟನೆಯನ್ನು ನಡೆಸಿದರು. ಅದನ್ನು ನಿಲ್ಲಿಸಲು ನಡೆಸಿದ ಗೋಲಿಬಾರ್‌ನಿಂದ ಹಲವಾರು ದಲಿತರು ತಮ್ಮ ಪ್ರಾಣವನ್ನೇ ಬಲಿಕೊಟ್ಟರು. ಅಂಬೇಡ್ಕರ್ ಮತ್ತು ಅವರ ಚಿಂತನೆಗಳು ದಲಿತ ಹೋರಾಟವನ್ನು ಮೈಗೂಡಿಸಿವೆ. ದಲಿತರು ತಮ್ಮ ಪ್ರಾಣಕ್ಕಿಂತಲೂ ಮುಖ್ಯವಾಗಿ ಅಂಬೇಡ್ಕರ್ ಅವರ ಚಿಂತನೆಗಳನ್ನು ಕಾಣುತ್ತಾರೆ.

''ಬಾಬಾ ಸಾಹೇಬ ಅಂಬೇಡ್ಕರ್ ಪ್ರತಿಮೆಗೆ ಅಪಚಾರ ಪ್ರತಿಭಟಿಸಿದ ದಲಿತರ ಮೇಲೆ ಗೋಲಿಬಾರ್, ಹಿಂದೂ ಕೋಮುವಾದಿಗಳೇ ಹುಷಾರ್''[೪೯] ದಲಿತರು ಹಿಂದೂ ಧರ್ಮದ ಒಳಗಿನ ತಾರತಮ್ಯವನ್ನು ದಲಿತ ಚಳುವಳಿಯು ತನ್ನ ಸ್ಥಿತಿಯನ್ನು ಪಡೆದಾಗಿನಿಂದಲೇ ಖಂಡಿಸುತ್ತಾ ಬಂದಿದೆ. ಹಿಂದೂ ಕೋಮುವಾದಿಗಳು ತಮ್ಮ ಸಾಂಸ್ಕೃತಿಕ ನಾಯಕನಿಗೆ ಅಪಚಾರ ಮಾಡಿದ್ದರ ಹಿನ್ನೆಲೆಯಲ್ಲಿ ಎಚ್ಚರಿಕೆಯನ್ನು ಕರಪತ್ರದ ಮೂಲಕ ನೀಡಿದ್ದಾರೆ. ''ಮನುಷ್ಯರೆಲ್ಲರೂ ಒಂದಾಗಿ-ಮಾನವತೆಗೆ ಮುಂದಾಗಿ''[೫೦] ಮನುಷ್ಯರು ಎಂದರೆ ಸಮಾನತೆಯ ಕಲ್ಪನೆಯನ್ನು ಹೊಂದುವುದು. ಮನುಷ್ಯ ಒಂದು ಎಂದು ತಿಳಿಯುವುದು. ಇವು ದಲಿತ ಚಳುವಳಿಯ ನುಡಿಗಳು ಆಗಿವೆ. ಇಲ್ಲಿ ಮನುಷ್ಯರು ಪ್ರಾಕೃತಿಕವಾಗಿ ಇರುವಂತವರು, ಇಲ್ಲಿ ಗಂಡು ಹೆಣ್ಣುಗಳು ಮಾತ್ರ. ಆದರೆ ಈ ಜಾತಿ, ಅಂತಸ್ತು, ಮೇಲು, ಕೀಳು ಇವನ್ನು ಮನುಷ್ಯ ಮಾಡಿಕೊಂಡಿರುವಂತವು. ಅಸಮಾನತೆ, ಶೋಷಣೆ ದಬ್ಬಾಳಿಕೆಗಳನ್ನು ಇದುವರೆಗೆ ದಲಿತರ ಮೇಲೆ ನಡೆಸುತ್ತಿರುವುದು ಸಾಕಾಗಿದೆ. ಇನ್ನ ಮುಂದಾದರೂ ಮನುಷ್ಯತ್ವದ ಕಲ್ಪನೆಯನ್ನು, ಮಾನವೀಯತೆಯನ್ನು ಬಯಸುವುದು, ಬೇಕೆನ್ನುವುದು ದಲಿತ ಚಳುವಳಿಯ ಕರಪತ್ರಗಳಲ್ಲಿನ ಅಂಶಗಳಲ್ಲೊಂದಾಗಿದೆ.

"ಅಭಿವ್ಯಕ್ತಿ ಸ್ವಾತಂತ್ರ್ಯ ರಕ್ಷಿಸಿ- ಪ್ರಜಾಪ್ರಭುತ್ವ ಉಳಿಸಿ"[೪೧] ದಲಿತರ ಮೇಲಾದ ದೌರ್ಜನ್ಯವನ್ನು ಕೇಳುವ ಅಭಿವ್ಯಕ್ತಿ ಸ್ವಾತಂತ್ರ್ಯವು ದಲಿತರ ಚಳುವಳಿಗೆ ಬಹಳ ಮುಖ್ಯವಾದದ್ದು. ಅದು ಪ್ರಜಾಪ್ರಭುತ್ವದ ರಾಷ್ಟ್ರದಲ್ಲಿ ಪ್ರತಿಯೊಬ್ಬನಿಗೂ ಇರಬೇಕಾದ ಸ್ವಾತಂತ್ರ್ಯ. ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ದಮನಗಳು ನಡೆಯುತ್ತಿರುವಾಗ ದಲಿತ ಚಳುವಳಿ ತನ್ನ ಆಶಯವನ್ನು ವ್ಯಕ್ತಪಡಿಸುತ್ತದೆ. ಪ್ರಜಾಪ್ರಭುತ್ವದ ಮಾದರಿಯ ಆಡಳಿತ, ಬದುಕು, ದೇಶದಲ್ಲಿ ನಡಯುತ್ತಿರುವಾಗ ದಲಿತರ ಸ್ಥಿತಿ; ಅವರ ಸ್ವಾತಂತ್ರ್ಯ ಯಾವ ರೀತಿಯಲ್ಲಿದೆ ಎಂಬುದು ಗೊತ್ತಾಗುತ್ತದೆ.

ಮೀಸಲಾತಿಯು ದಲಿತರಿಗೆ ಬಹಳ ಮುಖ್ಯವಾದದ್ದು. ಐವತ್ತು ವರ್ಷಗಳ ಸ್ವಾತಂತ್ರ್ಯ ಭಾರತದಲ್ಲಿ ದಲಿತರ ಸಾಮಾಜಿಕ ಆರ್ಥಿಕ ರಾಜಕೀಯ ಸ್ಥಿತಿಯು ಹೇಗಿದೆ. ಅವರ ಸ್ಥಿತಿ ಅದು ದಲಿತೇತರರಂತೆ ಉತ್ತಮ ಸ್ಥಿತಿಯನ್ನು ತಲುಪಿದ್ದಾರೆಯೋ, ಇಲ್ಲವೋ ಎಂಬುದನ್ನು ನೋಡಬೇಕು. ಮೀಸಲಾತಿಯ ವ್ಯವಸ್ಥೆಯ ಬಗ್ಗೆ ದಲಿತರು, ದಲಿತ ಚಳುವಳಿಯ ನಾಯಕರು ಈ ರೀತಿಯ ಅಭಿಪ್ರಾಯವನ್ನು ಹೊಂದಿದ್ದಾರೆ. "ಮೀಸಲಾತಿ ಎಲ್ಲಿಯ ತನಕ? ಜಾತಿ ಪದ್ಧತಿ ಇರುವ ತನಕ. ಮೀಸಲಾತಿ ನಿಮ್ಮ ಭಿಕ್ಷೆ ಅಲ್ಲ ಅದು ನಮ್ಮ ಹಕ್ಕು"[೪೨] ದಲಿತ ಚಳುವಳಿಯು ನಡೆಸುವ ಮೀಸಲಾತಿಯ ಹೋರಾಟದಲ್ಲಿ ಕಾಣುವಂತಹದು. ಬಡ್ತಿ ಮೀಸಲಾತಿಯ ಹೋರಾಟದಲ್ಲಿ ರಾಜ್ಯ ಸರ್ಕಾರದ ತೀರ್ಪಿಗೆ; ದಲಿತ, ಅಲ್ಪಸಂಖ್ಯಾತ ಹಿಂದುಳಿದವರ ಹೋರಾಟವು ತಮ್ಮ ಜನಾಂಗದ ಜನಸಂಖ್ಯೆಗನುಗುಣವಾಗಿ ಮೀಸಲಾತಿಯ ಪ್ರಶ್ನೆಯನ್ನು ಎತ್ತುತ್ತಿವೆ. ಜನಸಾಮಾನ್ಯರ ಕಲ್ಪನೆಯಲ್ಲಿ ಮೀಸಲಾತಿಯ ಸೌಲಭ್ಯವನ್ನು ಕೇವಲ ದಲಿತರಿಗೆ ಎಂದು ಮೀಸಲಿಟ್ಟಿದ್ದಾರೆ. ದಲಿತೇತರರು ಪಡೆಯುವ ಮೀಸಲಾತಿಯ ಸೌಲಭ್ಯದ ಪ್ರಶ್ನೆಯನ್ನು ಯಾರೂ ಎತ್ತುವುದೇ ಇಲ್ಲ. ಇದು ದಲಿತರ ಔನ್ನತ್ಯವನ್ನು ಪಡೆಯುವ ದಲಿತೇತರ ಜಾತಿವಾದಿಗಳ ಸೂಕ್ಷ್ಮಗ್ರಹಿಕೆಯೂ ಕೂಡ. "ಜಾತಿ ಬಿಡಿ, ಮತ ಬಿಡಿ, ಮಾನವತೆಗೆ ಜೀವ ಕೊಡಿ"[೪೩] ಜಾತಿ ವ್ಯವಸ್ಥೆಯಿಂದ ಬೇಸತ್ತು ನೊಂದ ದಲಿತರ ಮಾತುಗಳು ಮಾನವತೆಗೆ ಒತ್ತನ್ನು ಕೊಟ್ಟಿವೆ.

"ಭೂ ಮಿತಿ ಇರಲಿ
ಗ್ರಾಮೋದ್ಯೋಗ ಬೆಳಸಿ
ಮುಕ್ತ ಚುನಾವಣೆ ನಡೆಸಿ
ಸಾರಾಯಿ ನಿಲ್ಲಿಸಿ - ಶಾಲೆ ತೆರೆಸಿ"[೪೪]

ದುಡಿಯುವ ಕೈಗಳಿಗೆ ಭೂಮಿಯ ಒಡೆತನವಿಲ್ಲ. ಅವುಗಳು ಭೂಮಾಲೀಕರ ಮನೆಗಳಲ್ಲಿ ದುಡಿಯುತ್ತಿವೆ. ಬಂಡವಾಳಶಾಹಿಗಳು ಆಕ್ರಮಿಸುತ್ತಿರುವ ಭೂಮಿಯನ್ನು ಮಿತಿಗೊಳಿಸುವುದು; ನಿರುದ್ಯೋಗವನ್ನು ಅನುಭವಿಸುತ್ತಿರುವ ಗ್ರಾಮಗಳಿಗೆ ಗ್ರಾಮೋದ್ಯೋಗವನ್ನು ಬೆಳೆಸುವುದು; ಮುಕ್ತ ಚುನಾವಣೆಯನ್ನು ನಡೆಸುವುದು ದಲಿತ ಚಳುವಳಿಯ ಕಾಳಜಿ. ಮುಕ್ತತೆ ಎಂದರೆ ಪ್ರತಿಯೊಬ್ಬರಿಗೂ ಸ್ವತಂತ್ರವಾಗಿ ಓಟನ್ನು ಮಾಡಲು ಬಿಡುವುದು. ಇಲ್ಲಿ 'ಕಳ್ಳಓಟ'ನ್ನು ನಿಲ್ಲಿಸುವುದು ಮತ್ತು ಪ್ರತಿಯೊಬ್ಬರಿಗೂ ಅನ್ಯಾಯವಾಗದಂತೆ ಮುಕ್ತ ಚುನಾವಣೆಯನ್ನು ದಲಿತ ಚಳುವಳಿಯು ಬಯಸುತ್ತದೆ. ದುಡಿಯುವ ವರ್ಗಗಳು ತಮ್ಮ ಶ್ರಮವನ್ನು ನೀಗಿಸಿಕೊಳ್ಳಲು ಮದ್ಯದ ಕುಡಿತಕ್ಕೊಳಗಾಗಿ ಅಂಟುಬಿದ್ದು ಬದುಕನ್ನು ದುರಂತವಾಗಿಸಿಕೊಳ್ಳುತ್ತಿದ್ದಾರೆ. ಮದ್ಯವನ್ನು ಸಂಪೂರ್ಣವಾಗಿ ನಿಲ್ಲಿಸಿ ದುಡಿಯುವ ವರ್ಗದವರ ಹಣವನ್ನು ಮದ್ಯಕ್ಕಾಗಿಯೇ ಪೋಲಾಗುವುದನ್ನು ತಡೆಗಟ್ಟುವುದು ಇದಾಗಿರುತ್ತದೆ. ಬದಲಾಗಿ ಭವಿಷ್ಯದ ಮಕ್ಕಳಿಗೆ ಶಾಲೆಯನ್ನು

ತೆರೆಸಿ ಅಕ್ಷರ ಜ್ಞಾನವನ್ನು ಕೊಡಿಸುವುದರಿಂದ ಸಾಮಾಜಿಕ ವಾಸ್ತವ ಗೊತ್ತಾಗುತ್ತದೆ. ಇದೂ ದಲಿತ ಚಳುವಳಿಯ ಆಶಯಗಳಲ್ಲೊಂದು.

"ಆಫ್ರಿಕಾದ ಜನತೆಯ ಹೋರಾಟಕ್ಕೆ ನನ್ನ ಬದುಕನ್ನೇ ಸಮರ್ಪಿಸಿಕೊಂಡಿದ್ದೇನೆ. ಬಿಳಿಯರ ಪ್ರಾಬಲ್ಯದ ವಿರುದ್ಧ ಹೋರಾಡಿದ್ದೇನೆ. ಮತ್ತು ಕರಿಯರ ಪ್ರಾಬಲ್ಯದ ವಿರುದ್ಧ ಹೋರಾಡಿದ್ದೇನೆ. ಸರ್ವರೂ ಸಮಾನ ಅವಕಾಶಗಳೊಂದಿಗೆ ಸಾಮರಸ್ಯದಿಂದ ಒಂದುಗೂಡಿ ಬದುಕುವಂತ ಪ್ರಜಾಪ್ರಭುತ್ವ ಮತ್ತು ಸಮಾಜದ ಆದರ್ಶಗಳನ್ನು ಘೋಷಿಸಿದ್ದೇನೆ. ಈ ಆದರ್ಶಗಳ ಸಾಧನೆಗಾಗಿ ನಾನು ಬದುಕಲು ಬಯಸುತ್ತೇನೆ. ಮತ್ತು ಈ ಆದರ್ಶಗಳಿಗಾಗಿ ನಾನು ಸಾಯಲು ಸಿದ್ಧನಿದ್ದೇನೆ." - ನೆಲ್ಸನ್ ಮಂಡೇಲಾ. 'ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು'[೪೫]. ದಲಿತ ಚಳುವಳಿಯಲ್ಲಿ ತೊಡಗಿದವರು ಅದರ ಆದರ್ಶ ಸಾಧನೆಗಾಗಿ ಬದುಕಬೇಕು. ಹಾಗೆಯೇ ಆದರ್ಶಗಳಿಗಾಗಿ ಸಾಯಲೂ ಸಿದ್ಧರಿರಬೇಕು. ಇಲ್ಲಿ ವ್ಯಕ್ತಿ ಮುಖ್ಯವಲ್ಲ. ಸಮುದಾಯಗಳು ಮುಖ್ಯ. ಈ ಸಮುದಾಯಗಳ ಬದುಕು ಹಿಂದೆ ಯಾವ ರೀತಿ ಇತ್ತು. ಈಗ ಯಾವ ರೀತಿ ಇದೆ, ಮುಂದೆ ಯಾವ ರೀತಿ ಇರಬೇಕು ಎಂಬುದು ದಲಿತ ಚಳುವಳಿಯ ಸೈದ್ಧಾಂತಿಕ ವಿಚಾರ. ಭಾರತದ ದಲಿತರ ಸಮಸ್ಯೆಗಳಂತೆ ದಕ್ಷಿಣ ಆಫ್ರಿಕಾದ ಕರಿಯರ ಸಮಸ್ಯೆಗಳು ಇರುವುದರಿಂದ ಈ ಕರಿಯರ ಗುಲಾಮಗಿರಿಯ ವಿರುದ್ಧ ಹೋರಾಡಿದ ನೆಲ್ಸನ್ ಮಂಡೇಲಾ ಅವರ ಮಾತುಗಳು ಪ್ರಸ್ತುತವಾಗುತ್ತವೆ.

ದಲಿತ ಚಳುವಳಿಯಲ್ಲಿ ದಲಿತ ವಿದ್ಯಾರ್ಥಿಗಳ ಪಾತ್ರವು ಬಹಳ ಮುಖ್ಯವಾದದ್ದು. ಏಕೆಂದರೆ ದಲಿತ ಚಳುವಳಿಯಲ್ಲಿ ದಲಿತ ವಿದ್ಯಾರ್ಥಿಗಳ, ದಲಿತ ಯುವಕರ ಶಕ್ತಿಯು ಬಹಳ ಮುಖ್ಯವಾಗುತ್ತವೆ. ಏಕೆಂದರೆ ದಲಿತರಲ್ಲಿ ತಲೆಮಾರುಗಳ ಮನೋಪ್ರವೃತ್ತಿಗಳು ಭಿನ್ನವಾಗಿರುತ್ತವೆ. ಅವು ತಮ್ಮ ಪರಿಸರದ ಹಿನ್ನೆಲೆಯನ್ನು ಹೊಂದಿರುತ್ತವೆ. "ದಲಿತ ವಿದ್ಯಾರ್ಥಿಗಳೇ ಎಚ್ಚೆತ್ತುಕೊಳ್ಳಿ; ಐಕ್ಯಮಂತ್ರ ಜಪಿಸಿ; ಜಡತನ ತೊಲಗಿಸಿ; ನಿಮಗೆ ದೊರೆತಿರುವ ಅವಕಾಶದಿಂದ, ಶಕ್ತಿ ಸಾಮರ್ಥ್ಯ ಪ್ರತಿಭೆಯಲ್ಲಿ ಇತರರಿಗಿಂತ ಕಡಿಮೆಯೇನಿಲ್ಲ ಎಂಬುದನ್ನು ಸಿದ್ಧಪಡಿಸಿ. ಇಡೀ ದಲಿತ ಜನಾಂಗವನ್ನು ಗುಲಾಮಗಿರಿಯಿಂದ ವಿಮೋಚನೆ ಮಾಡಲು ಸಮಾಜದಲ್ಲಿ ಗೌರವದಿಂದ ಬಾಳುವಂತೆ ಮಾಡಲು, ಬಲಶಾಲಿಗಳನ್ನಾಗಿಸಲು ಶ್ರಮಿಸಿ. ಪೂರ್ಣಜ್ಞಾನವೇ ಶಕ್ತಿ, ಅಂತ ಶಕ್ತಿಯನ್ನು ಪಡೆದುಕೊಳ್ಳಿ". ಸಂಘಟಿತರಾಗಿ ಸಾಗಿ ಬನ್ನಿ ನವಚರಿತ್ರೆಯ ನಿರ್ಮಿಸಬನ್ನಿ - ಡಾ.ಬಿ.ಆರ್.ಅಂಬೇಡ್ಕರ್"[೪೬]. ದಲಿತ ಚಳುವಳಿಯ ಸಮುದಾಯಗಳು ತಮ್ಮ ಪರಂಪರೆಯ ದಬ್ಬಾಳಿಕೆಯ ದೌರ್ಜನ್ಯವನ್ನು ಮೆಟ್ಟಿ ಹೊಸಲೋಕವನ್ನು ಕಟ್ಟುತ್ತವೆ. ಇದು ಹೊಸ ತಲೆಮಾರಿನ ದಲಿತ ಯುವಕರ ಕನಸಾಗಿರುತ್ತದೆ. ಇದನ್ನು ದಲಿತ ಯುವಕರ ಕರ್ತವ್ಯವೆಂದು ದಲಿತ ಚಳುವಳಿ ಬಯಸುತ್ತದೆ.

"ನ್ಯಾಯ, ಸಮಾನತೆಗಾಗಿ ನಮ್ಮ ಹೋರಾಟ. ದಲಿತ ಕ್ರಾಂತಿ ಚಿರಾಯುವಾಗಲಿ"[೪೭]. ಅಸಹಾಯಕತೆಯಲ್ಲಿ ಬದುಕುತ್ತಿರುವ ದಲಿತರ ಹೋರಾಟವೂ ಇದು. "ಸರ್ವರಿಗೂ ಸಮಪಾಲು-ಸರ್ವರಿಗೂ ಸಮಬಾಳು"[೪೮]. ಧರ್ಮ, ಶಾಸ್ತ್ರಗಳೆಂಬುವುಗಳು ಜಾತೀಯತೆಯನ್ನು ಬಲಪಡಿಸುವಂತವೇ ಹೊರತು ಜಾತೀಯತೆಯನ್ನು ತೊಡೆದು ಹಾಕುವುದಿಲ್ಲ. ಅವುಗಳು ನಮಗೆ ಬೇಡ. ನವನಿರ್ಮಾಣ ಸಮಾಜವನ್ನು ಕಟ್ಟಲು, ವೈಚಾರಿಕ ಘೋಷಣೆಗಳು ಸಾಲದು; ಅದಕ್ಕೆ ಕ್ರಾಂತಿ ಆಗಬೇಕು. ಪ್ರಸ್ತುತ ಭಾರತ ಜಾತ್ಯತೀತ ರಾಷ್ಟ್ರದಲ್ಲಿ ಸರ್ವರಿಗೂ ಸಮಾನವಾದ ಹಕ್ಕಿದೆ. ಅದು ಕಾನೂನಿನಲ್ಲಿದೆ. ಹಾಗೆಯೇ ವೈಚಾರಿಕತೆಯು ಉಳ್ಳವರ ಭಾಷಣದಲ್ಲಿ ಕಂಡುಬರುತ್ತಿವೆ. ಈ ಭಾಷಣವು, ಅಥವಾ ಅದರ ಕಲ್ಪನೆಯು ಜಾತ್ಯತೀತ ಮನಸ್ಸಿನ ಘೋಷಣೆ. ಕರ್ನಾಟಕದ ಸಂದರ್ಭದಲ್ಲಿ ಯಾವ ರೀತಿಯಲ್ಲಿ ಅನ್ವಯವಾಗುತ್ತದೆಂಬುದು

ಮುಖ್ಯವಾಗುತ್ತದೆ. ಅಂದರೆ ಜಾತಿವ್ಯವಸ್ಥೆಯನ್ನು ಧರ್ಮಗಳ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಇವುಗಳನ್ನು ರಾಜಕೀಯ ವ್ಯವಸ್ಥೆಯಲ್ಲಿನ ಜಾತಿರಾಜಕಾರಣ, ಹಾಗೆಯೇ ಜಾತಿಕೇಂದ್ರಿತವಾದ ಮಹಾಮಠಗಳ ಹಿನ್ನೆಲೆಯನ್ನು ನೋಡಿದಾಗ ಜಾತೀಯ ಸೀಮಿತತೆಯು ಗೊತ್ತಾಗುತ್ತದೆ. ಇಲ್ಲಿಯ ಮಠಾದೀಶರ, ಸ್ವಾಮಿಗಳ ಕಲ್ಯಾಣ ಗುಣಗಳು ವಿಶಾಲತೆಯನ್ನು ಪಡೆದಿರಬಹುದು, ಆದರೆ ಅವರ ಕಲ್ಯಾಣದ ಮಹಾಗುಣಗಳೊಂದಿಗೆ ಅವರನ್ನೇ ಸುತ್ತಿಕೊಂಡಿರುವ ಒಂದು ಧರ್ಮವಿರುತ್ತದೆ. ಜಾತಿ ಇರುತ್ತದೆ. ಜಾತ್ಯತೀತತೆಯ ಕಲ್ಪನೆಯನ್ನು ಹೊಂದಿರುವ ವೈಚಾರಿಕ ಚಿಂತನೆಯ ಹಿನ್ನೆಲೆಯಲ್ಲಿ ಅವನ ವ್ಯಕ್ತಿಕೇಂದ್ರಿತ ಪ್ರಜ್ಞೆಯ ಜಾತೀಯತೆಯ ಗುಣಗಳು ಅಡಕವಾಗಿಯೇ ಇರುತ್ತದೆ. ವೈಚಾರಿಕ ಚರ್ಚೆಯಲ್ಲಿ ಜಾತೀಯತೆಯ ಅರ್ಥವೇ ಬೇರೆ; ವಾಸ್ತವ ಬದುಕಿನ ನಿಜಾಂಶವೇ ಬೇರೆ. ಹೀಗಿರುವಾಗ ಸಮಾಜದ ಅತ್ಯಂತ ಕೆಳಸ್ತರದಲ್ಲಿರುವ ದಲಿತರು ಮತ್ತು ಅವರ ಸಮಸ್ಯೆಗಳು ಅಂಬೇಡ್ಕರರು ಹೇಳಿರುವ ಮಾತುಗಳಿಗೆ ಹತ್ತಿರವಾಗಿವೆ. ಅವುಗಳು ಇವತ್ತಿಗೂ ಜೀವಂತವಾಗಿವೆ. ಅವುಗಳು "ದಲಿತರ ಸಮಸ್ಯೆ ಅನಾಥ ಶವ. ಇದನ್ನೂ ಯಾರೂ ಮುಟ್ಟುವುದಿಲ್ಲ. ಹಾಗೆಯೇ ತನ್ನಷ್ಟಕ್ಕೆ ತೊಲಗುವುದೂ ಇಲ್ಲ"[೪೯]. ಇದಕ್ಕೆ ಕ್ರಾಂತಿಯೇ ಕಾರಣವಾಗಬೇಕು ಎಂಬುದು ಈ ಧ್ವನಿಯ ಹಿಂದಿನ ಅರ್ಥ. ಇದು ಸಂಘಟನಾತ್ಮಕ ಹೋರಾಟದಿಂದ ತಮ್ಮ ಹಕ್ಕನ್ನು ಕೇಳುವ ಧೈರ್ಯವನ್ನು ದಲಿತರಿಗೆ ತುಂಬುತ್ತದೆ. ಆದ್ದರಿಂದ ದಲಿತರೇ ಸಮಸ್ಯೆಯನ್ನು ಅದರ ಪರಿಹಾರವನ್ನೂ, ದಲಿತರೂ ಪ್ರಜ್ಞಾವಂತರಾಗಿ ಕಂಡುಕೊಳ್ಳಬೇಕಾಗುತ್ತದೆ.

"ಧರ್ಮಗಳೆಂದೂ ಜಾತೀಯತೆಯನ್ನು ಬೋಧಿಸುವ ಶಾಸ್ತ್ರಗಳು. ಅವುಗಳೇ ನಮಗೆ ನಿಜವಾದ ಶತ್ರುಗಳು. ಅವುಗಳನ್ನು ಸುಟ್ಟು ಭಸ್ಮಮಾಡಿ ಭಾರತೀಯ ತತ್ವಶಾಸ್ತ್ರವನ್ನು ಜೀರ್ಣಿಸಿಕೊಂಡು ನಾನು ಹಿಂದೂಗಳ ಕೊಳಕನ್ನು ಶುದ್ಧಿಮಾಡಲು ಹೊರಟಿರುವೆ! ನವಸಮಾಜ ನಿರ್ಮಾಣಕ್ಕೆ ಪ್ರಾರ್ಥನೆ ಘೋಷಣೆಗಳಿಂದ ಸಾಧ್ಯವಾಗದು. ಅದಕ್ಕೆ ಕ್ರಾಂತಿಯೇ ಆಗಬೇಕು - ಅಂಬೇಡ್ಕರ್. ಧರ್ಮವು ತುಳಿತಕ್ಕೊಳಗಾದವನ ಜೀವನ ವ್ಯಸನಾಗಿದೆ. ಅದು ಜನತೆಯ ಅಫೀಮು! ಧರ್ಮದ ಟೀಕೆಯು ಈ ಕಣ್ಣೀರಿನ ದುಃಖಮಯ ಪ್ರಚಂಡ ಟೀಕೆಯಾಗಿದೆ. ಅದು ಮನುಷ್ಯನನ್ನು ತುಚ್ಛನನ್ನಾಗಿಸುವ ಎಲ್ಲಾ ಸಂಬಂಧಗಳನ್ನು ತೊಡೆದುಹಾಕಬೇಕೆನ್ನುವ ಬೋಧನೆಯಲ್ಲಿ ಕೊನೆಗೊಳ್ಳುತ್ತದೆ - ಕಾರ್ಲ್ ಮಾರ್ಕ್ಸ್. ಭಗವದ್ಗೀತೆಯನ್ನು ಬ್ರಾಹ್ಮಣರು ಹಾಡಿದ್ದು ಮೇಲ್ಜಾತಿಗಳಿಗಾಗಿ ಮತ್ತು ಆ ಮೂಲಕ ಇತರರಿಗಾಗಿ ಸುಸ್ಪಷ್ಟವಾಗಿದೆ - ಡಿ.ಡಿ.ಕೊಸಾಂಬಿ"[೫೦].

ಭಾರತದ ಸಮಾಜದಲ್ಲಿ ಶ್ರೇಣಿವ್ಯವಸ್ಥೆಯ ಬಹುಸಮುದಾಯಗಳ ಜೊತೆಯಲ್ಲಿ ದಲಿತ ಸಮುದಾಯಗಳ ಬದುಕಿಗೆ ಕರಪತ್ರಗಳಲ್ಲಿನ ಅಂಬೇಡ್ಕರ್ ಹೇಳಿಕೆಗಳು ಪ್ರಸ್ತುತವೆನಿಸುತ್ತವೆ. "ನಾವು ರಾಜಕೀಯ ಸ್ವಾತಂತ್ರ್ಯವನ್ನು ಮಾತ್ರ ಸಂಪಾದಿಸಿದ್ದೇವೆ. ಸಂವಿಧಾನದ ಮೂಲಕ ಸಾಮಾಜಿಕ, ಆರ್ಥಿಕ, ಸ್ವಾತಂತ್ರ್ಯ ಸಾಧಿಸದಿದ್ದಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆ ಬುಡಮೇಲು ಆಗುವುದು"[೫೧] (ಅಂಬೇಡ್ಕರ್) ರಾಜಕೀಯ ಸ್ವಾತಂತ್ರ್ಯಕ್ಕೆ ದಲಿತರು ಮೀಸಲಾತಿ ಚುನಾವಣಾ ಕೇಂದ್ರಗಳನ್ನು ಪಡೆದಿರುವುದು, ಪ್ರಜಾಪ್ರಭುತ್ವದ ಕಲ್ಪನೆಯನ್ನು ಸಮಾಜದ ಅಂಗಗಳಿಗೆ ಇಳಿಸಿರುವುದು ಎಂಬ ಅರ್ಥ. ಆ ಮೂಲಕ ಪ್ರಜೆಗಳಿಗೆ ಮತ್ತು ಅವರ ಪ್ರಭುತ್ವಕ್ಕೆ ಸಾಧನೀಯವಾಗುತ್ತದೆ. ವಾಸ್ತವವಾಗಿ ರಾಜಕೀಯ ಸ್ವಾತಂತ್ರ್ಯ ಪಡೆದುದರ ಸತ್ಯಾಂಶವೇ ಬೇರೆಯಾಗಿರುತ್ತದೆ. ಅಂದರೆ ರಾಜಕೀಯ ಸ್ವಾತಂತ್ರ್ಯವು ಕೇವಲ ರಾಜಕೀಯದಲ್ಲಿನ ಮೀಸಲಾತಿಯ ವಲಯಕ್ಕೆ ಅಷ್ಟೇ ಸೀಮಿತವಾಗಿದೆ. ಅಂದರೆ ಈ ಅಧಿಕಾರದ ಹಂಚಿಕೆಯಲ್ಲಿ ಭರ್ತಿಮಾಡಲು ಮಾತ್ರ

ದಲಿತರನ್ನು ಪಟ್ಟಭದ್ರ ಹಿತಾಸಕ್ತಿ ಆಯ್ಕೆಯನ್ನು ಮಾಡಿಕೊಳ್ಳುತ್ತಾ ಬಂದಿದೆ. ಇದನ್ನು ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್, ಜಿಲ್ಲಾ ಪಂಚಾಯತ್, ಅಧ್ಯಕ್ಷ, ಉಪಾಧ್ಯಕ್ಷ, ಸದಸ್ಯರ ಸೀಟುಗಳಲ್ಲಿನ ಹಂಚಿಕೆಯಲ್ಲಿ ನೋಡಬಹುದು. ಅದರಲ್ಲೂ ಕೆಲವು ಕಡೆ ಸಮರ್ಥರನ್ನು ಆಯ್ಕೆ ಮಾಡದೆ ಬೇಕೆಂತಲೇ ಅಸಮರ್ಥರನ್ನು ಆಯ್ಕೆ ಮಾಡುವುದುಂಟು.

"ನೀವು ವಿದ್ಯಾವಂತರಾಗುವುದನ್ನು ನಿಷೇಧಿಸಿ ನಿಮ್ಮ ಭೌತಿಕ ಸುಖಗಳನ್ನೆಲ್ಲಾ ಸರ್ವನಾಶಮಾಡಿದ ಧರ್ಮ ಧರ್ಮವೇ ಅಲ್ಲ, ಅದೊಂದು ಪಾಪಗಳ ರಾಶಿ. - ಮಹಾ ಮಾನವ ಭಾರತ ರತ್ನ ಡಾ.ಅಂಬೇಡ್ಕರ್"[೯]. ಭಾರತದಲ್ಲಿ ಬಹು ಸಂಖ್ಯಾತ ಜನರಿರುವ ಹಿಂದೂ ಧರ್ಮದ ಶ್ರೇಷ್ಠತೆಯು ಅಪಾರವಾದದ್ದು ಎಂಬ ಕಲ್ಪನೆಯನ್ನೂ ಈ ಧರ್ಮವನ್ನು ಪೋಷಿಸಿಕೊಂಡು ಬಂದಿರುವ ಧರ್ಮವಾದಿಗಳು ಹೇಳುತ್ತಾರೆ. ಆದರೆ ಅಂಬೇಡ್ಕರ್, ಅವರ ವಾದಿಗಳು, ಮತ್ತು ಎಡಪಂಥೀಯ ಚಿಂತನಕಾರರು ಧರ್ಮಗಳಲ್ಲಿನ ತಾರತಮ್ಯಗಳನ್ನು ಪಾಪಗಳ ರಾಶಿ ಎಂದಿದ್ದಾರೆ. ವ್ಯಕ್ತಿಯು ಎಲ್ಲಾ ಬಗೆಯ ಸಮಾನತೆ, ಸ್ವಾತಂತ್ರ್ಯದ ಕಲ್ಪನೆಯನ್ನು ಹೊಂದುವುದು ಆಗಿರುತ್ತದೆ. ದಲಿತ ಚಳುವಳಿಕಾರರ ಪ್ರಜ್ಞೆಯು ಈ ದೃಷ್ಟಿಯಿಂದ ಪ್ರಶ್ನೆಯನ್ನು ತಮ್ಮ ಬದುಕಿನ ಹಿನ್ನೆಲೆಯಿಂದಲೇ ಮಾಡಿಕೊಂಡಿದ್ದಾರೆ. ಇಲ್ಲಿ ಧರ್ಮದ ಶ್ರೇಷ್ಠತೆ ಮತ್ತು ಅದೇ ಧರ್ಮದಲ್ಲಿ ಕೆಲವು ಸಮುದಾಯಗಳ ಕನಿಷ್ಠತೆಯು ಕಂಡು ಬಂದಾಗ; ಧರ್ಮವನ್ನು ಪೋಷಿಸಿಕೊಂಡು ಬಂದವರ ಮತ್ತು ಅವರ ವಸ್ತು ವಿಷಯವನ್ನು ಕುರಿತಂತೆ ತಾತ್ವಿಕ ಪ್ರಶ್ನೆಗಳು ಸಾಮಾನ್ಯವಾಗಿ ಏಳುತ್ತವೆ. ಹಾಗೆಯೇ ದಲಿತ ಚಳುವಳಿಯ ಪ್ರಮುಖರು, ಹೊಸ ತಲೆಮಾರಿನ ವಿದ್ಯಾವಂತರು ಧರ್ಮದ ಬಗೆಗಿನ ನಂಬಿಕೆಯನ್ನು ನಿರ್ಲಕ್ಷ್ಯ ಮಾಡುವುದು, ನಾಸ್ತಿಕತೆಯನ್ನು ತುಂಬಿಕೊಂಡಿರುವುದು ಕಂಡುಬರುತ್ತದೆ. ಇಲ್ಲಿ ಧರ್ಮ, ದೇವರುಗಳನ್ನು ನಂಬಿರುವ ಜನ ಸಾಮಾನ್ಯರು ಶೋಷಿತರು ಏಕೆ ಶೋಷಕರ ಔನ್ನತ್ಯವನ್ನು ಮೆಟ್ಟಿ ಅವರ ಆರ್ಥಿಕತೆ ಹಾಗೂ ಸಾಮಾಜಿಕ ಸ್ಥಾನಮಾನಗಳನ್ನು ತಮ್ಮ ತೆಕ್ಕೆಗೆ ತೆಗೆದುಕೊಂಡಿಲ್ಲ, ಪುಷ್ಟಿಯಲ್ಲಿ ಇಟ್ಟುಕೊಂಡಿಲ್ಲ ಎಂಬುದು ಗೊತ್ತಾಗುತ್ತದೆ. ಇದು ಸಮಾಜದ ನಂಬಿಕೆಯ ದುಷ್ಟಶಕ್ತಿ ದೈವಶಕ್ತಿಯ ಪಾತ್ರಗಳಲ್ಲಿ ಕಂಡುಬರುತ್ತವೆ.

ಇಂದು ಬಹು ಸಮುದಾಯಗಳನ್ನು ಒಳಗೊಂಡಿರುವ ದೇಶ ಅಥವಾ ರಾಜ್ಯದಲ್ಲಿ ಯಾವ ಯಾವ ಸಮುದಾಯದವರು ಜನಸಂಖ್ಯೆಯ ಶೇಕಡದಲ್ಲಿ ಯಾವ ಪ್ರಮಾಣದಲ್ಲಿದ್ದಾರೆ ಎಂಬುದು ಜನಗಣತಿಯ ಅಂಕಿ ಅಂಶಗಳಿಂದ ಸಿಗುತ್ತದೆ. "ಜನಸಂಖ್ಯೆಯನ್ನು ಹೊಂದಿರುವ ಸಮುದಾಯಗಳು, ಪ್ರಜಾಸತ್ತಾತ್ಮಕ ಆಡಳಿತದಲ್ಲಿ ತಮ್ಮ ಹಕ್ಕು ಸ್ಥಾಪನೆಯು ಯಾವ ಮಟ್ಟದ್ದು ಎಂಬುದಾಗಿರುತ್ತದೆ. ಇದನ್ನು ತಮ್ಮ ಹಕ್ಕೆಂದು ಪರಿಭಾವಿಸಲಾಗಿದೆ."[೬] ಇಂಥ ಆಂದೋಲನಗಳ, ಚರ್ಚೆಗಳು ಉದ್ಯೋಗದಲ್ಲಿ, ಶಿಕ್ಷಣದಲ್ಲಿ, ಅಧಿಕಾರದಲ್ಲಿ ರಾಜಕಾರಣದಲ್ಲಿ ಸೌಲಭ್ಯಗಳಲ್ಲಿ ತಮ್ಮ ಸಮುದಾಯಗಳಿಗೆ ಸಿಗಬೇಕಾದದ್ದು ಸಿಗದೇ ಇದ್ದಾಗ ಪ್ರಶ್ನೆಗಳು ಪ್ರಾರಂಭವಾಗುತ್ತವೆ. ಅಲ್ಲದೆ ಪ್ರಶ್ನಿಸುತ್ತವೆ.

"ಜಾತಿ ಮತಗಳ ಪೊರೆ ಕಳಚಿ ಬನ್ನಿ! ದಲಿತ, ಹಿಂದುಳಿದ, ಅಲ್ಪಸಂಖ್ಯಾತ ಒಂದೇ ಎನ್ನಿ!!, ಸಂಘಟಿತ ದಲಿತ ಶೂದ್ರ ಶಕ್ತಿಗೆ ಅಧಿಕಾರ ತನ್ನಿ!!!"[೭] ನಾ ಮುಂದು, ತಾ ಮುಂದು ಎನ್ನುವ ಹೊತ್ತಿನಲ್ಲಿ ಶೋಷಿತ ಶಕ್ತಿಗಳು ಒಂದಾಗುವ, ತಮ್ಮ ಶಕ್ತಿಗೆ ಅಧಿಕಾರವನ್ನು ಪಡೆಯುವುದು ಆಗಿರುತ್ತದೆ. ಆಳುವ ವರ್ಗಗಳ ಸಾಮಾಜಿಕ ಸ್ಥಾನಮಾನಕ್ಕೆ ತಮ್ಮ ಸಮುದಾಯಗಳನ್ನು ನಿಲ್ಲಿಸುವ ಪ್ರಕಲ್ಪನೆಯು ದಲಿತ ಚಳುವಳಿಗೆ ಇರುತ್ತವೆ. ಅಧಿಕಾರ ಪ್ರಶ್ನೆ ಬಂದಾಗ ಶೋಷಿತ ಸಮುದಾಯಗಳನ್ನು ಜೊತೆಗೂಡಿಸಿ ನಿಲ್ಲುವುದು ದಲಿತ ಚಳುವಳಿಯ ನಿರ್ಧಾರಗಳು. 'ಬಹುಜನರೇ ಒಂದಾಗಿ ದೇಶ ಆಳಲು ಮುಂದಾಗಿ' ಇದು ದಲಿತ ಚಳುವಳಿಯ ಕಲ್ಪನೆಯೂ ಕೂಡ.

''ಮತಿ ಮಾನವನ ಸರ್ವೋತ್ಕೃಷ್ಟವಾದ ಆಯುಧ. ಮತಿಯೇ ಕತ್ತಲಲಿ ದಾರಿ ತೋರುವ ರತ್ನದ ಕೈದೀವಿಗೆ. ಮತೀಯ ದಿಸೆಯಿಂದಲೇ ಪ್ರಾಣಿ ಮಾತ್ರವಾಗುತ್ತಿದ್ದ ನರಜೀವಿ ಮನುಷ್ಯತ್ವಕ್ಕೆ ಏರಿದ್ದಾನೆ''[೫೫] ದಲಿತ ಚಳುವಳಿಯೇ ಹೇಳಿಕೊಂಡಂತೆ ಚಾರಿತ್ರಿಕ ಮತ್ತು ಸಾಂಸ್ಕೃತಿಕ ನಾಯಕರಾದ ''ಬುದ್ಧ, ಬಸವ, ಅಂಬೇಡ್ಕರ್ ನಡೆದ ದಾರಿ ನಮ್ಮದು''[೫೬] ಎಂದು ಹೇಳಿಕೊಳ್ಳುತ್ತಾರೆ. ಅವರ ಚಿಂತನೆಯ ಬಲದಲ್ಲಿ ಚಳುವಳಿಯ ವೇದಿಕೆಯು ಸಾಗುತ್ತಿದೆ. ''ಶೋಷಿತರು ದೇಶವನ್ನಾಳಲಿ, ಈ ದೇಶದ ಸಂವಿಧಾನ ದೇಶದ ಧರ್ಮವಾಗಲಿ''[೫೭]. ಯಾವುದನ್ನು ದೇಶದ ಧರ್ಮವೆಂದು ಹೇಳಲಾಗುತ್ತದೆಯೋ, ದಲಿತ ಚಳುವಳಿಗೆ ಅದು ದೇಶದ ಧರ್ಮವಲ್ಲ. ದೇಶದ ಅಧಿಕಾರವು ದಲಿತರ ಅಥವಾ ಶೋಷಿತರ ಪರವಾಗಿರಬೇಕು. ಸಮಾನತೆಯನ್ನು ಸಾರುವ ಪ್ರಜಾಪ್ರಭುತ್ವವನ್ನು ಎತ್ತಿ ಹಿಡಿಯುವ ಪ್ರಜಾಸತ್ತಾತ್ಮಕ ಸಂವಿಧಾನವು ದೇಶದ ಧರ್ಮವಾಗಬೇಕೆಂಬುದು ದಲಿತ ಚಳುವಳಿಯ ಆಶಯ.

''ಅಂದು ಕೋರೆಗಾಂವ್‌ನಲ್ಲಿ ಮಡಿದ ಮಹರ್ ಮಹಾವೀರರ ಚೇತನಗಳು ಮತ್ತೆ ದಲಿತ ಸಮುದಾಯಗಳಲ್ಲಿ ಹುಟ್ಟಿ ಬರಲಿ''[೫೮] ಈ ಕರಪತ್ರದಲ್ಲಿ ಸ್ವತಂತ್ರ ಸಂಗ್ರಾಮದ ನೆನಪನ್ನು ಕಾಣುವ ಈ ದಿನಗಳಲ್ಲಿ ದಲಿತ ಚಳುವಳಿಯು ದಿಟ್ಟ ಹೆಜ್ಜೆಯನ್ನು ಏಕೆ ಇಡಬಾರದು ಎಂಬ ಪ್ರಶ್ನೆಯನ್ನು ಹಾಕಿಕೊಂಡಿದೆ. ೧೮೧೮ರ ಜನವರಿ ಕೊರೆಗಾಂವ್ ಯುದ್ಧ ಪರದೇಶಿ ಆರ್ಯರ ವಿರುದ್ಧ ಮೂಲಭಾರತೀಯರು ನಡೆಸಿದ ಮೊಟ್ಟಮೊದಲ ಸ್ವಾತಂತ್ರ್ಯ ಸಂಗ್ರಾಮವಾಗಿದೆ. ಡಿಸೆಂಬರ್ ೩೧ ೧೮೧೭ರಂದು ಭೀಮಾನದಿ ತೀರದ ಕೊರೆಗಾಂವ್ ಊರಿನ ಮೈದಾನದಲ್ಲಿ ಪೇಶ್ವೆಗಳಿಗೂ ದಲಿತ ಮಹರ್‌ಗಳಿಗೂ ಯುದ್ಧ ಆರಂಭವಾಯಿತು. ೩೨,೦೦೦ ಪೇಶ್ವೆ ಸೈನಿಕರ ಎದುರು ಕೇವಲ ೫೦೦ ಮಹರ್ ಸೈನಿಕರಿದ್ದರು. ಅಂದರೆ ಒಬ್ಬ ದಲಿತ ಸೈನಿಕನ ಎದುರು ೬೪ ಪೇಶ್ವೆ ಸೈನಿಕರಿದ್ದರು. ೧೨ ತಾಸುಗಳಲ್ಲಿ ದಲಿತ ಸೈನಿಕರು ಪೇಶ್ವೆ ಸೈನಿಕರನ್ನು ಧೂಳೀಪಟ ಮಾಡಿದರು. ೧೮೧೮ರ ಹೊಸ ವೃಕ್ಷದ ಬೆಳಕು ಮೂಡುತ್ತಿದ್ದಂತೆಯೇ ಮಹರ್ ರಾಷ್ಟ್ರ ರಾಜ್ಯವು ಸರ್ವಾಧಿಕಾರಿ ಪೇಶ್ವೆಗಳಿಂದ ಸ್ವತಂತ್ರ್ಯಗೊಂಡಿತು. ದಲಿತರು ತಮ್ಮ ರಾಜ್ಯದ ಜನತೆಗೆ ಹೊಸ ಹುರುಪನ್ನೇ ತಂದುಕೊಟ್ಟರು. ಈ ಸಂಗ್ರಾಮದಲ್ಲಿ ೨೦ ಮಹರ್ ಸೈನಿಕರು ಮಡಿದರು. ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿರುವ ಆಳುವ ವರ್ಗವನ್ನು ನಿರ್ನಾಮ ಮಾಡಲು ದಲಿತರು ಕೋರೆಗಾಂವ್ ಸ್ವಾತಂತ್ರ್ಯ ಸಂಗ್ರಾಮವನ್ನು ಇಂದು ದಲಿತ ಸಂಘಟನೆಗಳು ನೆನಪಿಗೆ ತಂದುಕೊಂಡಿರುವುದು ಅದರ ಅನಿವಾರ್ಯದ ತುರ್ತನ್ನು ತಿಳಿಸುತ್ತದೆ.

ಇದು ''ಬಹು ಜನ ಹಿತಾಯ ಬಹುಜನ ಸುಖಾಯ, ಏನನ್ನಾದರೂ ಬಿಟ್ಟುಬಿಡು, ಆದರೆ ಸ್ವಾಭಿಮಾನ ಆತ್ಮ ಗೌರವವನ್ನಲ್ಲ, ಏನನ್ನಾದರೂ ಸಹಿಸಿಕೋ ಆದರೆ ಅವಮಾನ ಮತ್ತು ಅನ್ಯಾಯವನ್ನಲ್ಲ; ದಲಿತರು ಹಿಂದೂಗಳಲ್ಲ, ದಲಿತರು ನಾಗಾಬವುದ್ದರು.

ಇತರ ಜಾತಿಯವರು ಮತ್ತು ದಲಿತರು ಪರಸ್ಪರ ಎದುರಾದರೆ ಅದು ಒಂದೇ ದೇಶದ ಒಬ್ಬ ಮನುಷ್ಯ ಇನ್ನೊಬ್ಬ ಮನುಷ್ಯನಿಗೆ ಎದುರಾದ ಹಾಗಲ್ಲ. ಬದಲಾಗಿ ಅದು ಒಂದು ದೇಶದ ಪ್ರಜೆ ಮತ್ತೊಂದು ದೇಶದ ಪ್ರಜೆಗೆ ಎದುರಾದಂತೆ''[೫೯] ದಲಿತ ಚಳುವಳಿಯ ಸಂಘಟನೆಕಾರರು ಏಪ್ರಿಲ್ ೧೪ ಮತ್ತು ಡಿಸೆಂಬರ್ ೬ರಂದು ಆಚರಿಸುವ ಕಾರ್ಯಕ್ರಮಗಳಲ್ಲಿ ಒಂದು ಆಗಿರುತ್ತವೆ. ಇಂತಹವುಗಳನ್ನು ದಲಿತ ಚಳುವಳಿಯ ಆರಂಭದ ದಿನಗಳಿಂದ ನಡೆದುಬಂದ ಕಾರ್ಯಕ್ರಮಗಳ ಪಟ್ಟಿಯನ್ನು ನೋಡಿದರೆ ಗೊತ್ತಾಗುತ್ತದೆ. ದಲಿತ ಚಳುವಳಿಯ ಮುಖ್ಯ ಕಾರ್ಯಕ್ರಮದ ರೂಪರೇಷೆಗಳು ಅದರ ಕರಪತ್ರಗಳಲ್ಲಿ ಕಂಡುಬಂದಿದೆ.

## ದಲಿತ ಚಳುವಳಿ ಮತ್ತು ಆರ್ಥಿಕತೆ

ವ್ಯಕ್ತಿಯ ಆರ್ಥಿಕ ಸ್ಥಿತಿಯ ಮೇಲೆ ಅವನ ಸಾಮಾಜಿಕ (ವ್ಯವಸ್ಥೆಯು) ಸ್ಥಿತಿ ರೂಪುಗೊಂಡಿರುತ್ತದೆ. ಇದು ಯಾವುದೇ ಸಂಘಟನೆಗಳಿಗೂ ಅನ್ವಯಿಸುತ್ತದೆ. ಇವಕ್ಕೆ ಆರ್ಥಿಕತೆಯ ಮುಖ್ಯ ಅಂಶಗಳಲ್ಲಿ ಒಂದು. ಇಲ್ಲಿ ವ್ಯಕ್ತಿ, ಅವನ ಸಮಾಜ, ಮತ್ತು ಅದರೊಂದಿಗಿನ ಬದುಕಿಗೆ ಸಂಬಂಧಿಸಿದಂತೆ ನಿರ್ವಚಿಸಲಾಗುವುದು. ಇದು ವ್ಯಕ್ತಿಯ ಬದುಕಿಗೆ ಸಂಬಂಧಿಸಿದ್ದು. ವ್ಯಕ್ತಿಯು ತನ್ನ ಬದುಕಿನ ಸ್ಥಿತಿಗೆ ಹೊಂದಿಕೊಂಡಂತೆ ಅದಕ್ಕೆ ಆರ್ಥಿಕತೆಯು ಬಹಳ ಪ್ರಮುಖವಾಗುತ್ತದೆ. ದಲಿತ ಚಳುವಳಿಯ ಬೆಳವಣಿಗೆಯ ಕಾರಣಕರ್ತರಲ್ಲಿ ಮತ್ತು ಅದರಲ್ಲಿ ತೊಡಗಿಕೊಂಡವರಲ್ಲಿ ಕಂಡುಬರುತ್ತದೆ. ಈ ದಲಿತ ಚಳುವಳಿಕಾರರು ಸಾಂಸಾರಿಕ ಬದುಕನ್ನು ಹೊಂದಿರುತ್ತಾರೆ. ಇವರು ಈ ಸಾಂಸಾರಿಕ ಹೊಣೆಯನ್ನು ಹೊತ್ತು ಚಳುವಳಿಯಲ್ಲಿ ತೊಡಗಬೇಕಾಗುತ್ತದೆ. ಇದು ಅನಿವಾರ್ಯವೂ ಕೂಡ. ಇದನ್ನು ಅಲ್ಲಗಳೆಯುವಂತಿಲ್ಲ. ಇದರ ಸಮಸ್ಯೆಯು ಬಹುಮುಖ್ಯವಾದದ್ದೆ.

ದಲಿತರ ಆರ್ಥಿಕ ಮೂಲ ಬಹುಪಾಲು ದುಡಿಮೆಗೆ ಸಂಬಂಧಪಟ್ಟದ್ದು. ಇವರ ದುಡಿಮೆಯು ಬಹುಪಾಲು ದೈಹಿಕ ಶ್ರಮವನ್ನು ಅವಲಂಬಿಸಿದೆ! ಇದರಲ್ಲಿ ಕೂಲಿಯೇ ಪ್ರಧಾನವಾದದ್ದು. ಪರರ ಆಶ್ರಯದಲ್ಲಿದ್ದು, ಅವರ ಎಲ್ಲಾ ನಿಯಮಗಳಿಗೆ ಬದಲಾಗಿ ದಲಿತರು ಬದುಕಬೇಕಿರುತ್ತದೆ. ಕೆಲವು ದಲಿತರು ಅಲ್ಪಸ್ವಲ್ಪ ಭೂಮಿಯನ್ನು ಹೊಂದಿ ಬದುಕು ನಡೆಸುತ್ತಾರೆ. ಮತ್ತೆ ಕೆಲವರು ಸರ್ಕಾರಿ ನೌಕರಿಯನ್ನು ಹೊಂದಿ ಬದುಕನ್ನು ನಡೆಸುತ್ತಾರೆ. ಬಹುಪಾಲು ಉದ್ಯೋಗಿಗಳು ಮೂರನೆಯ ಅಥವಾ ನಾಲ್ಕನೆಯ ದರ್ಜೆಯ ನೌಕರಿಯನ್ನು ಮಾಡುತ್ತಿರುತ್ತಾರೆ. ಇವೆಲ್ಲವುಗಳ ಸಂಬಂಧವಾಗಿ ದಲಿತರಲ್ಲಿ ಆರ್ಥಿಕ ಮೂಲಗಳು ಇರುವುದಿಲ್ಲ. ಇವರ ಆರ್ಥಿಕ ಸಂಪಾದನೆಯಲ್ಲಿ ತಮ್ಮ ದಿನನಿತ್ಯದ ಪ್ರಾಥಮಿಕ ಅಗತ್ಯಕ್ಕೆ ಪೂರೈಕೆಯಾಗುವುದೇ ಕಷ್ಟಕರವಾಗಿರುತ್ತದೆ.

ದಲಿತ ಚಳುವಳಿಯ ಸಂದರ್ಭದಲ್ಲಿ ಆರ್ಥಿಕತೆಯ ಚರ್ಚೆಯು ಏಕೆ ಪ್ರಸ್ತುತವಾಗುತ್ತದೆ ಎಂದರೆ; ಈ ಚಳುವಳಿಯ ಸಂದರ್ಭದಲ್ಲಿ ದಲಿತರಿಗೆ / ಕಾರ್ಯಕರ್ತರಿಗೆ ಬಂದೊದಗುವ ತಮ್ಮ ಪ್ರಾಥಮಿಕ ಮೂಲಭೂತ ಅವಶ್ಯಕತೆಗಳನ್ನು ನೀಗಿಸಲು ಶಕ್ತರಿದ್ದಾರೆಯೆ? ಎಂಬುದು ಪ್ರಶ್ನೆಯಾಗುತ್ತದೆ. ಚಳುವಳಿಯು ಒಂದು ಆಲೋಚನೆಗೆ ಸಂಬಂಧಿಸಿದ್ದು. ಚಳುವಳಿಯ ಅಂಶಗಳನ್ನು ಆಲೋಚಿಸಿ ಕ್ರಿಯೆಗೆ ಬರುವಾಗ ಹಲವಾರು ರೀತಿಯಲ್ಲಿ ಆರ್ಥಿಕ ತೊಡಕುಗಳು ಎದುರಾಗುತ್ತವೆ. ಇದಕ್ಕೆ ಉದಾಹರಣೆ ಕೊಡುವುದಾದರೆ ಚಳುವಳಿಯಲ್ಲಿ ಕೆಲವು ಪ್ರಾಥಮಿಕ ತೊಡಕುಗಳು ಕಂಡು ಬರುತ್ತವೆ. ಅವು ಕರಪತ್ರಗಳ ಮುದ್ರಣ, ಬ್ಯಾನರ್‌ಗಳನ್ನು ಬರೆಸುವ ಖರ್ಚು, ಜನ ಸಂಗ್ರಹಣೆಯ ಓಡಾಟದ ಖರ್ಚು. ಅಗತ್ಯವಿದ್ದರೆ ಮುಷ್ಕರದ ಕೇಂದ್ರದ ಎದುರು ಕೂರಲು ಹೊಡೆಸುವ ಶಾಮಿಯಾನದ ಖರ್ಚು. ಸಂಘಟನೆಯು ಕಛೇರಿಯ ಬಾಡಿಗೆ ಹಾಗೂ ಮುಂಗಡದ ಹಣ - ಓಗೆ ಮುಂತಾದವುಗಳು ಚಳುವಳಿಯ ನಿರಂತರತೆಯಲ್ಲಿ ಅತ್ಯಗತ್ಯಗಳು. ಇದನ್ನು ನಿವಾರಿಸುವುದು ಚಳುವಳಿಯ ಕಾರ್ಯಕರ್ತರಿಗೆ ಒಂದು ರೀತಿಯ ಸಮಸ್ಯೆಯಾದರೆ; ಅವರ ಬದುಕು, ಅವರ ಸಂಸಾರದ ಸಮಸ್ಯೆಗಳು ಮತ್ತೊಂದು ರೀತಿಯದಾಗಿರುತ್ತದೆ. ಇಲ್ಲಿನ ಕೆಲವು ಕಾರ್ಯಕರ್ತರಿಗೆ ಸರ್ಕಾರಿ ಉದ್ಯೋಗ ಅಥವಾ ಅನ್ಯ ಆರ್ಥಿಕ ಮೂಲಗಳು ತಮ್ಮ ಬದುಕಿಗಿದ್ದರೆ ಅವುಗಳು ಅವರ ಬದುಕನ್ನು ಈವೊತ್ತಿನ ಜಾಗತಿಕ ವಿದ್ಯಮಾನದ ಆಕರ್ಷಣೆಗೆ ತಕ್ಕಂತೆ ಹೊಂದಿಸಿಕೊಳ್ಳಲು ಪ್ರಯತ್ನದಲ್ಲಿರುತ್ತಾರೆ. ಆರ್ಥಿಕತೆಯ ಮೂಲವಿಲ್ಲದ ದಲಿತ ಚಳುವಳಿಯ

ಕಾರ್ಯಕರ್ತರ /ನಾಯಕರ ಸಮಸ್ಯೆಗಳು ಬೇರೆಯ ರೀತಿಯವೇ ಆಗಿರುತ್ತದೆ. ಬರೀ ಬೌದ್ಧಿಕತೆಯಲ್ಲಿ ಚಳುವಳಿಯನ್ನು ಅರ್ಥ ಮಾಡಿಕೊಳ್ಳುವವರಿಗೆ ಇದು ಅರ್ಥವಾಗುವುದಿಲ್ಲ. ಆಧುನಿಕತೆ ಮತ್ತು ಅದರ ತಂತ್ರಜ್ಞಾನದ ಸಾಂಸ್ಕೃತಿಕ ಬದಲಾವಣೆಯು ಈ ದಲಿತ ಚಳುವಳಿಯ ನಾಯಕರ/ಕಾರ್ಯಕರ್ತರ ಬದುಕಿನ ಪ್ರಸ್ತುತತೆಯ ಸಮಸ್ಯೆಗಳು ಅಪಾರ ಬಿಕ್ಕಟ್ಟನ್ನು ಹೊಂದಿರುತ್ತವೆ.

ದಲಿತ ಚಳುವಳಿಯ ಕಾರ್ಯಕರ್ತರು ಇಂತಹ ವೈಯಕ್ತಿಕ ಮತ್ತು ದಲಿತ ಸಮುದಾಯಗಳ ಚಳುವಳಿಯ ಸಂದರ್ಭದಲ್ಲಿ ಆರ್ಥಿಕತೆಯನ್ನು ನಿಭಾಯಿಸಲು ಅನಿವಾರ್ಯವಾಗಿ ಮೂರು ರೀತಿಯಲ್ಲಿ ಹಣ ಸಂಗ್ರಹಣೆಗೆ ತೊಡಗುತ್ತಾರೆ.

ಮೊದಲನೆಯದು ದಲಿತರಿಂದ, ಅಥವಾ ಶೋಷಿತರಿಂದ ಹಣವನ್ನು ಸಂಗ್ರಹಿಸುವುದು ಇದರಲ್ಲಿ ದಲಿತ ಅನುಕೂಲಸ್ಥರು ಕೈ ಜೋಡಿಸುವ ಆರ್ಥಿಕ ಸಹಾಯ ಸೇರಬಹುದು. ಎರಡನೆಯದು ಶೋಷಕರಿಂದ, ಅಥವಾ ಶೋಷಕ ಸಮುದಾಯಗಳಿಂದ ಹಣವನ್ನು ಸಂಗ್ರಹಿಸುವುದು ಆಗಿರುತ್ತದೆ. ಆರ್ಥಿಕತೆಯನ್ನು ಹೊಂದಿದ ದಲಿತಪರ ಕಾಳಜಿಯ ದಲಿತೇತರರು; ದಲಿತೇತರ ನೌಕರಸ್ಥರಿಂದ, ಬಂಡವಾಳಗಾರರಿಂದ ಸಂಗ್ರಹಿಸುವುದು ಆಗಿರುತ್ತದೆ. ಇಲ್ಲಿ ಪ್ರೀತಿಯಿಂದ ಆರ್ಥಿಕ ಸಹಾಯ ಮಾಡುವವರು ಇದ್ದಾರೆ, ತಮ್ಮ ಹೆಸರಿಗೋಸ್ಕರ ಸಹಾಯ ಮಾಡುವವರೂ ಇದ್ದಾರೆ. ಮೂರನೆಯದು ಸಂಘಟನೆಯ ಕಾರ್ಯಕರ್ತರು ಪದಾಧಿಕಾರಿಗಳು ಮತ್ತು ಸದಸ್ಯರಿಂದ ಸದಸ್ಯತ್ವದ ಶುಲ್ಕವನ್ನು ಶೇಖರಣೆ ಮಾಡಿಟ್ಟುಕೊಳ್ಳುವುದು ಆಗಿರುತ್ತದೆ.

ಶೋಷಿತರಿಂದ ಅಥವಾ ಆ ಸಮುದಾಯಗಳಿಂದ ಹಣ ಸಂಗ್ರಹಿಸುವುದು ಎಂದರೆ ಇದರಲ್ಲಿ ದಲಿತ ಕೂಲಿಕಾರ್ಮಿಕರಿರಬಹುದು, ರೈತಾಪಿ ವರ್ಗದವರು ಇರಬಹುದು ಇಲ್ಲವೆ ದಲಿತ ಅಧಿಕಾರಿಗಳು, ನೌಕರರು, ರಾಜಕಾರಣಿಗಳು ಇರಬಹುದು. ಇಲ್ಲಿ ಹಣ ಸಂಗ್ರಹಣೆ ಮುಖ್ಯವಾಗುತ್ತದೆ. ಚಳುವಳಿಯ ಅಥವಾ ಹೋರಾಟದ ಅನ್ಯ ಖರ್ಚುಗಳನ್ನು ನಿಭಾಯಿಸುವ ಹಣದ ಅಗತ್ಯವು ಕಾರ್ಯಕರ್ತರಿಗೆ ಬೀಳುತ್ತದೆ. ಎರಡನೆಯವರು ಶೋಷಿತ ಸಮುದಾಯದವರಿಂದ ತಮ್ಮ ಆರ್ಥಿಕ ವಹಿವಾಟಿನ ಪೂರೈಕೆಯನ್ನು ಮಾಡಿಕೊಳ್ಳುತ್ತಾರೆ. ಇವರಲ್ಲಿ ದಲಿತ ಸಮುದಾಯದವರಿಂದಲೂ ಗೆದ್ದ ದಲಿತೇತರ ರಾಜಕಾರಣಿಗಳು ಇರುತ್ತಾರೆ. ಅದಕ್ಕೆ ಸಂಬಂಧಿಸಿದಂತೆ ಕೌನ್ಸಿಲರ್‌ಗಳಿಂದ ಹಿಡಿದು ಎಂ.ಎಲ್.ಎ, ಎಂ.ಪಿ, ಮಂತ್ರಿಗಳವರೆಗೆ ಸೇರುತ್ತಾರೆ. ಮತ್ತು ಪ್ರತಿಷ್ಠಿತ ಅಧಿಕಾರಿಗಳೂ ಸೇರಿರುತ್ತಾರೆ. ಇವರುಗಳೊಂದಿಗೆ ದಲಿತ ಚಳುವಳಿಯ ಕಾರ್ಯಕರ್ತರು, ಪದಾಧಿಕಾರಿಗಳು ನಿಕಟ ಸಂಬಂಧವನ್ನು ಹೊಂದಿರುತ್ತಾರೆ. ಇಲ್ಲಿ ದಲಿತ ಚಳುವಳಿಯ ವಾಸ್ತವ ಸತ್ಯವು ಕಂಡುಬರುತ್ತದೆ. ಅದರಲ್ಲಿ ಈವೊತ್ತಿನ ಸಾಂಸ್ಕೃತಿಕ ಬಿಕ್ಕಟ್ಟುಗಳು ಸೇರಿರುತ್ತವೆ. ದಲಿತ ಚಳುವಳಿಗೆ ಸಹಕಾರದ ಮನಸ್ಸಿನಿಂದ ಕೆಲವು ದಲಿತೇತರರ ಸಹಕರಿಸಿದರೆ ಮತ್ತೆ ಕೆಲವರು ವ್ಯವಸ್ಥಿತ ಚಳುವಳಿಯಿಂದಾಗುವ ಉಪಯೋಗಗಳನ್ನು ನೆನೆದು ಸಹಕರಿಸುತ್ತಾರೆ. ಜೊತೆಗೆ ಕೆಲವು ದಲಿತೇತರ ಧುರೀಣರು ದಲಿತರ/ ದಲಿತರ ಚಳುವಳಿಯ ಪರವಾಗಿದ್ದಾರೆ ಎಂಬುದಕ್ಕೂ ಸಹಕರಿಸುತ್ತಾರೆ.

ದಲಿತ ಚಳುವಳಿಯ ಕಾರ್ಯಕರ್ತರು / ನಾಯಕರು ತಮ್ಮ ತಮ್ಮ ಮುಂದೆ ಜನಾಂಗವನ್ನು, ಅವರ ಸಮಸ್ಯೆಗಳನ್ನು ಇಟ್ಟುಕೊಂಡಿರುತ್ತಾರೆ. ಅದರಲ್ಲಿ ದಲಿತರು ಪ್ರತಿನಿತ್ಯ ಹೋರಾಡುವ ಸಮಸ್ಯೆಗಳು ಇರುತ್ತವೆ. ಜೊತೆಗೆ ವೇಗದಲ್ಲಿ

ಚಲಿಸುವ ಜಗತ್ತಿನ ಆಧುನಿಕತೆಯು ಇರುತ್ತದೆ. ಇವುಗಳ ನಡುವಿನ ಸಂಘರ್ಷಣೆ. ದಲಿತ ಚಳುವಳಿಗೆ, ದಲಿತ ಚಳುವಳಿಯ ಕಾರ್ಯಕರ್ತರಿಗೆ ಅದರ ಅಗತ್ಯ ಮತ್ತು ಅನಿವಾರ್ಯವೂ ಎದುರಾಗುತ್ತದೆ. ಅದರ ಆಕರ್ಷಣೆಯ ಹಿಡಿತದಲ್ಲಿ ಬದುಕಲಾರದೆ, ಇತ್ತ ತಮ್ಮ ಚಳುವಳಿಯನ್ನು ಉಳಿಸಿಕೊಳ್ಳಲಾರದೆ ಆಧುನಿಕತೆಯ ಓಟಕ್ಕೆ ತನ್ನನ್ನು ತಾನು ತೊಡಗಿಸಿಕೊಳ್ಳಲೂ ಆಗದಂತ ಸ್ಥಿತಿಯನ್ನು ದಲಿತ ಚಳುವಳಿಯ ಮುಂಚೂಣಿಯಲ್ಲಿರುವ ನಾಯಕರು/ ಕಾರ್ಯಕರ್ತರು ಎದುರಿಸುತ್ತಾರೆ.

## ದಲಿತ ಸಂಘಟನೆಯ ಕೇಂದ್ರಗಳು

ದಲಿತ ಸಂಘಟನೆಗಳು ಗ್ರಾಮ, ಹೋಬಳಿ, ತಾಲೂಕು, ಜಿಲ್ಲೆ ಕೇಂದ್ರದಿಂದ ಹಿಡಿದು ರಾಜ್ಯದ, ಕೇಂದ್ರದ ಸಮಿತಿಯವರೆಗೆ ವಿಸ್ತರಿಸಿಕೊಂಡಿರುವುದನ್ನು ನೋಡುತ್ತೇವೆ. ಈ ಕೇಂದ್ರಗಳು ದಲಿತ ಶಕ್ತಿಯನ್ನು ಕೇಂದ್ರೀಕರಿಸುವ, ಒಗ್ಗೂಡಿಸುವ ಕೆಲಸವನ್ನು ಮಾಡುತ್ತವೆ. ಇವುಗಳಿಗೆ ಇಂತಹದೇ ಜಾಗವೆಂಬ ನಿಯಮವಿಲ್ಲ. ಇವು ಅಂಬೇಡ್ಕರ್ ಸಮುದಾಯ ಭವನವಿರಬಹುದು. ಖಾಸಗೀ ಕಟ್ಟಡಗಳ ಬಾಡಿಗೆ ಕೋಣೆಗಳಿರಬಹುದು. ಇಲ್ಲವೆ ಒಂದು ಬಯಲು ಕಟ್ಟೆಗಳಿರಬಹುದು. ಇಲ್ಲಿ ದಲಿತ ಚಳುವಳಿಯ ನಾಯಕರು / ಕಾರ್ಯಕರ್ತರು ತಮ್ಮ ಸಮಯವನ್ನು ಹೊಂದಿಸಿಕೊಂಡು ಸೇರುತ್ತಾರೆ. ಚಳುವಳಿಗೆ ಸಂಬಂಧಿಸಿದಂತೆ ಚರ್ಚೆ, ಅದರ ವಸ್ತು, ಅದರ ಕಾರ್ಯಕ್ರಮ ಮತ್ತು ರೂಪುರೇಷೆಗಳ ಚರ್ಚೆಗಳು ಇಲ್ಲಿ ನಡೆಯುತ್ತದೆ. ಇದರಲ್ಲಿ ಅಧಿಕಾರಿ ಹಾಗೂ ಆಡಳಿತ ವರ್ಗದಿಂದ ತಮ್ಮ ಸಮುದಾಯಕ್ಕೆ ಯಾವ ರೀತಿಯ ಸಹಾಯವನ್ನು ತೆಗೆದುಕೊಳ್ಳಬೇಕು ಎಂಬುದು ಚರ್ಚೆಯಾಗುತ್ತದೆ ಹಾಗೆಯೇ ಹೋರಾಟದ ವಸ್ತುಸ್ಥಿತಿಗೆ ಕಾರಣಕರ್ತರಾದವರ ಮೇಲೆ ಬೇಡಿಕೆಯ ತಕ್ಕ ಕ್ರಮವನ್ನು ಈ ಕೇಂದ್ರದಲ್ಲಿಯೇ ನಿರ್ಧರಿಸಲಾಗುತ್ತದೆ. ಈ ಸಂಘಟನೆಯ ಕೇಂದ್ರಗಳಲ್ಲಿ ಆಯಾ ಕೇಂದ್ರಗಳ ವಿಸ್ತೀರ್ಣಕ್ಕೆ ಸಂಬಂಧಪಟ್ಟಂತೆ ನಡೆಯುವ ಎಲ್ಲಾ ಶೋಷಿತ ಘಟನೆಗಳೂ ಚರ್ಚೆಗೆ ಒಳಪಡುತ್ತದೆ. ಅಲ್ಲದೆ ಅದರಾಚೆಯಲ್ಲಿ ನಡೆಯುವ ದಲಿತ ಸಮುದಾಯಗಳ ಶೋಷಿತ ಘಟನೆಗಳ ಬಗ್ಗೆಯೂ ಚರ್ಚೆಯನ್ನು ಇಲ್ಲಿ ನಡೆಸುತ್ತಾರೆ. ಸಮಸ್ಯೆಯ ವ್ಯಕ್ತಿಗಳಿಗೆ, ಸಮುದಾಯಗಳಿಗೆ, ಅವುಗಳ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ದಲಿತ ಚಳುವಳಿಯ ಕಾರ್ಯಕರ್ತರನ್ನು/ ನಾಯಕರನ್ನು ಭೇಟಿ ಮಾಡಲು ಈ ಕೇಂದ್ರಗಳು ಮಧ್ಯವರ್ತಿಯಾಗಿ ಸಹಕರಿಸುತ್ತವೆ. ಈ ಕಛೇರಿಗಳು ಐಶಾರಾಮದ ಕಛೇರಿಗಳಂತೆ ವಿಲಾಸಿ ವಸ್ತುಗಳನ್ನು ಹೊಂದಿರುವುದಿಲ್ಲ.

## ದಲಿತ ಚಳುವಳಿಯ ನಾಯಕರು

ದಲಿತ ಚಳುವಳಿಯು ರೂಪಗೊಂಡದ್ದು ದಲಿತರ / ದಲಿತ ಸಮುದಾಯಗಳ ಸಮಸ್ಯೆಗಳಿಂದ. ಹಾಗಾಗಿ ಈ ಚಳುವಳಿಯ ಪ್ರಕ್ರಿಯೆಯಲ್ಲಿ ಮುಖ್ಯವಾಹಿನಿಯಾಗಿ ನಿಂತವರು ಈ ಚಳುವಳಿಯ ನಾಯಕರು. ಇವರು ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿದ ಸಮಾಜದ ವಿವಿಧ ಆಯಾಮಗಳನ್ನು ತರ್ಕಿಸಿ ಬೌದ್ಧಿಕ, ನೈತಿಕತೆಯಿಂದ ಒಂದು ಆಯಾಮವನ್ನು ತಂದುಕೊಟ್ಟವರು. ಇವರು ದಲಿತ ಚಳುವಳಿಯ ಪ್ರಾರಂಭದಲ್ಲೂ ಕಂಡುಬಂದ ಮನಃಸ್ಥಿತಿ. ಆದರೆ ದಲಿತ ಚಳುವಳಿಗೆ ಇಂದು ನಾಯಕತ್ವದ ಕೊರತೆ ಇದೆ! ಎಂಬ ಮಾತಿದೆ. ದಲಿತ ಚಳುವಳಿಯ ಕರ್ನಾಟಕ ದಲಿತ

ಸಂಘರ್ಷ ಸಮಿತಿ ಸಂಚಾಲಕ ಇದ್ದದ್ದು ನಂತರದಲ್ಲಿ ಅದರಿಂದ ಸಿಡಿದು ಹುಟ್ಟಿದ ಕರ್ನಾಟಕ ದಲಿತ ಸಂಘರ್ಷ ಸಮಿತಿ ಸಂಯೋಜಕ ಪಿ.ವಿ.ಕೆ., ಜನಾಂದೋಲನ, ಮತ್ತು ತಮ್ಮ ಸಮುದಾಯಗಳ ಸಂಘಟನೆಗಳೂ ಹುಟ್ಟಿಕೊಳ್ಳುತ್ತಿರುವುದು ಕಂಡುಬರುತ್ತಿವೆ. ದಲಿತ ಸಂಘಟನೆ, ದಲಿತ ಸಂಘರ್ಷ ಸಮಿತಿಯ ಪರಿಕಲ್ಪನೆಯೇ ಹಲವು ದಲಿತ ಸಮುದಾಯಗಳಿಂದ ಕೂಡಿದ್ದು. ದಲಿತ ಚಳುವಳಿಯ ನಿರಂತರತೆಯ ಕಾಲಮಾನದಲ್ಲಿ ಹಲವು ಸಮುದಾಯಗಳನ್ನು ಹೊಂದಿ ಸಂಘಟನೆಯಾಗಿ ನಡೆದು ಬಂತು. ನಂತರದ ಕಾಲಮಾನಗಳಲ್ಲಿ ಇವರಲ್ಲಿಯೇ ಕೆಲವು ಭಿನ್ನಾಭಿಪ್ರಾಯಗಳು ಕಾಣತೊಡಗಿದವು. ಅವು ವ್ಯಕ್ತಿಕೇಂದ್ರಿತವಾಗಿರಬಹುದು ಇಲ್ಲವೆ ಸಮುದಾಯ ಕೇಂದ್ರಿತವಾಗಿರಬಹುದು. ಇವರುಗಳು ತಮ್ಮ ಈ ಆಶೋತ್ತರಗಳಿಗೆ ಗಂಟು ಬಿದ್ದು ಸಂಘಟನೆಯನ್ನು ಬಲಿಕೊಟ್ಟರು. ಸಂಘಟನೆಯು ನೋಟಕ್ಕೆ ಮಾತ್ರ ಸಂಘಟನೆಯಾಗಿ ಕಂಡಿತು. ಆಂತರ್ಯದಲ್ಲಿ ಅಸಮಾಧಾನ ಮತ್ತು ಬಿಕ್ಕಟ್ಟುಗಳನ್ನು ತುಂಬಿಕೊಂಡಿತು. ೧೯೭೦ರ ದಶಕದಲ್ಲಿ ಕರ್ನಾಟಕ ದಲಿತ ಚಳುವಳಿಯ ಧ್ಯೇಯ ದಲಿತರ ಸಮಸ್ಯೆಗಳನ್ನು ಬಗೆಹರಿಸುವುದು ಮತ್ತು ಅದಕ್ಕೆ ಪರಿಹಾರವನ್ನು ಕಂಡುಕೊಳ್ಳುವುದಾಗಿತ್ತು. ಇದು ಹುಟ್ಟಿನಲ್ಲಿ ಪ್ರಜ್ಞಾವಂತ ಚಳುವಳಿಯಾಗಿತ್ತು. ಈ ದಲಿತ ಚಳುವಳಿಯನ್ನು ಮುನ್ನಡೆಸುತ್ತಿದ್ದ ನಾಯಕರು ದಸಂಸದ ನಿಯಮಗಳಿಗೆ ನಿಷ್ಠತೆಯನ್ನು ಮತ್ತು ಪ್ರಾಮಾಣಿಕತೆಯನ್ನು ಹೊಂದಿದ್ದರು. ಈ ಪ್ರಾರಂಭದ ನಾಯಕರಲ್ಲಿ ಚಳುವಳಿಯನ್ನು ಕಟ್ಟುವುದು ಮುಖ್ಯ ಗುರಿಯಾಗಿತ್ತು. ಇದಕ್ಕೆ ಪ್ರೇರಣೆಯಾಗಿ ಅಂಬೇಡ್ಕರ್ ಅವರು ೧೯೩೦-೫೦ರ ಅವಧಿಯಲ್ಲಿ ದೇಶದಲ್ಲಿನ ದಲಿತ ಪರ ಹೋರಾಟದ ಉತ್ತಮ ನಾಯಕತ್ವ ಪ್ರೇರಣೆಯಾಯಿತು. ಅವರ ಗುಣಗಳು, ಅವರ ವಿಚಾರಧಾರೆಗಳು ದೇಶದ ಎಲ್ಲಾ ರಾಜ್ಯದ ದಲಿತ ಚಳುವಳಿಯ ನಾಯಕರಿಗೆ ಪ್ರಭಾವ ಬೀರಿದವು. ಅಂತೆಯೇ ಕರ್ನಾಟಕ ದಲಿತ ಚಳುವಳಿಯ ನಾಯಕರು ಪ್ರಭಾವಗೊಂಡರು. ಈ ಹೊತ್ತಿನಲ್ಲಿ ದಲಿತ ಚಳುವಳಿ ಆಳುವ ಪಕ್ಷಗಳಿಗೆ ಎದೆ ನಡುಗಿಸುವ ಹೋರಾಟವನ್ನು ನಡೆಸಿತು.

ದಲಿತ ಸಹಸ್ರ ಸಮಸ್ಯೆಗಳನ್ನು ಹೊತ್ತ ದಲಿತ ಚಳುವಳಿಯ ನಾಯಕರು ನಂತರದ ಕಾಲಮಾನದಲ್ಲಿ ಸಂಘಟನೆಯ ನಾಯಕತ್ವದ ಪೈಪೋಟಿಗೆ ಇಳಿದರು. ಇವರು ಶಕ್ತಿರಾಜಕಾರಣದೊಂದಿಗೆ ಹೊಂದಾಣಿಕೆಗೆ ಕೈ ಜೋಡಿಸಿದರು. ದಲಿತ ಸಮುದಾಯಗಳಿಂದ ಸಿಗುವ ನಾಯಕತ್ವದ ಗುರ್ತಿಸಿಕೊಳ್ಳುವಿಕೆ ಮತ್ತು ಸಮುದಾಯದ ಪ್ರತಿಪಾದಕ ನಾಯಕನಾಗುವ ಪ್ರಯತ್ನಗಳು ಇವರಲ್ಲಿ ನಡೆದವು. ಇದರಿಂದ ಈ ನಾಯಕರಿಗೆ ಆಯಾ ಸಮುದಾಯಗಳ ನಾಯಕಪಟ್ಟ ದೊರೆಯಿತು. ಕರ್ನಾಟಕ ದಲಿತ ಚಳುವಳಿಯ ಪ್ರಾರಂಭದ ದಶಕ ಕಳೆದ ನಂತರದಲ್ಲಿ ಚಳುವಳಿಯ ನಾಯಕತ್ವಕ್ಕೆ ಪೈಪೋಟಿ ನಡೆಯಿತು "೧೯೮೫ರವರೆಗೆ ಸಾಂಸ್ಕೃತಿಕ ಚಳುವಳಿಯಾಗಿ ಉಳಿದುಕೊಂಡಿದ್ದ ದಲಿತ ಚಳುವಳಿ ರಾಮಕೃಷ್ಣ ಹೆಗಡೆ ಅಧಿಕಾರಕ್ಕೆ ಬರುವ ಸಂದರ್ಭದಲ್ಲಿ ಅದನ್ನು ಚಿವುಟಲು ಯತ್ನಿಸಿದರು ಎಂಬ ವಾದವಿದೆ"[೬೦].

ದಲಿತ ಚಳುವಳಿ ಕರ್ನಾಟಕದಲ್ಲಿ ಉಗಮಕ್ಕಿಂತ ಮೊದಲಿಂದಲೂ ರಾಜ್ಯದ ಶಕ್ತಿರಾಜಕಾರಣದಲ್ಲಿ ದಲಿತ ರಾಜಕಾರಣಿಗಳೂ ಇದ್ದರು. ದಲಿತ ಚಳುವಳಿಗೆ ರಾಜಕೀಯ ಅನಿವಾರ್ಯವೆಂದು ಈ ನಾಯಕರು ತಮ್ಮ ತೀರ್ಮಾನದಲ್ಲಿ ರಾಜಕೀಯ ಪ್ರವೇಶ ಮಾಡಿದರು. ಮುಂಚೂಣಿಯ ಕೆಲವು ನಾಯಕರು ರಾಜಕೀಯ ಪ್ರಯೋಜನ ಪಡೆದರು. ರಾಜಕಾರಣದಲ್ಲಿ ಅಧಿಕಾರದ ಅನುಕೂಲ ಸಿಗದವರು ಬಂಡೆದ್ದು ಬೇರೆ ಬೇರೆ ರಾಜಕೀಯ ಪಕ್ಷವನ್ನು ಸೇರಿಕೊಂಡರು. ರಾಜಕೀಯ ಪಕ್ಷಗಳು ನಡೆಸುವ ತಮ್ಮ ಪಕ್ಷಗಳ ಹೊಗಳಿಕೆ ಅನ್ಯಪಕ್ಷಗಳ ತೆಗಳಿಕೆಯೊಂದಿಗೆ ಇವರೂ ಸೇರಿಕೊಂಡರು. ಸೇರಿಕೊಂಡ ಪಕ್ಷಗಳಿಗೆ ಈ ನಾಯಕರು ಬದ್ಧರಾದರು. ಇವರು ಅನಿವಾರ್ಯವಾಗಿ ತಾವು ಹೊರಟ ದಾರಿಯನ್ನು ಬಿಟ್ಟು

ಬೇರೆ ದಾರಿಯನ್ನು ಪ್ರವೇಶಿಸಿದರು. ನಂತರದ ಕಾಲಮಾನದಲ್ಲಿ ಈ ನಾಯಕರುಗಳು ತಮ್ಮ ಸಂಘಟನೆಯ ಮುಖ್ಯಗುರಿಯನ್ನು ಬಿಡದೆ ಅನ್ಯ ದಾರಿಯನ್ನೂ ಅನುಸರಿಸದೆ ಸಮತೋಲನ ಮಾಡಲು ತೊಡಗಿದರು. ಅದು ರಾಜಕಾರಣಿಗಳ ಭಾಷಣದಂತೆ ಶೋಷಿತ ದಲಿತ ಸಮುದಾಯಗಳಿಗೆ ಕಂಡು ಬಂತು. ದಲಿತರು, ದಲಿತ ಸಮುದಾಯಗಳ ಬದುಕಿನ ವಸ್ತು ವಿಷಯವನ್ನು ದಲಿತ ನಾಯಕರು ಆಕರವನ್ನಾಗಿ ಮಾಡಿಕೊಂಡರು. ದಲಿತರ ಶೋಷಣೆಗಳು ನೂರಾರು ಬಗೆಯ ಸಮಸ್ಯೆಗಳು ಈ ನಾಯಕರುಗಳಿಗೆ ಮಾತನಾಡಲು ವಸ್ತುಗಳಾದವು.

ಈಗಲೂ ದಲಿತ ಚಳುವಳಿ ನಡೆಯುತ್ತಿದೆ. ಅದರ ನಾಯಕತ್ವದ ಅಗತ್ಯವಿದೆ. ಅದು ದಲಿತ ಚಳುವಳಿಗೆ ಅಗತ್ಯವಿದೆ. ಹಾಗೆಯೇ ಇರುವ ದಲಿತ ನಾಯಕರು ದಲಿತ ವಿರೋಧಿ ಘಟನೆಗಳ ಘೋರ ಕೃತ್ಯವನ್ನು ಸದಾ ಪ್ರತಿಭಟಿಸುತ್ತಲೇ ಇದ್ದಾರೆ. ಪ್ರತಿಭಟನೆ ಮುಂದುವರೆಯುತ್ತಲೇ ಇದೆ. ಇದಕ್ಕೆ ದಲಿತ ಯುವ ವಿದ್ಯಾರ್ಥಿಗಳನ್ನು ಗ್ರಾಮೀಣ ಯುವಕ ಯುವತಿಯರನ್ನು ಬಳಸಿಕೊಳ್ಳಲಾಗುತ್ತಿದೆ. ಅಂತಿಮ ತೀರ್ಮಾನವು ದಲಿತ ಚಳುವಳಿಯ ನಾಯಕರದೇ ಆಗಿರುತ್ತದೆ. ಹೋರಾಟದಲ್ಲಿ ಪಾಲ್ಗೊಂಡ ದಲಿತ ಜನ ಸಮುದಾಯಕ್ಕೆ ಫಲಿತಾಂಶವು ದೊರೆಯುವುದೇ ಇಲ್ಲ. ರಾಜಕೀಯ ಪಕ್ಷಗಳ ಬಲೆಗೆ ಸಿಕ್ಕಿಕೊಂಡ ದಲಿತ ಚಳುವಳಿಯ ನಾಯಕರು ಅದರೊಳಗಿಂದ ಹೊರಬರಲು ಇಷ್ಟಪಡದೆ ಅದರೊಳಗೆ ಕಾಲ ಹಾಕುತ್ತಾರೆ. ಈಗ ನಡೆಯುವ ದಲಿತ ಚಳುವಳಿಯ ಕಾರ್ಯಕ್ರಮಗಳ ಸ್ವರೂಪಗಳು ನಾಯಕರಿಂದಲೇ ಬದಲಾವಣೆಯನ್ನು ತಂದುಕೊಟ್ಟಿವೆ. ಆರಂಭದ ದಲಿತ ಚಳುವಳಿಯ ನಾಯಕರಾದ ದೇವನೂರ ಮಹಾದೇವ, ಸಿದ್ಧಲಿಂಗಯ್ಯ, ಬಿ.ವಿ.ಚಂದ್ರಪ್ರಸಾದ ತ್ಯಾಗಿ, ಬಿ. ಕೃಷ್ಣಪ್ಪ, ಡಿ.ಜಿ.ಸಾಗರ್, ಜಯಣ್ಣ, ವೆಂಕಟೇಶ ಮುಂತಾದವರ ರಾಜಕೀಯ ಪಕ್ಷಗಳೊಂದಿಗಿನ ಒಡನಾಟದಿಂದ ದಲಿತ ಚಳುವಳಿಯು ತನ್ನ ದಾರಿಯನ್ನು ಬಿಟ್ಟು ಬೇರೆ ದಾರಿಯನ್ನು ಹಿಡಿದಿದೆ. ಈ ಚಳುವಳಿಯನ್ನು ತಮ್ಮ ಸ್ವಾರ್ಥಕ್ಕಾಗಿ ನಾಯಕರು ಬಳಸಿಕೊಂಡರೆಂಬ ಆರೋಪವೂ ಇದೆ. ಮುಂಚೂಣಿಯ ದಲಿತ ಚಳುವಳಿಯ ಪ್ರತಿಯೊಬ್ಬ ನಾಯಕ, ಪ್ರತಿಯೊಬ್ಬ ಕಾರ್ಯಕರ್ತನೂ ರಾಜಕೀಯ ಪಕ್ಷಗಳ ಪರವಾಗಿ ನಿಂತು ಚಳುವಳಿಯನ್ನು ಮುಂದುವರೆಸಲು ಪ್ರಯತ್ನಿಸುತ್ತಿದ್ದಾನೆ. ಜೊತೆಗೆ ದಲಿತ ಸಮುದಾಯಗಳಲ್ಲಿನ ಬಹುಸಂಖ್ಯಾತ ಎಡ, ಬಲ ಎಂಬ ಪಂಗಡಗಳು ಚಳುವಳಿಯಲ್ಲಿ ಪ್ರತ್ಯೇಕವಾಗಿ ಸಂಘಟನೆಯಾಗಿ ತಲೆ ಎತ್ತುತ್ತಿವೆ. ಹಾಗೇಯೆ ಬೇರೆ ಬೇರೆ ಸಮುದಾಯಗಳು ತಮ್ಮ ಪ್ರಾಂತೀಯ ಮನೋಭಾವಗಳನ್ನು ಚಳುವಳಿಯಲ್ಲಿ ನಾಯಕರಲ್ಲಿ ಪ್ರತ್ಯೇಕವಾಗಿ ಮೈಗೂಡಿಸಿಕೊಂಡಿವೆ. ದಲಿತ ಚಳುವಳಿಯನ್ನು ಸೂಕ್ಷ್ಮವಾಗಿ ಗ್ರಹಿಸಿದರೆ ಗೊತ್ತಾಗುತ್ತದೆ.

ದಲಿತ ಚಳುವಳಿಯ ನಾಯಕರುಗಳಿಗೆ ದಲಿತರ ಸಮಸ್ಯೆಗಳು ಅನೇಕ ಇದ್ದಾಗಲೂ ಕೂಡ ಅವರಿಗೆ ವೈಯಕ್ತಿಕ ಸಮಸ್ಯೆ ಮತ್ತು ವೈಯಕ್ತಿಕ ಬದುಕು ಮುಖ್ಯವಾಗಿದೆ. ಜಾಗತಿಕ ಪ್ರಕ್ರಿಯೆ ಆಕರ್ಷಣೆಯು ತಮ್ಮ ಬದುಕನ್ನು ಮೊದಲು ಸರಿಪಡಿಸಿಕೊಳ್ಳುವ ಸ್ವಾರ್ಥವನ್ನು ತಂದಿದೆ. ಇದು ದಲಿತ ಚಳುವಳಿಯ ಅನ್ಯದಾರಿಗೆ ಮತ್ತು ಒಡಕಿಗೆ ಕಾರಣವಾಯಿತು. ದಲಿತ ನಾಯಕರುಗಳೇ ಕಾರಣರಾದರೂ ಸಹ ಸಂಪೂರ್ಣವಾಗಿ ಕಾರಣಕರ್ತರೆಂದು ಹೇಳಿದರೆ ಪ್ರಾಯಶಃ ತಪ್ಪಾಗುತ್ತದೆ. ಅದಕ್ಕೆ ಬಹುಮುಖ್ಯವಾಗಿ ಈವೊತ್ತಿನ ವಿದ್ಯಮಾನಗಳೂ ಕಾರಣವಾಗಿರುತ್ತವೆ ಎಂಬುದನ್ನು ನೋಡಬೇಕು. ಆಗ ದಲಿತ ಚಳುವಳಿಯ ನಾಯಕರು ಅನ್ಯದಾರಿಯನ್ನು ಅನುಸರಿಸಲು ಕಾರಣಗಳು ಏನು ಎಂಬುದು ಗೊತ್ತಾಗುತ್ತವೆ. ದಲಿತ ನಾಯಕರುಗಳಿಗೆ ಮುಖ್ಯವಾಗಿ ಎದುರಿಗಿದ್ದದ್ದು ಉತ್ತಮ ಸ್ಥಿತಿಯನ್ನು ಹೊಂದಿದ ದಲಿತೇತರ ಸಮುದಾಯಗಳು. ತಮ್ಮ ಸ್ಥಿತಿಯಿಂದ ಮುಕ್ತಿ ಹೊಂದುವುದು ಮತ್ತು ತಮ್ಮ ಬದುಕಿನ ಸಂಕಷ್ಟಗಳನ್ನು ತಮ್ಮ ಮುಂದಿನ ಪೀಳಿಗೆಗೆ ಬರದಂತೆ

ನೋಡಿಕೊಳ್ಳಲು ಪ್ರಯತ್ನಿಸುವುದು ದಲಿತ ಚಳುವಳಿಯ ನಾಯಕರಲ್ಲಿ ಕಂಡುಬಂದವು. ಇವು ದಲಿತ ಚಳುವಳಿಯ ನಿರಂತರತೆಯ ವಾಸ್ತವದಲ್ಲಿ ಕಂಡುಬಂದಿದೆ.

## ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಸಂವಿಧಾನ

ತನ್ನದೇ ಆದ ನೀತಿ ನಿಯಮ, ಆಶಯಗಳನ್ನು ಯಾವುದೇ ಚಳುವಳಿಯು ಅದರ ವಸ್ತು ವಿಷಯಗಳಲ್ಲಿ ಹೊಂದಿರುತ್ತದೆ. ಅವುಗಳು ತನ್ನ ನಿಯಮಗಳನ್ನೊಂದಿದ ಸಂವಿಧಾನಗಳ ಅಡಿಯಲ್ಲಿ ಚಳುವಳಿ ಸಾಗುತ್ತದೆ. ಯಾವುದೇ ಸಂಘಟನೆಯು ತನ್ನದೇ ಆದ ನೀತಿ ನಿಯಮಗಳಿಗೆ ಸಂಬಂಧಿಸಿದಂತೆ ಸಂವಿಧಾನವನ್ನು ರಚಿಸಿಕೊಂಡಿರುತ್ತದೆ. ಸಂಘಟನೆಗೆ ಒಂದು ಹೆಸರು, ಗುರಿ, ಧ್ಯೇಯ, ಸದಸ್ಯತ್ವ ಸ್ವರೂಪ, ನಿಬಂಧನೆಗಳು, ಸಮಿತಿಗಳು, ಕರ್ತವ್ಯಗಳು, ಪದಾಧಿಕಾರಿಗಳು ಮುಂತಾದ ನಿರ್ವಹಿಸುವ ಕಾರ್ಯಕ್ರಮಗಳನ್ನು ಹೊಂದಿರುತ್ತವೆ.

ದಲಿತ ಚಳುವಳಿಯಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮತಿಯು ಮಹತ್ವದ ಪಾಲನ್ನು' ಹೊಂದಿದೆ. ಇದು ತನ್ನ ತೆಕ್ಕೆಯಲ್ಲಿ ದಲಿತ ಸಮುದಾಯಗಳನ್ನು ಸೇರಿಸಿಕೊಂಡು ತನ್ನ ಕಾರ್ಯ ಚಟುವಟಿಕೆಗಳನ್ನು ಮಾಡಿಕೊಂಡು ಬಂದಿದೆ. ಕರ್ನಾಟಕದ ದಲಿತ ಚಳುವಳಿಯಲ್ಲಿ ಎಲ್ಲಾ ದಲಿತ ಸಮುದಾಯಗಳು ಒಟ್ಟಿಗೆ ಸೇರಿ 'ಕರ್ನಾಟಕ ದಲಿತ ಸಂಘರ್ಷ ಸಮಿತಿ'ಯನ್ನು ರಚಿಸಿಕೊಂಡವು. ಕಾಲಾನಂತರದಲ್ಲಿ ಇವುಗಳು ಸಮುದಾಯಗಳು ಸಂಘಟನೆಗಳಾದವು. ಅವುಗಳು ಈಚಿನ ದಿನಗಳಲ್ಲಿ ಕಂಡುಬಂದವು. ಇದಕ್ಕೂ ಮುಂಚೆ ಕರ್ನಾಟಕ ದಲಿತ ಸಂಘರ್ಷ ಸಮಿತಿಯು ತನ್ನ ಸಂಘಟನೆಯ ಶಾಖೆಗಳನ್ನು ಮಾಡಿಕೊಂಡಿತ್ತು. ಇದು ಕರ್ನಾಟಕ ದಲಿತ ಸಂಘರ್ಷ ಸಮಿತಿ, ಕರ್ನಾಟಕ ದಲಿತ ವಿದ್ಯಾರ್ಥಿ ಒಕ್ಕೂಟ, ಕರ್ನಾಟಕ ದಲಿತ ನೌಕರರ ಒಕ್ಕೂಟ, ಕರ್ನಾಟಕ ದಲಿತ ಮಹಿಳಾ ಒಕ್ಕೂಟ, ದಲಿತ ಕಲಾಮಂಡಲಿ ಹಾಗೂ ದಲಿತ ಸಾಹಿತ್ಯ ಪ್ರಕಾಶನ, ದಲಿತ ಕಲಾವಿದ ಬಳಗ ಗ್ರಾಮದಿಂದ ಹಿಡಿದು ರಾಜ್ಯದವರೆಗೆ ತನ್ನ ಎಲ್ಲೆಯ ವಿಸ್ತಾರವನ್ನು ಹರಡಿಕೊಂಡಿತ್ತು. ಇದನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿ ಎಂದು ಕರೆದರು. ಇದನ್ನು ಮುಂದೆ ಸಂಕ್ಷಿಪ್ತವಾಗಿ ದಸಂಸ ಎಂದು ಇಂಗ್ಲೀಷ್ ನಲ್ಲಿ ಡಿ ಎಸ್ ಎಸ್ ಅಂತಲೂ ಕರೆಯಲಾಯಿತು.

ಈ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಸಂವಿಧಾನದಲ್ಲಿ 'ದಲಿತ' ಪದದ ಅರ್ಥವನ್ನು ಹೀಗೆ ಬಳಸಲಾಗಿದೆ. "ದಲಿತ ಅರ್ಥ : ದಲಿತರು ಎಂದರೆ ಅಸ್ಪೃಶ್ಯರು ಮತ್ತು ಜಾತಿಯಿಂದ ಅವಮಾನಿತರಾದವರು ಮತ್ತೂ ಹೇಳಬೇಕೆಂದರೆ ಯಾರು ಹಿಂದೂ ಚಾತುರ್ವರ್ಣದ ಶ್ರಮವಿಭಜನೆಯ ಕುತಂತ್ರಕ್ಕೆ ಈಡಾಗಿ ಕೀಳು ವೃತ್ತಿಗಳನ್ನೇ ತಲೆ ತಲಾಂತರದಿಂದ ಅವಲಂಬಿಸಿ ಜಾತಿಯ ಹೆಸರು ಹೇಳಿಕೊಳ್ಳಲೂ ನಾಚಿಕೆ ಪಡುತ್ತಾರೋ ಅವರು"[೬೧] ಸಂವಿಧಾನವು ದಲಿತ ಎಂಬುದರ ಅರ್ಥವನ್ನು ಬಿಡಿಸಿಕೊಟ್ಟಿತು. ಇದು ತನ್ನ ಗುರಿ ಮತ್ತು ಮಾರ್ಗದಲ್ಲಿ ಆರು ಅಂಶಗಳನ್ನು ಹೊಂದಿದೆ.

"(ಅ) ಬದುಕಿನ ಎಲ್ಲಾ ಸ್ತರಗಳಲ್ಲೂ ಬೇರುಬಿಟ್ಟಿರುವ ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಅಸಮಾನತೆಗಳಿಂದ ದಲಿತರ ವಿಮೋಚನೆ. ಈ ವಿಮೋಚನಾ ಗುರಿಯನ್ನು ಅಹಿಂಸಾತ್ಮಕ ಮಾರ್ಗದಿಂದ ಸಾಧಿಸುವುದು.

(ಆ) ದೇಶದ ಎಲ್ಲಾ ಸಂಪತ್ತು, ಉತ್ಪಾದನಾ ಸಾಧನಗಳ ಒಡೆತನವು ಕೆಲವೇ ಜನ ಮೇಲು ಜಾತಿಯ ಮತ್ತು ಮೇಲು ವರ್ಗಗಳ ಗುತ್ತಿಗೆಯಾಗಿದೆ. ಈ ಸಂಪತ್ತು ಸಾಧನೆಗಳನ್ನು ಸಾಮಾಜೀಕರಿಸಿ ಜಾತಿರಹಿತ ವರ್ಗರಹಿತ

ಸಮಾಜವನ್ನು ಕಟ್ಟುವುದು. ಈ ಗುರಿಯನ್ನು ಸಂವಿಧಾನದಲ್ಲೇ (ಕಾರ್ಯಾಂಗ ಮತ್ತು ಶಾಸಕಾಂಗಗಳ ಹಸ್ತಕ್ಷೇಪವಿಲ್ಲದಂತೆ) ಅಳವಡಿಸಿ ಹತ್ತು ವರ್ಷಗಳಲ್ಲಿ ಸಾಧಿಸಿಬೇಕೆಂಬುದು ಡಾ.ಬಿ.ಆರ್.ಅಂಬೇಡ್ಕರ್‌ರ ಆಶಯವಾಗಿಯೇ ಉಳಿದಿದೆ. ನಾವೀಗ ಅವರ ಆಶಯವನ್ನು ಕಾರ್ಯಗತಗೊಳಿಸಬೇಕಾಗಿದೆ.

(ಇ) ರಾಷ್ಟ್ರೀಯ - ಅಂತಾರಾಷ್ಟ್ರೀಯ ಮಟ್ಟದ ಸ್ವಾಭಿಮಾನ ಮತ್ತು ಸ್ವಾತಂತ್ರ್ಯ ಹೋರಾಟಗಳನ್ನು ಗೌರವಿಸಿ ಬೆಂಬಲಿಸುವುದು.

(ಈ) ಅಲ್ಪಸಂಖ್ಯಾತರ ಮೇಲೆ ನಡೆಯುವ ಎಲ್ಲಾ ಬಗೆಯ ಮತಾಂಧ ದಬ್ಬಾಳಿಕೆಗಳನ್ನು ವಿರೋಧಿಸುವುದು.

(ಉ) ಪ್ರೀತಿ-ಸಮಾನತೆ-ಸೋದರತೆಗಳ ನೆಲಗಟ್ಟು ಸ್ಥಾಪಿಸುವುದು.

(ಊ) ಅಸ್ಪೃಶ್ಯರಂಥ ಅವಮಾನಿತ ಜಾತಿಗಳ ಆಳ್ವಿಕೆಯನ್ನು ಜಾತಿ ಮತೀಯವಾದ ಭಾರತೀಯತೆಯು ಒಪ್ಪಿದಾಗ ಮಾತ್ರವೇ ಸಾಂಸ್ಕೃತಿಕ ವಿಮೋಚನೆ ಪೂರ್ಣವಾಗುವುದು ಎಂಬ ಈ ಸಾಂಸ್ಕೃತಿಕ ನಿಜವನ್ನು ಜನತೆಗೆ ಮನಗಾಣಿಸಿಕೊಡುವುದು''[೬೨]. ಗುರಿ ಮತ್ತು ಮಾರ್ಗದಲ್ಲಿ ತನ್ನ ಅಂಶವನ್ನು ಹೇಳಿ ಇವುಗಳನ್ವಯ ಈ ಸಂವಿಧಾನಕ್ಕೆ ತಕ್ಕಂತೆ ಸದಸ್ಯತ್ವದ ನಿಯಮವನ್ನು ಕೊಡಲಾಗಿದೆ. ಕ.ದ.ಸಂ.ಸದಲ್ಲಿನ ಸದಸ್ಯತ್ವ ಪಡೆಯಲು

''(ಅ) ದಸಂಸ ಕಾರ್ಯಕ್ರಮ, ಸಂವಿಧಾನ ಮತ್ತು ನೀತಿಗಳಿಗೆ ಬದ್ಧರಾಗುವವರು ಸದಸ್ಯರಾಗಬಹುದು. ಸದಸ್ಯತ್ವಕ್ಕೆ ಕನಿಷ್ಟ ವಯೋಮಿತಿ ೧೫ ವರ್ಷ.

(ಆ) ಸದಸ್ಯತ್ವದ ಶುಲ್ಕ ಒಂದು ರೂಪಾಯಿ. ಈ ಹಣ ಸಂಪೂರ್ಣವಾಗಿ ರಾಜ್ಯ ಸಮಿತಿಗೆ ಸೇರತಕ್ಕದ್ದು.

(ಇ) ರಾಜಕೀಯ ಪಕ್ಷ ಮತ್ತು ಅವುಗಳ ಅಂಗ ಸಂಸ್ಥೆಗಳಿಗೆ ಸದಸ್ಯರಾಗುವವರು ದಸಂಸ ಸದಸ್ಯರಾಗಲು ಅನರ್ಹರು.

(ಈ) ಕೋಮುಭಾವನೆ ಬಿತ್ತುವ (ಆರೆಸ್ಸಸ್, ಜ್ಯಮಾತೆ-ಇಸ್ಲಾಮಿ ಇತ್ಯಾದಿ) ಸಂಘಟನೆಗಳ ಸದಸ್ಯರು ದಸಂಸ ಸದಸ್ಯರಾಗಲು ಅನರ್ಹರು.

(ಉ) ದಲಿತರು ಮಾತ್ರ ದಸಂಸ ಪದಾಧಿಕಾರಿಗಳು ಆಗಲು ಅರ್ಹರು.''[೬೩]

ದಸಂಸದ ಸದಸ್ಯತ್ವಕ್ಕೆ ಮತ್ತು ಪದಾಧಿಕಾರಿಗಳಾಗಲು ರಾಜಕೀಯ ಪಕ್ಷಗಳ ಸಂಬಂಧವನ್ನು ಹೊಂದದೇ ಇರುವುದು, ಹಾಗೆಯೇ ದಸಂಸದ ಸದಸ್ಯತ್ವಕ್ಕೆ ಎಲ್ಲಾ ಮಾನವೀಯವಾದಿಗಳಿಗೆ ಸ್ವಾಗತವು ನಿಯಮಾವಳಿಯಲ್ಲಿ ಹೊಂದಿದೆ. ಸಂಘಟನೆಯ ಸ್ವರೂಪವನ್ನು ದಸಂಸವು ಗ್ರಾಮ, ಗ್ರೂಪ್, ಪಂಚಾಯ್ತಿ, ಹೋಬಳಿ, ತಾಲೂಕು, ನಗರ, ಜಿಲ್ಲೆ, ರಾಜ್ಯ ಹೀಗೆ ವಿಸ್ತೀರ್ಣದ ಸಮಿತಿಗಳನ್ನು ಹೊಂದಿದೆ. ಇವುಗಳಲ್ಲಿನ ಸದಸ್ಯರಿಗೆ ತನ್ನ ಒಟ್ಟು ಪ್ರನಾಳಿಕೆಯ ಸಂವಿಧಾನದ ಒಟ್ಟು ನೀತಿ ನಿಯಮಗಳಿಗೆ ಬದ್ಧರಾಗಿ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ಹಕ್ಕಿದೆ.

ದಸಂಸ ಸಂವಿಧಾನದಲ್ಲಿ ಅದರ ಸದಸ್ಯರಿಗೆ ಎಂಟು ಕರ್ತವ್ಯಗಳ ಅಂಶಗಳನ್ನು ಹೊಂದಿದೆ.

(ಅ) ದಸಂಸದ ಕೆಲಸ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು.

(ಆ) ದಸಂಸ ಧ್ಯೇಯ ಮತ್ತು ಸಂವಿಧಾನಕ್ಕೆ ಪೂರ್ಣನಿಷ್ಠೆಯಿಂದಿರಬೇಕು. ಇದನ್ನು ಅರ್ಥಮಾಡಿಕೊಂಡು ಕಾರ್ಯ ನಿರ್ವಹಿಸಬೇಕು.

(ಇ) ದೇಶದ ಹಾಗೂ ದಲಿತ ವರ್ಗಗಳ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಮಸ್ಯೆಗಳ ಕುರಿತು ತಮ್ಮ ಅರಿವಿನ ಮಟ್ಟವನ್ನು ಹೆಚ್ಚಿಸಿಕೊಳ್ಳಬೇಕು.

(ಈ) ಎಲ್ಲಾ ಜನರೊಂದಿಗೆ ಸ್ನೇಹ ಸೌಹಾರ್ದಗಳ ಸಂಬಂಧ ಹೊಂದಿ ದಸಂಸ ಕಾರ್ಯಕ್ರಮ, ನೀತಿ ನಿಯಮಗಳ ಪ್ರಚಾರ ಮಾಡಬೇಕು.

(ಉ) ದಸಂಸ ಹಿತಾಸಕ್ತಿಗೆ ಧಕ್ಕೆ ತರುವ ಅಪಪ್ರಚಾರದ ವಿರುದ್ಧ ಹೋರಾಡಬೇಕು.

(ಊ) ವ್ಯಕ್ತಿಗತ ನಿಂದೆ, ಗುಂಪುಗಾರಿಕೆ ಹಾಗೂ ದಸಂಸ ವಿರೋಧಿ ಚಟುವಟಿಕೆಗಳಲ್ಲಿ ತೊಡಗಬಾರದು.

(ಋ) ಬಹುಮತ ನಿರ್ಣಯಗಳಿಗೆ ಮತ್ತು ಮೇಲಿನ ಸಮಿತಿಗಳ ನಿರ್ಣಯಗಳಿಗೆ ಬದ್ಧರಾಗಬೇಕು.

(ಎ) ಸಂಘಟನೆಯ ಒಳಗೆ ಇತ್ಯರ್ಥಗೊಳ್ಳದ ತನಕ ಭಿನ್ನಾಭಿಪ್ರಾಯ ಹಾಗೂ ಇತರ ಮಾಹಿತಿಗಳನ್ನು ಬಹಿರಂಗಪಡಿಸಬಾರದು"[೬೪]. ದಸಂಸದ ಸದಸ್ಯರು ಮತ್ತು ಪದಾಧಿಕಾರಿಗಳು ಈ ಕರ್ತವ್ಯ ಮತ್ತು ನಿಯಮಗಳಿಗೆ ಬದ್ಧರಾಗಿರುತ್ತಾರೆ. ಹಾಗೆಯೇ ರಾಜ್ಯ ಸಮಿತಿಯ ಪದಾಧಿಕಾರಿಗಳ ಪದನಾಮವು ಹೀಗಿವೆ.

ರಾಜ್ಯ ಸಂಚಾಲಕ - ೧, ರಾಜ್ಯ ಸಂಘಟನಾ ಸಂಚಾಲಕ - ೨

ರಾಜ್ಯ ಖಜಾಂಚಿ - ೧ ಜನರನ್ನು ಹೊಂದಿರುತ್ತವೆ. ಇದು ರಾಜ್ಯದಿಂದ ಜಿಲ್ಲೆ ನಗರ, ತಾಲೂಕು, ಹೋಬಳಿ, ಗ್ರಾಮದ ತನಕ ಪ್ರತ್ಯೇಕ ಶಾಖೆಯನ್ನು ಹೊಂದಿರುತ್ತದೆ. ಹಾಗೆಯೇ ಮೇಲಿನ ರೀತಿಯ ಪ್ರತ್ಯೇಕ ಪದಾಧಿಕಾರಿಗಳನ್ನು ಆಯ್ಕೆ ಮಾಡಲಾಗುತ್ತದೆ. ಎಲ್ಲಾ ತಾಲೂಕು ಮತ್ತು ಜಿಲ್ಲಾ ಪದಾಧಿಕಾರಿಗಳು ರಾಜ್ಯ ಸಂಚಾಲಕನನ್ನು ಆಯ್ಕೆ ಮಾಡಲಾಗುತ್ತದೆ. ಈ ಪದಾಧಿಕಾರಿಗಳು ಕಾರ್ಯಕ್ರಮಗಳ ವಸ್ತುವಿಷಯಕ್ಕೆ ಸಂಬಂಧಪಟ್ಟಂತೆ ತೀರ್ಮಾನವನ್ನು ಕೈಗೊಂಡು ತಮ್ಮ ಚಟುವಟಿಕೆಗಳನ್ನು ರೂಪಿಸಿಕೊಳ್ಳುವರು.

## ದಲಿತ ಸಂಘಟನೆಗಳ ಬಗ್ಗೆ ಅಲ್ಲಿನ ದಲಿತರ ಬಗ್ಗೆ ಸಾರ್ವಜನಿಕರ ಅಭಿಪ್ರಾಯಗಳು

ಇಲ್ಲಿ ವಿಷಯವನ್ನು ಸಮೀಕರಿಸಿ ಅರ್ಥವನ್ನು ಕೊಡಲಾಗಿದೆ. ದಲಿತ ಸಂಘಟನೆಯ ಆರಂಭದ ಹಂತದಲ್ಲಿ ಸ್ವಾಭಿಮಾನವನ್ನು ಹೊತ್ತು ಚಾಲನೆಗೆ ಬಂತು. ಆದರೂ ಕೆಲವರು ಸ್ವಾಭಿಮಾನದಿಂದಲೇ ವಾಸ್ತವ ಅರಿವನ್ನು ಹೊಂದಿ ಚಳುವಳಿಯ ಪ್ರಕ್ರಿಯೆಯಲ್ಲಿ ಇಂದಿಗೂ ದುಡಿಯುತ್ತಿದ್ದಾರೆ. ದಲಿತ ಚಳುವಳಿಯ ನಾಯಕರು / ಕಾರ್ಯಕರ್ತರ ಬಗ್ಗೆ

ದಲಿತರು ಬೇಸರಿಕೆಯ ಮಾತುಗಳನ್ನು ಆಡುವುದು ಕಂಡುಬರುತ್ತಿದೆ. ಅದು ತಮಗೆ ದಕ್ಕುವ ನ್ಯಾಯ ತೀರ್ಪಿನಲ್ಲಿರಬಹುದು; ಇಲ್ಲವೇ ತಮ್ಮ ನಾಯಕರೇ ಪರಿಹಾರಕ್ಕೆ ಪಡೆಯುವ ಆರ್ಥಿಕ ಶೋಷಣೆ ಇರಬಹುದು. ಅಂದರೆ ಗ್ರಾಮೀಣ ಪ್ರದೇಶದಲ್ಲಿರುವ ಸಂಪರ್ಕಿತ ದಲಿತರು ಬೇಸತ್ತಿದ್ದಾರೆ. ಹಾಗೆಯೇ ಸಂಘಟನೆಯ ಕಾರ್ಯಕ್ರಮಗಳಿಗೆ - ದಲಿತೇತರ ಅನುಕೂಲಸ್ಥರು ಕೆಲವು ರೀತಿಯ ಸಹಾಯವನ್ನು ಮಾಡಿ ದಲಿತ ಸಂಘಟನೆಯ ಬಗ್ಗೆ ನಿರುತ್ಸಾಹವನ್ನು ಹೊಂದಿದ್ದಾರೆ. ಈ ಸಂಘಟನೆಯ ಮೂಲಸಿದ್ಧಾಂತಕ್ಕೆ ಪೆಟ್ಟನ್ನು ಕೊಡುವ ರೀತಿಯಲ್ಲಿ ಮನಃಸ್ಥಿತಿಯನ್ನು ತಂದು ಕೊಂಡಿದ್ದಾರೆ. ಚಳುವಳಿಯ ಕಾರ್ಯಕ್ರಮ ರೂಪುರೇಷೆಗಳಿಗೆ ಗೌರವವನ್ನು ಕೊಟ್ಟು ಕಾರ್ಯಕರ್ತರ ಬಗ್ಗೆ ತೀರಾ ಅಸಮಾಧಾನವನ್ನು ಹೊಂದಿದ್ದಾರೆ. ದಲಿತ ನೌಕರರೂ ಸಹ ದಲಿತ ಸಂಘಟನೆಯ ಬಗ್ಗೆ ಅಸಮಾಧಾನವನ್ನು ಹೊಂದಿದ್ದಾರೆ. ದಲಿತ ಸಂಘಟನೆಯ ಕಾರ್ಯಕ್ರಮಗಳಿಗೆ ಬಹುತೇಕ ಅನುಕೂಲಸ್ಥ ದಲಿತರು, ನೌಕರರು ಭಾಗವಹಿಸುವುದಿಲ್ಲ. ಈ ನೌಕರರು ಒಂದು ಹಂತದಲ್ಲಿ ದಲಿತ ಶೋಷಣೆಯನ್ನು ಅನುಭವಿಸುತ್ತಿರುವವರೂ ಹೌದು. ಇವರು ಹಿಂದೆ ತಮ್ಮ ಜಾತಿಯನ್ನು ಹೇಳಿಕೊಳ್ಳುವುದು ಒಂದು ಗುಣವೆಂದುಕೊಂಡಿದ್ದರು. ಇಂದು ತಮ್ಮ ಬದುಕಲ್ಲಿ ದಲಿತ ಸಮಸ್ಯೆಗಳು ಕಂಡರೂ ಕಾಣದಂತೆ ಹಿಂದೆ ಸರಿದು ಬದುಕುತ್ತಿದ್ದಾರೆ.

ದಲಿತ ಪರ(ಕಾಳಜಿ) ಚಿಂತನೆಯನ್ನು ಹೊಂದಿದ ದಲಿತೇತರರು ಬಹುತೇಕವಾಗಿ ತಮ್ಮ ವಾದವನ್ನು ಬದಿಗಿಟ್ಟು ಹಿಂದಕ್ಕೆ ಸರಿಯುತ್ತಿದ್ದಾರೆ. ಇವರು ಒಂದು ಹಂತದವರೆಗೆ ದಲಿತ ಪ್ರತಿಭಟನೆಯನ್ನು ಪ್ರೋತ್ಸಾಹಿಸಿದರು. ಇವರು ಈ ಕಾಲಮಾನದಲ್ಲಿ ದಲಿತಪರ ದನಿಯನ್ನು ಕಡಿಮೆ ಮಾಡುತ್ತಿದ್ದಾರೆ. ಹಲವಾರು ದಲಿತ ಸಂಘಟನೆಗಳೂ ಒಂದಕ್ಕೊಂದು ಶ್ರೇಷ್ಠತೆ ಎಂಬುದರಲ್ಲಿ ತಮ್ಮ ತಮ್ಮ ಮಿತಿಯನ್ನು ಬಯಲಿಗೆ ಎಳೆಯುತ್ತಿದ್ದಾರೆ. ಅದು ಜನ ಸಾಮಾನ್ಯರಲ್ಲಿ ಇದ್ದ ಕಲ್ಪನೆಯನ್ನು ಕಳೆದುಕೊಳ್ಳುವ ದಾರಿಯಲ್ಲಿದೆ. ಆದರೂ ದಲಿತ ಸಂಘಟನೆಗಳು ದಲಿತ ಸಮುದಾಯಗಳ ಸಮಸ್ಯೆಗಳಿಗೆ ಪ್ರತಿಭಟನೆ ಅನಿವಾರ್ಯವೆಂದಾಗ ಎಲ್ಲವೂ ಕೈ ಜೋಡಿಸುವುದನ್ನು ಮಾಡುತ್ತಿವೆ.

**ಕೊನೆ ಟಿಪ್ಪಣಿಗಳು**

೧. ಬಿ.ಎಂ. ಪುಟ್ಟಯ್ಯ, 'ದಲಿತ ಚಳುವಳಿ' ಪುಟ:೧೦೨ ಸಂ. ಮುನಿವೆಂಕಟಪ್ಪ.

೨. ಅದೇ ಪುಟ:೧೦೨

೩. ಅದೇ ಪುಟ:೯೯

೪. ಅದೇ ಪುಟ:೧೦೦

೫. ಅದೇ ಪುಟ:೧೦೪

೬. ಅದೇ ಪುಟ:೧೦೪

(ಅ) ದೇವಲಾಪುರ ಹೋರಾಟವು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲೂಕಿನ ದೇವಲಾಪುರದ ದಲಿತರಿಗೆ ಭೂಮಿ ಸಂದದ್ದು.

(ಇ) ಹಾಸನ ಜಿಲ್ಲೆ ಅರಸೀಕೆರೆ ತಾಲೂಕಿನ ಬಿದರೆಯು ಒಂದು ಸಣ್ಣ ಹಳ್ಳಿ. ಇಲ್ಲಿಯ ಭೂಮಿಯನ್ನು ದಲಿತರಿಗೆ ಮತ್ತು ಭೂರಹಿತ ಕಾರ್ಮಿಕರಿಗೆ ಜಮೀನನ್ನೂ ಮಂಜೂರು ಮಾಡಿಸಲಾಯಿತು.

(ಈ) ಚಿಕ್ಕಮಗಳೂರು ಜಿಲ್ಲೆ ಮೂಡಿಗೆರೆ ತಾಲೂಕಿನ ಚಂದಗೂಡು ಒಂದು ಹಳ್ಳಿ. ದಲಿತ ಚಳುವಳಿಯು ಈ ಊರಿನ ಭೂಮಿಯನ್ನು ಭೂರಹಿತ ೭೦ ಹಳ್ಳಿಯ ದಲಿತರನ್ನು ಒಟ್ಟುಗೂಡಿಸಿ ಅವರಿಗೆ ಭೂಮಿಯನ್ನು ಮಂಜೂರು ಮಾಡಿಸಿತು.

(ಉ) ಕೋಲಾರ ಜಿಲ್ಲೆಯ ಗೌರಬಿದನೂರು ತಾಲೂಕಿನ ನಾಗಸಂದ್ರದ ಊರಲ್ಲಿನ ದಲಿತರಿಗೆ ಮತ್ತು ಭೂರಹಿತ ಹಿಂದಳಿದವರಿಗೆ ದಲಿತ ಚಳುವಳಿಯು ಮಂಜೂರು ಮಾಡಿಸಲಾಯಿತು.

(ಊ) ರಾಯಚೂರು ಜಿಲ್ಲೆಯ ಲಿಂಗಸೂರು ತಾಲೂಕಿನ ಮೆದಕಿವಾಳ ಎಂಬ ಹಳ್ಳಿಯ ದಲಿತರಿಗೆ ಭೂಮಿಯನ್ನು ದಲಿತ ಚಳುವಳಿಯು ಮಂಜೂರ ಮಾಡಿಸಿತು.

(ಋ) ಕರಪತ್ರದಿಂದ 'ಕರ್ನಾಟಕ ಸಂಘರ್ಷ ಸಮಿತಿ', ಹಾಸನ ಜಿಲ್ಲೆಯ ಶಾಖೆ ಹಾಸನ. ಸರ್ಕಾರ ಹಾಗೂ ಸಾರ್ವಜನಿಕ ಗಮನಕ್ಕೆ ದಿನಾಂಕ : ೩೦/೧೧/೧೯೭೯.

೭. ಮಾನಸಯ್ಯ, 'ವರ್ಗಸಮರ' ಮಾಸಪತ್ರಿಕೆ ಪುಟ: ೧೪ ಸಂಚಿಕೆ : ೪, ಸಂಪುಟ: ಮಾರ್ಚ್ ೯, ೧೯೯೯.

೮. ಮಾನಸಯ್ಯ, 'ವರ್ಗಸಮರ' ಮಾಸಪತ್ರಿಕೆ ಪುಟ: ೧೪ ಅದೇ

೯. ಬಿ.ಎಂ. ಪುಟ್ಟಯ್ಯ, 'ದಲಿತ ಚಳುವಳಿ' ಪುಟ: ೧೦೬ ಸಂ. ಮುನಿ ವೆಂಕಟಪ್ಪ

೧೦. ಅದೇ ಪುಟ: ೧೦೬

೧೧. ಗಂಗಾರಾಂ ಚಂಡಾಳ, 'ದಲಿತ ಚಳುವಳಿ ಮತ್ತು ಅಂಬೇಡ್ಕರ್', ಪುಟ: ೫೯

೧೨. (ವಿವರ) 'ಎಲ್ಲೆ ಜನತಾ ಸರ್ಕಾರವೆ ನಿನ್ನ ರಾಮರಾಜ್ಯದ ಕಾವಲುಗಾರನಾದ ಬೇಲೂರು ಎಸ್.ಐ. ಜಯರಾಮಯ್ಯನ ನೇತೃತ್ವದಲ್ಲಿ ತಾ. ೧೯.೧೦.೧೯೫೫ರ ನಡುರಾತ್ರಿ ಬೇಲೂರು ತಾಲೂಕು ನರಸೀಪುರ ಬೋವಿ ಕಾಲೋನಿ ದಲಿತರ ಮನೆಗಳ ಕದಗಳನ್ನು ಮುರಿದು ನುಗ್ಗಿ ತಲೆ ಹೊಡೆದು, ಕೈಕಾಲು ಮುರಿದು, ರಕ್ತ ಹರಿಸಿ ಅನ್ನವಿಲ್ಲದೆ ನರಳುತ್ತಾ ಆಸ್ಪತ್ರೆ, ಬೀದಿಯಲ್ಲಿ ಚೆಲ್ಲಾಡಿಸಿದವರನ್ನು ನೀನು ಕಣ್ಣಾರೆ ಕಂಡಿರುವೆ. ರಕ್ಷಕರ ಕ್ರೂರತೆಯನ್ನು ವಿವರಿಸಿ 'ಜನತಾ ಸರ್ಕಾರವೇ ನೀನು ನ್ಯಾಯ ಕೊಡುವೆ ಎಂದು ನಂಬಿದ್ದೆವು. ಆದರೆ ದಲಿತರಿಗಾದ ದೌರ್ಜನ್ಯವನ್ನು ಕೀಳು ಜಾತಿಯವರಿಗಾದ ಘಟನೆ ಎಂದು ಪರಿಗಣಿಸಿದ ನಿನ್ನ ಪಕ್ಷದ ಕೆಲವು ನಾಯಕರು ಪೋಲೀಸ್ ಅಧಿಕಾರಿಗಳಿಗೆ ಷಾಮೀಲಾಗಿ 'ಜಯ ರಾಮಯ್ಯನಿಗೆ ಜೈ' ಎಂದು ತಮ್ಮ ಕೀಳುಮಟ್ಟದ ರಾಜಕೀಯವನ್ನು ಪ್ರದರ್ಶಿಸಿದರು. ಇಂಥವರ ತುತ್ತೂರಿಗೆ ಊದಿಸಿಕೊಂಡವರ ನೀನು ದಲಿತ ನ್ಯಾಯವನ್ನೇ ದಮನ ಮಾಡಲು ಹೊರಟಿರುವೆ. ಕರ್ನಾಟಕ ದಲಿತ ಸಂಘರ್ಷ ಸಮಿತಿ, ಹಾಸನ - ಕರಪತ್ರದಿಂದ.

೧೩. ಪ್ರಜಾವಾಣಿ, ದಿನಪತ್ರಿಕೆ ದಿನಾಂಕ - ೧.೧೧.೧೯೯೦. ಬೀದರ್ ಅ. ೩೧.

೧೪. ಕರಪತ್ರದಿಂದ - ಕರ್ನಾಟಕ ದಲಿತ ಸಂಘರ್ಷ ಸಮಿತಿ ದಿನಾಂಕ : ೬.೩.೧೯೯೫ ರ ಸೋಮವಾರ.

೧೫. (i) ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ದಲಿತ ಕ್ರೈಸ್ತರ ಸೇರ್ಪಡೆಗೆ ವಿರೋಧ

(ii) ದಲಿತ ಕ್ರೈಸ್ತರಿಗೆ ಧಾರ್ಮಿಕ ಅಲ್ಪಸಂಖ್ಯಾತರ ಪ್ರತ್ಯೇಕ ವಿಶೇಷ ಮೀಸಲಾತಿಗೆ ಒತ್ತಾಯ.

(iii) ಸ್ಪೃಶ್ಯ ಅಸ್ಪೃಶ್ಯ ಜಾತಿಗಳ ಪ್ರತ್ಯೇಕ ಪಟ್ಟಿಗೆ ಆಗ್ರಹ ದಿನಾಂಕ ೨೮.೭.೧೯೯೬ ರಂದು ನಡೆದ ರಾಜ್ಯಮಟ್ಟದ ದಲಿತ ಸಂಘರ್ಷ ಸಮಿತಿ/ದಲಿತ ವಿದ್ಯಾರ್ಥಿ ಒಕ್ಕೂಟ ಪದಾಧಿಕಾರಿಗಳ ವಿಚಾರ ಸಂಕಿರಣದಲ್ಲಿ ಚರ್ಚೆ. ನಿರ್ಣಯಗಳು, ಪ್ರಧಾನಿ, ಎಂ.ಪಿ, ಎಂ.ಎಲ್.ಎ, ಗಳಿಗೆ ಸಲ್ಲಿಸಿದ ಮನವಿ ಮುಂದುವರೆದ ಭಾಗವಾಗಿ ದಿನಾಂಕ ೧೬-೮-೯೬ ರಂದು ರಾಜ್ಯಾದ್ಯಂತ ಎಲ್ಲಾ ತಾಲೂಕು ಕೇಂದ್ರಗಳಲ್ಲಿ ಧರಣಿ ಸತ್ಯಾಗ್ರಹ ನಡೆಸಿ ಕೇಂದ್ರ ಹಾಗೂ ರಾಜ್ಯ ಸರ್ಕಾರಕ್ಕೆ ಮನವಿ ಸಲ್ಲಿಸಲಾಗಿದೆ. - ಕರಪತ್ರದಿಂದ ಕರ್ನಾಟಕ ದಲಿತ ಸಂಘರ್ಷ ಸಮಿತಿ ದಿನಾಂಕ : ೧೬.೮.೧೯೯೬.

೧೬. ಜುಲೈ ೩. ೧೯೯೬ ರಾಜ್ಯಾದ್ಯಂತ ಜಿಲ್ಲಾ ಕೇಂದ್ರಗಳಲ್ಲಿ ಮೆರವಣಿಗೆ-ಮಹಾನ್ ಚಿಂತಕ ಹಾಗೂ ಅಪ್ರತಿಮ ಹೋರಾಟಗಾರ ಡಾ. ಅಂಬೇಡ್ಕರ್ ಅವರ ಪ್ರಭಾವ ಕರ್ನಾಟಕದಲ್ಲಿ ಗಣನೀಯವಾಗಿ, ವಿಶೇಷವಾಗಿ ಹೈದರಾಬಾದ್ ಕರ್ನಾಟಕ ಹಾಗೂ ಬಾಂಬೆ ಕರ್ನಾಟಕ ಪ್ರದೇಶದಲ್ಲಿ ಬೀದರ್ ಜಿಲ್ಲೆಯ ಹಲವಾರು ಹಳ್ಳಿಗಳಿಗೆ ಬೇಟಿ ನೀಡಿ ವೈಚಾರಿಕ ಬೀಜವನ್ನು ಬಿತ್ತಿದ್ದಾರೆ. ಇಂದಿಗೂ ಹಲವಾರು ಹಳ್ಳಿಗಳು ಡಾ. ಅಂಬೇಡ್ಕರ್ ಭೇಟಿ ನೀಡಿದ ದಿನವನ್ನೇ ತಮ್ಮ ಕ್ರಾಂತಿಕಾರಿ ಸಾಂಸ್ಕೃತಿಕ ಹಬ್ಬವಾಗಿ ಅಂದರೆ ಅಂಬೇಡ್ಕರ್ ಜಯಂತಿಯಾಗಿ ಆಚರಿಸುತ್ತಾರೆ. - ಕರಪತ್ರದಿಂದ 'ಕರ್ನಾಟಕ ದಲಿತ ಸಂಘರ್ಷ ಸಮಿತಿ' ೩/೭/೧೯೯೬.

೧೭. - ಕರಪತ್ರದಿಂದ 'ಕರ್ನಾಟಕ ದಲಿತ ಸಂಘರ್ಷ ಸಮಿತಿ', ಕರ್ನಾಟಕ ದಲಿತ ವಿದ್ಯಾರ್ಥಿ ಒಕ್ಕೂಟ' ದಿನಾಂಕ : ೪ / ೧೧/೧೯೯೬. ಬೇಲಿ ಹಾಕಿಸುವ ನೆಪದಲ್ಲಿ ೯೮ ಲಕ್ಷರೂಪಾಯಿ ಕಾನೂನುಬಾಹಿರವಾಗಿ ವೆಚ್ಚಮಾಡಿ ನುಂಗಿ ಹಾಕಿರುವುದು.

ಕ್ರಿಕೆಟ್ ಸ್ಟೇಡಿಯಂ ಮಾಡುವ ನೆಪದಲ್ಲಿ ೨೦ ಲಕ್ಷ ದುರುಪಯೋಗ

ಪುಸ್ತಕ ಬೈಂಡಿಂಗ್ ಮಾಡಿಸುವ ನೆಪದಲ್ಲಿ ೬೦ ಲಕ್ಷ ಕಮಿಷನ್ ಪಡೆದಿರುವುದು. ಮುಂತಾದವು

೧೮. ಕರಪತ್ರದಿಂದ ಕ.ದಸಂಸ, ಕ ದ.ವಿ.ಓ ದಿನಾಂಕ ೨೪/೨/೧೯೯೪ ದಲಿತ ವಿರೋಧಿ, ಸಂವಿಧಾನ ವಿರೋಧಿ, ಪ್ರಗತಿ ವಿರೋಧಿ ನಿಲುವುಗಳಿಗೆ

೧೯. ಕರಪತ್ರದಿಂದ ದಿನಾಂಕ ೨೨.೩.೧೯೯೬

ಕರ್ನಾಟಕದಲ್ಲಿ ೮ ವಿಶ್ವವಿದ್ಯಾಲಯಗಳು ೪೨೦ ಕೋಟಿ ರೂ.ಗಳನ್ನು ಖರ್ಚುಮಾಡಿ ಕೇವಲ ೭ರಷ್ಟು ಮೀಸಲಾತಿಯನ್ನು ಪಾಲಿಸಿವೆ. ಆದರೆ ಖಾಸಗೀ ಶಿಕ್ಷಣ ಸಂಸ್ಥೆಗಳು ಒಂದು ವರ್ಷಕ್ಕೆ ೪೫೦ ಕೋಟಿ ರೂಗಳ ನ್ನು ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿದ್ದು ಕನಿಷ್ಟ ಶೇಖಡ ೨ರಷ್ಟು ಮೀಸಲಾತಿ ರೋಸ್ಟರ್ ಪದ್ಧತಿಯನ್ನು ಅನುಸರಿಸದೆ ಸರ್ಕಾರದಿಂದ ಬಂದ ಹಣದಿಂದ ತಮ್ಮ ತಮ್ಮ ಜಾತಿಯನ್ನು ಬೆಳಸುವ ಕೇಂದ್ರಗಳಾಗಿವೆ. ಮೈಸೂರು ಜಿಲ್ಲೆಯಲ್ಲಿರುವ ಜೆ.ಎಸ್.ಎಸ್. ವಿದ್ಯಾಸಂಸ್ಥೆಯು ೧೭ ಕೋಟಿ ರೂ.ಗಳನ್ನು ವಾರ್ಷಿಕ ಅನುದಾನ ಪಡೆಯುತ್ತಿದ್ದು ಕೇವಲ ಶೇ. ೩ರಷ್ಟು ಕೂಡ ಮೀಸಲಾತಿಯನ್ನೂ ಪಾಲಿಸಿಲ್ಲ.

೨೦. ಕರಪತ್ರದಿಂದ ದಿನಾಂಕ : ೩/೧೦/೧೯೯೭ ಕರ್ನಾಟಕ ದಲಿತ ಸಂಘರ್ಷ ಸಮಿತಿ ಚಾಮರಾಜ ನಗರ ಜಿಲ್ಲಾ ಶಾಖೆ.

೨೧. ಕರಪತ್ರದಿಂದ - ಧರಣಿ ಸತ್ಯಾಗ್ರಹದಿನ ದಿನಾಂಕ ೧೫-೭-೧೯೯೭ ಬೆಳಗ್ಗೆ ೧೧. ಮುಂಬಯಿಯಲ್ಲಿ ರಾಷ್ಟ್ರನಾಯಕ ಅಂಬೇಡ್ಕರ್ ಪ್ರತಿಮೆಗೆ ದುಷ್ಕರ್ಮಿಗಳು ಚಪ್ಪಲಿಹಾರ ಹಾಕಿ ಅಪಚಾರ ಎಸಗಿದ್ದನ್ನು ದಲಿತರು ಭಾವುಕರಾಗಿ ಪ್ರತಿಭಟಿಸಿದ್ದಾರೆ. ದಲಿತರ ತೀವ್ರ ಪ್ರತಿಭಟನೆಯನ್ನು ವಿಶ್ಲೇಷಿಸಿ ಸೂಕ್ತ ಕಾನೂನು ಸುವ್ಯವಸ್ಥೆ ಕ್ರಮಗಳನ್ನು ಕೈಗೊಳ್ಳದೆ ಮನಸಿಚ್ಛೆ ಗೋಲಿಬಾರ್ ನಡೆದಿರುವುದು ಖಂಡನಾರ್ಹ.

೨೨. ಮೈಸೂರು ದಸಂಸ ನಡೆಸಿದ ಕಾರ್ಯಕ್ರಮ. ೧೦.೬.೧೯೯೭ರ ಕರಪತ್ರದಿಂದ TAPCMS ಅವ್ಯವಹಾರಗಳಲ್ಲಿ ಕೆಲ ಸಿಬ್ಬಂದಿವರ್ಗ ನೇರವಾಗಿ ಭಾಗಿಯಾಗಿರುವುದಕ್ಕೆ ಹಲವಾರು ನಿದರ್ಶನಗಳಿವೆ. ದಿ. ೨೫.೧೨.೧೯೯೬ ರಲ್ಲಿ ಕೇರಳಾಕ್ಕೆ ೧೨ ಊರಿಗಳಲ್ಲಿ ಬತ್ತ, ರಾಗಿ ಅಕ್ಕಿಯನ್ನು ಕಳ್ಳಸಾಗಾಣಿಕೆ ಮಾಡುತ್ತಿದ್ದ ಅಕ್ಕಿಗಿರಣಿ ಮಾಲಿಕ ಮಹಾದೇವೇಗೌಡರ ಭ್ರಷ್ಟತೆಯನ್ನು ಬಯಲಿಗೆಳೆದಿದ್ದಾರೆ.

ಹಲವಾರು ಬಾರಿ ಪರರಾಜ್ಯಗಳಿಗೆ ಸಾಗಣೆಯಾಗುತ್ತಿದ್ದ ಅಕ್ಕಿಯನ್ನು ಲಾರಿ ಸಮೇತ ಆಹಾರ ಇಲಾಖೆ ಸಿಬ್ಬಂಧಿ ಹಿಡಿದಾಗ ಇದೇ ಮಹಾದೇವೇಗೌಡರು ಕ್ರಮ ಜರುಗಿಸದೆ ಬಿಡುಗಡೆ ಮಾಡಿರುವುದು ಇವರ ಭ್ರಷ್ಟತೆಯ ಮುಖಕ್ಕೆ ಹಿಡಿದಿರುವ ಕನ್ನಡಿ. ಇವರ ಹಿಂದಿನ ಹುದ್ದೆಗಳಾದ ತಹಶೀಲ್ದಾರ್, ಉಪ ವಿಭಾಗಾದಿಕಾರಿ ಮತ್ತು ಈಗಿನ ಹುದ್ದೆಯವರೆಗಿನ ಹತ್ತು ಹಲವಾರು ಅಕ್ರಮಗಳ ಮಾಹಿತಿ ದಸಂಸ ಬಳಿ ಇವೆ.

೨೩. ಕಾರ್ಯಕ್ರಮದ ಕರಪತ್ರದಿಂದ, ದಲಿತ ಸಂಘಟನೆಗಳ ಸಂಯುಕ್ತ ವೇದಿಕೆ, ಬೆಂಗಳೂರು. ಉನ್ನತ ಶಿಕ್ಷಣ ಸಚಿವರಾದ ಶ್ರೀ. ಬಿ. ಸೋಮಶೇಖರರ ರಾಜೀನಾಮೆಯನ್ನು ಮಾನ್ಯ ಮುಖ್ಯಮಂತ್ರಿಗಳು ಅಂಗೀಕರಿಸದಂತೆ ಒತ್ತಾಯಿಸಲು ದಿನಾಂಕ : ೧೮-೮-೧೯೯೭ರ ಸೋಮವಾರ ಬೆಳಗ್ಗೆ ೧೦ ಘಂಟೆಗೆ ಮಾನ್ಯ ಮುಖ್ಯಮಂತ್ರಿಗಳ ಮನೆಯ ಮುಂದೆ ಧರಣಿ ಕಾರ್ಯಕ್ರಮ. ಹಮ್ಮಿಕೊಳ್ಳಲಾಗಿದೆ.

೨೪. ಕರಪತ್ರದಿಂದ ೨೭-೧೧-೧೯೯೨ ಕರ್ನಾಟಕ ದಲಿತ ವಿದ್ಯಾರ್ಥಿ ಒಕ್ಕೂಟ, ಕರ್ನಾಟಕ ದಲಿತ ಸಂಘರ್ಷ ಸಮಿತಿ ಕಾವೇರಿ ಜಲಾಯನ ಪ್ರದೇಶದಲ್ಲಿ ಬೀಳುವ ಮಳೆಯ ಪ್ರಮಾಣವನ್ನು ಗಣನೆಗೆ ತೆಗೆದುಕೊಳ್ಳದೆ ತಮಿಳುನಾಡಿಗೆ ಪ್ರತಿವರ್ಷ ೨೦೫ T.M.C. ನೀರುಬಿಡಬೇಕೆಂದು ಮತ್ತು ಕರ್ನಾಟಕವನ್ನು ನೀರಾವರಿಗೆ ಬಳಸಬಾರದೆಂದು ನ್ಯಾಯ ಮಂಡಳಿ ಮಧ್ಯಂತರ ತೀರ್ಪಿನ ನಿರ್ಬಂಧ ಹೇರಿದೆ.

೨೫. ಕರಪತ್ರದಿಂದ ೧೨-೧-೧೯೯೪ ಕರ್ನಾಟಕದ ದಲಿತ ವಿದ್ಯಾರ್ಥಿ ಒಕ್ಕೂಟ, ಕರ್ನಾಟಕ ದಲಿತ ಸಂಘರ್ಷ ಸಮಿತಿ.

೨೬. ಕರಪತ್ರದಿಂದ - ದಿನಾಂಕ

ಕ.ದ.ಸಂಸ, ದವಿಒ ಸಂಡೂರು ತಾಲೂಕು ಶಾಖೆ ಕಾರಣಕ್ಕಾಗಿ ದಲಿತ ಪ್ರತಿಭಾನ್ವಿತ ವಿದ್ಯಾರ್ಥಿಯೊಬ್ಬನಿಗೆ ಮೇಲ್ಜಾತಿಯ ಉಪನ್ಯಾಸಕ ರ್‍ಯಾಂಕ್ ತಪ್ಪಿಸುವ ಸಲುವಾಗಿ ಪ್ರಾಕ್ಟಿಕಲ್ ಅಂಕಗಳನ್ನು ಕಡಿಮೆ ನೀಡಿದ್ದರ ವಿರುದ್ಧ ಪ್ರತಿಭಟನೆ.

೨೭. ಕರಪತ್ರದಿಂದ: ಧರಣಿ ಸತ್ಯಾಗ್ರಹ ದಿನಾಂಕ ೩೦/೧/೯೪ ರಂದು ಮಂಡ್ಯ, ಸಂಜಯ ಟಾಕೀಸ್ ವೃತ್ತ. ಕದಸಂಸ, ಕನ್ನಡ ಶಕ್ತಿಕೇಂದ್ರ, ಪ್ರಜ್ಞಾವೇದಿಕೆ, ಕರ್ನಾಟಕ ಪ್ರಗತಿರಂಗ, ಕರ್ನಾಟಕ ವಿಮೋಚನಾರಂಗ.

೨೮. ಕರಪತ್ರದಿಂದ: ಕರ್ನಾಟಕ ದಲಿತ ಸಂಘರ್ಷ ಸಮಿತಿ ಪ್ರತಿಭಟನೆ, ಮಂಡ್ಯ ಜಿಲ್ಲೆಯಲ್ಲಿ ದಲಿತ ವಿದ್ಯಾರ್ಥಿಗಳಿಗೆ, ಕಾಲೇಜು ಹಾಸ್ಟೆಲ್‌ನ್ನು ಎಲ್ಲಾ ತಾಲೂಕು ಕೇಂದ್ರಗಳಿಗೆ ಕೇಳಿ ದಿನಾಂಕ ೧೫-೦೯-೧೯೯೪ ರಂದು

೨೯. ಕರಪತ್ರದಿಂದ : ಕರ್ನಾಟಕ ದಲಿತ ಸಂಘರ್ಷ ಸಮಿತಿ ದಿನಾಂಕ ೧೫-೮-೧೯೯೫.೩೦. ಕರಪತ್ರದಿಂದ : ಕರ್ನಾಟಕ ಯುವಜನರಂಗ (RYF ) ರಾಜ್ಯ ಘಟಕ ಕರ್ನಾಟಕ ದಲಿತ ಸಂಘರ್ಷ ಸಮಿತಿ (ಸಂಯೋಜಕ)

೩೧. ಕರಪತ್ರದಿಂದ : ದಿನಾಂಕ ೨/೧೦/೧೯೯೧ ರಂದು ಗಾಂಧಿ ಜಯಂತಿ ದಿನ ದಲಿತ ಸಂಘರ್ಷ ಸಮಿತಿಯವರು ನಡೆಸಿದ ಕಾರ್ಯಕ್ರಮ. ಆಂಧ್ರಪ್ರದೇಶದ ಗುಂಟೂರು ಜಿಲ್ಲೆಯ ಚುಂಡೂರು ಗ್ರಾಮದಲ್ಲಿ ತಾ: ೬/೮/೯೧ ರಂದು ನಡೆದ ೨೧ ದಲಿತರ ಬರ್ಬರ ನರಮೇಧದ ಭಾರತದ ಕೊಲೆಗಡುಕ ಅಮಾನವೀಯ ಅನಾಗರೀಕತೆಯ ಸಂಸ್ಕೃತಿಯನ್ನೂ ಪ್ರತಿಬಿಂಬಿಸುತ್ತದೆ. ಚುಂಡೂರು ದಲಿತರು ಶಿಕ್ಷಣ ಸ್ವಾಭಿಮಾನ ಸಮಾನತೆ ನಾಗರಿಕ ಬದುಕಿನ ಕಡೆಗೆ ಕಣ್ಣು ತೆರದದ್ದನ್ನು ಸಹಿಸಿದ ಜಾತೀಯ ಅಮಲಿನ ರೆಡ್ಡಿ ಜನಾಂಗ, ಇದೇ ಜನಾಂಗದ ಪೋಲೀಸ್ ಅಧಿಕಾರಿಗಳು ರಾಜಕಾರಣಿಗಳು ಶಾಮೀಲಾಗಿ ಪೂರ್ತಿಯೋಜಿತ ವ್ಯವಸ್ಥೆಯೊಂದಿಗೆ ಗದ್ದೆ ತೋಟಗಳಲ್ಲಿ ಪ್ರಾಣಿಗಳನ್ನು ಬೇಟೆಯಾಡಿದಂತೆ ಮಾರಕ ಅಸ್ತ್ರಗಳಿಂದ ದಲಿತರನ್ನು ತುಂಡು ತುಂಡಾಗಿ ಕತ್ತರಿಸಿ ಗೋಣಿ ಚೀಲದಲ್ಲಿ ತುಂಬಿ ತುಂಗಭದ್ರಾ ಕಾಲುವೆಗೆ ಎಸೆದಿದ್ದಾರೆ.

೩೨. ಕರಪತ್ರದಿಂದ : ಮಹಾರಾಷ್ಟ್ರದ ಮರಾಠವಾಡ ವಿಶ್ವವಿದ್ಯಾಲಯಕ್ಕೆ ಡಾ. ಬಾಬಾ ಸಾಹೇಬ್ ಹೆಸರಿಡಲು ಒತ್ತಾಯಿಸಿ ೧೨/೧/೧೯೯೪ ರಂದು ರಾಜ್ಯಾದ್ಯಂತ ವಿಶ್ವವಿದ್ಯಾಲಯ ಬಂದ್.

೩೩. ಕರಪತ್ರದಿಂದ : ದೊಡ್ಡಬಳ್ಳಾಪುರ ತಾಲೂಕು ಭಕ್ತರಹಳ್ಳಿ ಗ್ರಾಮ ಪಂಚಾಯ್ತಿ ಕ್ಷೇತ್ರದಲ್ಲಿ ಅಧ್ಯಕ್ಷ ಹಾಗೂ ಉಪಾದ್ಯಕ್ಷ ಚುನಾವಣೆಯ ಸಂದರ್ಭದಲ್ಲಿ ಮತ ಚಲಾಯಿಸಲು ಹೋಗುತ್ತಿದ್ದ ದಲಿತ ಸದಸ್ಯ ಗೌರಮ್ಮಳನ್ನು ಮೇಲ್ಜಾತಿಯ ಜನರ ಒಂದು ಗುಂಪು ಅಡ್ಡಗಟ್ಟಿ ತಮ್ಮ ಪರವಾದ ಮತ ಹಾಕಲು ಒತ್ತಾಯಿಸಿದರಲ್ಲದೆ ಇದನ್ನು ನಿರಾಕರಿಸಿದ ಕಾರಣಕ್ಕಾಗಿ ಆಕೆಯ ಸೀರೆ ರವಿಕೆಯನ್ನು ಕಿತ್ತು ಬಿಸಾಡಿ ನಡು ರಸ್ತೆಯಲ್ಲೇ ಬೆತ್ತಲೆಗೊಳಿಸಿರುವ ಬರ್ಬರ ಹೀನಕೃತ್ಯವು ನಡೆದಿದೆ.

೩೪. ಕರಪತ್ರದಿಂದ: ೧೪/೮/೧೯೯೭, ನಡುರಾತ್ರಿ ತಾಲೂಕು ಕೇಂದ್ರ, ಜಿಲ್ಲಾ ಕೇಂದ್ರಗಳಲ್ಲಿ ರಾಜ್ಯಾದ್ಯಂತ ತಮಟೆಯ ಮೊಳಗು : ಕರ್ನಾಟಕ ದಲಿತ ಸಂಘರ್ಷ ಸಮಿತಿ.

೩೫. ಕರಪತ್ರದಿಂದ ಮಂಡ್ಯದಲ್ಲಿ ದಲಿತರ ಸ್ಮಶಾನದಲ್ಲಿ ಗೋರಿಗಳ ನಾಶ ವಿರೋಧಿಸಿ ದಿನಾಂಕ ೨೦-೮-೯೭ ರಂದು ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಮಂಡ್ಯದ ಪ್ರಮುಖ ಬೀದಿಗಳಲ್ಲಿ ಕಾರ್ಯಕ್ರಮವನ್ನು ರೂಪಿಸಿತು.

೩೬. ಕರಪತ್ರದಿಂದ - ಡಿಸೆಂಬರ್ ೬. ೧೯೯೬, ಅಂಬೇಡ್ಕರ್ ಸ್ಮರಣದಿನ ಶೋಷಿತ ಶಕ್ತಿಯ ಐಕ್ಯತಾದಿನ. ರಾಜ್ಯಾದ್ಯಂತ ಜಿಲ್ಲಾ ಕೇಂದ್ರಗಳಲ್ಲಿ.

೩೭. ಕರಪತ್ರದಿಂದ - ೧.೩.೧೯೯೮, ಕರ್ನಾಟಕ ದಲಿತ ಸಂಘರ್ಷ ಸಮಿತಿ ಬೆಲವತ್ತ ಶಾಖೆ. ಬೊವಿಕಾಲೋನಿ ಮೈಸೂರು. ಪ್ರಥಮ ವಾರ್ಷಿಕೋತ್ಸದ ಸಮಾರಂಭದ ಆಹ್ವಾನ ಪತ್ರಿಕೆ.

೩೮. ಕರಪತ್ರದಿಂದ - ೬.೧.೧೯೯೪, ರಾಜ್ಯನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳು ಅದ್ಯಕ್ಷ ಹಾಗೂ ಶಾಸಕ ಸಿ.ಎಂ. ಲಿಂಗಪ್ಪನ ಮಕ್ಕಳು ಹಾಗೂ ಹಿಂಬಾಲಿಕರ ಹಿಂಸಾತ್ಮಕ ಹಲ್ಲೆ ಖಂಡಿಸಿ ರಾಜಿನಾಮೆಗೆ ಒತ್ತಾಯಿಸಿ ಪ್ರತಿಭಟನಾ ಮೆರವಣಿಗೆ. ಕರ್ನಾಟಕ ದಲಿತ ಸಂಘರ್ಷ ಸಮಿತಿ ರಾಮನಗರ ತಾಲೂಕು ಶಾಖೆ.

೩೯. ಕರಪತ್ರದಿಂದ - ರಾಜ್ಯಾದ್ಯಂತ ಜಿಲ್ಲಾ ಕಛೇರಿಗಳ ಮುಂದೆ ಧರಣಿ ಸತ್ಯಾಗ್ರಹ ದಿನಾಂಕ ೧೫/೭/೧೯೯೭. ಕ.ದಸಂಸ.

೪೦. ಕರಪತ್ರದಿಂದ - ದಿನಾಂಕ ೧೦.೧೯೯೧, ರಕ್ತದಾಹ ಭಾರತದ ಪ್ರಧಾನಿಗೆ ದಲಿತರ ರಕ್ತಾರ್ಪಣೆ. ಆಂಧ್ರಪ್ರದೇಶ ಗುಂಟೂರು ಜಿಲ್ಲೆಯ ಚಂಡೂರು ಗ್ರಾಮದಲ್ಲಿ ೬/೮/೯೧ ರಂದು ನಡೆದ ೨೧ ದಲಿತರ ಬರ್ಬರ ನರಮೇಧದ ವಿರುದ್ಧದ. ಪ್ರತಿಭಟನೆಯಿಂದ.

೪೧. ಕರಪತ್ರದಿಂದ - ಗುಲ್ಬರ್ಗಾ ಜಿಲ್ಲೆಯಲ್ಲಿ ದಲಿತರ ಮೇಲಾದ ಹಲ್ಲೆಯನ್ನು ಪ್ರತಿಭಟಿಸುವ ಸಂದರ್ಭದಲ್ಲಿ ಗುಲ್ಬರ್ಗಾದಲ್ಲಿ ದಲಿತರ ಮೇಲಾದ ಪೋಲಿಸ್ ದೌರ್ಜನ್ಯವನ್ನು ಪ್ರತಿಭಟಿಸಿ ಮುಖ್ಯಮಂತ್ರಿ ಮನೆಯ ಮುಂದೆ ಪಿಕೆಟಿಂಗ್ - ಮೆರವಣಿಗೆ ಪ್ರಾರಂಭ ಚಿಕ್ಕಲಾಲ್‌ಬಾಗ್, ಬೆಂಗಳೂರು, ದಿನಾಂಕ : ೧೪.೨.೧೯೯೪.

೪೨. ಕರಪತ್ರದಿಂದ - ಕರ್ನಾಟಕ ದಲಿತ ಸಂಘರ್ಷ ಸಮಿತಿ ಮಂಡ್ಯ ಜಿಲ್ಲಾ ಶಾಖೆ. ದೊಡ್ಡಬಳ್ಳಾಪುರ ತಾಲೂಕು ಭಕ್ತರಹಳ್ಳಿ ಗ್ರಾಮ ಪಂಚಾಯಿತಿ ಕೇತ್ರದಲ್ಲಿ ಅಧ್ಯಕ್ಷ ಉಪಾಧ್ಯಕ್ಷ ಚುನಾವಣೆಯ ಸಂದರ್ಭದಲ್ಲಿ ಮತ ಚಲಾಯಿಸಲು ಹೋಗುತ್ತಿದ್ದ ದಲಿತ ಮಹಿಳಾ ಸದಸ್ಯೆ ಗೌರಮ್ಮಳನ್ನೂ ಮೇಲ್ಜಾತಿಯ ಜನರ ಒಂದು ಗುಂಪು ಅಡ್ಡ ಹಾಕಿ ತಮ್ಮ ಪರವಾಗಿ ಮತ ನೀಡಲು ಒತ್ತಾಯಿಸಿದ್ದಲ್ಲದೆ. ಇದನ್ನು ನಿರಾಕರಿಸಿದ ಕಾರಣಕ್ಕಾಗಿ ಆಕೆಯ ಸೀರೆ, ರವಿಕೆ ಹರಿದು ಕಿತ್ತು. ಬಿಸಾಡಿ ನಡುರಸ್ತೆಯಲ್ಲಿ ಬೆತ್ತಲೆಗೊಳಿಸಿರುವ ಬರ್ಬರ ಕೃತ್ಯದ ಪರಿಣಾಮ ೨೪/೩/೧೯೯೪ ಅಂಬೇಡ್ಕರ್ ಸರ್ಕಲ್ ವಾಟರ್ ಟ್ಯಾಂಕಿನಿಂದ ಡಿ.ಸಿ. ಕಛೇರಿಯವರೆಗೆ ಅರೆಬೆತ್ತಲೆ ಮೆರವಣಿಗೆ.

೪೩. ಕರಪತ್ರದಿಂದ - ಕ. ದ.ಸಂಸ ಮೀಸಲಾತಿ ಗೊಂದಲ ಹಿಂದುಳಿದ ವರ್ಗಗಳಿಗೆ ಕಾಂಗ್ರೇಸ್ ಸರ್ಕಾರದಿಂದ ಅನ್ಯಾಯ. ಸೂಕ್ತಕ್ರಮಕ್ಕೆ ಒತ್ತಾಯಿಸಿ ಜಿಲ್ಲಾಧಿಕಾರಿಗಳ ಕಛೇರಿ ಎದುರು ದಿನಾಂಕ ೧೭/೯/೧೯೯೪ ರಂದು ರಾಜ್ಯಾದ್ಯಂತ ಧರಣಿ.

೪೪. ಕರಪತ್ರದಿಂದ ೧೦೫ನೇ ಅಂಬೇಡ್ಕರ್ ಜನ್ಮದಿನಾಚರಣೆ 'ಹಳ್ಳಿಗಳ ಅರಿವಿನ ಆಂದೋಲನ ಕ.ದ.ಸಂಸ. ಮಂಡ್ಯ ಜಿಲ್ಲಾ ಶಾಖೆ.

೪೫. ಕರಪತ್ರದಿಂದ - ಕರ್ನಾಟಕ ದಲಿತ ವಿದ್ಯಾರ್ಥಿ ಒಕ್ಕೂಟ ರಾಜ್ಯ ಸಮಿತಿ. ಎ. ಇಂದ್ರಮಹಲ್ ಗಾಂಧಿನಗರ ಬೆಂಗಳೂರು ಮೀಸಲಾತಿ ವಿಚಾರ ಸಂಕಿರಣ ದಿನಾಂಕ ೧೮/೨/೯೦ ಸ್ಥಳ : ಶಿಕ್ಷಕರ ಭವನ ಡಿ.ಡಿ.ಪಿ.ಐ. ಕಛೇರಿ ಹತ್ತಿರ ತುಮಕೂರು.

೪೬. ಕರಪತ್ರದಿಂದ - ಕರ್ನಾಟಕ ದಲಿತ ವಿದ್ಯಾರ್ಥಿ ಒಕ್ಕೂಟ. ೩ನೇ ರಾಜ್ಯ ಸಮ್ಮೇಳನ ಫೆಬ್ರವರಿ ೮.೯.೧೯೯೨ ಗುಲಬರ್ಗಾ.

೪೭. ಕರಪತ್ರದಿಂದ - ಕರ್ನಾಟಕ ದಲಿತ ಸಂಘರ್ಷ ಸಮಿತಿ ಹಾಸನ ಜಿಲ್ಲಾ ಶಾಖೆ. ೨೫ ವರ್ಷಗಳಿಂದ ಭೂಮಿಗಾಗಿ ದಲಿತರ ಪರದಾಟ ಮತ್ತು ನ್ಯಾಯಕ್ಕಾಗಿ ನಡೆಸಿದ ಹೋರಾಟ.

೪೮. ಕರಪತ್ರದಿಂದ - ಪ್ರಥಮ ತಾಲೂಕು ದಲಿತ ಸಮ್ಮೇಳನ ಹಾಗೂ ಡಾ.ಬಿ.ಆರ್. ಅಂಬೇಡ್ಕರ್ ಅವರ ೯೬ನೇ ಜನ್ಮದಿನಾಚರಣೆ ಕ.ದ.ಸಂಸ ಬೇಲೂರು ಶಾಖೆ ಹಾಸನ ಜಿಲ್ಲೆ.

೪೯. ಕರಪತ್ರದಿಂದ - ಹಾಸ್ಟಲ್ ಕಟ್ಟಡ ನೀರಾವರಿ ಬೋರ್‌ವೆಲ್ ಕಾರ್ಯಗಳ ವಿಳಂಬ-ಪ್ರತಿಭಟಿಸಿ ಹಾಸನ ಜಿಲ್ಲಾಪರಿಷತ್ ಸಭಾಗಣದ ಎದುರು ಧರಣಿ ದಿನಾಂಕ ೩೦-೭-೧೯೯೦ ಕ. ದಸಂಸ.

೫೦. ಕರಪತ್ರದಿಂದ - ಭಾರತದ ಸಂವಿಧಾನ ಶಿಲ್ಪಿ. ಡಾ. ಬಿ. ಆರ್ ಅಂಬೇಡ್ಕರ್ ಬರೆದ ಹಿಂದೂ ಧರ್ಮದ ಒಗಟುಗಳು ಕೃತಿಯ ವಿವಾದಾತ್ಮಕ ಭಾಗವಾದ. 'ರಾಮಕೃಷ್ಣರ ಒಗಟುಗಳು' ಕನ್ನಡ ಕೃತಿಯ ಬಿಡುಗಡೆ ಕಾರ್ಯಕ್ರಮದ ಕರಪತ್ರದಿಂದ ದಿನಾಂಕ ೨೨/೬/೧೯೮೮.

೫೧. ಕರಪತ್ರದಿಂದ - ಕ. ದ.ಸಂಸ. ಬೆಂಗಳೂರು ಎ-೧ ಇಂದಿರಾಮಹಲ್ ಲಾಡ್ಜ್ ೫ನೇ ಮುಖ್ಯರಸ್ತೆ. ಗಾಂಧಿನಗರ ಬೆಂಗಳೂರು - ೯ ಹಿಂದುಳಿದ ವರ್ಗಗಳ ಮೀಸಲಾತಿ ಒಂದು ಚರ್ಚೆ.

೫೨. ಕರಪತ್ರದಿಂದ- ಕ.ದ.ಸಂಸ. ಕ. ದವಿಒ, ಬೀದರ ಜಿಲ್ಲಾ ಶಾಖೆ. ಕಾರ್ಯಕರ್ತರ ಅಧ್ಯಯನ ಶಿಬಿರ - ೨೭-೧೦-೧೯೯೦ ರಿಂದ ೩೧-೧೦-೧೯೯೦ ಸ್ಥಳ : ಅಣದೂರು ಗ್ರಾಮ.

೫೩. ಕರಪತ್ರದಿಂದ : ಗುಲಬರ್ಗ ವಿಭಾಗಮಟ್ಟದ ಸಮಾನತಾ ಸಮಾವೇಶ ಸೆಪ್ಟಂಬರ್ ೮. ೧೯೯೩.

೫೪. ಕರಪತ್ರದಿಂದ : ಬೀದರ್ ದಲಿತ ಹಿಂದುಳಿತ ಮತ್ತು ಅಲ್ಪ ಸಂಖ್ಯಾತರ ಜನಾಂದೋಲನ ದಲಿತ ಹಿಂದುಳಿದ ಅಲ್ಪಸಂಖ್ಯಾತರ ಸಮನ್ವಯ ಸಮಿತಿ. ಕರ್ನಾಟಕ ದಲಿತ ಸಂಘರ್ಷ ಸಮೀತಿ ಬೀದರ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣಗೊಂಡ ಬೀದರ್ .

೫೫. ಕ. ದ.ಸಂ.ಸ. ಪ್ರಕಾಶನವು ಬಂಗಾರಪ್ಪ ಹೊಳೇನರಸೀಪುರ ಇವರ 'ಪರಿವರ್ತನೆ' ಕಾದಂಬರಿ ಬಿಡುಗಡೆ ಸಮಾರಂಭದ ಆಹ್ವಾನ ಪತ್ರಿಕೆಯೂ ಕರಪತ್ರದಿಂದ ದಿನಾಂಕ. ೩೧/೭/೯೪. ಸ್ಥಳ. ಎ.ವಿ.ಕೆ. ಕಾಲೇಜು, ಹಾಸನ.

೫೬. ಕರಪತ್ರದಿಂದ - ಕ.ದಸಂಸ ವಿಚಾರ ಸಂಕಿರಣ ಸ್ಥಳ : ಕ.ದ.ಸಂಸ ಪ್ರಧಾನ ಕಛೇರಿ ಕ್ವೀನ್ಸ್ ರಸ್ತೆ ಬೆಂಗಳೂರು ೨೮/೫/೧೯೯೫.

೫೭. ಕರಪತ್ರದಿಂದ - ಭಾರತರತ್ನ ಡಾ. ಬಿ.ಆರ್.ಅಂಬೇಡ್ಕರ್ ೧೦೩ನೇ ಜನ್ಮದಿನದ ಅಂಗವಾಗಿ ನಡೆಸಿದ ಕಾರ್ಯಕ್ರಮದಿಂದ ಪ್ರಜಾ ವಿಮೋಚನಾ ಚಳುವಳಿ - ಮಹಿಳಾ ವಿಮೋಚನ ಚಳುವಳಿ - ವಿದ್ಯಾರ್ಥಿ ವಿಮೋಚನಾ ಚಳುವಳಿ - ಹಾಸನ ಜಿಲ್ಲಾ ಶಾಖೆ.

೫೮. ಕರಪತ್ರದಿಂದ - ಅಂಬೇಡ್ಕರ್ ಸ್ಮಾರಕ ಸಂಘ ಕೊಳ್ಳೆಗಾಲ ಮತ್ತು ಕೊಳ್ಳೆಗಾಲದ ಸುತ್ತ ಮುತ್ತಲಿನ ಅಂಬೇಡ್ಕರ್ ಸಂಘಗಳು ಕೊಳ್ಳೇಗಾಲದ ತಾಲೂಕಿನಾದ್ಯಂತ ೧೭೯ನೇ ಕೊರೆಗಾಂವ್ ಸ್ವಾತಂತ್ರ್ಯ ಸಂಗ್ರಾಮದ ದಿನಾಚರಣೆ ದಿನಾಂಕ ೧-೧-೧೯೯೭

೫೯. ಕರಪತ್ರದಿಂದ :- ಕರ್ನಾಟಕ ಸಮಾತಾಸೈನಿಕ ದಳ ಜೈಭೀಮ್ ದ.ಕ.ಜಿಲ್ಲೆ, ಮಂಗಳೂರು ೨೦ನೇ ಶತಮಾನದ ಬುದ್ಧ, ಡಾ.ಅಂಬೇಡ್ಕರ್ ದಿನವನ್ನು ಹೇಗೆ ಆಚರಿಸೋಣ ಕಾರ್ಯಕ್ರಮದ ಕರಪತ್ರದಿಂದ ೧೪/೪/೧೯೯೭ ಈ ದಿನ ಕೆಲವು ಕಾರ್ಯಕ್ರಮಗಳನ್ನು ಹಾಕಿಕೊಂಡು ಹಬ್ಬದ ಸಡಗರದಲ್ಲಿ ಅಂಬೇಡ್ಕರ್ ಜನ್ಮದಿನವನ್ನು ಆಚರಿಸಿ, ಸಿಹಿ ಹಂಚಿ ಬುದ್ಧನ ಸಂದೇಶ, ಅಂಬೇಡ್ಕರ್ ಸಂದೇಶವನ್ನು ಹೇಳುವುದು ಆಗಿರುತ್ತದೆ.

೬೦. ಬಿ.ಸಿ. ಮೈಲಾರಪ್ಪ, 'ಗ್ರಾಮೀಣ ಬದುಕು ಮತ್ತು ಸಾಮಾಜಿಕ ಚಳುವಳಿ' ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೯೮.

೬೧. 'ಕರ್ನಾಟಕ ದಲಿತ ಸಂಘರ್ಷ ಸಮಿತಿ ಸಂವಿಧಾನ' ಪುಟ:೨ ಪ್ರಕಟಣೆ : ಪಂಚಮ, ಕುಕ್ಕರಳ್ಳಿ, ಮೈಸೂರು.

೬೨. 'ಕರ್ನಾಟಕ ದಲಿತ ಸಂಘರ್ಷ ಸಮಿತಿ ಸಂವಿಧಾನ' ಪುಟ: ೨; ೩ ಪ್ರಕಟಣೆ : ಪಂಚಮ, ಕುಕ್ಕರಹಳ್ಳಿ, ಮೈಸೂರು.

೬೩. ---ಅದೇ--- ಪುಟ: ೩, ೪

೬೪. ----ಅದೇ---- ಪುಟ: ೮, ೯

# ೩.೧. ಕನ್ನಡ ದಲಿತ ಸಾಹಿತ್ಯ ಪ್ರಕಾರಗಳ ವೈವಿಧ್ಯತೆ

## ದಲಿತ ಕಾವ್ಯ : ದಲಿತ ಬದುಕಿನ ಹಿನ್ನೆಲೆಯಿಂದ

'ದಲಿತ ಬದುಕನ್ನು' ಕುರಿತು ಹಿಂದಿನ ಅಧ್ಯಾಯವೊಂದರಲ್ಲಿ ಚರ್ಚಿಸಲಾಗಿದೆ. ಹಾಗೆಯೇ ಅಲ್ಲಿ 'ದಲಿತ' ಎಂಬುದರ ಬಗೆಯೂ ಚರ್ಚಿಸಲಾಗಿದೆ. ದಲಿತ ಕಾವ್ಯ ಎಂಬುದರ ಚರ್ಚೆಯು ಈಚಿನದು. ಇದು ಇಪ್ಪತ್ತನೆಯ ಶತಮಾನದ ಸಾಹಿತ್ಯಾಧ್ಯಯನದ ಕ್ರಮದಲ್ಲಿ ಕಂಡುಬಂದಂತಹದು. ಇಲ್ಲಿ 'ದಲಿತ' ಎಂಬುದನ್ನು ಒಟ್ಟಾರೆ 'ಒಂದು' ಎಂಬುದಾಗಿ ಗ್ರಹಿಸಲಾಗಿದೆ. ಅದು ದಲಿತ ಸಮುದಾಯಗಳಿಗೆ ಸಂಬಂಧಪಟ್ಟದ್ದು ಆಗಿರುವಂತಹದು. ದಲಿತರಲ್ಲಿನ ಸಾಹಿತ್ಯವನ್ನು ನೋಡುವಾಗ 'ಬರಹಗಾರ ದಲಿತ' ಮತ್ತು 'ಮೌಖಿಕವಾಗಿ ಸಾಹಿತ್ಯ ಪರಂಪರೆಯನ್ನು ಹೊಂದಿದ ದಲಿತ' ಎಂಬುದು ಕಂಡುಬರುತ್ತವೆ. ಇವರ ನಡುವಿನ ಸಂಬಂಧಗಳ ಸ್ವರೂಪಗಳು ಚರ್ಚೆಗೆ ಎಡೆಮಾಡಿಕೊಡುತ್ತವೆ. ಈ ಚರ್ಚೆಗಳಲ್ಲಿ ಕಂಡುಬರುವ ವಿಭಾಗೀಕ್ರಮವೇ ಈಚಿನದು. ಇದು 'ಅಕ್ಷರ ದಲಿತ' ಅಥವಾ 'ಬರಹಗಾರ ದಲಿತ' ಹುಟ್ಟಿಕೊಂಡ ನಂತರದಲ್ಲಿ ಕಂಡುಬಂತು. ಇವುಗಳ ಸಾಹಿತ್ಯಕ್ರಮಗಳ ತೌಲನಿಕದಲ್ಲಿ ಒಂದಕ್ಕೊಂದು ವೈರುಧ್ಯವನ್ನು ಹೊಂದಿವೆ. ಬರಹ ದಲಿತನ ಪ್ರಕಲ್ಪನೆಗೂ ಮತ್ತು ಮೌಖಿಕತೆ ಹೊಂದಿದ ದಲಿತ ಹಾಡುಗಾರನ (ಸಾಹಿತಿಯ) ಪ್ರಕಲ್ಪನೆಗೂ ವ್ಯತ್ಯಾಸಗಳು ಕಂಡುಬರುತ್ತವೆ. ಅವುಗಳು ತಮ್ಮ ಸಮುದಾಯಗಳ ಬದುಕಿನ ಹಿನ್ನೆಲೆಯ ತಾತ್ವಿಕತೆಗೆ ಸಂಬಂಧವನ್ನು ಹೊಂದಿರುತ್ತವೆ. ಅಂತೆಯೇ ದಲಿತರ ಬದುಕಿಗೂ ದಲಿತೇತರ ಬದುಕಿಗೂ ಸಾಕಷ್ಟು ಭಿನ್ನತೆಯನ್ನು ಹೊಂದಿರುತ್ತವೆ. ಅವುಗಳು ತಮ್ಮ ಬದುಕುವ ಪರಿಸರಕ್ಕೆ ಸಂಬಂಧಪಟ್ಟದ್ದು ಆಗಿರುತ್ತವೆ. ಹಾಗಾಗಿ ಪರಿಸರದ, ಸಂಸ್ಕೃತಿಯ ಹಿತಾಸಕ್ತಿಯನ್ನು ಒಡೆದು ನಿಲ್ಲುವ ಕಾಲಘಟ್ಟದಲ್ಲಿ ದಲಿತರಲ್ಲಿ, ಕೆಳವರ್ಗಗಳಲ್ಲಿ ಕಥನ ಕ್ರಮಗಳು, ಕಾವ್ಯಗಳು ಕಂಡುಬಂದವು. ಹಾಡಾಗಿ ನಿಂತವು. ಅವುಗಳು ತಮ್ಮ ಬದಲಾವಣೆಯ ಬದುಕಲ್ಲಿ ಇವೆಲ್ಲವನ್ನು ಗರ್ಭೀಕರಿಸಿಕೊಂಡು ಇರುತ್ತವೆ.

ದಲಿತರ ಬದುಕಿನಲ್ಲಿ ಅಕ್ಷರ ಪರಂಪರೆಯ ಹಿನ್ನೆಲೆಯು ಸಂಪೂರ್ಣವಾಗಿ ಹಿಂದೆ ಇದೆ. ಇವರ ಬದುಕಿನಲ್ಲಿ ಘಟಿಸುವ ಸಂಬಂಧಗಳು ಮತ್ತು ಅವುಗಳ ಫಲಾಪೇಕ್ಷೆಗಳೆಲ್ಲವೂ ಮೌಖಿಕ ಪರಂಪರೆಯ ಒಡಲನ್ನು ಹೊಂದಿವೆ. ಇದರೊಳಗೆ ನಾವು ಇಂದು ಗುರ್ತಿಸುವ ಓರಲ್ ಹಿಸ್ಟರಿಯನ್ನು ತಮ್ಮ ಮೌಖಿಕ ಬದುಕಲ್ಲಿ ಕಟ್ಟಿಕೊಂಡು ಬಂದವರು. ಮೌಖಿಕ ಪರಂಪರೆಯಲ್ಲಿನ ದಲಿತರ ಸಾಹಿತ್ಯ ಮತ್ತು ಬರಹಗಳು ಸಂಪೂರ್ಣವಾಗಿ ತಮ್ಮ ಸಂಸ್ಕೃತಿಯನ್ನು ಬಿಂಬಿಸುವಂತವೇ ಆಗಿರುತ್ತವೆ. ಮೌಖಿಕ ಪರಂಪರೆಯಲ್ಲಿ ತಮ್ಮ ಸಮುದಾಯಗಳ ಚರಿತ್ರೆ ಬಿಂಬಿತವಾದರೆ ಬರಹದ ದಲಿತ ಸಾಹಿತ್ಯದಲ್ಲಿ

ವಾಸ್ತವಕ್ಕೆ ಒತ್ತುಕೊಡುತ್ತವೆ. ಈ ಎರಡರಲ್ಲಿ ವೈರುಧ್ಯಗಳನ್ನು ಈ ರೀತಿಯಲ್ಲಿ ಗುರ್ತಿಸಬಹುದು. ಮೌಖಿಕ ಪರಂಪರೆಯಲ್ಲಿನ ಮಂಟೇಸ್ವಾಮಿ ಕಾವ್ಯ, ಮಲೆಮಾದೇಶ್ವರ ಕಾವ್ಯ, ದುರ್ಗಿಯ ಕಾವ್ಯ, ಕಾಳಿಯ ಕಾವ್ಯ ಮುಂತಾದವುಗಳು ಆವೊತ್ತಿನ ಪ್ರತಿಭಟನೆ ನಾಯಕ/ನಾಯಕಿಯರಾಗಿ ಕಂಡುಬಂದರೂ ಅವುಗಳು ಭಕ್ತಿಪೂರ್ವಕ ನೆಲೆಯಿಂದ ನಿರ್ವಚಿಸಲ್ಪಡುತ್ತವೆ. ಅವುಗಳು ಸಾಂಪ್ರದಾಯಿಕ ಜಗತ್ತಿನ ಯಜಮಾನಿಕೆಯ ಶಕ್ತಿಯಡಿಯಲ್ಲಿಯೇ ಕಂಡುಬಂದಿವೆ. ಇವುಗಳ ಅರ್ಥ ವಿವರಣೆಯ ಬಿತ್ತರಿಕೆಯು ನಿರ್ವಚನಕಾರರಿಗೆ (ಹಾಡುಗಾರರಿಗೆ) ಮತ್ತು ಕೇಳುಗರಿಗೆ ಮುಖ್ಯವಾಗುವುದಿಲ್ಲ. ಅದೊಂದು ಬದುಕಿನಲ್ಲಿ ಅನಿವಾರ್ಯ ಸಾಂಪ್ರದಾಯಿಕ ಅಂಗವಾಗಿದ್ದು ರೂಢಿಯಲ್ಲಿರುತ್ತದೆ. ಈ ಹೊತ್ತಿನ ದಲಿತ ಸಾಹಿತ್ಯವು, ತನ್ನ ಒಡಲ ಪ್ರತಿಭಟನೆಯು ನೇರವಾಗಿದೆ. ಅದು ಪ್ರಜ್ಞೆಯಿಂದ ಹುಟ್ಟಿದೆ. ಅದು ದಲಿತ ಬರಹಗಾರರ ಸ್ಥಿತಿಗೆ, ತಮ್ಮ ಸಮುದಾಯಗಳ ಸ್ಥಿತಿಗೆ ಸಂಬಂಧಪಟ್ಟಿರುತ್ತದೆ. ದಲಿತ ಸಾಹಿತ್ಯವು ದಲಿತರ ಸಾಂಸ್ಕೃತಿಕ ಬದುಕನ್ನು ಸಾಹಿತ್ಯಗೊಳಿಸುವಲ್ಲಿ ಮತ್ತು ಸಂಸ್ಕೃತಿಯನ್ನು ಬಿಂಬಿಸುವಲ್ಲಿ ಪ್ರಮುಖ ಪಾತ್ರವನ್ನು ಹೊಂದಿದೆ. ಅದೊಂದು ಸಮಾಜದ ವಿವಿಧ ಆಳುವ ವರ್ಗಕ್ಕೆ ಪ್ರಶ್ನೆರೂಪವಾಗಿ ಮುಖಮಾಡಿದೆ. ದಲಿತ ಸಮೂಹಗಳು ತಮ್ಮ ಬದುಕಿನಲ್ಲಿ ಹಾಡುವ, ಕೇಳುವ, ಆಲಿಸುವ, ಹೇಳುವ ಮೌಖಿಕ ಪರಂಪರೆಯಲ್ಲಿ ಸೇರಿದ್ದವು. ಆದರೆ ಇಂದಿನ ದಲಿತ ಸಾಹಿತ್ಯದಲ್ಲಿ ಅನುಭವದ ಹಂದರವು ಮುಖ್ಯವಾಗುತ್ತವೆ. ಅವುಗಳು ಕಥೆ ಕವನ ಕಾವ್ಯ ಮುಂತಾದವುಗಳಲ್ಲಿ ಸೇರಿಕೊಂಡಿವೆ. ಇಲ್ಲಿ ಅನುಭವದಿಂದ ರಚನೆಗೊಂಡದ್ದನ್ನು ಸಾಹಿತ್ಯ ಮಾನದಿಂದ ಅಳೆದಾಗ ಕಾವ್ಯದ ಪ್ರಕಾರದ ಚರ್ಚೆಗೆ ಕಾವ್ಯಗಳು, ಕವನಗಳು ಗುರಿಯಾದವು. ಅವುಗಳು ಕಾವ್ಯ ಹೌದೋ ಮತ್ತು ಅಲ್ಲವೋ ಎಂಬುದರ ಚರ್ಚೆ ಹಲವು ದಶಕಗಳಲ್ಲಿ ಚರ್ಚಿತವಾದವು. ಇವುಗಳು ಏಕರೂಪ ನಿರ್ಧಾರವನ್ನು ಪಡೆದುಕೊಳ್ಳಲ್ಲಿಲ್ಲ. ವಾಸ್ತವವಾಗಿ ಅದರ ಅಗತ್ಯವು ಚರ್ಚೆಯ ಮೇಲೆ ನಿಂತಿತು. ಸಿದ್ಧಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಕಾವ್ಯ ಹೌದು ಅಲ್ಲ ಎಂಬುದಕ್ಕೆ ಗುರಿಯಾಯಿತು. ಕವಿಯ ಸೂಚನೆಯಂತೆ 'ಇವು ಹಾಡುಗಳು ಎಂದು ಮತ್ತೊಮ್ಮೆ ಹೇಳುತ್ತಿದ್ದೇನೆ' ಎಂದು ಹೇಳಿರುವುದರ ಹಿಂದೆ ಮತ್ತೊಮ್ಮೆ ಎಂಬುದರ ಅರ್ಥವೇ ಒಂದು ರೀತಿಯಾಗಿ ಕಾಣುತ್ತದೆ. ಕವಿಯ ಒತ್ತಾಸೆಯು; ಅವನ ಅನುಭವದ ಸಾಂದ್ರತೆಯು; ಮತ್ತು ಅದರ ಅಭಿವ್ಯಕ್ತಿಯ ರೂಪವು ಇಲ್ಲಿ ಮುಖ್ಯವಾಗುತ್ತದೆ.

ದಲಿತ ಬರಹಗಾರ ದಲಿತರ, ಅನಕ್ಷರಸ್ಥ ದಲಿತರ ಬವಣೆಗಳನ್ನು ಬರವಣಿಗೆಗೆ ತೊಡಗಿಸುತ್ತಾನೆ. ಇದನ್ನು ಓದುವವರು ಅಕ್ಷರ ಕಲಿತವರು ಮಾತ್ರ. ಅದರಲ್ಲೂ ಸಾಹಿತ್ಯವನ್ನು ಆಸಕ್ತಿಯಿಂದ ಓದುವವರು ಸಾಹಿತ್ಯಾಸಕ್ತಿಯನ್ನು ಹೊಂದಿದವರು. ಅಕ್ಷರ ಕಲಿತ ದಲಿತರು ತಮಗೆ ಓದುವ ಆಸಕ್ತಿ ಇದ್ದರೆ ಸಿಕ್ಕ ಸಾಹಿತ್ಯವನ್ನು ಓದುತ್ತಾರೆ. ಓದಿದ ಸಾಹಿತ್ಯವು ಅವರ ಸಾಹಿತ್ಯವಾಗುವುದಿಲ್ಲ; ಇದನ್ನು ಸಾಮಾನ್ಯ ಸಾಹಿತ್ಯವೆಂದಷ್ಟೇ ಹೇಳಬಹುದು. ಹೀಗೆ ದಲಿತರಿಗೆ, ದಲಿತರಲ್ಲದವರಿಗೆ ತಮ್ಮದಲ್ಲದ ಸಾಹಿತ್ಯ ಎಂದು ಅಧ್ಯಯನದ ದೃಷ್ಟಿಯಿಂದ ವಿಭಾಗಿಸಬಹುದು. ಇದು ದಲಿತರದು; ಇದು ದಲಿತೇತರದ್ದು ಎಂದು ದಲಿತ ಸಾಹಿತ್ಯವನ್ನು ವಿಭಾಗಿಸುವುದು ಕಷ್ಟಕರವಾಗುತ್ತದೆ. ಹಾಗಾದರೆ 'ದಲಿತ ಸಾಹಿತ್ಯ'ದಲ್ಲಿ ದಲಿತರದೆ ದಲಿತ ಸಾಹಿತ್ಯ; ಅಥವಾ ದಲಿತೇತರ ದಲಿತ ಸಾಹಿತ್ಯ ಇದೆಯೇ ಎಂಬ ಪ್ರಶ್ನೆಯು ಬಹಳ ಮುಖ್ಯವಾಗುತ್ತದೆ. ಇಲ್ಲಿ ದಲಿತರು ತಮ್ಮ ಅನುಭವವನ್ನು ಸಾಹಿತ್ಯಗೊಳಿಸುತ್ತಿದ್ದಾರೆ; ಇಲ್ಲವೇ ತಮ್ಮ ಸಮುದಾಯಗಳ ಸಾಂಸ್ಕೃತಿಕ ಲೋಕವನ್ನು ಕಂಡ ಅನುಭವವನ್ನು ಸಾಹಿತ್ಯ ಮತ್ತು ಸಾಹಿತ್ಯೇತರ ಪ್ರಕಾರಕ್ಕೆ ತಮ್ಮ ಬರವಣಿಗೆಯ ಮೂಲಕ ಇಳಿಸುತ್ತಿದ್ದಾರೆ ಎಂದು ಹೇಳಬಹುದು.

ಅಕ್ಷರ ಲೋಕಕ್ಕೆ ಕಾಲಿಟ್ಟ ಮೊದಲ ದಲಿತ ಸಾಹಿತ್ಯಾಸಕ್ತರ ಮಾತುಗಳು ತಮ್ಮ ಕವನ ಸಂಕಲನಗಳಲ್ಲಿ ಸ್ಪಷ್ಟವಾಗಿ ಬಿಚ್ಚಿಕೊಂಡಿವೆ. ಅವು ಅವುಗಳ ಒತ್ತಲ್ಲಿ ಇಟ್ಟಿವೆ. ಹೊಲೆಮಾದಿಗರ ಹಾಡು ಕವನ ಸಂಕಲನದಲ್ಲಿ 'ಇವು ಹಾಡುಗಳು ಎಂದು ಮತ್ತೊಮ್ಮೆ ಹೇಳುತ್ತಿದ್ದೇನೆ' ಎಂಬುದು; ಅರವಿಂದ ಮಾಲಗತ್ತಿಯವರ ಕಪ್ಪುಕಾವ್ಯ ಕವನ ಸಂಕಲನದ 'ಹೇಳ್ತೀನಿ ಕೇಳಬಾರ' ಎಂಬ ಕವನಗಳು 'ದಲಿತ ಕಾವ್ಯ ಬರವಣಿಗೆಯಲ್ಲಿನ ಒತ್ತು' ಎಂಬುದು ಸ್ಪಷ್ಟವಾಗಿ ಕಾಣಸಿಗುತ್ತದೆ. ಅದಕ್ಕೆ ಓದುವವರ್ಗದ ಸಮಕಾಲೀನತೆಯ ಅನಿವಾರ್ಯವು ಮುಖ್ಯವಾಗುತ್ತದೆ. ಇವುಗಳ ಜೊತೆಯಲ್ಲಿಯೇ ದಲಿತ ಸಂಘಟನೆಯ ಸಂದರ್ಭದ ಕರ್ನಾಟಕ ದಲಿತ ಸಂಘರ್ಷ ಸಮಿತಿಯ (ಕ.ದ.ಸಂ.ಸ) ಒಡಲಲ್ಲಿ ಹುಟ್ಟಿಕೊಂಡ ಹೋರಾಟದ ಹಾಡುಗಳು ಕಂಡುಬಂದವು. ಇವುಗಳನ್ನು ಚರ್ಚೆಯಲ್ಲಿ ಹಾಡುಗಳೆಂತಲೂ, ಕ್ರಾಂತಿಗೀತೆಗಳೆಂತಲೂ, ಹೋರಾಟದ ಹಾಡುಗಳೆಂತಲೂ ಕರೆಯಲ್ಪಟ್ಟವು. ಇವುಗಳು ದಲಿತ ಸಾಹಿತ್ಯದಷ್ಟೇ; ದಲಿತರ ವಸ್ತು ಸ್ಥಿತಿಯನ್ನು ತೆರೆದಿಟ್ಟವು. ಇವುಗಳನ್ನು ಕುರಿತು ನಡೆಸಿದ ಚರ್ಚೆ ಬಹಳ ಕಡಿಮೆ. ಇವುಗಳ ಸಂಘಟನೆಯ ಕಲಾವಿದರಲ್ಲಿ ಸೇರಿದ್ದವು. ಇವರು ಹಾಡಲು ಅನುಕೂಲಕ್ಕಾಗಿ ಮತ್ತು ತಮ್ಮ ಸಂಘಟನೆಯ ಸಂಬಂಧದ ಬಲಪಡಿಸುವಿಕೆಗೆ ಸಂಗ್ರಹಿಸಿದ ಹಾಡುಗಳಾದವು. ಕೆಲವು ಹಿಂದಿ, ತೆಲುಗು, ಮರಾಠಿಯಿಂದ ಅನುವಾದಗೊಂಡು ಬಂದವು. ಅವುಗಳು ತಾಳ ತಮಟೆಗೆ ಸೇರಿಕೊಂಡು ಕನ್ನಡದ ಹಾಡುಗಳಾಗಿಯೇ ಸೇರಿದವು. ಇಲ್ಲಿ ಅಕ್ಷರಸ್ಥ ಮತ್ತು ಅನಕ್ಷರಸ್ಥರೆಂಬ ಭೇದ ಭಾವವಲ್ಲ. ಸಂಘಟನೆಯ ಸ್ಫೂರ್ತಿಯಲ್ಲಿ ಇವುಗಳು ಹುಟ್ಟಿಕೊಂಡಂತವುಗಳು. ಈ ಕೆಲವು ಹಾಡುಗಳನ್ನು ಕುರಿತು ಮುಂದೆ ಚರ್ಚಿಸಲಾಗುವುದು.

**ದಲಿತ ಕಾವ್ಯ:** ಈವರೆಗೆ ಪ್ರಕಟಗೊಂಡಿರುವ ಕೆಲವು ಸಂಕಲನಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗುವುದು. ಇದರಲ್ಲಿ ಅದರ ವಸ್ತು ವಿನ್ಯಾಸ ಮತ್ತು ಅವುಗಳು ಕೊಡುವ ರೂಪವನ್ನು ಕುರಿತು ನೋಡಲಾಗುವುದು. ಇಲ್ಲಿ ಕೆಲವು ಸಂಕಲನಗಳ ಪ್ರಸ್ತಾಪವನ್ನು ನೀಡಿ ನಂತರದಲ್ಲಿ ಅವುಗಳ ಒಳಹರಿವನ್ನು ನೋಡಲಾಗುವುದು. ಹೊಲೆಮಾದಿಗರ ಹಾಡು, ಸಾವಿರಾರು ನದಿಗಳು, ಬೂದಿಗೊಬ್ಬರದ ಹಾಡು, ನನ್ನವರ ಹಾಡು, ಕಪ್ಪುಕಾಡಿನ ಹಾಡು, ಕಪ್ಪುಕಾವ್ಯ, ಮೂಕನಿಗೆ ಬಾಯಿಬಂದಾಗ, ಸ್ವಾಭಿಮಾನದ ಬೀಡಿಗೆ, ಮಾದಾರ ತಾಯಿ, ಅದೋಜಗತ್ತಿನ ಅಕಾವ್ಯ, ಗೋಧೂಳಿ, ಹಕ್ಕುಳ್ಳವರ ಮಕ್ಕಳಹಾಡು, ಅವ್ವ, ದಲಿತ ಜನರ ಕಿರಣ, ಅತ್ತೆಸೊಸೆ ಆತ್ಮಕಥೆ, ನಾನೊಂದು ಮರವಾಗಿದ್ದರೆ, ಬಕಾಲ, ನೆಲದ ಜೋಗುಳ, ಮೂರನೆಯ ಕಣ್ಣು, ಕೊಂಡಿಗಳು ಮತ್ತು ಬೇಲಿಗಳು, ಕೇಳು ಜಗಮಾದಿಗ ಹೊಲೆಯ ಮುಂತಾದ ಹಲವಾರು ಕವನ ಸಂಕಲನ/ಕವನಗಳು ಕಾಣಸಿಗುತ್ತವೆ. ಅವುಗಳಲ್ಲಿನ ವಸ್ತುವಿಗೆ ಶೀರ್ಷಿಕೆಗಳೇ ತೂಕವನ್ನು ಹೊತ್ತುಕೊಂಡಿವೆ. ಅದನ್ನು ಹೀಗೆ ಅರ್ಥೈಸಿಕೊಳ್ಳಬಹುದು. ಹೊಲೆ ಮಾದಿಗರ ಹಾಡು, ಕೇಳು ಜಗಮಾದಿಗಹೊಲೆಯ. ಕವನ ಸಂಕಲನದ ಶೀರ್ಷಿಕೆಯಲ್ಲಿಯೇ ಹೊಲೆಮಾದಿಗರ ಹಾಡು, ಅದು ತನ್ನ ಸಮಕಾಲೀನ ಜಗತ್ತಿಗೆ ಹೊಲೆಮಾದಿಗರ ಹಾಡನ್ನು ಸಮರ್ಪಿಸುತ್ತಿದೆ. ಇಲ್ಲಿ ಹಾಡು ಕಾವ್ಯಗಳ ನಡುವೆ ಚರ್ಚೆಗೆ ಹೋಗುವುದಿಲ್ಲ. ಏಕೆಂದರೆ ಅದು ಅವರವರ ಅರ್ಥೈಕೆಯಲ್ಲಿ ನಿಲ್ಲುವಂತಹದು. ಮನಜ ಅವರ ಕೇಳು ಜಗಮಾದಿಗಹೊಲೆಯ ಇಲ್ಲಿನ ಶೀರ್ಷಿಕೆ ಇನ್ನೊಂದು ಅರ್ಥಕಲ್ಪನೆಯನ್ನು ಕೊಡುವಂತಹದು. ಹೊಲೆಮಾದಿಗ ನೀನು ಕೇಳು ಇಲ್ಲಿಯ ಹೊಲೆಮಾದಿಗ ಸಮುದಾಯಗಳು ಬರೀ ಸಮುದಾಯಿಕ ಸೀಮಿತವಲ್ಲ; ಶೋಷಿತ ವರ್ಗಗಳ ಅಥವ ಜನಾಂಗಗಳ ವ್ಯಾಪ್ತಿಗೆ ಸೇರುವಂತಹದು. ಇಲ್ಲಿಯ ಹಾಡುಗಳು ದಲಿತ ಕಾವ್ಯದ ಹಾಡುಗಳು, ದಲಿತ ಲೋಕದ ಹಾಡುಗಳು. ಬೂದಿ ಗೊಬ್ಬರದ ಹಾಡು, ನನ್ನವರ ಹಾಡು,

ಕಪ್ಪುಕಾಡಿನ ಹಾಡು, ಹಕ್ಕುಳ್ಳವರ ಹಾಡು ಇವುಗಳು ದಲಿತರ ಹಾಡಾಗಿ, ಅವರ ಪಾಡಾಗಿ, ಕಾವ್ಯವಾಗಿ ಬಂದಿವೆ. ಕಪ್ಪುಕಾಡಿನ ಹಾಡಾಗಿದ್ದು ಮತ್ತೊಂದೆಡೆ ಕಪ್ಪು ಕಾವ್ಯವಾಗಿದೆ. ದಲಿತ ಜಗತ್ತಲ್ಲಿ ಹಾಡು ಕಾವ್ಯವೂ ಆಗಬಹುದು.

ಮೂಕನಿಗೆ ಬಾಯಿಬಂದಾಗ ಅಂದರೆ ಮೌಖಿಕತೆಯು ಲಿಖಿತತೆಗೆ ಬಂದಾಗ ಅವನ ಅಭಿವ್ಯಕ್ತಿ ಎಂಥಹದು ಎಂಬುದು ಮುಖ್ಯವಾಗುತ್ತದೆ.. ಮಾತು ಮತ್ತು ಬರಹವೇ ಇಲ್ಲಿ ಪ್ರಧಾನವಾಗಿ ಕಂಡುಬರುತ್ತದೆ. ಮಾತು ಅಂದರೆ ಅಧಿಕಾರ ಮತ್ತು ಮಾತಿನ ಸ್ವಾತಂತ್ರ್ಯ ಅದು ಶಬ್ದಗಳಿಂದ ಹೊರಡುವ ಕ್ರಿಯೆಗೆ ಸಂಬಂಧಿಸಿರುತ್ತದೆ. ಹಾಗೆಯೇ ಬರಹದ ಅವಕಾಶ ಮತ್ತು ಸೌಲಭ್ಯಗಳಿಂದ ದೂರ ಉಳಿದಾಗ ಕಂಡುಬರುವುದಿಲ್ಲ. ಮೂಕ ದಲಿತನಿಗೆ ಮಾತು ಬಂದಾಗ, ಮಾತಿನ ಬರಹ ಬಂದಾಗ ಆತನಿಂದ ಮೊದಲು ತನ್ನ ಪರಂಪರೆಯ ತಲ್ಲಣಗಳು ಬಿಚ್ಚಿಕೊಳ್ಳುತ್ತವೆ. ಅದು ಪ್ರಾರಂಭವೂ ಕೂಡ. ಅದು ತನ್ನ ಸಮುದಾಯಗಳ ಬದಲಾವಣೆಯ ಸಂದರ್ಭದಿಂದ ಹುಟ್ಟಿರುವಂತಹದು ಆಗಿರುತ್ತದೆ. ಅದರ ವೇದನೆ, ಮತ್ತು ಸಂವೇದನೆಗಳ ಚರ್ಚೆಯು ಬೇರೆಯ ರೀತಿಯದು. ಮಾಲಗತ್ತಿಯವರ 'ಕಪ್ಪು ಕಾವ್ಯ' ಶೀರ್ಷಿಕೆಯು ಸಾಗಿಬಂದ ಲಿಖಿತ ಪರಂಪರೆಗೆ ವಿರುದ್ಧವಾಗಿಯೇ ಹುಟ್ಟಿಕೊಂಡಿದೆ ಎಂಬಂತೆ ಕಾಣಿಸುತ್ತವೆ. ಯಾವುದು ಲಿಖಿತ ಪರಂಪರೆ ಕಾಣದೆ ಇದೆಯೋ ಅದನ್ನು ಸ್ಥಾಪಿಸುವುದೂ; ಮತ್ತು ಅದಕ್ಕೆ ಒತ್ತುಕೊಡುವುದು ಇಲ್ಲಿ ಪ್ರಧಾನವಾಗಿ ಕಂಡು ಬಂದಿದೆ.

ಈ ಕಾವ್ಯಗಳಲ್ಲಿ ಲಯ, ಅಭಿವ್ಯಕ್ತಿ, ನಿರೂಪಣೆಗಳು ಪ್ರಧಾನ ಅಂಶಗಳಾಗಿ ಕಾಣಸಿಗುತ್ತವೆ. ಅವು ತಮ್ಮ ಜನಸಮುದಾಯಗಳ ಅವುಗಳ ಬದುಕಿನಲ್ಲಿ ಹುಟ್ಟಿಕೊಂಡಿದ್ದ ನೂರಾರು ಬಗೆಯ ಹಾಡಿನ ಲಯಗಳಲ್ಲಿ ಮೂಡಿ ಬಂದವು. ಅದಕ್ಕೆ ಸಿದ್ಧಲಿಂಗಯ್ಯನವರು ತಮ್ಮ ಕವನಗಳಿಗೆ 'ಇದಕ್ಕೆ ಗಟ್ಟಿಯಾಗಿ ದನಿಕೊಟ್ಟು ಹಾಡಿದಾಗ ಅವುಗಳು ಅರ್ಥ ಪೂರ್ಣವಾಗುತ್ತವೆ' ಎಂದಿದ್ದಾರೆ. ಜನರ ಹಾಡಿನ ಲಯ, ವಿನ್ಯಾಸಗಳು ಹೊಸಬಗೆಯ ಹಾಡಲ್ಲಿ ಸೇರಿ ಅವು ಜನರೊಳಗೆ ಸೇರಿದಾಗ, ಅವುಗಳು ಭಾವನಾತ್ಮಕತೆಯಲ್ಲಿ ತಮ್ಮ ಅನುಭವದ ಭಾಗವಾಗುವ ಸಾಧ್ಯತೆ ಹೆಚ್ಚು. ಕವನಗಳು ಹಾಡಲ್ಲಿ ಜನಪರ ಧಾಟಿ, ಲಯಗಳಲ್ಲಿದ್ದು; ಅವುಗಳು ಜನಸಾಮಾನ್ಯರ ಬಳಿಗೆ ಬರಲಾರದು. ಅವು ಓದಲ್ಲಿ ಮಾತ್ರ ಉಳಿಯುತ್ತವೆ.

ಇಕ್ರಲಾ ವದೀರ್ಲಾ
ಈ ನನ್ ಮಕ್ಕಳ ಚರ್ಮ ಎಬ್ರಲಾ
...........................

ಇದನ್ನು ಸಿದ್ಧಲಿಂಗಯ್ಯನವರು ಹೊಲೆಮಾದಿಗರ ಹಾಡಿನಲ್ಲಿ 'ಒಂದು ಪದ' ಎಂದು ಕಂಡುಬಂದಿರುವುದು ಚರ್ಚಿತ ವಿಷಯವಾಗಿದೆ. ಇದನ್ನು ಕೆಲವರು ಕಾವ್ಯ ಅಂತಲೂ ಮತ್ತೆ ಕೆಲವರು ಕಾವ್ಯ ಅಲ್ಲ ಅಂತಲೂ, ಚರ್ಚೆಯನ್ನು ಮಾಡಿದ್ದಾರೆ. ಇದು ಒಂದು ಪದ. ಪದ ಎಂದರೆ ಜನ ಸಾಮಾನ್ಯರ ಬಳಕೆಯಲ್ಲಿ ಒಂದು ಮಾತು ಅಂತಲೂ; ಒಂದು ಹಾಡು ಅಂತಲೂ ಅರ್ಥಗಳು ಉಂಟು. ಮೌಖಿಕದಲ್ಲಿದ್ದ ಹಾಡು ಬರಹದಲ್ಲಿ ಬಂದಾಗ ಅದು ಸ್ವರೂಪದಲ್ಲಿ ಕವನವಾಗಿದೆ. ದೀರ್ಘವಾದರೆ ಕಾವ್ಯವಾಗಿದೆ. ಕಥೆಯನ್ನು ಹೇಳಿಸುತ್ತೇವೆ ಎಂದರೆ ಸಾಮಾನ್ಯವಾಗಿ ಹಳ್ಳಿಯ ಜನರಲ್ಲಿ ಅದು ಕಾವ್ಯವನ್ನು ಹಾಡಿಸುವುದು ಎಂಥಲೂ ಅರ್ಥವುಂಟು. ಅದಕ್ಕೆ ಸ್ವಾಮಿಯ ಕಥೆ, ದೇವರ ಕಥೆ ಎಂಬ ಹಲವು ರೀತಿಗಳು ಇರಬಹುದು. ಜನಪದರಲ್ಲಿ ಕಥೆಗಳು ಕಥೆಗಳೂ ಹೌದು, ಅವುಗಳು ಕಾವ್ಯಗಳೂ ಹೌದು. ಜನಪದರಿಂದ

ಲಿಖಿತ ಪರಂಪರೆಗೆ ಬದಲಾದ ದಲಿತ ಸಾಹಿತ್ಯ ಪರಂಪರೆಯಲ್ಲಿ ಜನಪದ ಅಂಶಗಳು ಹೀಗೆ ಕಾಣಿಸಿಕೊಂಡವು. ಅಕ್ಷರ ಜ್ಞಾನವು ಕೆಲವೇ ಕೆಲವರ ಸಂಪತ್ತಾಗಿದ್ದ ಕಾಲವೊಂದಿತ್ತು. ನಂತರ ಕಾಲಮಾನದಲ್ಲಿ ಅದು ಸಡಿಲಗೊಂಡು ಸಮಾಜದ ಹಲವು ಸ್ತರಗಳ ಜನರಲ್ಲಿ ಸೇರಿಕೊಂಡಿತು. ಅಕ್ಷರದ ಅರಿವಿಲ್ಲದ ಸಂದರ್ಭಕ್ಕೂ ಅಕ್ಷರದ ಅರಿವು ಬಂದ ನಂತರದ ಸಂದರ್ಭಕ್ಕೂ ಸಾಕಷ್ಟು ಭಿನ್ನತೆಗಳು ಕಂಡುಬಂದವು. ಅವು ತನ್ನ, ತನ್ನ ಸಮುದಾಯಗಳ ಅಂತರಂಗವನ್ನು; ಗೌಪ್ಯವಾಗಿ ಅಡಗಿದ್ದ ತನ್ನ ಸಂಸ್ಕೃತಿಯ ವೈಮಾನಿಕದಂತಹ ಬದುಕನ್ನು, ಅವಮಾನಿತ ಜಾತಿಯ ಸೂಕ್ಷ್ಮಾನುಭವದ ಲೋಕವನ್ನು ಬರವಣಿಗೆಗೆ ದಲಿತ ಸಾಹಿತ್ಯವು ಒಳಗೊಂಡಿತು. 'ಅಕ್ಷರ' ದಲಿತ ಸಮುದಾಯಕ್ಕೆ ಬಂದದ್ದು ಅವರ ಬದುಕಲ್ಲಿ ಹೆದ್ದಾರಿ ಕಂಡಂತಾಯ್ತು.

"ತುಟಿಬಿಚ್ಚಿ ನುಡಿಯಲಾರದವನಾಗಿ ಈ ಲೋಕದಲ್ಲಿ ಹುಟ್ಟಿದ ನಾನು ಮುಟ್ಟಬಾರದವನಾದ ಬಳಿಕ : ಆಗ ನನಗೆ ಇನ್ನೂ ಚಡ್ಡಿಲಾಡಿ ಕಟ್ಟುವುದು ಸರಿಯಾಗಿ ಬರುತ್ತಿರಲಿಲ್ಲ"[೨]. ಅಕ್ಷರವು ತಮ್ಮ ಅನುಭವದ ವಸ್ತುವಾಗಿ ತಮ್ಮ ಹಿಂದಿನ ಲೋಕವನ್ನು ಪ್ರವೇಶಿಸಿತು. ಅದೊಂದು ರೀತಿಯಲ್ಲಿ ಅಭಿವ್ಯಕ್ತಿಯ ಸ್ಥಾನಮಾನವೆಂಬಂತೆ ದಲಿತ ಸಾಹಿತ್ಯ ಸಂದರ್ಭದಲ್ಲಿಯೂ ಕಂಡುಬಂದವು. "ದಲಿತ ದೃಷ್ಟಿ ಸಾಮಾಜಿಕ ಬದಲಾವಣೆಯನ್ನು ಬಯಸುತ್ತದೆ; ಅದಕ್ಕೆ ಕಾವ್ಯ ವೇಗವರ್ಧಕದಂತೆ ಕೆಲಸಮಾಡಬೇಕೆಂದು ತಿಳಿಯುತ್ತದೆ. ಅದಕ್ಕಾಗಿ ಅದು ಕಾವ್ಯವನ್ನು ಯುಕ್ತಿ (strategem)ಯನ್ನಾಗಿ ಬಳಸುತ್ತದೆ"[೩]. ತನ್ನ ಒಡಲಾಳದ ಅಂತರಂಗವನ್ನು ಬಿಚ್ಚಿಟ್ಟು ಜೊತೆಗೆ ದಲಿತ ಸಾಹಿತ್ಯ ದೃಷ್ಟಿಯು ಸಾಮಾಜಿಕ ಬದಲಾವಣೆಯನ್ನು ಬಯಸುತ್ತದೆ. ಅದು ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ತನ್ನ ಸ್ಥಾನ ಎಂಥಹದು ಎಂಬ ಪ್ರಶ್ನೆಯನ್ನು ತನ್ನಲ್ಲಿ ಹುಟ್ಟುಹಾಕಿತು. ಹಾಗೆಯೆ ತಾನು ಬದುಕುತ್ತಿರುವ ವ್ಯವಸ್ಥೆಯೊಂದಿಗೆ ಕಾಲ ಹಾಕುವುದಾಗಿತ್ತು, ನಂತರದಲ್ಲಿ ಅದು ಹಲವು ರೂಪವನ್ನು ಪಡೆದುಕೊಂಡು ನಂತರದಲ್ಲಿನ ಚರ್ಚೆಯಲ್ಲಿ ಸೇರಿಕೊಂಡಿತು. ಬಹುತೇಕ ದಲಿತ ಕವಿಗಳು, ಸಾಹಿತಿಗಳು ಹಳ್ಳಿಯ ಪರಿಸರದಿಂದ ಬಂದು ಅಕ್ಷರ ಸಂಸ್ಕೃತಿಯಲ್ಲಿ ಬೆಳೆದವರು. ತಮ್ಮ ಹಿಂದಿನ ಬಡತನ, ಹಿಂಸೆ, ಅವಮಾನ, ಅಸ್ಪೃಶ್ಯತೆಗಳು ಅಕ್ಷರ ಪ್ರೀತಿಯಲ್ಲಿ ರೊಚ್ಚಿಗೆದ್ದವು. ಅವು ಹಾಡಾದವು. "ನಾನು ಕ್ರಾಂತಿ ಮಾಡಬಯಸುವ ಕನಸುಗಣ್ಣಿನ ಕವಿಯಲ್ಲ. ಒಂದೇ ದಿನದಲ್ಲಿ ಒಂದು ತಿಂಗಳಿನಲ್ಲಿ Metamorphosis ಆಗಬಹುದೆಂಬ ಭ್ರಮೆಯೂ ನನ್ನಲ್ಲಿಲ್ಲ. ಇಲ್ಲಿ ಪಡಿಮೂಡಿರುವ ಕವನಗಳ ಒಂದೊಂದು ಸಾಲು ನಾನುಂಡ ನೋವು, ನನ್ನೆದೆಯ ಅಳಲು ನನ್ನ ವೈಚಾರಿಕ ಮನದ ಗೋಳು. ಬದುಕು ವಿಶಾಲವಾಗಿ ಪಸರಿಸಿರುವ ಈ ಭೂಮಿಯಲ್ಲಿ ಅಸಂಖ್ಯಾತ ಸಮಾಜ ವ್ಯವಸ್ಥೆಗಳು ಸಹಬಾಳ್ವೆಗನುಕೂಲವಾಗಿ ಬೆಳೆದು ನಿಂತಿವೆ. ಹೊಟ್ಟೇ ನೋವಾಗಿ, ಬದುಕು ಸಾವಾಗಿ, ಅಣಕಿಸುವ, ಒಂದು ಬೃಹತ್ ಮಾನವ ಸಮುದಾಯ ಇಲ್ಲಿ ಅಸ್ತಿತ್ವದಲ್ಲಿದೆ ಎಂಬುದು ಜಾಗತೀಕರಣದ ದುರಂತಗಳಲ್ಲೊಂದು. ಈ ದೇಶದ ಮೂಲೆ ಮೂಲೆಯಲ್ಲೂ ಅಂತ್ಯಜರಾಗಿ ಬದುಕು ನೂಕುತ್ತಿರುವ ಪ್ರತಿಯೋರ್ವ ಜೀವಿಯ 'ಮೌನರೋದನ ನನ್ನ ಕವನಗಳು"[೪] ಕವಿ ಬಿ. ಚಿನ್ನಸ್ವಾಮಿಯವರು ಜಾಗತೀಕರಣದ ದುರಂತದ ಅರಿವಿನೊಂದಿಗೆ ಫ್ಯೂಡಲ್ ವ್ಯವಸ್ಥೆಯಲ್ಲಿನ ತಮ್ಮ ಕವನಗಳನ್ನು ಅರ್ಪಣೆ ಮಾಡಿರುವುದು ದಲಿತ ಸಾಹಿತ್ಯದ ವಿಶೇಷತೆಗಳಲ್ಲಿನ ಪ್ರಮುಖತೆಯಲ್ಲಿ ಸೇರುತ್ತವೆ

ಈ ಪವಿತ್ರ ಭೂಮಿಯಲ್ಲಿ
ಜನ್ಮ ಪಡೆದ ಅಪವಿತ್ರರಿಗೆ
ತಲೆಮಾರುಗಳಿಂದ ತುಳಿಯಲ್ಪಟ್ಟ
ಅಲ್ಪ ಮಾನವರಿಗೆ
ಶತಮಾನಗಳುರುಳಿದರೂ
ಗತಿಸದ ಶೋಷಿತರಿಗೆ [೪]

"ಹುಟ್ಟಿದ್ದು ಕೆಳವರ್ಗದಲ್ಲಿ. ಬೆನ್ನಟ್ಟಿ ಬಂದದ್ದು ಬಡತನ, ಸುತ್ತಲಿದ್ದುದು ಮಡಿವಂತಿಕೆಯಿಂದ ಜಡ್ಡುಗಟ್ಟಿ ನಾರುವ ವ್ಯವಸ್ಥೆ. ಇದು ಶೋಷಣೆ ಮಾಡಿ, ನನ್ನ ನನ್ನಂಥವರ ಮೌಲ್ಯಗಳನ್ನು ಹಿಂಡಿ ಹತ್ತಿಕ್ಕಲು ಪ್ರಯತ್ನಿಸಿದಾಗ; ನನಗೆ ನನ್ನ ಜನರಿಗೆ ಆಗುತ್ತ ಬಂದ ಆಘಾತ, ಅನುಭವಿಸುತ್ತಾ ಬಂದ ಎದೆಯಾಳದ ನೋವು ಅಪಾರ. ಹಾಗೆ ಒಟ್ಟಿಸಿ ನಿಂತ ನೋವೇ ಕಾವ್ಯ. ಆ ಎದೆಗುದಿಯನ್ನು ನಾನು ತೋಡಿಕೊಂಡಿರುವುದೇ ಈ ಮೂಲಕ"[೫]. ಕವಿಗಳ ತಮ್ಮ ಕವನಗಳು ಮೈದುಂಬಿಸಿಕೊಂಡಿರುವ ಅನುಭವದ ಲೋಕಗಳನ್ನು, ತಾವು ನಡೆದು ಬಂದ ವ್ಯವಸ್ಥೆಯನ್ನು ಕುರಿತು ಹೇಳಿದ್ದಾರೆ. "ಅನೇಕರ ಅನುಮಾನಗಳಲ್ಲಿ ಬಂಡಾಯ ಕಾವ್ಯ ಕೇವಲ ಘೋಷಣೆ ಮತ್ತು ಸಿಟ್ಟಿನ ಬಯ್ಗುಳಿಂದ ತುಂಬಿ ಕವಿತೆಯ ಕೆಲ ಮೂಲಭೂತ ಅಂಶಗಳನ್ನು ಮರೆತೀತೇನೋ ಎಂಬುದೂ ಒಂದು ಶುಷ್ಕ ಘೋಷಣೆ ಮತ್ತು ಬಯ್ಗುಳನ್ನು ಯಾರು ಕಾವ್ಯವೆಂದು ಕರೆಯಬೇಕಿಲ್ಲ. ಕವಿತೆಯ ಮಾತುಗಳು ಮಾನವೀಯವಾಗುವುದರ ಮೂಲಕ ನಮ್ಮೊಂದಿಗೆ ಸಂವಾದಿಸಲು ಶಕ್ತವಾಗಬೇಕು. ನಮ್ಮ ಮಾತುಗಳು ಮಾನವೀಯವಾಗುವಲ್ಲಿ ಕಟ್ಟಿಕೊಡುವ ಭಾವ ಬಂಧ, ಕವಿತೆಯ ಯಶಸ್ಸನ್ನು ಹೇಳುತ್ತದೆ. ನಮ್ಮೊಳಗೆ ಒಂದಾಗಿ ಮನಸ್ಸನ್ನು ಮೀಟುತ್ತದೆ"[೬] "ಕಾವ್ಯಕ್ಕೆ ಕೇವಲ ಒಂದು ಗೊಣಗುವಿಕೆಯೇ ಸಾಕೆಂದು ನನ್ನ ಅಭಿಪ್ರಾಯವಲ್ಲ ನಮ್ಮ ಗ್ರಹಿಕೆ ಮತ್ತು ಅನುಭವಗಳು ಗಂಟಲಿನ ಗುಟುರಾಗುವುದಕ್ಕೆ ಮುಂಚೆ, ಅರಗುತ್ತಾ, ಕೊರುಗುತ್ತಾ, ಸಪ್ತಸ್ವರದಲ್ಲಿ ಸಂಯೋಜಿತವಾಗಬೇಕು. ಆಮೇಲೆ ಒಂದು ಸ್ವರವಾಗಿ ಸ್ಫುಟಗೊಳ್ಳಬೇಕು. ಅನುಭವದ ಬಹಿರಂಗ ಭಾಷೆ ಒಳಸೇರುತ್ತಾ, ಮೂಕವಾಗುತ್ತಾ, ಮಾತು ಮೌನದ ನಡುವೆ ವಿಲವಿಲನೆ ಒದ್ದಾಡುತ್ತ ಶಬ್ದ ಸ್ತಬ್ಧವಾಗಿ ಮತ್ತೆ ಹೊಸ ಹುಟ್ಟಿನ ರೀತಿಯಲ್ಲಿ ಹೊರಬರುವ ಅಂತಃಶಕ್ತಿಯಾಗುವುದು ಕಾವ್ಯಪ್ರಭುತ್ವದ ಒಂದು ಉತ್ತಮ ಮಾದರಿ"[೭] ಎಂದು ಬರಗೂರು ರಾಮಚಂದ್ರಪ್ಪನವರು ಅಭಿಪ್ರಾಯಿಸಿದ್ದಾರೆ. ಈ ವಿಷಯಗಳಿಗೆ ಸಂಬಂಧಪಟ್ಟಂತೆ ಇದಕ್ಕಿಂತ ಭಿನ್ನವಾದ ಮತ್ತೊಂದು ದೃಷ್ಟಿಕೋನವನ್ನು ಕೂಡ ನೋಡಬಹುದು. "ಬದುಕಿನಲ್ಲಿ ಅನುಭವಿಸಿದ, ಅನುಭವಿಸುತ್ತಿರುವ ಕ್ರೌರ್ಯವನ್ನು ಮಾನಸಿಕವಾಗಿಯಾದರೂ ಅರಿತು ಕೊಳ್ಳಲಾರದವರು ಇಂಥ ಕವನಗಳಲ್ಲಿ ತಪ್ಪು ಕಾಣುವುದು ಸುಲಭ. ಬಂಡಾಯ ಕವಿತೆ, ದಲಿತ ಕಾವ್ಯ ಕಾವ್ಯವೇ ಅಲ್ಲ, ಬರೀ ಆಕ್ರೋಶ, ರೋಷಾವೇಶ ಎಂದು ಹೇಳಿ ತಳ್ಳಿಬಿಡುವುದರಿಂದ ಅದಕ್ಕೆ ನ್ಯಾಯ ಸಲ್ಲದು. ಸಾಹಿತ್ಯದಲ್ಲಿ ಸಂಮೋಹಕ ಶಕ್ತಿಯಿರುವಂತೆ ಪ್ರತಿಭಟನೆಯ ಧಾರೆಯೂ ಇದ್ದಾಗ ಅದು ಸಮಾಜದ ಪುನರ್‌ವ್ಯವಸ್ಥೆಗೆ, ಅಗತ್ಯವಾದರೆ ಹಳೆಯದನ್ನು ಕೆಡವಿ ಹೊಸದರ ನಿರ್ಮಾಣಕ್ಕೆ, ಸಾಧನವಾಗಬಲ್ಲದು. ಬರೀ ನೋವು ಅನ್ಯಾಯಗಳನ್ನೇ ಅನುಭವಿಸಿದ ಕವಿಗಳ ಉದ್ಗಾರಗಳನ್ನು ಅರ್ಥಮಾಡಿಕೊಳ್ಳದವರು ಮಾನವತೆಯ ಅಂಶವನ್ನೇ ಕಳೆದುಕೊಂಡವರೆನ್ನಬಹುದು"[೮]. ಇಲ್ಲಿ ಶೋಷಣೆ ಎನ್ನುವುದಾದರೆ ಅದರ ಹಿಂದಿರುವ ನೋವು ಎಂಥಹದು? ಎಂಬುದು ಮುಖ್ಯವಾಗುತ್ತದೆ. ಇಲ್ಲಿ ಮಾನವೀಯತೆಯ ಗುಣಗಳು ಮುಖ್ಯ. ಸ್ವೀಕರಿಸುವ ಮನಸ್ಸು ಪ್ರಮುಖವಾದದು. ದಲಿತರು ಸಾಮಾಜಿಕ ಬದುಕಲ್ಲಿ ಎಂದೂ ಸಮಾನತೆಯನ್ನು ಅನುಭವಿಸದವರು; ಅವರು ಅಕ್ಷರ ಜ್ಞಾನದ ಪ್ರತಿಬಿಂಬದ

ಕಾವ್ಯವು ಒಂದು ವಿಶಿಷ್ಟ ಮಾದರಿಯಲ್ಲಿ ಕಾಣತೊಡಗಿತು. ಅದು ಕೆಲವರಿಗೆ ಒಪ್ಪಿತವಾಗಲಿಲ್ಲ. ಅದರ ಅರ್ಥೈಕೆಯನ್ನು ಎಚ್ಚೆಸ್ಕೆಯವರು ಮೇಲೆ ವಿವರಣೆಯನ್ನು ನೀಡಿದ್ದಾರೆ.

ಇನ್ನು ಮುಂದೆ ದಲಿತ ಕಾವ್ಯದ ಬಗ್ಗೆ ಚರ್ಚಿಸಲಾಗುವುದು. ಕಾವ್ಯಕ್ಕೆ ಸಂಬಂಧಿಸಿದ ವಸ್ತು ವಿಷಯ ಮತ್ತು ಮುಖ್ಯಪ್ರವೃತ್ತಿಗಳನ್ನು ಇಲ್ಲಿ ಚರ್ಚಿಸಲಾಗುವುದು. ಅದರಲ್ಲಿ ಪ್ರಶ್ನೆಗಳು ಮತ್ತು ಅದಕ್ಕೆ ಅದರ ವಿವರಣೆಗಳು ಇಲ್ಲಿ ಸೇರಿಕೊಳ್ಳಬಹುದು. ಈ ಹೊತ್ತಲ್ಲಿ ದಲಿತ ಕಾವ್ಯ ಯಾವುದನ್ನು ಸೃಷ್ಟಿಸಿ ಹೊರಹಾಕುತ್ತಿದೆ ಎಂಬುದನ್ನು ಸೂಕ್ಷ್ಮ ಮತ್ತು ಸ್ಥೂಲವಾಗಿ ಚರ್ಚೆಗೆ ಒಳಪಡಿಸಲಾಗುವುದು. ಇಲ್ಲಿ ಒಳಗೊಳ್ಳುವ ಕವಿತೆಗಳಿಂದ ಕವಿತೆಗಳಿಗೆ, ಕವಿಗಳಿಂದ ಕವಿಗಳಿಗೆ ಇರುವ ಆಲೋಚನಾ ವಿಧಾನಗಳ ಸೂಕ್ಷ್ಮತೆ ಮತ್ತು ಅವುಗಳ ಭಿನ್ನತೆಗಳನ್ನು ಗ್ರಹಿಸಲು ಪ್ರಯತ್ನಿಸಲಾಗುವುದು. ಗ್ರಹಿಸಿದ ಆಶಯದ ಸ್ವರೂಪವನ್ನು ಸರಳೀಕರಿಸಿ ಏಕಘನಾಕೃತಿಯಲ್ಲಿ ಮಂಡಿಸಲಾಗುವುದು. ಹಾಗೆಯೇ ಅದರೊಳಗೆ ವೈರುಧ್ಯ ಹಾಗೂ ಮಿತಿಗಳು ಕಂಡುಬಂದಲ್ಲಿ ಅವನ್ನೂ ಕೂಡ ಚರ್ಚೆಗೆ ಒಳಪಡಿಸಲಾಗುವುದು.

ಕನ್ನಡ ಸಾಹಿತ್ಯ ಪ್ರಕಾರಗಳು ಬಂದಂತೆಲ್ಲಾ ಅವುಗಳ ಸಮಕಾಲೀನ ಹೊತ್ತಿನ ಸಂದರ್ಭದಲ್ಲಿ ಅವುಗಳನ್ನು ಸಮರ್ಥಿಸಿಕೊಳ್ಳುವ ಪ್ರವೃತ್ತಿ ಕಾಣಸಿಗುತ್ತದೆ. ಇದು ಜೈನ, ವೀರಶೈವ, ವಚನ, ದಾಸ, ನವೋದಯ, ಪ್ರಗತಿಶೀಲ, ನವ್ಯ, ಮುಂತಾದ ಸಾಹಿತ್ಯ ಪ್ರಕಾರಗಳ ಚರ್ಚೆಯಲ್ಲಿ ಅವುಗಳ ಸಮಕಾಲೀನತೆಯ ಬಗೆಗಿನ ಅನಿವಾರ್ಯತೆಯ ಸಮರ್ಥನೆಯಂತೆ ಇಲ್ಲಿ ದಲಿತ ಸಾಹಿತ್ಯ ಸಮರ್ಥನೆಯ ಸಂದರ್ಭದಲ್ಲಿ ಅದರ ಮಿತಿ ಮತ್ತು ಪ್ರಶ್ನೆಗಳನ್ನು ಎತ್ತಿ ಚರ್ಚಿಸಲಾಗುವುದು.

ದಲಿತ ಕಾವ್ಯದ ಪ್ರಮುಖತೆ ಅಕ್ಷರ. ಇದು ಅಂಧಕಾರದ ಬದುಕಿನಿಂದ ಹೊರ ಬರುವುದು ಆಗಿದೆ.

ನರ್ತಿಸು ನರ್ತಿಸೆಲೆ ಶ್ಯಾರದೆ ನರ್ತಿಸು
ನೀ ನನ್ನ ನಾಲಿಗೆಯ ಮೇಲೆ ನರ್ತಿಸು ||ಪಲ್ಲ||
ತಾಡದೊಲೆಗೆ ಮೈಗೊಟ್ಟು
ಎನ್ನಲಗದುದಿಯ ತಾಳ ಲಯಕೆ
ಕಿವಿಗೊಟ್ಟು ನನ್ನವರ
ಭಿಡೆ ಇಲ್ಲದ ಹಾಡಿಗೆ
ನರ್ತಿಸು.......

ದೀನ ದಲಿತರ ಕೂಗಿಗೆ
ಶಬ್ದವಿಲ್ಲದ ಹಾಡಿಗೆ
ನಿಟ್ಟುಸಿರ ಖಡ್ಗವನು
ಕಣ್ಣ ಧಾರೆಯಲಿ ಮಸೆವ ಶಬ್ದಕೆ
ನರ್ತಿಸು......

'ನರ್ತಿಸು ಶಾರದೆ', ಪುಟ.೨ (ಅರವಿಂದ ಮಾಲಗತ್ತಿ)

ಮೌಖಿಕತೆಯ ಸಮುದಾಯಗಳಿಗೆ ವ್ಯಾವಹಾರಿಕ ಮತ್ತು ಬರವಣಿಗೆಯ ಭಾಷೆಯೊಂದು ಅತ್ಯಗತ್ಯ. ಅದು ಅಕ್ಷರ ಜ್ಞಾನದ ಮೂಲಕ ತಾನು ಹಿಂದೆಂದೂ ಬದುಕಲ್ಲಿ ಕಾಣದ ಪ್ರಾಪಂಚಿಕ ಹೊಳಹನ್ನು ನೀಡುವಂತಹದು. ದೀನತೆ, ದಲಿತತೆ ಹೊಂದಿದ ಸಮುದಾಯಗಳ ಅಗತ್ಯ ಅನಿವಾರ್ಯವಾಗಿ ಅಕ್ಷರ ಬೇಕಿರುತ್ತದೆ. ಅದಕ್ಕೆ ತಮ್ಮ ಪರಂಪರೆಯ ಬದುಕಿನ ಹಿನ್ನೆಲೆಯು, ಅವರ ಸಾಮಾಜಿಕ ಬದುಕಿನ ವಾಸ್ತವವು ಮುಖ್ಯವಾಗುತ್ತದೆ.

ಕಪ್ಪು ಮನುಜರು ನಾವು
ಕಪ್ಪು ಮನುಜರು
ಈ ಮಣ್ಣ ಕರಿಯೊಡಲ
ಕೆಸರಲ್ಲಿ ಮಿಂದು ಬಂದವರು........
.........................
ಮೈಚೆಲ್ಲಿ ಮಡಿ ಹಾಸಿದವರು
ಕಸಗುಡಿಸಿ ಹೇಲೆತ್ತಿದವರು
ಭರ್ತಿ ಪ್ರಾಯದ ನಮ್ಮಕ್ಕ ತಂಗಿಯರ
ಮಿಂಡತಿಯರಾಗ ಬಿಟ್ಟವರು

'ಕಪ್ಪು ಮನುಜರು' ಪುಟ-೩೩ (ಬಂಡಾಯಕಾವ್ಯ, ಇಂದೂಧರ ಹೊನ್ನಾಪುರ)

ಕಪ್ಪು ಮನುಜರು ಎಂಬುದೇ ಸೂಚಿಸುವಂತೆ ನಿರ್ಲಕ್ಷ್ಯಕ್ಕೆ ಒಳಗಾದವರು, ಕಡೆಗಣಿಸಲ್ಪಟ್ಟವರು ಎಂದು. ಕಪ್ಪು ಶ್ರಮದ ಸಂಕೇತ. ಪ್ರಪಂಚದ ಕಪ್ಪು ಜನ ಸಮುದಾಯ ಶ್ರಮದ ಬದುಕಲ್ಲೇ ಬಂದಂತವರು. ಇವರ ಶ್ರಮದ ಪ್ರತಿಫಲವ ಉಣ್ಣುವವರೇ ಬಿಳಿಯ ಜನರು. ಅಂತ ಕಪ್ಪು ಜನರ ಒಡಲ ಸಂಕೋಲೆಗಳನ್ನು ತುಂಬಿರುವಂಥದಾಗಿದೆ. ಈ ಕಾವ್ಯದಲ್ಲಿ ಸಾಮಾಜಿಕ ಬರ್ಬತೆಯ ಬದುಕಿನ ಸೂಕ್ಷ್ಮತೆಗಳ ಸಂಕೋಲೆಗಳು ಕಾಣುತ್ತವೆ.

ತಮ್ಮ ಸಮುದಾಯಗಳು ಸಾಗಿಬಂದ ಜಗತ್ತಲ್ಲಿ ಜಗತ್ತು ಎಲ್ಲವನ್ನು ಕಂಡರೂ ತಮಗೆ ಕಾಣದಂತೆ ವ್ಯವಸ್ಥೆಯಲ್ಲಿ ಇವರು ಬದುಕಿಬಂದದ್ದು ಕಂಡು ಬರುತ್ತದೆ.

ಅಪ್ಪನಪ್ಪನ ನುಡಿಗೆ ತಲೆತೆತ್ತು
ಅತ್ತತ್ತು
ತಮ್ಮೆದೆಯ ರಕ್ತವನೆ ಹುತ್ತುತ್ತು
'ಹಿಂದೂಯಿಸಮ್ ಗಾಂಧಿಯಿಸಮ್'ಗಳ ನಟ್ಟು
ಕಣ್ಣಿಟ್ಟು
ಕೊತ ಕೊತ ಕುದಿದು ಕರ್ರಗಾದವರು
ಬರೀ ಹೆಸರಿಗೆ ಬಸುರಾದವರು - ಇವರು
ನನ್ನವರು, ಅವರಿವರು ಕಾಲಲ್ಲಿ ವದ್ದು ವದ್ದು
ಮಾಡಿದ್ದಕ್ಕೆ ಹೊಲೆ ಮಾದಿಗರಾದವರು.

-'ಕಣ್ಣೀರ ಮಣ್ಣಲ್ಲಿ' ಪುಟ:೮೫ (ಬಂಡಾಯ ಕಾವ್ಯ; ಗೋವಿಂದಯ್ಯ)

ಕವನದ ಶೀರ್ಷಿಕೆಯೇ ಹೇಳುವಂತೆ 'ಕಣ್ಣೀರ ಮಣ್ಣಲ್ಲಿ' ನೊಂದ ಜನಗಳ ಬವಣೆಗಳು ಸ್ಪಷ್ಟಗೊಂಡಿವೆ.

ಆ ಕಣ್ಣೀರ ಮಣ್ಣೊಳಗೆ ನಾನೀಗ
ನೆನೆಯುತ್ತಿದ್ದೇನೆ ಮೊಳೆಯುತ್ತಿದ್ದೇನೆ.
ರಕ್ತ ಕಾರುವ ಸೂರ್ಯನ ಜೊತೆಜೊತೆಗೆ ಕೆಂಪಗೆ
ನಾ ನಾಳೆ ಖಂಡಿತಾ ಚಿಗುರುತ್ತೇನೆ.

ಭವಿಷ್ಯದ ಭರವಸೆಯಲ್ಲಿನ ತುಡಿತವು ತಾನು ಬದುಕುವ ವ್ಯವಸ್ಥೆಯಲ್ಲಿಯೇ ಹದಗೊಂಡು ಬೆಳವಣಿಗೆಯ ಕಾಳಜಿಯನ್ನು ಈ ಕವನವು ಹೊತ್ತುಕೊಂಡಿದೆ. ನಂತರದ ಇದೇ ಕವಿಯ ಮತ್ತೊಂದು ಕವನವು ತಲೆಮಾರುಗಳ ವಿಭಿನ್ನತೆಯಲ್ಲಿ ತನ್ನ ಅಸ್ತಿತ್ವವನ್ನು ಭದ್ರಗೊಳಿಸಿಕೊಳ್ಳುವತ್ತವಿದೆ. ಇದು ಇದ್ದುದನ್ನು ಸ್ವೀಕರಿಸಿಕೊಂಡು ಬದುಕುವುದು; ಅದರಲ್ಲಿನ ಫ್ಯೂಡಲ್ ವ್ಯವಸ್ಥೆಯೊಂದಿಗೆ ಸೇರಿಕೊಳ್ಳುವುದು ಮತ್ತು ಆ ವ್ಯವಸ್ಥೆಯಿಂದ ಹೊರಬಂದು ಅದರ ಪರ್ಯಾಯತೆಯನ್ನು ಕಟ್ಟಿಕೊಳ್ಳುವುದು. ಇಲ್ಲಿ ಶೋಷಣೆಯನ್ನು ಅನುಭವಿಸುವುದರಲ್ಲಿಯೂ ನಿಯತ್ತಿನ ಪ್ರಶ್ನೆಯು ಬಹಳ ಮುಖ್ಯವಾಗುತ್ತದೆ.

ಅಪ್ಪಾ
ನನಗೆ ಅಂದು ಬಂದಿದ್ದ ಇಂಟ್ರು
ವಿಗೊಂದು ಕೆಲಸ ಸಿಕ್ಕದೆ ಇಂದು
ಇನ್ನು ಹುಡಕ ಬೇಡಿ ನನ್ನ
ಸುಮ್ಮನೆ
ಗೌಡನ ಕೈಯಲ್ಲಿ ಪೇಪರಲ್ಲಿ
'ಕಾಣೆಯಾಗಿದ್ದಾನೆ' ಎಂದು ಬರೆಸ ಬೇಡಿ
..............................
ನಾನು ಬರುತ್ತೇನೆ
ಗೌಡನಿಗೆ ಹೇಳು...ಅಪ್ಪ...
ಮರೆಯದೇ ಹೇಳು
.....................
..........ಬಂದು ತೀರಿಸುತ್ತಾರೆಂದು.

'ನನ್ನುಡುಕುವ ಅಪ್ಪನಿಗೆ ಒಂದು ಪತ್ರ' ಪುಟ:೮೬ (ಗೋವಿಂದಯ್ಯ 'ಬಂಡಾಯ ಕಾವ್ಯ')

ಹಿರಿಯ ತಲೆಮಾರುಗಳು ತಮ್ಮ ಜೀವಿತವನ್ನು ಕಳೆಯುವುದು ಇಲ್ಲಿ ಪ್ರಮುಖವಾಗುತ್ತದೆ. ಆಧುನಿಕತೆಯ ಪ್ರಭಾವವು ತೆರೆದುಕೊಂಡಂತೆ ಅದು ದಲಿತ ಸಮುದಾಯಗಳಲ್ಲೂ ಪ್ರಭಾವದ ಪ್ರಖರತೆಯನ್ನು ಮೂಡಿಸಿದೆ. ಅದರಿಂದ ತನ್ನ ಕರುಳ ಬಳ್ಳಿಯ ಸಂಬಂಧವನ್ನು ಕತ್ತರಿಸಿಕೊಂಡು ಹೊರಬಂತು. ಕವನಗಳು ದಲಿತರಲ್ಲಿ ಹಾಗೆಯೇ ಮೂಡಿ ಬಂದವು. ಅವುಗಳಲ್ಲಿನ ಜವಾಬ್ದಾರಿಯು ಅವುಗಳ ಒಳಗೊಳಗೆಯೇ ಹೊಂದಿಕೊಂಡು ಬದುಕಲಾರದಂತ ಸ್ಥಿತಿ ಅಕ್ಷರ ಹೊಂದಿ ಹೊರಬಂದವರಲ್ಲಿ ಕಂಡುಬಂತು.

"ಒಂದು ಕಾಲಕ್ಕೆ ಇಂಡಿಯಾ ದೇಶದಲ್ಲಿ ಅಕ್ಷರವನ್ನು ಬಂಧಿಸಲಾಗಿತ್ತು, ಕಾಲಗುಣಕ್ಕೆ ತಕ್ಕಂತೆ ಅಕ್ಷರವು

ಬಂಧನವನ್ನು ಬಿಡಿಸಿಕೊಂಡಿತು. ಆಗ ಮುಟ್ಟಬಾರದ ಜನಾಂಗದ ಮನುಷ್ಯನು ಅಕ್ಷರ ಪ್ರಾಣ ಧರಿಸಿದನು. ಮುಟ್ಟಬಾರದ ಜನಾಂಗದ ಮನುಷ್ಯನು ಆಕಸ್ಮಿಕವಾಗಿ ಅಕ್ಷರವನ್ನು ಮುಟ್ಟಿದ್ದೇ ಆದರೆ ಆ ಅಕ್ಷರವು ತನ್ನ ಅಂತರಂಗ ಬಹಿರಂಗವನ್ನು ಹೇಗೆ ನುಡಿಯಬಲ್ಲದು ಎಂಬುದನ್ನು ದಲಿತ ಬರಹ ತೋರಿಸುತ್ತಿದೆ. ಇದುವರೆಗೆ ಯಾವ ಕನ್ನಡ ಸಾಹಿತ್ಯ, ಕಲೆ, ಸಂಸ್ಕೃತಿ ಮುಂತಾಗಿ ಅಸ್ಪೃಶ್ಯಶೂದ್ರ ಹಾಗೂ ಅವಮಾನಿತ ಜಾತಿಯ ಮನುಷ್ಯನ ಸೂಕ್ಷ್ಮ ಅನುಭವ ಲೋಕವನ್ನು ಒಳಗೊಳ್ಳದೆ ಒಂದು ರೀತಿಯಲ್ಲಿ ಒಂಟಿ ಮನುಷ್ಯನಂತಾಗಿತ್ತು. ಇತ್ತೀಚೆಗೆ ಅವಮಾನಿತ ಅಸ್ಪೃಶ್ಯನು ಬರವಣಿಗೆಯ ಲೋಕವನ್ನು ಹೊಕ್ಕನು. ಈ ಕಾರಣದಿಂದ ನಮ್ಮ ಸಾಹಿತ್ಯ, ಸಂಸ್ಕೃತಿ ಅಸ್ಪೃಶ್ಯ ಜಾಗತಿಕ ಅನುಭವವನ್ನು ಒಳಗೊಳ್ಳುವ ಮೂಲಕ ಇನ್ನೊಂದು ಕಣ್ಣು ಬಂದಂತಾಯ್ತು".[೯] ಅಕ್ಷರ ಬಲ್ಲ ದಲಿತರಿಂದ ಕಾವ್ಯಗಳು ರಚನೆಗೊಂಡವು. ಇಲ್ಲಿ ವ್ಯಕ್ತಿ, ಸಮುದಾಯಗಳೇ ಪ್ರಶ್ನೆಯಾಗುತ್ತವೆ. ಅವು ಕಾವ್ಯದ ದನಿಯಲ್ಲಿ ತಮ್ಮಂತೆ ಮಾತಾಡಿಕೊಂಡರೆ ತಮ್ಮ ಹಿನ್ನೆಲೆಯಿಂದ ಹೊರಬರಲು ಸಾಧ್ಯವಾಗುವುದಿಲ್ಲ. ಅಲ್ಲಿ ಯಾವುದೋ ಬಂಧನಕ್ಕೆ ಒಳಗಾದಂತೆ ಆಗುತ್ತಾರೆ. ಆದ್ದರಿಂದ ಈ ಕಾವ್ಯಗಳಲ್ಲಿ ದುಃಖ ದುಮ್ಮಾನಗಳು ಪದೇ ಪದೇ ಹೊರಹೊಮ್ಮುತ್ತವೆ. ಈ ದಲಿತ ಸಂವೇದನೆಯ ಕಾವ್ಯಕ್ಕೆ ಒಳಗೊಳ್ಳುವ ಸಾಮಾಜಿಕ ಯಜಮಾನಿಕೆಯಿಂದ ಬದುಕಿನ ಸೂಕ್ಷ್ಮ ಒತ್ತಡಗಳು ಸ್ಪಷ್ಟವಾಗುತ್ತ ಪ್ರಕಟಗೊಳ್ಳುತ್ತವೆ.

ಬೇಡವೆಂದರೂ ನುಗ್ಗುತ್ತವೆ.
ಕಾವ್ಯದೊಳಗೆ
ರಕ್ತ ದುಃಖ
ಹಸಿದ ಮಕ್ಕಳ ಕಣ್ಣುಗಳು
ಹೇಗೆ ತಪ್ಪಿಸಿಕೊಳ್ಳಲಿ ಹೇಳಿ
ಮನುಷ್ಯರಂತೆ ಮಾತಾಡಿ........ 'ಬೇಲಿಯಾಚೆಯ ಹೂವುಗಳು' ಪುಟ-೬

ದಲಿತರ ಕೇರಿಗಳ ವಾಸ್ತವ ಚಿತ್ರಣವನ್ನು ಕಟ್ಟಿಕೊಡುವ ಕವನವು ಅವರ ಬದುಕಿನ ಆಂತರ್ಯವನ್ನು ಸೂಕ್ಷ್ಮದಿಂದ ಸ್ಪರ್ಶಿಸುತ್ತವೆ. ಈ ಕವನ ಗ್ರಾಮಗಳಲ್ಲಿನ ದಲಿತರ ಕೇರಿಯ ನೋಟವನ್ನು ಕೊಡುತ್ತವೆ. ದಲಿತ ಕೇರಿಗಳು ಇರುವುದು ಈ ಕವನದಲ್ಲಿ ರಾಚುವಂತಿದೆ. ಇಲ್ಲಿ ಸಾಮಾಜಿಕ ವ್ಯವಸ್ಥೆಯ ಶ್ರೇಣಿ ವ್ಯವಸ್ಥೆಯ ಅತ್ಯಂತ ಕೆಳಸಮುದಾಯಗಳು; ದುಡಿಯುವ ಮತ್ತು ಅದರ ವಾಸ್ತವಕ್ಕೆ ಗುರಿಯಾಗಿರುವುದು ಇಲ್ಲಿ ಪ್ರಧಾನವಾಗಿ ಕಂಡು ಬರುವಂತಹದು.

ಪ್ರತಿ ಊರೂರಿನ ಹೊರಗೆ
ಮುರುಕು ಗುಡಿಸಲುಗಳ ಕೊಂಪೆ.
ದಾರಿದ್ರ್ಯದ ತಾಣದಲಿ ಕೊಳಚೆಯ ಒಡಲಿನಲಿ
ನರಳುತ್ತಿರುವ ಅಸ್ಥಿಪಂಜರಗಳು
.........................
ರೋಗ ರುಜಿನಗಳ ತಾಣವಿದು
ಮೇಲಿನವರ ತೀಟೆಗಳಿಗೆ ಮೈದಾನವಿದು. 'ದಲಿತ ಕಾವ್ಯ' ಪುಟ: ೧೫ (ಗುರುಪ್ರಸಾದ್ ಕೆರಗೋಡು)

ಜಾತಿ ವ್ಯವಸ್ಥೆಯಿರುವ ಭಾರತದ ಜಾತಿಗಳ ಪ್ರಾಬಲ್ಯದ ಆಧಾರದಂತೆ ಅವರು ಬದುಕುವ ವಾತಾವರಣಗಳು ಸೃಷ್ಟಿಗೊಂಡಿರುತ್ತವೆ. ಅಷ್ಟೇ ಅಲ್ಲ. ಅದಕ್ಕೆ ಅಲ್ಲಿಯ ಯಜಮಾನಿಕೆಯು ನಿಯಂತ್ರಿಸುತ್ತಿರುತ್ತದೆ. ಅದು ದಲಿತರನ್ನು

ಈಗ ಇರುವ ಸ್ಥಿತಿಗೆ ತಂದು ಒಡ್ಡಿದೆ.

ದಲಿತರೆಂದರೆ ಜನರಿಗೆ
ಅಸಹ್ಯ ಸಿಟ್ಟು ರೋಷ
ಪ್ರಾಣಿಗಳೆಂದರೆಷ್ಟೋ
ಅತಿ ಪ್ರೀತಿ ವಾತ್ಸಲ್ಯ.

'ದಲಿತ ಕಾವ್ಯ' ಪುಟ: ೧೩ (ಗಂಗಾರಾಂ ಚಂಡಾಲ)

ತನ್ನ ಗೂಡನ್ನು, ಗೂಡಿನೊಳಗಿನ ಅಳಲನ್ನು ತುಂಬಿಕೊಂಡ ಈ ಕವನವು ಅ ಆ ನೆನಪನ್ನು ಮೂಡಿಸಿರುವುದು ಇಲ್ಲಿ ಕಂಡುಬರುತ್ತದೆ. ಇವು ಅಕ್ಷರ ಕಲಿಯದ ದಲಿತನ ಮನೆಯ ಕೂಸು; ಅಕ್ಷರದ ಜಗತ್ತಿಗೆ ಬರುವ ಸೂಕ್ಷ್ಮ ಗ್ರಹಿಕೆಯೂ ಹೌದು.

ಕಣ್ಣು ಬಿಟ್ಟು ನಾನು ಕೈಕಾಲು ಆಡಿಸಿದಾಗ:
ಕತ್ತಲೆಗೂಡಿನ ಅವ್ವನ ಕಣ್ಣೊಳಗೆ
ಒಲೆ ಉರಿಯುತ್ತಿತ್ತು.
ಕಪ್ಪು ಕೈಕಾಲುಗಳ ಬೆಂಕಿಗೆ ಒಪ್ಪಿಸಿಕೊಳ್ಳುತ್ತಾ
ಅಪ್ಪ ಮೋಟು ಬೀಡಿಯೊಂದಿಗೆ ಉಸಿರಾಡಿದ
ಕುದಿವ ಗಂಜಿಗೆ ಜೀವಗಳು ಕುದಿಯುತ್ತಿದ್ದವು.
..................
ಕತ್ತಲೆ ಬೋರ್ಡಿನ ಮೇಲೆ ಕಲಿತ ಅ ಆ
ಅಕ್ಷರಗಳ ನಡುವೆ ಅವ್ವ ಅಪ್ಪನ ಆಶೆಗಳು ಸಿಕ್ಕಿದವು

- 'ದಲಿತ ಕಾವ್ಯ' ಪುಟ:೧೭ (ಗೋವಿಂದಯ್ಯ)

ಅಕ್ಷರವು ದಲಿತರನ್ನು ಪ್ರಶ್ನಿಸುತ್ತದೆ ಮತ್ತು ಉತ್ತರಕ್ಕೆ ಯೋಚನೆಗೀಡು ಮಾಡುತ್ತದೆ. ಅಲ್ಲದೆಯೂ ಈ ಹೊತ್ತಲ್ಲಿನ ಬೆಳವಣಿಗೆಗೆ, ಬದಲಾವಣೆಗೆ ದಲಿತರ ಪಾತ್ರವನ್ನು, ಜೀವನವನ್ನು ಸಮಾಲೋಚಿಸಿ ಹೊರಬಂದ ಕವಿತೆ ಇದು. ಕವಿಯು ಚರಿತ್ರೆಯ ಹಿಂಪುಟಗಳ ಇಂದಿನ ಫಲಾಪೇಕ್ಷೆಯು ಇಲ್ಲಿ ಮುಖ್ಯವಾಗುತ್ತದೆ.

ಇಂಡಿಯಾ
ನಾನೊಬ್ಬ ಕಲಿತ ಬಿಸಿರಕ್ತದ ಕಪ್ಪು ಹುಡುಗ
ಇಂದಿನ ಅಸಮಾನತೆ, ದಬ್ಬಾಳಿಕೆಗೆ, ಶೋಷಣೆಗೆ, ಜಾತಿ ವ್ಯವಸ್ಥೆಗೆ
ಊಳಿಗಮಾನ್ಯ ಪದ್ಧತಿಗೆ ಕ್ರೂರ ಹಿಂಸೆಗೆ
ಎದುರಾಗಿ ಬುಲೆಟ್ ತುಂಬಿ ರೆಡಿಯಾದ ಬಂದೂಕ.
..................
ನಾನು, ನನ್ನವರು ಬದುಕಬೇಕು
ನಿಜ ಬದುಕ ಬದುಕಬೇಕು

ಆದ್ದರಿಂದಲೇ ಸುಮ್ಮನೆ ಕೂರುವುದಂತು
ನನ್ನಿಂದ ಕಂಡಿತಾ ಸಾಧ್ಯವಿಲ್ಲ

- 'ದಲಿತ ಕಾವ್ಯ' ಪುಟ:೧೦೩-೧೦೫ ಕಪ್ಪು ಚಿರತೆಯ ಡಂಗುರ (ರಾಮದೇವರಾಕೆ)

ಬದಲಾಗುತ್ತಿರುವ ಸಾಂಸ್ಕೃತಿಕ ಹೊತ್ತಿನಲ್ಲಿ ಅಕ್ಷರ ಕಲಿತ ದಲಿತ ಯುವಕರ ಮುಖವು ತನ್ನ ವೈಯಕ್ತಿಕ ಬದುಕಿಗಷ್ಟೇ ಸೀಮಿತಗೊಳ್ಳಲಿಲ್ಲ. ಅದು ಸಮುದಾಯದಿಂದ ಪ್ರಶ್ನೆಯನ್ನು ಸ್ವೀಕರಿಸಿ ಗರ್ಭೀಕರಿಸಿಕೊಂಡಿತು. ಅದನ್ನು ಹೊರಹಾಕಲು ಹಲವು ಸ್ವರೂಪವನ್ನು ಪಡೆದು ನಿಂತಿತು. ತನಗೆ ತಾನೇ ಆಶ್ಚರ್ಯಗೊಂಡು ಯೋಚಿಸುವಂತೆ ತಮ್ಮ ಸಮುದಾಯಗಳ ವಾಸ್ತವ ಸ್ಥಿತಿಯು ಕಂಡಿತು.

ದುಡಿಮೆಯೊಂದಿಗಿನ(ಕೃಷಿ) ದಲಿತರ ಸಂಬಂಧವು ಬೇರೂರಿ ನಿಂತು ಫಲವನ್ನು ಕೊಡುವಂತಹದು. ಇಲ್ಲಿ ದಲಿತರಿಗೆ ಅನ್ಯ ಅವಕಾಶಗಳಿಲ್ಲದಿದ್ದಾಗ ಅವರು ಅನಿವಾರ್ಯವಾಗಿ ಬದುಕಿನ ಮೂಲವಾಗಿದ್ದ ಕೃಷಿಯಲ್ಲಿ ತೊಡಗಿಕೊಂಡರು. ಭೂಮಿಯು ಭೂಮಾಲಿಕನ ಅಧೀನದಲ್ಲಿದ್ದು ಅವರ ಅಡಿಯಾಳಾಗಿ ಬದುಕು ಸಾಗಿಸುತ್ತಾ ಬಂದರು. ಕೃಷಿಗೆ ಸಂಬಂಧಿಸಿದ ಕಸುಬುಗಳನ್ನು ಕಲಿತರು. ಭೂಮಾಲಿಕರಲ್ಲಿದ್ದ ಆರ್ಥಿಕ ಮೂಲಗಳಿಂದ ಅವರಿಗೆ ಮನೆಯನ್ನು ಮತ್ತು ನಂಬಿಕೆ ಸಂಪ್ರದಾಯ ಆರಾಧನೆಗೆ ಗುಡಿ ಗೋಪುರಗಳನ್ನು ಕಟ್ಟಿಕೊಟ್ಟರು. ಸಹಸ್ರ ವರ್ಷಗಳಿಂದ ಅನುಭವಿಸಿದ, ದುಡಿದ ಫಲವು ದಲಿತರಿಗೆ ಅದರ ಯಜಮಾನಿಕೆಯು ದಕ್ಕಿಸಿಕೊಳ್ಳಲು ಎಡೆ ಮಾಡಿಕೊಡಲಿಲ್ಲ. ಅದಕ್ಕೆ ಅವರು ಕಟ್ಟಿದ ಬೆಲೆಯಂತೆ ಕಾಲಹಾಕುತ್ತಾ ಬಂದರು.

ಪಿಪ್ರಾದಲ್ಲಿ ನನ್ನಜನರು
ಕೂಲಿಸಾಲದೆಂದರು
ಜಮೀನುದಾರ ರಾಕ್ಷಸರು
ಗುಂಡು ಹೊಡೆದು ಕೊಂದರು.
ಭೂ ಒಡೆಯರ ಭೂಮಿಯಲ್ಲಿ
ದುಡಿಮೆಯ ದಾರಿಯಲ್ಲಿ
ರಕುತವೆಲ್ಲಾ ಚೆಲ್ಲಿ
ಮೂಳೆಯಾಗಿ ನಿಂತರು
..................
ನನ್ನ ಜನರು ಇಂದು ಅವರು
ಎಲ್ಲ ತಿಳಿಯುತ್ತಿರುವರು
ಸಾವು ನೋವು ಸುಡಲು ಅವರು
ಮೇಲೆ ಏಳುತ್ತಿರುವರು

'ದಲಿತ ಕಾವ್ಯ' (ನನ್ನ ಜನರು) ಪುಟ: ೧೦೧ (ಎಚ್.ರಾಮಕೃಷ್ಣ)

ಕವಿಯ ಆಶಯ ಭವಿಷ್ಯದಲ್ಲಿನ ಬದುಕಲ್ಲಿ ಬವಣೆಗಳಿಂದ ಮುಕ್ತಿ ಹೊಂದಿ, ಅವರೂ ಸಮಾಜದ ವ್ಯಕ್ತಿಯಾಗಿ ಏಳುವುದರೊಂದಿಗೆ ಶೋಷಕ ಸಮುದಾಯಗಳ ಎದೆ ಮೆಟ್ಟಿ ನಿಲ್ಲುವ; ಮತ್ತು ಅವುಗಳಿಗೆ ಅದರಿಂದ ತಕ್ಕ ಶಾಸ್ತಿಯನ್ನು ಕಲಿಸುವ ಆಶಯವು ಕವಿಗಿದೆ. ಇಂತಹ ಕವನ ಕನ್ನಡ ದಲಿತರ ಸಂಕಷ್ಟಗಳ ದನಿಯಾಗಿ ದಲಿತ ಸಾಹಿತ್ಯದ ಪ್ರಾರಂಭದಲ್ಲಿ

ಬಿರುಸಾಗಿ ಕಂಡುಬಂದದ್ದು ಕಾಣುತ್ತೇವೆ. ಇಲ್ಲಿ ತಮ್ಮ ಸಮುದಾಯಗಳ ಜನರು ಯಾರು? ಎಂಬುದು ಮುಖ್ಯ. ಇದರ ಹಿಂದಿನ ಸತ್ಯತೆ ಏನು ಎಂಬುದುನ್ನು ನೋಡಬೇಕಾಗುತ್ತದೆ. ಎಂತಹ ಕಾಲದಲ್ಲಿ, ಎಂತಹ ವ್ಯವಸ್ಥೆಯಲ್ಲಿ, ಎಂತಹ ಜನರು ಬದುಕುತ್ತಿದ್ದಾರೆ ಎಂಬುದನ್ನು ದಲಿತ ಕವನಗಳು ತಿಳಿಯಪಡಿಸಿದವು. ಪಟ್ಟಭದ್ರ ಫ್ಯೂಡಲ್ ಬದುಕು, ಶ್ರೇಣೀಕೃತ ಅಸಮಾನತೆಯ ಸಾಮಾಜಿಕ ಬದುಕಲ್ಲಿ ತಮಗೆ ದಕ್ಕಬೇಕಾದುದನ್ನು ಪಡೆಯಲು ಆಗಲಿಲ್ಲ. ಜಾತಿಕೇಂದ್ರಿತವಾಗಿಯೇ ಎಲ್ಲವನ್ನು ಕೇಂದ್ರೀಕರಿಸಿ ನೋಡುವ ಮನೋಭಾವವು ಬದುಕಿನ ಎಲ್ಲಾ ರಂಗದಲ್ಲೂ ಪ್ರವೇಶ ಮಾಡಿತು. ಊಳಿಗಮಾನ್ಯವ್ಯವಸ್ಥೆಯಿಂದ ಸಾಮಾಜಿಕ ಬದಲಾವಣೆಯ ಎಲ್ಲ ರಂಗಗಳಲ್ಲಿಯೂ ಪಟ್ಟಭದ್ರ ಹಿತಾಸಕ್ತಿಗಳು ಹಂಚಿ ಹೋಗಿದ್ದವು. ಅಕ್ಷರ ಕಲಿತ ದಲಿತ ಸಮುದಾಯಗಳು ತಮ್ಮಿಂದ ಹೊರಟ ದನಿಯನ್ನು ಕಾವ್ಯ, ಕವನ, ಮುಂತಾದ ಸೃಜನಶೀಲತೆಯ ಕಡೆಗೆ ಹರಿಸಿದರು. ಏಕೆಂದರೆ ಅಕ್ಷರ ಹೊಂದಿದ ದಲಿತರ ನೇರ ಪ್ರತಿಭಟನೆಗೆ ಸಮಾಜದಲ್ಲಿನ ಯಜಮಾನಿಕೆಯನ್ನು ಬಗ್ಗುವ ಸ್ಥಿತಿಯಲ್ಲಿಲ್ಲ. ಅವುಗಳು ಸಮಾಜದಲ್ಲಿ ಭದ್ರವಾಗಿ ಕೀಳಲಾರದಂತ ಬೇರನ್ನು ಬಿಡಲು ಪ್ರಾರಂಭಮಾಡಿ ಸಾವಿರಾರು ವರ್ಷಗಳು ಕಳೆದಿದ್ದವು. ಅವು ಇನ್ನೂ ತಮ್ಮ ಬೇರನ್ನು ಬಿಡುತ್ತಲೇ ಇವೆ.

ಹಸಿವಿನಿಂದ ಸತ್ತೋರು ಸೈಜುಗಲ್ಲು ಹೊತ್ತೋರು
ವದೆಸಿಕೊಂಡು ವರಗಿದೋರು ನನ್ನ ಜನಗಳು
............................
...........................
ಹೊಲವನುತ್ತು ಬಿತ್ತೋರು ಬೆಳೆಯ ಕೊಯ್ದುಬೆವರೋರು
ಬಿಸಿಲಿನಲ್ಲಿ ಬೇಯ್ಯೋರು ನನ್ನ ಜನಗಳು
............................
............................
ಹೇಳಿದಂತೆ ಕೇಳುತಾರೆ ನನ್ನ ಜನಗಳು
ಗಾಳಿಯಲ್ಲೆ ಬಾಳುತ್ತಾರೆ ನನ್ನ ಜನಗಳು

-'ನಮ್ಮ ಕನ್ನಡ ಕಾವ್ಯ', 'ನನ್ನ ಜನಗಳು' ಪುಟ:೪೪೬ (ಸಿದ್ದಲಿಂಗಯ್ಯ)

ತನ್ನ ಜನಗಳು ಯಾವ ಯಾವ ಬಗೆಯಲ್ಲಿ ಶೋಷಣೆಗೆ ಒಳಗಾಗಿದ್ದಾರೆಂಬುದು ಇಲ್ಲಿ ಕಾಣುತ್ತದೆ. ಅವುಗಳು ತಾವು ನಡೆಸುವ ಕ್ರಿಯೆಗಳಲ್ಲಿ ಸೇರಿಕೊಂಡಿರುವುದು ಕಂಡುಬರುತ್ತದೆ.

ಹಸಿದ ಹೊಟ್ಟೆಯಲ್ಲಿ ಹರುಕಬಟ್ಟೆಯಲಿ
ಹಗಲಿರುಳು ದುಡಿದು ದಣಿದ
ಜಾತಿ ಮತಗಳ ಬೆಂಕಿಯಲ್ಲಿ ಬೆಂದು ಬೂದಿಯಾಗಿ
ಭವಿಷ್ಯದ ಬಗ್ಗೆ ಅರಿವಿಲ್ಲದೆ
ನನ್ನ ಮುಗ್ಧ ಕೂಸುಗಳು
ಕೆಂಪು ಕಮಲಕೆ ಕಾದು ನಿಂತಿವೆ
ನನ್ನವರ ಜೀವಗಳು.

'ದಲಿತ ಕಾವ್ಯ' ಪುಟ:೭೩ (ವಿ.ಮುನಿವೆಂಕಟಪ್ಪ)

ಬದುಕಿನ ಬಯಲಾಗ ನನ್ನವರು ||ಅಣ್ಣ||
ಓಟು ಕೊಟ್ಟಾರ ನನ್ನವರು
ಬದುಕಿನ ಬಯಲಾಗ ಓಟು ಕೊಟ್ಟಾರ
ಭಾಷಣ ಪಡದಾರ ನನ್ನವರು
......................
ದಣಿವಾಗಿ ದುಡಿದು ನನ್ನವರು ||ತಂಗಿ||
ಕೂಳಿಲ್ಲದೆ ಕುಂತಾರ ನನ್ನವರು
ದಣಿವಾಗಿ ದುಡಿದು ಕೂಳಿಲ್ಲದೆ ಕುಂತಾರ
ಗೌಡರ ಕಾಲಾಗ ನರಳ್ಯಾರ ನನ್ನವರು

- 'ದಲಿತ ಕಾವ್ಯ' ಪುಟ:೨೦೦ 'ನನ್ನವರು' (ಈರಣ್ಣ ಕೋಸಗಿ)

ದಲಿತರ ಜೀವನ, ಸಂಸ್ಕೃತಿ, ಸಂಪ್ರದಾಯದಲ್ಲಿನ ಬದುಕನ್ನು ದಲಿತ ಕವಿಗಳು ಅವರವರ ನೆಲೆಯಲ್ಲಿ ನಿಂತು ಚಿತ್ರಿಸಿದ್ದು 'ದಲಿತ ಕಾವ್ಯ'ದ ಮಾದರಿಗಳಲ್ಲಿ ಒಂದು. ಅವುಗಳ ವಿಭಿನ್ನ ಬಗೆಯಲ್ಲಿ ಅಸಹಾಯಕತೆಯು ಒಂದು ಅಂಶವಾದರೆ ಅದರ ಆಕ್ರೋಶವು ಮತ್ತೊಂದು ಅಂಶವನ್ನು ಹೊಂದಿರುವಂತಹದು. ಇವುಗಳಲ್ಲಿಯೇ ವೇದನೆಯನ್ನು ಸ್ಮರಿಸುವಂತಹದು ಉಂಟು.

ನೆನ್ನೆದಿನ
ನನ್ನಜನ
ಬೆಟ್ಟದಂತೆ ಬಂದರು
ಕಪ್ಪು ಮುಖ ಬಿಳಿಗಡ್ಡ ಉರಿಯುತಿರುವ ಕಣ್ಣುಗಳು
ಹಗಲುರಾತ್ರಿಗಳನು ಸೀಳಿ ನಿದ್ದೆಯನ್ನು ಒದ್ದರು
ಕಂಬಳಿಗಳು ಕೊರಗಿದವು ಎದ್ದೇಳುವ ರೊಚ್ಚಿಗೆ
ಭೂ ಕಂಪನವಾಯಿತು ಅವರ ಕುಣಿದ ಹುಚ್ಚಿಗೆ
................................
ಹೋರಾಟದ ಸಾಗರಕ್ಕೆ
ಸಾವಿರಾರು ನದಿಗಳು

-'ದಲಿತ ಕಾವ್ಯ' ಪುಟ : ೧೩೦ ಸಾವಿರಾರು ನದಿಗಳು (ಸಿದ್ಧಲಿಂಗಯ್ಯ)

ಅಸಮಾನತೆ, ವಿರುದ್ಧದ ದನಿಯು ಇಲ್ಲಿ ಮುಖ್ಯವಾಗುತ್ತದೆ. ಯಜಮಾನಿಕೆಯ ಶೋಷಕ ಪ್ರವೃತ್ತಿಯ ಪ್ರವಾಹಕ್ಕೆ ಎದೆಕೊಟ್ಟು ನಿಂತಂತ ಬದಲಾದ ದಲಿತ ಸಮೂಹವು ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು ಸಂಗಮದ ಬಯಕೆಯು ಕವಿಗೆ ವರ್ತಮಾನ ಮತ್ತು ಭವಿಷ್ಯದ ಕಾಲಮಾನಕ್ಕೆ ಮುಖ್ಯವಾಗುತ್ತದೆ. ಭೂತ ಕಾಲವು ಅದಕ್ಕೆ ತಳಪಾಯವನ್ನು ಕೊಡುತ್ತದೆ. ಇದೇ ರೀತಿಯ ಇನ್ನೊಂದು ಕವನ

ಬರುತಿಹೆವು ನಾವು ಬರುತಿಹೆವು
ಬರುತಿಹೆವು ನಾವು ಬರುತಿಹೆವು
ಯುಗ ಯುಗಳಿಂದ ನೀವ್ ತುಳಿದ ಜನಗಳ

ಕೊರಳ ದನಿಗಳು ನಾವು
ಅಸಮಾನತೆಯನು ಸುಟ್ಟುಬಿಡಲು ಬುಗಿಲೆದ್ದ ಬೆಂಕಿಯ ಜ್ವಾಲೆಗಳು.

-'ದಲಿತ ಕಾವ್ಯ' ಪುಟ : ೯೮ 'ಬರುತಿಹೆವು ನಾವು' (ಕೆ. ರಾಮಯ್ಯ)

ಶೋಷಣೆಯಿಂದಲೇ ಎದ್ದು ನಿಂತು, ಅದರಿಂದಲೇ ಶಸ್ತ್ರವನ್ನಾಗಿ ಮಾಡಿಕೊಂಡು ಶೋಷಕ ಸಮುದಾಯದ ನಾಶದ ಕಲ್ಪನೆಯ ಕವನವಿದು. ಇಲ್ಲಿನ ತೀವ್ರ ಶೋಷಣೆಯ ಶೋಷಕನ ಪ್ರತಿಕ್ರಿಯೆಯು ಶತ್ರುವಾಗಿ ಸುತ್ತುವುದಾಗಿದೆ. ಇನ್ನೊಂದು ಕವನದಲ್ಲಿ

ನನ್ ಮ್ಯಾಲೆ ನಿಂತ್ಕಂಡ್ ತುಳೀತಿರೋ ಈ ಬಂಗ್ಲೆ
ಕ್ಯಳೀಕ್ ಬೀಳಂಗೆ
ಸೌದೆ ಸಿಗದಂಗ್ ಸಿಗಿತಿನಿ, ಸಾವ್ಕಾರಿಮಯ್ಕ
ಕಳ್ಳು, ಪಚ್ಚಿ ಬಗಿತಿನಿ, ಕುಟ್ತಿನಿ
ಗುಂಟ್ಮೂಳಿ ಕೊಬ್ಬ
ಕಡಿತಿನಿ ಗಟಗಟನ ಹ್ಯಂಡ ಕುಡ್ದಂಗೆ
ಸಾವ್ಕಾರಿ ರಕ್ತನ
ನಾ ಮೂಳೆ, ನಾ ಇಂಗೇ ಇರಲ್ಲ
ಕೂಗ್ತಿನಿ, ಸಿಡಿತಿನಿ, ಮನುಷ ಆಯ್ತಿನಿ

'ಒಂದು ಮೂಳೆಯ ಹಾಡು' (ಸಿದ್ಧಲಿಂಗಯ್ಯ)

ಇಲ್ಲಿನ ಕವನಗಳು ನಾಳಿನ ಕನಸನ್ನು; ನೆನ್ನೆಯ-ಇಂದಿನ ವಾಸ್ತವವನ್ನು ಬಿಂಬಿಸುವಂತವು. ಇವು ತಪ್ಪು ಮಾಡಿದವರ ಮುಖಕ್ಕೆ ಬಡಿಯುವಂತಿವೆ. ಇಲ್ಲಿ ದಲಿತರ ಸ್ವಾಭಿಮಾನವನ್ನು ಎಚ್ಚರಿಸುವುದರ ಜೊತೆಗೆ ದಲಿತರಲ್ಲಿ ಆತ್ಮಾಭಿಮಾನವನ್ನು ಮೂಡಿಸಲು ತನ್ನ ಪರಿಸರದ ವಸ್ತುವನ್ನು ಎತ್ತಿಕೊಂಡು ಅದನ್ನು ಭಾಷೆಯನ್ನಾಗಿ ಮಾಡಿಕೊಂಡು ಬಂದವು. ಆಧುನಿಕಗೊಳ್ಳುತ್ತಿರುವ ಜಗತ್ತಲ್ಲಿ ದಲಿತರ ಎಚ್ಚರವನ್ನು ಈ ಕವನ ನೀಡಿದ್ದು ಇದರ ಮುಖ್ಯವಾದ ಸಂಗತಿ.

ಒಂದುಕಡೆ ಆಧುನಿಕತೆಗೆ ದೇಶವು ತೆರೆದುಕೊಳ್ಳುತ್ತಿದೆ. ಅದು ಬದುಕುವ ವ್ಯವಸ್ಥೆಯಲ್ಲಿ ಪ್ರಜಾಪ್ರಭುತ್ವ ಮಾದರಿಯನ್ನು ಒಳಗೊಂಡಿದ್ದರೂ ಮೂಲಭೂತವಾದಿತನ ತಾಂಡವಾಡಿ ಜಾತಿ ವ್ಯವಸ್ಥೆಯಲ್ಲಿನ ಅರಾಜಕತೆಗೆ ಅವುಗಳ ಮೀರಿದ ಅವಮಾನವೀಯತೆಗೆ ದಲಿತ ಕಾವ್ಯಗಳು ದಲಿತರನ್ನೇ ಎಬ್ಬಿಸಿದವು. ಇವು ಬರೀ ಕಾವ್ಯವಾಗಿರದೆ ಭವಿಷ್ಯದ ದೀವಿಗೆಯಾದವು. ತಮ್ಮ ಅಂತರಾಳದ ಅಳಲನ್ನು ಹಂಚಿಕೊಂಡವು. ದಲಿತ ಕಾವ್ಯವು ದಲಿತರ ಕೈಗನ್ನಡಿಯಾದದ್ದು ಮಾತ್ರವಷ್ಟೇ ಅಲ್ಲ; ಅದು ಶೋಷಿತ ಸಮುದಾಯಗಳ ಅರಿವನ್ನು ಮೂಡಿಸುವಲ್ಲಿ ಮುಂದಾಯಿತು. ಇದಕ್ಕೆ ಒಪ್ಪಿತವಲ್ಲದ ಮನಸ್ಸುಗಳು ಇದರ ಅರ್ಥಕಲ್ಪನೆಯನ್ನು ಬೇರೆಯೆಡೆಗೆ ಕೊಂಡೊಯ್ಯಲು ಪ್ರಯತ್ನಿಸಿದವು. ಇಲ್ಲಿ ದಲಿತ ಕಾವ್ಯ ಅಥವ ಸಾಹಿತ್ಯ ಚರ್ಚೆಯಲ್ಲಿ ಸ್ವೀಕರಿಸುವಿಕೆಯು ಬಹಳ ಮುಖ್ಯವಾಗಬೇಕಾದುದಾಯಿತು. ದಲಿತರು ಸಂಘಟನೆಗೊಂಡು ಹೊರಡುವ ಹೋರಾಟಕ್ಕೆ ಪಟ್ಟಭದ್ರ ಸಮಾಜವನ್ನು ಎದುರು ಮಾಡಿಕೊಂಡರು. ಅವರೆದುರು ತೆಗೆದುಕೊಂಡ ನಿರ್ಧಾರವು ಕಾವ್ಯದಲ್ಲಿ ಮುಖ್ಯವಾಗಿ ನಿಂತವು. ಅವರು ಮುಳ್ಳಾದವರಿಗೆ ಮುಳ್ಳಾದರು.

ದಲಿತರು ಬರುವರು ದಾರಿ ಬಿಡಿ
ದಲಿತರ ಕೈಗೆ ರಾಜ್ಯಕೊಡಿ
ಕೋಟಿ ಕೋಟಿ ಕನಸುಗಳೊಂದಿಗೆ
ಹತ್ತಿ ಉರಿಯುವ ಮನಸುಗಳೊಂದಿಗೆ
ಗುಡುಗು ಮಿಂಚಿನ ಘೋಷಣೆಯಲ್ಲಿ
ಭೂಕಂಪನ ಭಾಷೆಯಲ್ಲಿ
ಬಂತೋ ದಲಿತರ ಮೆರವಣಿಗೆ
ನೆಲಕೆ ಕಾಲುಗಳ ಬರವಣಿಗೆ

'ಸಾವಿರಾರು ನದಿಗಳು' ಪುಟ: ೧ (ಸಿದ್ಧಲಿಂಗಯ್ಯ)

ರಾಜ್ಯಕೊಡಿ ಎಂಬುದು ಅಧಿಕಾರ. ಅಧಿಕಾರವು ಸಮುದಾಯವನ್ನು ಒಂದು ಸ್ಥಿತಿಗೆ ತರುವುದೆಂಬುದು ಕವಿಯ ಆಶಯ. ಇದು ಈ ಕವನ ಹುಟ್ಟಿದ ಸಂದರ್ಭದ ಹೊತ್ತಿನಲ್ಲಿತ್ತು. ಇದು ಅಕ್ಷರ ಜಗತ್ತಿನ ಸಾಹಿತ್ಯ ಲೋಕದ ಮೊದಲ ದಿನಗಳಾಗಿದ್ದವು. ಇಲ್ಲಿನ ರಾಜ್ಯಕೊಡಿ ಎಂಬುದು ಸಮುದಾಯ ಕೇಂದ್ರಿತವಾದದ್ದು. ಕವನದ ಆಶಯವನ್ನು ವಾಸ್ತವದಲ್ಲಿ ನೋಡುವಾಗ ನಂತರದ ಕಾಲಮಾನದಲ್ಲಿ ಅದು ಸಮುದಾಯದ ಸಮಗ್ರತೆಯಿಂದ ವ್ಯಕ್ತಿಕೇಂದ್ರಿತ ಕಡೆ ವಾಲಿತು, ದಲಿತ ಅಧಿಕಾರವು; ಅದರ ಬೇಡಿಕೆಯ ಸಮುದಾಯ ಕೇಂದ್ರದಿಂದ ಹುಟ್ಟಿದ್ದಾಗಿದ್ದರಿಂದ ಅದು ಅನಿವಾರ್ಯವಾಯಿತು. ಅಧಿಕಾರ ಕೇಂದ್ರೀಕರಣದಿಂದ ಹೊರಬರದ ಸಂದರ್ಭದಲ್ಲಿ ಹುಟ್ಟಿದ ಕವನಗಳಿವು.

ಯಾರಿಗೆ ಬಂತು ಎಲ್ಲಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ
ಟಾಟಾ ಬಿರ್ಲಾ ಜೋಬಿಗೆ ಬಂತು
ಜನಗಳು ತಿನ್ನುವ ಬಾಯಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ.
ಬಡವರ ಮನೆಗೆ ಬರಲಿಲ್ಲ
ಬೆಳಕಿನ ಕಿರಣ ತರಲಿಲ್ಲ
ಗೋಳಿನ ಕಡಲನು ಬತ್ತಿಸಲಿಲ್ಲ
ಸಮತೆಯ ಹೂವನು ಅರಳಿಸಲಿಲ್ಲ

'ಕಪ್ಪು ಕಾಡಿನ ಹಾಡು' ಪುಟ:೨೮ (ಸಿದ್ಧಲಿಂಗಯ್ಯ)

ಬಂದ ಸ್ವಾತಂತ್ರ್ಯ ಟಾಟಾ ಬಿರ್ಲಾರಂಥ ಬಂಡವಾಳಶಾಹಿಗಳ, ಜನಗಳನ್ನು ತಿನ್ನುವ ಭೂಮಾಲೀಕರ, ಪೋಲೀಸರಂಥ ರಕ್ಷಣೆಕಾರರ, ಅಧಿಕಾರದ ಕುರ್ಚಿಯ ಮೇಲೆ ಕುಳಿತು ಕಾಲಕಳೆಯುವ ರಾಜಕಾರಣಿಗಳ ಕೈಯಲ್ಲಿ ಸ್ವಾತಂತ್ರ್ಯ ನೇಮಿತಗೊಂಡದ್ದು ಕಂಡುಬಂತು. ಅದಕ್ಕೆ ಉತ್ತರವಾಗಿ ಕಂಡುಬಂದ ಬಡವರು, ದೀನದಲಿತರು, ಕೂಲಿಕಾರ್ಮಿಕರ ಬದುಕು ಎದುರುನಿಂತಿತು. ಇದು ಈ ನಾಡಿನ ಬೆವರುಸುರಿಸಿ ಅಸಮಾನತೆಯಿಂದ ಬದುಕುತ್ತಿರುವ ಜನರಿಂದ ಬಂದು ಕವಿಯಲ್ಲಿ ಕವನವಾಯಿತು.

ಪ್ರಜಾಪ್ರಭುತ್ವದಡಿಯಲ್ಲಿನ ಬದುಕು ಸಮಾಜವನ್ನು, ಸಮಾಜದ ಪಟ್ಟಭದ್ರ ಹಿತಾಸಕ್ತಿಯನ್ನು ಎಚ್ಚರಿಸುತ್ತಲೇ ಇರುತ್ತದೆ. ಹಾಗಾಗಿ ದಲಿತ ಕಾವ್ಯದೊಳಗೆ ಪ್ರಶ್ನೆಯಾಗಿ ಸಮಾಜದ ಕಟುಸತ್ಯವನ್ನು ಬಯಲುಮಾಡಿತು. ಅದು ಸಮಾಜದಲ್ಲಿ ನಡೆಯುತ್ತಿರುವ ಸಾಂಸ್ಕೃತಿಕ ದಮನವನ್ನು ಸರಿಯೆಂದು ತಲೆದೂಗಲಿಲ್ಲ. ಅದರ ಸ್ವಾಭಿಮಾನದ ಸೂಕ್ಷ್ಮ ಎಳೆಯೇ ಕವನ. ಇದು ಶಕ್ತಿ ರಾಜಕಾರಣವನ್ನು ಪ್ರಮುಖವಾಗಿ ಪ್ರಶ್ನಿಸುವಂತಹ ಕವನವಾಗಿಯ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಬಂತು.

ತುರ್ತು ಪರಿಸ್ಥಿತಿ ಕರಾಳ ರಾಣಿಯ ಕಥೆಯನು ಹೇಳ್ತೀವಿ
ಬಡವರ ಸಾವಿನ ಸಂಕಟವನ್ನು ಜೊತೆಯಲಿ ಹೇಳ್ತೀವಿ

'ಸಾವಿರಾರು ನದಿಗಳು' ಪುಟ : ೪ (ಸಿದ್ಧಲಿಂಗಯ್ಯ)

ಕವನವು ಕಥೆಯಾಗುವಾಗ ಅದಕ್ಕೆ ಅದರ ಲಯದ ಹಂಗಿನ ಅಗತ್ಯವಿಲ್ಲದಿದ್ದರೂ ಹಾಡಾದಾಗ ಅದಕ್ಕೆ ಕಥೆಯ ಸಂಕೋಲೆಗಳ ರಾಗ ಜೊತೆಯಲ್ಲಿರಬೇಕಾಗುತ್ತದೆ.

ಬದುಕ ಹೇಳುತ್ತದೆ ಬದುಕಿನ
ಮಿಡಿತ ತುಡಿತ ಸಿಡಿತಗಳ
ಕ್ರೂರ ಹಿಡಿತಗಳ ಬಿಚ್ಚಿ ಹಿಡಿಯುತ್ತದೆ
ದುಡಿದಿಕ್ಕುವ ನನ್ನವರ ಒಡಲಿನಳಲ
ಚೆಲ್ಲಿ ಹೊಸ ಜೀವ ದನಿಗಳ ಪುಟಿಸುತ್ತದೆ.

'ದಲಿತ ಕಾವ್ಯ' 'ನನ್ನ ಕವನ' ಪುಟ: ೭ (ಇಂದೂಧರ ಹೊನ್ನಾಪುರ)

ದಲಿತ ಕವನಗಳಲ್ಲಿ ಬದುಕ ಮಿಡಿತ ತುಡಿತ ಸಿಡಿತಗಳು ಮುಖ್ಯವಾದಂತವು. ಏಕೆಂದರೆ ಅವರ ಒಡಲಿನ ಅಳಲನ್ನು ಹೊಮ್ಮಿಸುತ್ತವೆ. ಅಲ್ಲದೆಯೂ ಪುಟಿಯುವ ಜೀವವು ಹೊಸದನಿಯನ್ನು ಹೊಂದಿರುತ್ತದೆ. ಇಲ್ಲಿ ಕಾವ್ಯಕ್ಕೆ ಅಲಂಕಾರಗಳು ಅಗತ್ಯವಿಲ್ಲ. ಆದರೂ ಈ ಕವನ ಬದುಕಿನ ಸೂಕ್ಷ್ಮ ವಿವರಗಳನ್ನು ಗರ್ಭೀಕರಿಸಿಕೊಂಡು ನೇರವಾಗಿರುತ್ತದೆ.

ಹುಟ್ಟ ಬಾರದ್ರೆಪ್ಪೋ ಹುಟ್ಟ ಬಾರ್ದು
ಏಳೇಳು ಜಲ್ಮದಾಗ ಈ ಭೂಮಿ ಮ್ಯಾಗ
ಹೊಲೆ ಮಾದಿಗ್ರಾಗಿ ಹುಟ್ಟಬಾರ್ದು

'ಮೂಕನಿಗೆ ಬಾಯಿ ಬಂದಾಗ' ಪುಟ-೧೨ (ಅರವಿಂದ ಮಾಲಗತ್ತಿ)

ಇಲ್ಲಿ ದಲಿತ ಕಾವ್ಯದ ಸಮರ್ಥನೆಯು ಒಂದು ಕಡೆಯಾದರೆ; ಅದರ ವೇದನೆಯು ಮತ್ತೊಂದು ಕಡೆಯ ಪ್ರಶ್ನೆಯಾಗಿ ಕಾವ್ಯದಲ್ಲಿ ಎದ್ದು ಕಾಣುತ್ತದೆ. ಇದು ವೇದನೆ ಮಿತಿಯಲ್ಲ, ಸಮರ್ಥನೆ ಹೆಗ್ಗಳಿಕೆಯಲ್ಲ. ಒಟ್ಟು ಈ ಎರಡರ ವಸ್ತು ವಿಷಯಗಳ ವಿನ್ಯಾಸವು ವಾಸ್ತವವಾಗುವ ಕವನ

ನಾವು ಈ ನಾಡ ಒಡಲೊಳಗೆ
ಭೂತ ಪ್ರೇತಗಳ ವನದೊಳಗೆ
ಕೆರಳಿಸ ಬಹುದೆ ಕ್ರಾಂತಿ ಹೂವು
ಬುದ್ದ ಬೆಳಸಿದ ತೋಟಗಳು ಉಳಿದಿಲ್ಲ

....................

ಹೆಜ್ಜೆ ಹೆಜ್ಜೆಗೂ ಗಿಳಿ ಕೋಗಿಲೆ ಚರಮ ಗೀತೆಗಾನ

ನದಿಗಳೆಲ್ಲ ನುಗ್ಗುತಿವೆ ಉರಗದಂತೆ ಬುಸಬುಸದ್ಯಾನ,

'ದಲಿತ ಜನರ ಕಿರಣ' ಪುಟ:೩೦ (ಹೊಸೂರು ಮುನಿಶಾಮಪ್ಪ)

ಬುದ್ಧ ಬಸವಣ್ಣರು ಬೆಳೆದ ಈ ನಾಡಲ್ಲಿ ಅವರ ತಾತ್ವಿಕ ಚಿಂತನೆ ಮತ್ತು ಅವರು ಕಟ್ಟಿಕೊಂಡಂತ ಆದರ್ಶಗಳನ್ನು ಸತ್ತು, ಸಾಯಿಸಿ ಪಟ್ಟಭದ್ರ ಹಿತಾಸಕ್ತಿಗಳು ಅವುಗಳ ಸಮಾಧಿಯ ಮೇಲೆ ಬಂಗಲೆಯನ್ನು ಕಟ್ಟಿ ಮೆರೆಯುತ್ತಿರುವುದು ಅವುಗಳ ಪ್ರಚಾರಿಕೆಯಲ್ಲಿ ಸಾಗಿಬಂದ ಬದಲಾವಣೆ. ಇಂಥ ಬದುಕಲ್ಲಿ ದಲಿತ ಕಾವ್ಯವು

ಹಾಲು ಮೊಸರು ಹಣ್ಣೆಂದು
ಬೇಡಲಿಲ್ಲ ಒಂದು ದಿನ
ಕೊನೆ ದಿನಕೂ ಕಾಣಲಿಲ್ಲ
ಎಣ್ಣೆ ತುಪ್ಪ ಸಕ್ಕರೆಯ
..................
ಅಂಬಲಿಯ ತೆಗೆಯ ಬರದೆ
ಮುಂಗೈಯಿಂದ ಅಂಗೈವರೆಗೆ
ಮಣ್ಣ ಮಡಿಕೆ ಚದುರು ಮಾಡಿ
ಅಂಬಲಿಯಲಿ ಕಂಡರು.......ಅವರೂ ಬೆಳೆದರು

'ಕಪ್ಪುಕಾವ್ಯ' ಪುಟ : ೧೪ (ಅರವಿಂದ ಮಾಲಗತ್ತಿ)

ಹೈನು, ತನುವಿಗೆ ಸಂಬಂಧಪಟ್ಟಂತೆ ಅದರ ಉತ್ಪಾದಕರು ಮತ್ತು ವಿತರಕರು ಬಹುಪಾಲು ದಲಿತರೇ. ಅದರ ಉಪಯೋಗವು ಉತ್ಪಾದಕತ್ವದ ಒಡೆತನದಲ್ಲಿ ಇಲ್ಲದೆಯೋ ಹೆಂಗೆಂಗೋ ಬದುಕ ಸಾಗಿಸಿಕೊಂಡು ಬಂದವರು ದಲಿತರು. ಈ ಕವನವು ತಾತ್ವಿಕವಾಗಿ ಪ್ರಶ್ನೆಯನ್ನು ಹುಟ್ಟುಹಾಕುತ್ತಾ, ಈವರೆಗೆ ಬಂದ ದಲಿತ ಮಕ್ಕಳು ಮುಂದಿನ ಬೆಳವಣಿಗೆ ಹೇಗೆ ಎಂಬುದನ್ನು ಎತ್ತಿಹಿಡಿದಿದೆ. ಅದು ಹೇಗೇ ಪೋಷಿಸಿಕೊಂಡು ಬಂದವರ ಹಿಡಿತದಲ್ಲಿ ಬೆಳೆಯುವುದೋ ಅದರ ಆಚೆ ಬರುವುದೋ ಎಂಬುದಾಗಿರುತ್ತದೆ. ಅದಕ್ಕೆ ಕಾವ್ಯವು ಅದರ ಸೂಕ್ಷ್ಮತೆಯ ಕಟ್ಟುವುದು.

ಮೌನದ ಮೆರವಣಿಗೆ ನಮ್ಮ
ಕ್ರಾಂತಿಯ ಈ ಅಡುಗೆ
ಉರಿಯುವ ಧರೆಗೆ
ಮೂಳೆ ತೊಗಲುಗಳ ಪಂಜಿನ ಮೆರವಣಿಗೆ.
ಶಬ್ದವಿಲ್ಲದಾ ನಮ್ಮಯ ಹಾಡಿಗೆ
ಉಸಿರುವ ಉಸಿರೆ ಸ್ವರಗಳು
ಚಂಡೆ ಮದ್ದಳೆ ವಾದ್ಯವಿಲ್ಲದಾ
ಕಣ್ಣರೆಪ್ಪೆಗಳ ತಾಳಗಳು.

'ಕಪ್ಪುಕಾವ್ಯ' ಪುಟ:೭ (ಅರವಿಂದ ಮಾಲಗತ್ತಿ)

ದಲಿತ ಕಾವ್ಯವು ತನ್ನ ಸಮರ್ಥನೆಗಳಿಗೆ ವೈರುಧ್ಯಗಳು ಕಾಣಸಿಗದಿದ್ದರೂ ಅವುಗಳು ತಮ್ಮನ್ನು ನಿರ್ವಚಿಸಿಕೊಂಡಿರುವ ನೆಲೆಗಳಲ್ಲಿ ವೈರುಧ್ಯಗಳು ಕಾಣಸಿಗುತ್ತವೆ. ಒಂದು ಕಡೆ ಇಕ್ರಲಾ ವದೀಲ್ರ್ನಾ ಈನಸ್ ಮಕ್ಕ ಚರ್ಮ ಎಬ್ರಲಾ, ಮತ್ತೊಂದು ಕಡೆ ಅರಳುವ ಗುಲಾಬಿ, ಮಗದೊಂದು ಕಡೆ ಮೂಳೆ ತೊಗಲುಗಳ ಪಂಜಿನ ಮೆರವಣಿಗೆ, ಇನ್ನೊಂದು ಕಡೆ ಭುಗಿಲೆದ್ದ ಬೆಂಕಿಯ ಜ್ವಾಲೆಗಳು ಇಂಥ ಭಿನ್ನ ಮನಸ್ಥಿತಿಗಳು ಕೆಲಸ ಮಾಡಿರುವುದು ಕಾಣಸಿಗುತ್ತವೆ. ದಲಿತ ಕವಿಗಳು ಶೋಷಿತ ಸಮುದಾಯದಿಂದ ಬಂದು, ಅದನ್ನು ಕಣ್ಣಾರೆ ಕಂಡು, ಇಲ್ಲವೆ ಅನುಭವಿಸಿರಬಹುದು. ಹಾಗೆಯೇ ಅವರಲ್ಲಿ ಮತ್ತು ಅವರ ಕವನಗಳಲ್ಲಿ ವೈವಿಧ್ಯತೆಗಳೂ ಇರಬಹುದು. ಅದು ಅವರು ಬದುಕುವ ಪರಿಸರಕ್ಕೆ, ಅವರು ಬರೆದ ಕಾಲಮಾನಕ್ಕೆ ಸಂಬಂಧಪಟ್ಟಿರುವುದು ಆಗಿರುತ್ತದೆ. ಕಾಲಮಾನದ ವಿದ್ಯಮಾನಗಳು ವ್ಯಕ್ತಿಯ ಮೇಲೆ, ಅವನ ಬದುಕಿನ ಮೇಲೆ ಪ್ರಭಾವವನ್ನು ಬೀರುತ್ತವೆ. ಹಾಗಾದರೆ ಇವುಗಳು ಒಟ್ಟಂದವಾಗಿ ಪ್ರತ್ಯೇಕವಾಗಿ ನಿಲ್ಲುವುದಿಲ್ಲ. ವೈರುಧ್ಯಗಳ ನಡುವೆಯೂ ಇವುಗಳ ಸ್ವರೂಪವು ಏಕತೆಯಲ್ಲಿರುತ್ತದೆ. ಇವುಗಳಲ್ಲಿ ಜನರನ್ನು, ಜನ ಸಮುದಾಯವನ್ನು ಕವಿಯ ಕವನವು ಬೆಸೆದಿದೆ. ಇದು ಬೆಸೆತದ ಒಡಲಲ್ಲಿ ಹುಟ್ಟಿದೆ. ಜನರ ಒಡಲ ಸ್ಥಿತಿ ಮತ್ತು ಕವಿಯ ದೃಷ್ಟಿ ಕೋನ ಈ ಎರಡೂ ವಾಸ್ತವವೂ ಹೌದು.

ನನ್ನ ಜನದೊಡನೆ ನಾನಾಡಿದ ಮಾತು
ನಾನು ಕೊಡುವ ನನ್ನ ಕವನ.
ನನ್ನ ಜನರ ನಾನೋಡಿದ ರೀತಿ
ನನ್ನ ಒಡಲ ಕವನ.

'ಕಪ್ಪು ಕಾಡಿನ ಹಾಡು' ಪುಟ:೨ (ಸಿದ್ಧಲಿಂಗಯ್ಯ)

ಓ ಕಪ್ಪು ಜನರೇ ಬಂಧು ಬಾಂಧವರೇ
ಎಲ್ಲಿ ನಿಮ್ಮ ಸ್ವರ, ಎಲ್ಲಿ ನಿಮ್ಮ ದನಿ
ಕರಿಯೊಡಲ ಕೆಂಪುಸಿರು ಎಲ್ಲಿ
ಈ ಮಣ್ಣ ಮಕ್ಕಳು ನೀವು
ನಿಮ್ಮೊಡಲ ಉಸಿರೇ ನಮ್ಮ ಹಾಡು

'ದಲಿತ ಕಾವ್ಯ' ಪುಟ:೯ (ಇಂದೂಧರ ಹೊನ್ನಾಪುರ)

ಇಲ್ಲಿ ಶೋಷಿತರ, ದುಡಿಯುವ ಜನರ ಅಂತರಾಳದ ಒಡಲ ಉಸಿರು ಇಲ್ಲಿ ಹಾಡಾಗಿದೆ, ಕವನವಾಗಿದೆ, ಕಾವ್ಯವಾಗಿದೆ.

'ದಲಿತ ಕಾವ್ಯ'ದಲ್ಲಿ ಕಂಡುಬರುವ ಪ್ರಮುಖವಾದ ವಸ್ತು ಅಂಬೇಡ್ಕರ್‌ರೇ ಆಗಿದ್ದಾರೆ. ಅಂಬೇಡ್ಕರ್‌ರ ಚಿಂತನಾ ಮಾರ್ಗವನ್ನು ಹಿಂಬಾಲಿಸಿದ ಅಕ್ಷರ ಕಲಿತ ದಲಿತ; ಅದರಲ್ಲೂ ಸಾಹಿತಿಯು ಈತನನ್ನು ತಮ್ಮ ಸಾಂಸ್ಕೃತಿಕ ನಾಯಕನನ್ನಾಗಿ ಮಾಡಿಕೊಳ್ಳುತ್ತಾರೆ. ವಾಸ್ತವವಾಗಿ ಇಲ್ಲಿ ಅಂಬೇಡ್ಕರ್‌ರು ತಮ್ಮ ಜನಾಂಗಕ್ಕೆ ಶ್ರಮಿಸಿದ ಶ್ರಮವು ನಿಜಕ್ಕೂ ಇಂದಿನ ದಲಿತರ ಪುಣ್ಯವೆಂದು ಭಾವಿಸುತ್ತಾರೆ. ಹಾಗೆ ಹೇಳಿಕೊಳ್ಳಲಾಗುತ್ತಿದೆ. ದಲಿತರ ಬಗ್ಗೆ, ಅವರ ಅನಕ್ಷರತೆ, ಅಂಧಕಾರ, ಶೋಷಣೆಯನ್ನು ಅನುಭವಿಸುತ್ತಿರುವ ಸಂದರ್ಭದಲ್ಲಿ ದಲಿತರ ಪರವಾಗಿ ರಾಷ್ಟ್ರೀಯವಾಗಿ ಹೋರಾಡಿದವರು ಅಂಬೇಡ್ಕರರು. ಈವೊತ್ತಿನ ದಲಿತರ ಶೋಷಣೆಯ ಸಂದರ್ಭದಲ್ಲಿ, ಸಂವಿಧಾನಾತ್ಮಕವಾಗಿ ಲಿಖಿತತೆಯ ಸಂಸದೀಯ ಶಾಸನಬದ್ಧ ಕಾನೂನುಗಳು ದಲಿತರಿಗೆ ಉಸಿರಾಡುವಲ್ಲಿ ಸಹಕಾರಿಯಾಗಿವೆ. ಅಂತೆಯೇ

ಈವೊತ್ತಿನ ಸಂದರ್ಭಗಳಲ್ಲಿಯೂ ತಾಂಡವಾಡುತ್ತಿರುವ ಅಸಮಾನತೆ ಜಾತೀಯತೆಯೊಳಗೆ ದಲಿತರು ಶೋಷಣೆಯ ಬದುಕನ್ನು ಅನುಭವಿಸುತ್ತಿರುವಾಗ, ಅಂದು ಅಂಬೇಡ್ಕರ್‌ರು ಹೋರಾಡುವ ದಿನಗಳಲ್ಲಿ ದಲಿತರ ಸ್ಥಿತಿ ಇನ್ನೂ ಹೇಗಿತ್ತು? ದಲಿತರನ್ನು ನಡೆಸಿಕೊಳ್ಳುವ ಸಮಾಜದ ಮೇಲುವರ್ಗ, ಮೇಲು ಜಾತಿಯವರ ಮನಃಸ್ಥಿತಿಗಳು ಹೇಗಿದ್ದವು? ಎಂಬುದು ಪ್ರಮುಖವಾದ ವಸ್ತುವಿಷಯಗಳಾಗುತ್ತವೆ. ಅವುಗಳನ್ನು ದಲಿತರ ಬದುಕಿನ ಹಿನ್ನೆಲೆಯಲ್ಲಿ ನೋಡಬಹುದು.

ಅಂಬೇಡ್ಕರರ ಬಗೆಗಿನ ಕವನಗಳು ಕವನಗಳಾಗಿ ಸೀಮಿತಕ್ಕೊಳಪಡದೆ ಅವುಗಳು ಸಮುದಾಯಕ್ಕೆ ಅಂಬೇಡ್ಕರರ ಪರಿಚಯಿಸುವ ಧಾರೆಯೂ ಆಗಿತ್ತು. ಇವು ದಲಿತ ಚಳುವಳಿಯ ಸಂದರ್ಭದಲ್ಲಿ; ಅಕ್ಷರ ಕಲಿಯುವ ದಲಿತ ಯುವ ಪೀಳಿಗೆಯ ಸಂದರ್ಭದಲ್ಲಿ; ಗ್ರಾಮಗಳಲ್ಲಿನ ಜನತೆಗೆ ಅಂಬೇಡ್ಕರರು ಯಾರು? ಎಂಬುದನ್ನು; ಅವರು ಬದುಕಿನಲ್ಲಿ ಕಂಡಂತ ನೋವು ನಲಿವುಗಳನ್ನು; ರಾಜಕೀಯಾತ್ಮಕವಾಗಿ ಸಾಮಾಜಿಕವಾಗಿ ಅವರಲ್ಲಿ ಇದ್ದ ಸಾಮಾಜಿಕ ಬದಲಾವಣೆಯನ್ನು ಚರ್ಚಿಸುವುದಾಗಿತ್ತು. ನಂತರದಲ್ಲಿನ ಬೌದ್ಧಿಕ ವಲಯದ ಅಂಬೇಡ್ಕರ್‌ರರ ಬಗೆಗಿನ ಚರ್ಚೆಯು ವಿಶ್ವವಿದ್ಯಾಲಯ ಕಾಲೇಜು ಮಟ್ಟದಲ್ಲಿ ನಡೆದವು. ಅವುಗಳಿಗೆ ಪೂರಕವಾಗಿ ಅಂಬೇಡ್ಕರ್‌ರರ ಬಗ್ಗೆ ಬಂದ ಸಾಹಿತ್ಯಿಕ ಮತ್ತು ಸಾಹಿತ್ಯೇತರ ಬರವಣಿಗೆಯು ಚರ್ಚೆಗೆ ಒಳಗಾದವು. ಇವುಗಳನ್ನು ಮೀರಿದ ವ್ಯಕ್ತಿಗತ ಪ್ರಭಾವ ಪ್ರೇರಣೆಗಳು ದಲಿತರ; ದಲಿತ ಮನಸ್ಸುಗಳ ಮನದಾಳದಲ್ಲಿ ಬೇರೂರಿದ್ದು ಕಂಡುಬಂದವು.

ನಾಡ ನಡುವಿನಿಂದ ಸಿಡಿದ
ನೋವಿನ ಕೂಗೆ
ಆಕಾಶದ ಅಗಲಕ್ಕೂ
ನಿಂತ ಆಲವೆ
ಕೋಟಿ ಕೋಟಿ ಕಪ್ಪು ಜನರ
ಮೊಟ್ಟ ಮೊದಲ ಮಾತೆ
ನೀರಿನಾಚೆ ಮೋಡದಾಚೆ
ಮೊಳಗಿದಂಥ ಘೋಷವೆ
..................
ಮಲಗಿದವರ ಕೂರಿಸಿದೆ
ನಿಲಿಸುವವರು ಯಾರೋ
ಛಲದ ಜೊತೆಗೆ ಬಲದ ಪಾಠ
ಕಲಿಸುವವರು ಯಾರೊ.

'ಅಂಬೇಡ್ಕರ್' 'ಹೊಲೆಮಾದಿಗರ ಹಾಡು' ಪುಟ: ೩೧ (ಸಿದ್ಧಲಿಂಗಯ್ಯ)

ಇದು ದಲಿತ ವಿದ್ಯಾರ್ಥಿ ನಿಲಯಗಳಲ್ಲಿ, ದಲಿತ ಹೋರಾಟದ ಸಂದರ್ಭದಲ್ಲಿ ಪ್ರಾರ್ಥನೆಯ ರೂಪವನ್ನು ಪಡೆದು ದಲಿತ ಯುವ ಅಕ್ಷರವಂತ ಸಮುದಾಯದಲ್ಲಿ ನಿಂತಿತು. ಕೋಟಿ ಕೋಟಿ ಕಪ್ಪುಜನ. ಇಲ್ಲಿ ಶ್ರಮದ ಆಧಾರಿತ ದುಡಿಯುವ ಜನ. ಅವರ ಮೊಟ್ಟಮೊದಲ ಮಾತೆಯನ್ನಾಗಿ ಕವಿ ಇಲ್ಲಿ ಅಂಬೇಡ್ಕರರನ್ನು ಬಣ್ಣಿಸಿದ್ದಾನೆ. ದಲಿತರಿಗೆ ದೇವರು, ಧರ್ಮಗಳು ಮುಖ್ಯವೇ ಆಗುವುದಿಲ್ಲ. ಅಂಬೇಡ್ಕರ್ ಅವರ ವ್ಯಕ್ತಿತ್ವದ ಮುಂದೆ ಅದು ಸಾಂಸ್ಕೃತಿಕ ಅರಿವು ಮತ್ತು ಅಗತ್ಯತೆಯನ್ನು ಬಿಂಬಿಸುವಂತದ್ದಾಗಿದೆ.

ಸಂವಿಧಾನ ಶಿಲ್ಪಿ ಅಂಬೇಡ್ಕರರ ಬಗೆಗಿನ ಮತ್ತೊಂದು ಕವನವು ಅಂಬೇಡ್ಕರರ ಚಿಂತನೆಯ ತಾತ್ವಿಕತೆಯನ್ನು ಕುರಿತಂತದ್ದಾಗಿದೆ. ಸಂವಿಧಾನ ರಚನೆಯ ಕರುಡುಸಮಿತಿಯ ಅಧ್ಯಕ್ಷತೆಯನ್ನು ಅಂಬೇಡ್ಕರ್ ವಹಿಸಿದ್ದರು. ಸಂವಿಧಾನದ ವಿಧಾನವನ್ನು ಅಧ್ಯಕ್ಷತೆಯನ್ನು ವಹಿಸಿದ್ದ ಅಂಬೇಡ್ಕರರು ಅದರ ಸದಸ್ಯರೊಂದಿಗೆ ಚರ್ಚಿಸಿ ರಚಿಸಿದಂತವರು. ಆದ್ದರಿಂದಲೇ ಅವರು 'ಸಂವಿಧಾನ ಶಿಲ್ಪಿ' ಎಂಬ ಹೆಸರಿಗೆ ಪಾತ್ರರಾದರು. ಅದು ಈವೊತ್ತಿನ ಆಳುವ ವರ್ಗಕ್ಕೆ ಸಿಕ್ಕಿ ತಮ್ಮ ಅನುಕೂಲಕ್ಕೆ ತಕ್ಕಂತೆ ನಿಯಮಾನುಸಾರ ಬದಲಿಸುತ್ತಿರುವುದು ಕವಿಯ ಅಳಲಾಗಿದೆ. ಅದು ಇನ್ನೊಂದೆಡೆಗೆ ಸಮಾಜದ ಸಮಾನತೆ ಇಲ್ಲದ ಶೋಷಿತ ಜನ, ಜನಾಂಗೀಯ ಸಮುದಾಯವನ್ನು ಕೊಂಡೊಯ್ಯುತ್ತಿವೆ ಎಂಬುದು ಸಮಾಜದಿಂದ ಬಂದ ಅಳಲೂ ಕೂಡ.

ಈ ನಾಡಿನ ಉದ್ದಗಲಕ್ಕೂ
ಸಮರ ಸಾರಿದವನೆ
ನಿನ್ನಂತರಾಳದಲ್ಲಿ ಕಂಡೆ
ಮನುಷ್ಯತ್ವದ ಬೀಜ
ನೀ ಕೊಟ್ಟ ಸಂವಿಧಾನ
ಹರಿದು ಹಂಚಿದರು
ನೀ ಹೋದ ಬಳಿಕ ನಿನ್ನ
ಹೆಸರು ಹೇಳಿ ಭಾಷಣ ಬಿಗಿದು
ನೀ ಸುಟ್ಟ ಮಂತ್ರಗಳ ಜಪಿಸುತ್ತಾ
ನಿನ್ನ ಭಾವಚಿತ್ರದಡಿಯಲ್ಲಿ
ವಂಚಕ ವೈರಿಗಳ ಸತ್ಯನಾರಾಯಣ ವ್ರತ

'ದಲಿತ ಕಾವ್ಯ' ಅಂಬೇಡ್ಕರ್ ಪುಟ:೭೩ (ವಿ.ಮುನಿವೆಂಕಟಪ್ಪ)

ಆಳುವ ಶಕ್ತಿಗಳು ಆಡುವ ಮಾತಂತೆ ಅವರು ನಡೆಸುವ, ನಡೆಯುವ ಕ್ರಿಯೆಯಲ್ಲಿರುವುದಿಲ್ಲ. ಅದು ಒಂದು ಸಾಂಪ್ರದಾಯಿಕದಂತೆ ಇಂದು ದಲಿತ ಬದುಕಲ್ಲಿ ಕಂಡುಬಂದಿದೆ. ಅದನ್ನು ಇಂದಿನ ಸಾಮಾಜಿಕ ಬದಲಾವಣೆಯ ಜಾತ್ಯತೀತ ಭಾಷಣದ ಅಂತರ್ಯದಲ್ಲಿ ಜಾತಿಕೇಂದ್ರಿತ ನೆಲೆಯಲ್ಲಿ ಹೊರಡುವ ದಲಿತೇತರ ಮನಸ್ಸುಗಳನ್ನು; ಅದರ ಸೂಕ್ಷ್ಮತೆಯನ್ನು ಇಲ್ಲಿ ಹಿಡಿದಿಡಲಾಗಿದೆ. ಇದಕ್ಕಿಂತ ಭಿನ್ನ ಆಲೋಚನೆಯು ದಲಿತರ ಸ್ಪೂರ್ತಿಯಂತೆ ಅಂಬೇಡ್ಕರ್‌ರು ಅಂತರ್ಯದಲ್ಲಿ ಸೇರಿಕೊಂಡದ್ದು ಕಂಡು ಬಂದಿದೆ. ಈ ಕವನವು

ಬಂದೆವು ಇಂದು ಒಂದಾಗಿ ನಾವು ಜಾಜ್ವಲ್ಯ ಸ್ಮರಣೆಯಿಂದ
ಮನು ಮೂಲದಿಂದ ಇತಿಹಾಸವರಿದ ನವನೀತ ಸ್ಪೂರ್ತಿಯಿಂದ ||ಪ||
ಬದುಕೆಲ್ಲ ದುಡಿದು ಸುಖವೆಲ್ಲ ಸುರಿದು ಆಕಾಶಗೈದ ಬಾಬಾ ಸಾಹೇಬ
ಚಂದ್ರ ಚಿಕ್ಕೆಗಳು ಕಣ್ತೆರವ ಮುನ್ನ ಬಯಲಾದೆಯಲ್ಲೊ ಬಾಬಾ ಸಾಹೇಬ
ಬಾನಲ್ಲಿ ತೇಲಿ ಹೊಳಹೆಳೆಯುತಿಪ್ಪ ನಕ್ಷತ್ರ ಕೋಟಿಯಂತೆ
ನಿನ್ನೆದೆಯ ಗಗನದಲಿ ಹೊಳೆದಂಥ ತತ್ವ ಅಮರಕ್ಕೆ ಸಾಟಿಯಂತೆ
||ಬಂದೆವು ನಾವು||

ಅಕ್ಷರವಂತ ದಲಿತರಿಗೆ ಅಂಬೇಡ್ಕರ್ ಒಂದು ಶಕ್ತಿಯಾಗಿ ಆಂತರ್ಯದಲ್ಲಿ ಸೇರಿಕೊಂಡರು. ಸಮಾಜದ ಒಳಗಿನ ಸಂಕಷ್ಟಗಳನ್ನು ಎದುರುಮಾಡಿಕೊಂಡರು. ಅವರು ಸ್ವಾಭಿಮಾನದ ಸಂಕೇತವಾದರು. ಅಂಬೇಡ್ಕರ್ ಬಗೆಗಿನ ಕವನಗಳು ಅಂತರ್ ಭಾಷೆಯಿಂದ ಅನುವಾದವಾಗಿ ಕನ್ನಡಕ್ಕೆ ಬಂದು ತನ್ನ ಪ್ರಖರತೆಯನ್ನು ನಿಧಿಸಿದವು. ಸಮುದಾಯ ಜನರೊಳಗೆ ಸೇರಿದವು. ಅಂತೆಯೇ ಹೋರಾಟದ ಹಾಡುಗಳಲ್ಲಿಯೂ ಸಹ ಅಂಬೇಡ್ಕರ ಹಾಡುಗಳು ಸೇರಿಕೊಂಡವು.

ಕ್ರಾಂತಿಕಾರಿ ವಂದನೆಗಳು ಬಾಬಾ ಅಂಬೇಡ್ಕರ
ಆಕಾರದ ತಾರೆಗಳು ಭೂಮಿಗಿಳಿಯುವಂತೆ
ಮುಂದಾಗಿ ನಿನ ಸ್ಮರಿಸಿ ಹಾಡೊಂದ ಹಾಡುವೆವು
ಕತ್ತಲಾದ ಬದುಕಿನಲಿ ಸೂರ್ಯಕಿರಣ ನೀನು
ಕ್ರಾಂತಿಕಾರಿ ವಂದನೆಗಳು ಬಾಬಾ ಅಂಬೇಡ್ಕರ

(ಹೋರಾಟದ ಹಾಡುಗಳು)

ಅಂಬೇಡ್ಕರ್‌ಗೆ ಸಲ್ಲಿಸುವ ವಂದನೆಗಳು ಮುಖ್ಯವಾದದ್ದು. ಅದು ಅಂಬೇಡ್ಕರ್‌ಗೆ ವಂದನೆಗಳನ್ನು ಮೊದಲು ಸಲ್ಲಿಸಿ ನಂತರದಲ್ಲಿ ಇತರೆ ಹೋರಾಟದ ಹಾಡುಗಳು ಸೇರಿಕೊಳ್ಳುತ್ತವೆ. ಇಲ್ಲಿ ಕಾಣಸಿಗುವುದು ಸಂಘಟನೆಕಾರರು ಕಂಡುಕೊಂಡ ಅಂಬೇಡ್ಕರರ ಹೋರಾಟದ ಕಲ್ಪನೆ. ಅಂತೆಯೇ ಮತ್ತೊಂದು ಹೋರಾಟದ ಹಾಡು.

ಅಂಬೇಡ್ಕರ್ ಹೇಳಿದ ಮಾತು
ಮರೆಯಾ ಬೇಡಿ ಮರೆತು ಮಲಗಾಬೇಡಿ

(ಹೋರಾಟದ ಹಾಡು)

ಹಕ್ಕಿ ಹಾರಾಡುತಾವೋ
ನವಿಲೆಲ್ಲಾ ಕಣಿಯುತ್ತಾವೋ
ಬಾಬಾ ಅಂಬೇಡ್ಕರ ದಾರಿಯಲ್ಲಿ
ಸ್ವಾಭಿಮಾನ ಮೊಳಗುತಾವೋ

(ಹೋರಾಟದ ಹಾಡು)

ದಲಿತ ಕಲಾ ಮಂಡಲಿಗಳು 'ದಲಿತ ಕಾವ್ಯ' 'ಕವನ'ಗಳಿಗೆ ರಾಗವನ್ನು ನೀಡಿದವು. ಅವು ತಮ್ಮದೇ ಆದ ವೈಶಿಷ್ಟ್ಯವನ್ನು ಗಳಿಸಿಕೊಂಡಿದ್ದ ತನ್ನ ಕಾರ್ಯಚಟುವಟಿಕೆಗಳಲ್ಲಿ ತೊಡಗಿಕೊಂಡವು. ಸಿದ್ಧಲಿಂಗಯ್ಯನವರು 'ಹೊಲೆ ಮಾದಿಗರ ಹಾಡು' ಕವನ ಸಂಕಲನದಲ್ಲಿ ಹೇಳಿದಂತೆ - 'ಇವು ಹಾಡುಗಳು ಎಂದು ಮತ್ತೊಮ್ಮೆ ಹೇಳುತ್ತಿದ್ದೇನೆ. ಗಟ್ಟಿಯಾಗಿ ಲಯಬದ್ಧವಾಗಿ ಹಾಡಿದಾಗ ಓದಿಕೊಂಡಾಗ ಮಾತ್ರ ನನ್ನ ರಚನೆಯ ಉದ್ದೇಶ ಸ್ಪಷ್ಟವಾಗುತ್ತದೆ.' ಹಾಡು ಕವನವೂ ಹೌದು. ಕವನವ ಹಾಡಿದಾಗ ಅದು ಹಾಡಾಗುತ್ತದೆ. ಹಾಡುವ ಹಾಡಿಗೆ ಲಯ ಇರುತ್ತದೆ. ದಲಿತ ಸಂಘಟನೆಯಲ್ಲಿ ಸಾಂಸ್ಕೃತಿಯ ಚಳುವಳಿಯನ್ನು ಸಂಘಟನೆಯ ತೀವ್ರತೆಗಾಗಿ ಕಲಾಮಂಡಲಿಯನ್ನು ಪ್ರಾರಂಭಿಸಿದರು. ೧೯೭೮ರಂದು ಪ್ರಾರಂಭಗೊಂಡ ಈ ಕಲಾ ಮಂಡಳಿಯು ದಲಿತರಲ್ಲಿನ ಕೀಳರಿಮೆಯನ್ನು ಮುಕ್ತಿಗೊಳಿಸುವಲ್ಲಿ ಸಹಾಯಕವಾಯಿತು. ದಲಿತರಲ್ಲಿ ಸುಪ್ತವಾಗಿ ಅಡಗಿರುವ ಕಲಾ ಸಾಹಿತ್ಯವನ್ನು ಚಳುವಳಿಯ ಸಂದರ್ಭದಲ್ಲಿ ಮನಗಂಡರು. ದಲಿತರ ಸಾಂಸ್ಕೃತಿಕ ಚಳುವಳಿಯ ಅಂಶಗಳು ಸಾಮಾಜಿಕ ಕ್ರಾಂತಿಯನ್ನು ತೀವ್ರಗೊಳಿಸುವ ಹೊತ್ತಲ್ಲಿ 'ದಲಿತ ಕಲಾ ಮಂಡಲಿ'ಗಳು ಪ್ರಮುಖ

ಪಾತ್ರವನ್ನು ವಹಿಸಿದವು. ದಲಿತ ಕವನ ಕಾವ್ಯಗಳ ಜೊತೆಯಲ್ಲಿ ಕಲಾಮಂಡಳಿಗಳು ಕವನಗಳನ್ನು ಕಟ್ಟಿ ಅದಕ್ಕೆ ರಾಗಗಳನ್ನು ಸಂಯೋಜಿಸಿ ಹಾಡನ್ನು ಹಾಡಿದರು. ನೆರೆ ಹೊರೆಯ ರಾಜ್ಯಗಳ ದಲಿತ ಸಂಘಟನೆಗಳ ಹೋರಾಟದ ಹಾಡುಗಳು ಕರ್ನಾಟಕ ದಲಿತ ಕಲಾ ಮಂಡಳಿಯೊಳಗೆ ಸೇರಿಕೊಂಡವು.

ದಲಿತ ಬರಹಗಾರರು, ದಲಿತ ಚಳುವಳಿಕಾರರು, ದಲಿತ ಕಲಾಮಂಡಳಿಯವರು ಇವರೆಲ್ಲರೂ ದಲಿತ ಸಂಘಟನೆಯ ಅಡಿಯಲ್ಲಿಯೇ ಹೋರಾಟವನ್ನು ನಡೆಸುತ್ತಾ ಬಂದರು. ಅಂದರೆ ಇಲ್ಲಿ ದಲಿತ ಬರಹಗಾರರು ದಲಿತ ಸಂಘಟನೆಯ ಹೋರಾಟಗಾರರೂ ಆಗಿರುತ್ತಿದ್ದರು. ಹಾಗೆಯೇ ಕಲಾಮಂಡಳಿಯಲ್ಲಿಯೂ ತಮ್ಮ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಅಧ್ಯಯನದ ದೃಷ್ಟಿಯಿಂದ ಈ ಬರಹಗಾರರನ್ನು ಹೋರಾಟಗಾರರನ್ನು ಕಲಾವಿದರನ್ನು ಬೇರೆ ಬೇರೆಯಾಗಿ ನೋಡಬಹುದೇ ವಿನಃ ಅಂತರಾಳದಲ್ಲಿ ಒಂದಕ್ಕೊಂದು ಪೂರಕ ಸಂಬಂಧವು ಬೆಸೆದುಕೊಂಡಿವೆ.

ದಲಿತ ಕಲಾಮಂಡಳಿ ದಲಿತ ಸಂಘಟನೆಯ ಅಂಗವಾದಾಗ ದಲಿತ ಕಲಾವಿದರು ಸಂಘಟನೆಯಲ್ಲಿ ಪಾಲ್ಗೊಂಡರು. ಅದು ತನ್ನದೇ ಆದ ವೈಶಿಷ್ಟ್ಯವನ್ನು ಗಳಿಸಿಕೊಂಡಿತು. ಅವುಗಳ ಕಾಲಲ್ಲಿ ಗೆಜ್ಜೆ, ಕೈಯಲ್ಲಿ ದಲಿತ ಸಂಘರ್ಷ ಸಮಿತಿಯ ಬಾವುಟ, ಕಂಜರಿ, ಡೋಲು, ದಮಡಿ ಹಿಡಿದ ಹಾಡುಗಳು ಮೊಳಗಿದವು. ಮುಖ್ಯಗಾಯಕ, ಅದನ್ನು ಅನುಸರಿಸುವ ಹಿಮ್ಮೇಳಗಳು ದನಿ ಎತ್ತಿ ಹಾಡುತ್ತಿದ್ದವು. ಈ ಹಾಡುಗಳು ಅಲ್ಲಿಯ ಪರಿಸ್ಥಿತಿಗನುಗುಣವಾಗಿ ಆವೇಶವನ್ನೇ ತುಂಬಿಕೊಂಡು ಹಾಡುಗರನ್ನು ಹಾಡಿಸಿದವು. ಇವು ಕೇಳುಗರನ್ನು ಕೆರಳಿಸಿ ಕೇಳಿಸುತ್ತಿದ್ದವು. ಕೇಳುವವರ ಮೈ ಮನ ನವಿರೇಳಿಸುವ ಹಾಡುಗಳು ತಮ್ಮ ಬದುಕಿನ ಸಂಬಂಧವನ್ನು ದಲಿತ ಕಲಾಮಂಡಳಿಯವರು ಹುಡುಕಿಕೊಳ್ಳುತ್ತಿದ್ದರು. ಸಂಘಟನೆಯ ಮೆರವಣಿಗೆ ನಡೆಯುವ ಸಂತೆ, ಪೇಟೆ ಬೀದಿ, ಮೈದಾನ, ಕಛೇರಿ ಎದುರು, ಕಾರ್ಯ ಕ್ರಮಗಳಲ್ಲಿ ದಲಿತ ಹೋರಾಟದ ಹಾಡುಗಳು ಮೊಳೆಯುತ್ತಿದ್ದವು.

ಓದಲು ಬಂದು ನಗರವನ್ನು ಸೇರಿದ ದಲಿತ ಯುವ ವಿದ್ಯಾರ್ಥಿಗಳನ್ನು ದಲಿತ ಹೋರಾಟದ ಹಾಡುಗಳು ಸಾಕಷ್ಟು ಪ್ರಭಾವವನ್ನು ಬೀರಿದವು. ಅಲ್ಲದೆ ಇವರು ಈ ಹಾಡುಗಳ ಪ್ರಭಾವಕ್ಕೆ ಒಳಗಾದರು. ತಾವು ಸೇರಿದ ಹಾಸ್ಟಲ್‌ಗಳು ಈ ಹೋರಾಟದ ಹಾಡುಗಳ ಕಲಿಕೆಯ ಕೇಂದ್ರಗಳಾದವು. ದಲಿತ ಸಂಘಟನೆಗಳು ಈ ಯುವಕರನ್ನು ಪ್ರಭಾವಿಸಿದವು. ಸಂಘಟನೆಯ ಕಾರ್ಯಕ್ರಮಗಳಿಗೆ ದಲಿತ ಯುವಕರು ಸಕ್ರಿಯವಾಗಿ ಪಾಲ್ಗೊಂಡು ಯುವ ಶಕ್ತಿಯ ಆಲೋಚನೆಯನ್ನು ಬಿತ್ತರಿಸಿದರು. ಇಂಥ ದಲಿತ ವಿದ್ಯಾರ್ಥಿ ನಿಲಯಗಳ ಕೇಂದ್ರಗಳಿಂದ ದಲಿತ ವಿದ್ಯಾರ್ಥಿ ಒಕ್ಕೂಟದ ಕಾರ್ಯ ಚಟುವಟಿಕೆಗಳು ಜರುಗಿದವು.

ದಲಿತ ಹೋರಾಟದ ಹಾಡುಗಳು ತೆಲುಗಿನಿಂದ ಸಾಕಷ್ಟು ಬಂದವು. ಇವುಗಳಿಗೆ ಕನ್ನಡದ ದನಿಯನ್ನು ಕೊಟ್ಟು ಕನ್ನಡದವೇ ಎಂಬಂತೆ ದಲಿತ ಹೋರಾಟದ ಹಾಡಲ್ಲಿ ಸೇರಿದವು. ಇವು ಬರೀ ಹಾಡಾಗಿರದೆ ಸಂಘಟನೆಯ ಅನಿವಾರ್ಯತೆಯ ತೀವ್ರತೆಯನ್ನು ಸರಿಗಟ್ಟಿದವು. ಶೋಷಿತ ಬದುಕಿನ ವಸ್ತುವು ಹಾಡಾಗಿ ಹೊಮ್ಮಿದವು. ದಲಿತರಲ್ಲಿ ಹಕ್ಕನ್ನು ಮೂಡಿಸುವುದರೊಂದಿಗೆ ಇವು ಸ್ವಾಭಿಮಾನವನ್ನು ತುಂಬಿದವು. ಜಾನಪದದ ದಟ್ಟತೆಯನ್ನು ಹೊಂದಿದ್ದ ದಲಿತ ಕಲಾ ಮಂಡಳಿಯು ತಮ್ಮ ಒಡಲಾಳದ ನೋವಿನ ಕಿಡಿಗಳನ್ನು ಹೊಮ್ಮಿಸಿದವು. ನೋವಿನ ಜನರನ್ನು ಒಂದಾಗಿಸುವ

ಗುಣಗಳನ್ನು ಈ ಕವನಗಳು ಪಡೆದವು. ಹಾಡಿನ ಧಾಟಿಗೆ ಕಂಠ ಸಂಪತ್ತಿದ್ದ ದಲಿತ ಸಂಘಟನೆಗಾರರು, ವಿದ್ಯಾವಂತ ಯುವಕರೆಲ್ಲರೂ ಕಲಾವಿದರಾದರು. ನೂರಾರು ಕಲಾವಿದರು ಸಂಘಟನೆಯ ಗ್ರಾಮ ಸಮಿತಿಯ ಕೇಂದ್ರದಿಂದ ಹಿಡಿದು, ರಾಜ್ಯ ಸಮಿತಿಯ ಕೇಂದ್ರದವರೆಗೆ ಹಾಡುವವರು ಸೇರಿಕೊಂಡರು.

ಇಲ್ಲಿಯ ಹಾಡುಗಳು ಕವಿಗೆ ನೋವು, ಇರಿತದ ಗಾಯಗಳು. ಅಷ್ಟೆ ಅಲ್ಲ ಅವುಗಳೊಂದಿಗೆ ಇರುವಾಸೆಯು ಕವಿಗಿದೆ. ಇದು ವಿಶಿಷ್ಟ ಆಶಯವೂ ಕೂಡ. ಇಲ್ಲಿಯ ದಲಿತರ ನೋವುಗಳು ಬರೀ ದೈಹಿಕವಾದ ಗಾಯಗಳಲ್ಲ. ಮಾನಸಿಕವಾದ ಗಾಯಗಳು ಹೌದು. ಅವು ಮಾಯುವುದು ಅಷ್ಟು ಸುಲಭವಲ್ಲ; ಏಕೆಂದರೆ ಬಿದ್ದ, ಬೀಳುತ್ತಿರುವ ಏಟಿನ ಬೇರುಗಳು ತಳವನ್ನು ಮುಟ್ಟಿವೆ.

ಕೋಟಿ ಕೋಟಿ ಬಾಧೆಗಳಲ್ಲಿ
ಲಕ್ಷಾಂತರ ನೋವುಗಳಲ್ಲಿ
ನೀನುಟ್ಟಿ ಬೆಳೆದೆಯವ್ವ ನನ ತಂಗಿ ಅನುಸೂಯ
ಗಾಯವ ಮರೆತು ಬದುಕಲಾರೆವು ನನ ತಂಗಿ ಅನುಸೂಯ

(ಹೋರಾಟದ ಹಾಡುಗಳು)

ನೋವು ವಿಷಾದಗಳು ಇಲ್ಲಿಯ ಕೇಂದ್ರಗುಣ. ದಲಿತ ಸ್ತ್ರೀಯ ಅಸಹಾಯಕತೆಯ ತೋರಿಕೆಯ ಗುಣ ಈ ಹಾಡಿನಲ್ಲಿ ಇದೆ. ಇದು ದಲಿತ ಸ್ತ್ರೀ ಶೋಷಣೆಯ ವಾಸ್ತವ. ಈ ಹೋರಾಟದ ಹಾಡುಗಳು ಹಾಡಿದಾಗ ಇದ್ದ ಲಯ ಉದ್ದೇಶ ಮತ್ತು ಪರಿಣಾಮ ಓದಿದಾಗ ಅವುಗಳ ಹಿಂದಿರುವ ಪರಿಣಾಮ ಸ್ಪಷ್ಟವಾಗುವುದಿಲ್ಲ. ಹಾಗಾದರೆ ಇದನ್ನು ಓದಲು ಬಯಸುವುದಿಲ್ಲ ಎಂದಲ್ಲ; ಇದು ಓದನ್ನು ಒಂದ ಕಡೆ ಬಯಸಿ ಹಾಡುವುದನ್ನು ಮತ್ತೊಂದು ಕಡೆ ನಿರೀಕ್ಷಿಸುತ್ತದೆ. ಇಂತಹ ಹಾಡುಗಳು ಕೆಲವನ್ನು ಮುಂದೆ ನೋಡಬಹುದು.

ಹೊಲೆಯರು ಅನ್ನುವಿರಿ ಮಾದಿಗರು ಅನ್ನುವಿರಿ
ಮಾತು ಮಾತಾಡಿದರೆ ದೂರವಿರಿ ಅನ್ನುವಿರಿ
ನಿನ್ನ ರಕ್ತ ಹೆಂಗಿರುವುದೋ ವಂಚಕರೆ
ನಮ ರಕ್ತ ಕೆಂಪಗಿರುವುದೊ

ನಿನ್ನ ಸಾವು ಕಂಡು
ಮುಯ್ಯಿಗೆ ಮುಯ್ಯಿ ಎಂದು
ದಲಿತ ದಂಡೂ ಕೂಡಿ ಬೆಂಕಿ ಜ್ವಾಲೆಯಾಗಿ
ಎದ್ದು ಬರುತಿದೆ ತಂಗಿ
ನನ್ನ ಕೂಲಿಯ ತಂಗಿ.

ಹಾಲು ಕುಡಿವ ಕೂಸಾ ಕೂಲಿಗೆ ಹೋಗುತಾದ ದಿವಸಾ
ತುತ್ತು ಕೂಳಿಗೆ ಗೇಣುಬಟ್ಟೆಗೆ ಬದುಕು ಬಿಟ್ಟೆಯಾತಾ
ಘಾಸಿಯಾಗುವ ಕೂಸಿನ ಕೂಲಿ ಕಾಸಿನ ಕಿಮ್ಮತ್ತಾ

ಬರುತಿಹೆವು ನಾವು ಬರುತಿಹೆವು ||ಪ||
ಯುಗ ಯುಗಗಳಿಂದ ನೀವು ತುಳಿದ ಜನಗಳ
ಕೊರಳ ದನಿಗಳೋ ನಾವುಗಳೂ
ಅಸಮಾನತೆಯನು ಸುಟ್ಟು ಬಿಡಲು
ಭುಗಿಲೆದ್ದ ಬೆಂಕಿಯ ಜ್ವಾಲೆಗಳು.

ನಮ್ಮೂರ ಗುಡಿಯನ್ನು ಕಟ್ಟಿದೋರು ನಾವಣ್ಣ
ಕಟ್ಟಿದೋರು ನಮಗೆಲ್ಲಾ ಹೊಲೆಮಾದಿಗರೆನುತಾರೆ.

ಗುಡಿಸಲಲ್ಲಿ ನೀನು ಗೋಳಾಡುವೆ ಯಾತಕಮ್ಮ!!
ಗೋಳಾಡುವೆ ಯಾತಕಮ್ಮ
ಬಾಧೆಯಿಂದ ನೀನು ಬಾಳುವೆ ಯಾತಕಮ್ಮ!!

ಶಾರಿ ಗಂಜಿಗಾಗಿ ಸೇರು ಬೆವರು ಸುರಿಸುತಾ
ಊರೂರು ಅಲೆಯೋರು ಯಾರಯ್ಯ
ಈ ನಾಡ ಕಟ್ಟಿದೋರು ನಾವೆಲ್ಲಿಗೋಗಬೇಕು
ಕೂಲಿಯವರು ನಾವು ಕೇಳಯ್ಯ

ಯಾರಿಗೆ ಬಂತು ಎಲ್ಲಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ
ಜನಗಳ ತಿನ್ನುವ ಬಾಯಿಗೆ ಬಂತು
ಟಾಟಾ ಬಿರ್ಲಾರ ಜೋಬಿಗೆ ಬಂತು
ನಲವತ್ತೇಳರ ಸ್ವಾತಂತ್ರ್ಯ.

ಯಾರಿಗೇಳಲಯ್ಯ ಈ ಹೆಣ್ಣ ಗೋಳ ಕತೆಯ ಏನು ಮಾಡಲಯ್ಯ
ಈ ಹೆಣ್ಣ ಹಾಳ ವ್ಯಥೆಯ
ಯಾರಿಗೇಳಿದರು ಬಾಧೆ ತೀರಿಸರು ಯಾರಿಗೇಳಲಯ್ಯ!! ಯಾರಿಗೇಳಲಯ್ಯ...!!

ದೇಹದೊಳಗಿನ ರಕ್ತ ಒಂದೆ
ಬಡವರೆಲ್ಲರ ಬಾಧೆ ಒಂದೆ
ಮತದ ಮತ್ತಲ್ಲೆ ಮಣ್ಣಾಗ ಬೇಡ ; ಅಣ್ಣಾ ಕೂಲ್ಯಣ್ಣ
ನಿನ ಓಂದೆ ದಲಿತ ದಂಡು ಇದೆ ಬಾರೋ ರೈತಣ್ಣ.
ಕಾರಣ ಗೊತ್ತಾಗಿದೆ

ಮುಂದೆ ದಾರಿ ತಿಳಿದಿದೆ
ಕ್ರಾಂತಿ ದಾರಿಯಲಿ ನಡೆದು
ಹೊಸನಾಡನು ಕಟ್ಟುವೆವು.
ಹೋರಾಟ ನಮ್ಮದೋ ಜಯ ನಮ್ಮದೊ

ಕೂಲಿ ರಾಜ್ಯ ಬರುವ ತನಕ
ಕೂಲಿ ಕನಸು ಚಿಗುರೋ ತನಕ
ಕೂಲಿಯವರೆಲ್ಲ ಕೂಡಿ
ದಲಿತ ಸಂಘ ಸೇರಿಕೊಂಡು
ಸುಲಿಗೆಕೋರರ ಎದೆಗಳಲ್ಲಿ
ಕಿಡಿಗಳಾಗಿ ಸಿಡಿಯುತ್ತವೆ.

ಯಾವ ಕುಲವಯ್ಯ ನಮ್ಮದ್ಯಾವ ಮತವಯ್ಯ ||ಪ||
ಮಣ್ಣುಕಲಸಿ ಇಟ್ಟಿಗೆ ಮಾಡಿ । ಮನೆಯ ಕಟ್ಟಿ ಕೊಟ್ಟಾಗ ||ಪ||
ಮೈಸವಸಿ ದುಡಿದುನಾವು ದಾನ್ಯರಾಶಿ ಕೊಟ್ಟಾಗ ||ಯಾವ ಕುಲವಯ್ಯ||

ಲಕ್ಷ ಲಕ್ಷ ಕೊಟ್ಟೇವೆಂದು
ದೇಶವೆಲ್ಲ ಹೇಳಿಕೊಂಡು
ಓಟು ಕೇಳೋ ಕಾರು ಬಂತಣ್ಣ
ಮೆಟ್ಟು ತೆಗೆದು ಮೂತಿಗೊಡೆಯಣ್ಣ.

ಸಂಘದವರು ಬಂದಿದ್ರು ಮಾವ
ನಮಗೆ ಸಂಗತಿಗಳ ಹೇಳವ್ರೆ ಮಾವ
ಉರೂರು ಸುತ್ತಿಕೊಂಡು ನಮ್ಮೂರ್ಗೆ ಬಂದಿದ್ರು

ಕುಲ ಮತಗಳ ನಡುವೆ ನಿಂತು
ಬೇಧಗಳ ಛಿದ್ರಗೊಳಿಸಿ
ಬೆವರ ಬಸಿಯೋ ಜನ ನಾವು
ಎದೆಯೆತ್ತಿ ನಿಂತರೆ

ನೀ ಹೆಂಗೆ ಬದುಕಿಯೋ ತಮ್ಮ
ಈ ರಾಕ್ಷಸರ ರಾಜ್ಯದಲ್ಲಿ

ಹಾಡುವ ಮುನ್ನ
ದನಿಗೊಡುವ ಬನ್ನಿ ಮನಗೂಡಿ ಬನ್ನಿ
ಓ ಬನ್ನಿ ಬಂಧುಗಳೇ
ಕ್ರಾಂತಿ ಪಥಕೆ.

ಕಣ್ಣಿಟ್ಟು ನೋಡಬಾರದ ಓ ಚಂದಿರನೆ
ಮನಸಿಟ್ಟು ಕೇಳಬಾರದ!!

ಹಾಲು ಕುಡಿವ ಕೂಸಾ ಕೂಲಿಗೆ ಹೋಗುತ್ತಾದ ದಿವಸ ||
ಅಪ್ಪ ಅಮ್ಮ ಕೂಡಿ ಹಗಲಿರಳು ದುಡಿದರೂ
ಗಂಜಿಗೂ ಗತಿಯಾಯ್ತು
ಮಣ್ಣು ಕುಂಪೆ ಮಾಡುವಾಗ ಮನಸ್ಸಂಗೆ ಆಗೋಯ್ತು
ಕೂಲಿಗೆ ಹೊಂಟೊಯ್ತು

ಕುಂತು ಕೇಳಿರಿ ನೀವು ಕೂಲಿಜನ
ನಿತ್ಯ ಬದುಕಿನ ಪದವ ಹೇಳುವೆನ
ಕತೆಯಲ್ಲ, ಗೀತೆಯಲ್ಲ ಈ ಪದವ
ಕಷ್ಟ ಪಡುವ ಜನರ ಕಾರಾಳವ



ಸವದತ್ತಿ ಯಲ್ಲವ್ವ ಕಲಿವೋಳೆ ಹುಲಿಗೆವ್ವ
ದುನಿಯಾದ ದುರುಗವ್ವನೆ
ಉದೋ ಎಂಬ ಶಬುದ ನೀ ಹೇಳಬೇಕಾ
ಹುಲಿಗೆವ್ವ ಯಲ್ಲವ್ವನೇ.

ಕೊಲೆ ಸುಲಿಗೆ ನಾಡೊಳಗೆ ಅವಮಾನ ಅತ್ಯಾಚಾರ
ನಾಡಲ್ಲವೋ ಇದು ವಿಶದ ಸಮುದ್ರ

ಮನೆ ಮನೆಯು ಕತ್ತಲೆ ಪ್ರತಿ ಕಣ್ಣ ಕಣ್ಣೀರು
ರಾಜ್ಯ ಬಂದಿದ್ಯಾರಿಗೊ ರಾಮಣ್ಣ ಸುಖವು ದಕ್ಕಿದ್ಯಾರಿಗೋ

ಈ ಹೋರಾಟದ ಹಾಡುಗಳು ಭಾವಕೇಂದ್ರಿತ ನೆಲೆಯಿಂದ ಹುಟ್ಟಿ; ಆವೇಶವನ್ನು ತುಂಬಿಕೊಂಡು ಒಂದು ಸೈದ್ಧಾಂತಿಕ ಕೇಂದ್ರಿತ ಆಶಯಕ್ಕೆ ಸೀಮಿತವಾಗಿರದೆ ಅದು ತನ್ನ ಪಾರಂಪರಿಕ ನೋವನ್ನು ಬಿಂಬಿಸಲು ಪ್ರಯತ್ನಿಸುತ್ತದೆ. ಪಾರಂಪರಿಕ ನೋವು ಮತ್ತು ಅದರಿಂದಾದ ಸಂಕಷ್ಟ ಸಂಕೋಲೆಗಳನ್ನು ಭಾವ ರಾಗ ತುಂಬಿ ಹಾಡಲು ಆಯಾ ಪರಿಸರದಿಂದಲೇ

ಬರುತ್ತವೆ. ಈ ಹಾಡುಗಳಿಗೆ ಓದಿನ ಹಂಗಿಲ್ಲ ಹಾಡುವ ಅನುಭವವಿದ್ದರೆ ಒಳಗೆ ಸೇರಿಕೊಳ್ಳುತ್ತವೆ. ಹಾಡಿಸುತ್ತವೆ. ಇಲ್ಲವೆ ಮನದೊಳಗೆ ಗುನುಗುತ್ತವೆ.

ಮೇಲೆ ೨೫ ಹಾಡಿನ ಭಾಗಗಳನ್ನು ಉಲ್ಲೇಖಿಸಲಾಗಿದೆ. ಅವುಗಳೆಲ್ಲವೂ ಶೋಷಿತ ದಲಿತ ಸಮುದಾಯಗಳ ಬಗೆಗೆ ವಿವರಿಸುವಂಥವುಗಳೇ ಆಗಿವೆ. ಇದನ್ನು ಹಾಡುವಂಥವರು ಯಾರು? ಯಾರ ಬಗ್ಗೆ ಹಾಡುತ್ತಾರೆ?, ಏಕೆ ಹಾಡುತ್ತಾರೆ?, ಅದು ಯಾರ ವಿರುದ್ಧವಾಗಿ ಹಾಡುತ್ತಾರೆ? ಎಂಬ ನಾಲ್ಕು ಪ್ರಶ್ನೆಗಳು ಉಗಮಗೊಳ್ಳುತ್ತವೆ. ಈ ಶತಮಾನದ ಎಪ್ಪತ್ತರ ದಶಕದಿಂದ ಈಚೆಗೆ ಕಂಡುಬಂದ ದಲಿತ ಸಾಹಿತ್ಯ ಮತ್ತು ಅವರ ಚಳುವಳಿಗಳು ಸಮಾಜವನ್ನು ಮೌನಗೊಳಿಸಿದವು. ಅವುಗಳು ಸಮಾಜದ ವಿರುದ್ಧ, ಸಮಾಜದಲ್ಲಿನ ಧರ್ಮ ಜಾತಿಗಳ ವಿರುದ್ಧ, ಅದರ ಯಜಮಾನಿಕೆಯ ವಿರುದ್ಧ ಬಂದ ಹಾಡುಗಳು ಒಂದು ಕಡೆಯಾದರೆ; ತಮ್ಮ ಸಮುದಾಯಗಳು ಬದುಕುತ್ತಿರುವ ಸಾಮಾಜಿಕ ವಾಸ್ತವವು ಮತ್ತೊಂದು ಕಡೆಯದು. ಇದರಲ್ಲಿ ಊಳಿಗಮಾನ್ಯ ಸಮಾಜದ ವ್ಯವಸ್ಥೆಯಲ್ಲಿನ ದಲಿತರು ಯಾವ ಸ್ತರದಲ್ಲಿದ್ದಾರೆ, ಅವರ ಸ್ತ್ರೀಯರು ಯಾವ ಸ್ಥಿತಿಯಲ್ಲಿದ್ದಾರೆ ಎಂಬುದನ್ನು ಗಮನಿಸಬೇಕಾಗುತ್ತದೆ. ಇವರಲ್ಲಿ ಗಂಡು ಹೆಣ್ಣುಗಳಿಗೆ ಶೋಷಣೆಯಲ್ಲಿ ಬೇಧವಿಲ್ಲ. ಅವರವರ ಪಾಲಿಗೆ ಬಂದ ಶೋಷಣೆಯ ನೋವನ್ನು ಅನುಭವಿಸುತ್ತಲೇ ಬಂದಿದ್ದಾರೆ. ಇವರ ದನಿಯಾಗಿ ಬಂದ ದಲಿತ ಸಾಹಿತ್ಯ ಮತ್ತು ಚಳುವಳಿಯು ೭೦ರ ದಶಕದಿಂದ ಈಚೆಗೆ ತನ್ನ ಪ್ರಖರತೆಯನ್ನು ಪಡೆದುಕೊಂಡಿತು. ಮತ್ತೊಂದು ಕಡೆ ಈ ಹಾಡುಗಳು ಆಳುವ ಶಕ್ತಿಗಳ ವಿರುದ್ಧ ಶಕ್ತಿ ರಾಜಕಾರಣದ ವಿರುದ್ಧ ದನಿ ಕೂಡಿಸಿದವು.

ಹೋರಾಟದ ಹಾಡುಗಳು ಸಮುದಾಯ ಸಮುದಾಯಗಳಲ್ಲಿನ 'ಅಸಮಾನತೆಯನ್ನು ಸುಟ್ಟುಬಿಡಲು ಭುಗಿಲೆದ್ದ ಬೆಂಕಿಯ ಜ್ವಾಲೆಗಳು' ಆದವು. ದಲಿತರು ದುಡಿಯುವುದು 'ಶಾರಿ ಗಂಜಿಗಾಗಿ' ಸುರಿಸುವುದು 'ಸೇರು ಬೆವರು'. ಹೋರಾಟದ ಹಾಡುಗಳಲ್ಲಿ ಕೂಲಿಯವರ ಸ್ಥಿತಿಯನ್ನು ವಿವರಿಸುವುದು ಮತ್ತು ಭೂಮಾಲಿಕರ ಪಾತ್ರವನ್ನು ವಿವರಿಸುವುದು ಆಗಿದೆ. ಭೂಮಿಯಲ್ಲಿ ದುಡಿವ ಕೂಲಿ ಕೆಲಸಗಾರರ ಪಾತ್ರವನ್ನು ಬಹಳ ಮುಖ್ಯವಾಗಿ ಗಮನಿಸಬೇಕು. ಭೂಮಿಯೊಂದಿಗಿನ ಸಂಬಂಧ ಮತ್ತು ಅದರಿಂದ ಬರುವ ಆದಾಯ ಯಾರಿಗೆ, ಯಾರಿಗೆ ಸೇರುತ್ತಿದೆ ಎಂಬುದು ಪ್ರಮುಖ ಪ್ರಶ್ನೆಯಾಗಿದೆ. ಮನುಷ್ಯ ಜೀವಿಯ ನಡುವೆ ಇರುವ ವ್ಯತ್ಯಾಸವನ್ನು ಅಸಮಾನತೆಯನ್ನು ತಂದು ಒಡ್ಡುವ ಸಮುದಾಯಗಳನ್ನು ಹೋರಾಟದ ಹಾಡುಗಳು ಪ್ರಶ್ನಿಸುತ್ತವೆ. 'ನಿಮ್ಮರಕ್ತ ಹೆಂಗಿರುವುದೋ ವಂಚಕರೆ ನಮ್ಮ ರಕ್ತ ಕೆಂಪಗಿರುವುದು'. 'ನಾವು ಕಟ್ಟಿದ ಗುಡಿಗೆ ನಾವು ಯಾರು ವೋಗಂಗಿಲ್ಲ' ಇಲ್ಲಿ ಗುಡಿ ಕಟ್ಟೋರು, ಡ್ಯಾಮ್ ಕಟ್ಟೊರು, ಮನೆ, ಬಂಗಲೆ ಕಟ್ಟೋರು, ಅನ್ನ ಬೆಳೆಯೋರು ದಲಿತರೇ ಆದರೆ ದಲಿತ ಆಹಾರ ಸ್ಥಿತಿ ಅವರ ಸಾಮಾಜಿಕ ಆರ್ಥಿಕ, ಧಾರ್ಮಿಕ ಸ್ಥಿತಿ ಯಾವ ಮಟ್ಟದಲ್ಲಿದೆ? ಎಂಬುದು ಈ ಹೋರಾಟದ ಹಾಡುಗಳಲ್ಲಿವೆ. ಕನಿಷ್ಟ ಅವಶ್ಯಕತೆಯಲ್ಲಿಯೂ ವಂಚಿತರಾಗಿರುವ ಈ ಸಮುದಾಯಗಳು ಸಮಾಜದಲ್ಲಿ ಪ್ರಮುಖ ಚಳುವಳಿಯ ವಾಹಿನಿಯಾಗಿ ಕಂಡುಬಂದದ್ದನ್ನು ಕಾಣುತ್ತೇವೆ.

ಅಲ್ಲದೆಯೂ ಈ ಹಾಡುಗಳು ಊಳಿಗಮಾನ್ಯ ವ್ಯವಸ್ಥೆಯ ಯಜಮಾನಿಕೆಯನ್ನು ಕೇಂದ್ರವಾಗಿಟ್ಟುಕೊಂಡು ಅದರ ವಿರುದ್ಧ ಪ್ರತಿಭಟನೆಯನ್ನು ಒಡ್ಡುವುದಲ್ಲದೆ ಆಳುವ ವರ್ಗಗಳ ವಿರುದ್ಧ; ಶಕ್ತಿ ರಾಜಕಾರಣದ ವಿರುದ್ಧ ಎತ್ತಿದ ಪ್ರಶ್ನೆಯು ಬಹು ಗಂಭೀರವಾಗಿದೆ. ಸಾಮಾಜಿಕ ಅಸಮಾನತೆಯ ನಡುವೆ ಸ್ವಾತಂತ್ರ್ಯ ಎನ್ನುವ ಹಣೆಪಟ್ಟಿಯನ್ನು

ಕಟ್ಟಿಕೊಂಡು ಬದುಕ ನಡೆಸುತ್ತಿದ್ದೇವೆ. ವಾಸ್ತವವಾಗಿ ಸ್ವಾತಂತ್ರ್ಯ ಕಲ್ಪನೆಯು ಯಾವ ಮಟ್ಟದಲ್ಲಿದೆ ಎಂಬುದು ಇಲ್ಲಿಯ ಹಾಡುಗಳಲ್ಲಿ ಕಂಡುಬರುತ್ತವೆ. ಆಳುವ ಶಕ್ತಿರಾಜಕಾರಣವು ದಲಿತ ಸಮುದಾಯಕ್ಕೆ ಮಾಡಿದ್ದು ಏನು? ಎಂಬುದು ಅದಕ್ಕೆ ಪ್ರತಿಯಾಗಿ ದಲಿತ ಚಳುವಳಿಯ ತಿರಸ್ಕೃತವು ಬಹಳ ಖಾರವಾದದ್ದೆ. 'ಲಕ್ಷ ಲಕ್ಷ ಕೊಟ್ಟೇವೆಂದು ದೇಶವೆಲ್ಲ ಹೇಳಿಕೊಂಡು ಓಟುಕೇಳೋ ಕಾರು ಬಂತಣ್ಣ ಮೆಟ್ಟು ತೆಗೆದು ಮೂತಿಗೊಡೆಯಣ್ಣ'. ಬದುಕು ಅನಿವಾರ್ಯ ಆಳುವ ಶಕ್ತಿರಾಜಕಾರಣವೇ ಶೋಷಣೆಯನ್ನು ಮಾಡುತ್ತಿರುವ ಸಂದರ್ಭದಲ್ಲಿ ಶೋಷಿತ ದಲಿತ ಸಮುದಾಯಗಳು ಹೇಗಾಗುತ್ತವೆ ಎಂಬುದು ದಲಿತ ಚಳುವಳಿಯ ಹೋರಾಟದ ಪ್ರಧಾನವಾದ ಅಂಶ. ಏಕೆಂದರೆ ಈ ಹೊತ್ತಿಲ್ಲಿನ ಆಧುನಿಕತೆಯ ಪ್ರಪಂಚದಲ್ಲಿನ ದಲಿತ ಸಮುದಾಯಗಳ ಸೊರಗುವಿಕೆಯು; ಅವುಗಳನ್ನು ಒಂದು ದಿಕ್ಕಿಗೆ ಕೊಂಡೊಯ್ಯಲು ಈ ಹಾಡುಗಳು ಪ್ರೇರಕವಾಗುತ್ತವೆ.

'ನನ್ನ ಕೂಲಿಯ ತಂಗಿ' 'ಗುಡಿಸಲಲ್ಲಿ ನೀನು ಗೋಳಾಡುವೆ ಯಾತಕಮ್ಮ' 'ಯಾರಿಗೇಳಲಯ್ಯ ಈ ಹೆಣ್ಣಗೋಳ ಕತೆಯ' 'ನನ ತಂಗಿ ಅನುಸೂಯ' ಇವು ಶೋಷಿತ ದಲಿತ ಹೆಣ್ಣನ್ನು ಕುರಿತಂತವುಗಳು. ದಲಿತ ಸ್ತ್ರೀಯ ಪುರುಷರ ಶೋಷಣೆಗಳನ್ನು ಪ್ರತ್ಯೇಕವಾಗಿ ನೋಡುವುದರಿಂದ ಅವುಗಳ ಸೂಕ್ಷ್ಮತೆಗಳು ರಾಚುತ್ತವೆ. ಇವು ಬರೀ ದಲಿತ ಹೆಣ್ಣಿನ, ಗಂಡಿನ ಶೋಷಣೆಯಂತೆ ಮಾತ್ರದಲ್ಲದೆ ಇಡೀ ಸಮುದಾಯದ ಶೋಷಣೆಯಾಗಿ ಕಂಡುಬರುತ್ತವೆ. ಸ್ತ್ರೀಯ ಬಗ್ಗೆ, ಅವಳ ವಸ್ತುಸ್ಥಿತಿಯ ಬಗ್ಗೆ ವಾಸ್ತವವಾಗಿ ಬರೆಯುವುದು ಎಂದರೆ ಅದು ಹೀನಾಯವಲ್ಲ ಮತ್ತು ಅವಳು 'ನಿಕೃಷ್ಟಳು' ಎಂದೂ ಅಲ್ಲ. ಅದು 'ಸಾಮಾಜಿಕ ಕಳಕಳಿ' ಮತ್ತು 'ಸಾಮಾಜಿಕ ಬದ್ಧತೆ'ಯಾಗುತ್ತದೆ. ದಲಿತ ಸ್ತ್ರೀಯ ವಸ್ತುಸ್ಥಿತಿಯ ಮೂಲಕ ಸ್ತ್ರೀವಿರೋಧಿಯ ಒಟ್ಟು ನೆಲೆಯ ಪ್ರಶ್ನಿಸುವುದಂತಾಗುತ್ತದೆ. ಅದು ಜೀವ ವಿರೋಧಿಯೂ ಕೂಡ ಹೌದು. ಏಕೆಂದರೆ ಅದಕ್ಕೆಲ್ಲಾ ಕಾರಣಕರ್ತರು ಸಮಾಜದ ಪ್ರತಿಷ್ಠಿತ ಮೇಲು ವರ್ಗದವರೇ. ಮತ್ತು ಅವರು ಪಾಲಿಸಿಕೊಂಡು ಬಂದ ನಿಯಮಗಳೇ ಹೌದು.

ದಲಿತ ಕಾವ್ಯ, ಕವನ, ಹಾಡುಗಳು ಈ ಹೊತ್ತಿನ ಸಾಂಸ್ಕೃತಿಕ ಸಂದರ್ಭದ ಸವಾಲಿಗೆ ದನಿಯಾಗಿ ನಿಂತವು. ಅವುಗಳು ಸಮಾಜದಲ್ಲಿ ತಮ್ಮ ಸಮುದಾಯಗಳ ಸ್ಥಾನ ಎಂಥಹದ್ದು ಎಂಬುದನ್ನು ಗುರುತಿಸಿಕೊಳ್ಳುವುದರ ಜೊತೆಗೆ ಸಿಟ್ಟು, ಆಕ್ರೋಶ, ಅಬ್ಬರ, ವೇದನೆ, ನೋವು, ಸಂಕಟ, ಮೌನ, ಮಾತುಗಳಾಗಿ ಕವನಗಳಲ್ಲಿ ಮೂಡಿದವು. ಇದು ಸ್ಪರ್ಧಾತ್ಮಕ ಜಗತ್ತು. ಇಲ್ಲಿ ಸ್ಪರ್ಧೆಗಿಳಿಯುವುದು ಮುಖ್ಯವಲ್ಲ; ಸ್ಪರ್ಧೆಗೆ ತಯಾರಾಗುವುದೇ, ತಯಾರಾಗುತ್ತಿರುವುದೇ, ಪ್ರಮುಖವಾಗುತ್ತದೆ. ಇವು ದಲಿತ ಸಂಸ್ಕೃತಿಯನ್ನು ಅದರ ಸಮಕಾಲೀನತೆಯಲ್ಲಿ ಗುರ್ತಿಸುವ ಭಾಗವಾಗಿ ನಿಲ್ಲುತ್ತವೆ.

ಅಡಿ ಟಿಪ್ಪಣಿ

೧. ಕೆ.ಬಿ.ಸಿದ್ದಯ್ಯ, 'ಬಕಾಲ' ಲೇಖಕರ ಮಾತಿನಿಂದ
೨. ಎಚ್.ಎಂ.ಚೆನ್ನಯ್ಯ, 'ಮನಜ' 'ಅತ್ತೆಸೊಸೆ ಆತ್ಮಕಥೆ' ಮುನ್ನುಡಿಯಿಂದ
೩. ಬಿ.ಚಿನ್ನಸ್ವಾಮಿ, 'ಪ್ರಸ್ತಾವನೆ' 'ಕೊಂಡಿಗಳು ಮತ್ತು ಮುಳ್ಳು ಬೇಲಿಗಳು'
೪. ಬಿ.ಚಿನ್ನಸ್ವಾಮಿ, 'ಅರ್ಪಣೆ' - ಅದೇ -
೫. ಸತ್ಯಾನಂದ ಪಾತ್ರೋಟ, ಅರಿಕೆ 'ಕರಿನೆಲದ ಕಲೆಗಳು'
೬. ಬರಗೂರು ರಾಮಚಂದ್ರಪ್ಪ, ಮುನ್ನುಡಿ; 'ಅದೋ ಜಗತ್ತಿನ ಕಾವ್ಯ'
೭. ಬರಗೂರು ರಾಮಚಂದ್ರಪ್ಪ, 'ಪ್ರಸ್ತಾವನೆ' 'ಬಂಡಾಯ ಕಾವ್ಯ'
೮. ಎಚ್ಚೆಸ್ಕೆ, 'ಸ್ವಾಭಿಮಾನದ ಬೀಡಿಗೆ' ಕುರಿತು 'ಸ್ವಾಭಿಮಾನದ ಬೀಡಿಗೆ'
೯. ಸಂ : ಕೆ.ಬಿ.ಸಿದ್ದಯ್ಯ, ನಟರಾಜ ಬೂದಾಳು., ಎಚ್ ಗೋವಿಂದಯ್ಯ. 'ದಲಿತ ಕಾವ್ಯ'

## ಕಥಾಸಾಹಿತ್ಯ : ಹಿನ್ನೋಟ

ಕನ್ನಡ ದಲಿತ ಸಾಹಿತ್ಯದಲ್ಲಿ ಕತೆ-ಕಾದಂಬರಿಗಳು ವಿಶಿಷ್ಟ ಸ್ಥಾನವನ್ನು ಪಡೆದಿವೆ. ಅವುಗಳಲ್ಲಿ ಕಾದಂಬರಿಗಿಂತ ಕತೆಗಳದು ದೊಡ್ಡಪಾಲು. ಈ ಭಾಗದಲ್ಲಿ ಕತೆ-ಕಾದಂಬರಿಗಳನ್ನು ಒಟ್ಟಿಗೆ ಗ್ರಹಿಸಲಾಗಿದೆ. ಆದ್ದರಿಂದ ಇದನ್ನು ಒಟ್ಟಾರೆಯಾಗಿ ಕಥಾಸಾಹಿತ್ಯ ಎಂದು ಕರೆಯಲಾಗಿದೆ. ಈ ಕಥಾ ಸಾಹಿತ್ಯದ ಕೆಲವು ಅಂಶಗಳನ್ನು ಇಲ್ಲಿ ಗ್ರಹಿಸಿ ಅದರ ಹಿನ್ನೋಟವನ್ನು ಚರ್ಚಿಸಲಾಗುವುದು.

ಜನಪದರು ಕತೆಗಳನ್ನು ಹೇಳುವ-ಕೇಳುವ ಮೌಖಿಕ ಪರಂಪರೆಗೆ ದೊಡ್ಡ ಇತಿಹಾಸವಿದೆ. ಅವುಗಳು ಪರಂಪರೆಯಿಂದ-ಪರಂಪರೆಗೆ ಸಾಗುತ್ತಾ ಬಂದಿವೆ. ಅವುಗಳಲ್ಲಿ ದಲಿತ ಪರಂಪರೆಗೆ ಸಂಬಂಧಿಸಿದಂತ ಹಲವು ಕಥೆಗಳು ಇವೆ. ಅವು ಊರಿಗೆ ಸಂಬಂಧಿಸಿದಂತೆ ಇರಬಹುದು, ಇಲ್ಲವೆ ತಮ್ಮ ಜನಾಂಗಕ್ಕೆ ಸಂಬಂಧಿಸಿದಂತೆ ಇರಬಹುದು. ಮತ್ತೆ ಕೆಲವು ಮೌಖಿಕ ಪರಂಪರೆಗೆ ಸಂಬಂಧಿಸಿರಬಹುದು.

ಜಾನಪದ ಕತೆಗಳಲ್ಲಿ ಹಲವು ಬಗೆಗಳಿವೆ. ಅವುಗಳಲ್ಲಿ ಮಕ್ಕಳಿಗೆ ಸಂಬಂಧಿಸಿದ ಕತೆಗಳು; ಪುರಾಣಕ್ಕೆ ಸಂಬಂಧಿಸಿದ ಕತೆಗಳು; ದೇವರು-ದೆವ್ವಗಳಿಗೆ ಸಂಬಂಧಿಸಿದ ಕತೆಗಳು; ಪ್ರಾಕೃತಿಕ ಕಥೆಗಳು ಪ್ರಮುಖವಾಗಿ ಕಾಣಸಿಗುತ್ತವೆ. ಈ ಕತೆಗಳು ತಮ್ಮ ಕತೆಗಳಿಗೆ ಸಂಬಂಧಪಟ್ಟಂತೆ ತಮ್ಮದೇ ಆದಂತ ಬಂಧವನ್ನು ಹೊಂದಿರುತ್ತವೆ. ಅವು ಕೆಲವು ನೀತಿಗೆ ಸಂಬಂಧಿಸಿದರೆ, ಮತ್ತೆ ಕೆಲವು ತಿಳುವಳಿಕೆಗೆ ಸಂಬಂಧಿಸಿರುತ್ತವೆ. ಈ ಮೌಖಿಕ ಕತೆಗಳು ತಮ್ಮ ಬದುಕಿನೊಂದಿಗೆ ಒಂದು ರೀತಿಯ ನಂಟನ್ನು ಹೊಂದಿಸುತ್ತವೆ. ಈ ಕತೆಗಳಲ್ಲಿ ಉದಾಹರಣೆಯಾಗಿ: ಕಾಗೆ-ಗುಬ್ಬಕ್ಕನ ಕುರಿತ, ನರಿಯ ತಂತ್ರಗಾರಿಕೆಯನ್ನು ಕುರಿತ, ನಕ್ಷತ್ರಗಳನ್ನು ಕುರಿತ, ಊರ ಸಂಪ್ರದಾಯಗಳಿಗೆ, ಕೆರೆ-ದೇವಾಲಯಗಳಿಗೆ, ದೇವರು-ದೆವ್ವಗಳಿಗೆ, ಜಾತಿ-ಧರ್ಮ-ಆಚರಣೆಗಳಿಗೆ, ಹೀಗೆ ಮುಂತಾದವುಗಳಿಗೆ ಸಂಬಂಧಪಟ್ಟಂತೆ ಆಗಿರಬಹುದು. ಅವುಗಳ ಬಗ್ಗೆ ಇಲ್ಲಿ ಒತ್ತುಕೊಡದೆ ಲಿಖಿತ ಪರಂಪರೆಯ ದಲಿತ ಕಥಾಸಾಹಿತ್ಯವನ್ನು ಪರಿಗಣಿಸಲಾಗುವುದು.

ಸಣ್ಣಕತೆಗಳು ಮೊದಲು ಕಂಡುಬಂದದ್ದು ಈ ಶತಮಾನದ ಆರಂಭದಲ್ಲಿ. ಅವುಗಳು ಪತ್ರಿಕೆಯ ಮೂಲಕ ಕಂಡು ಬಂದವು. ೧೯೦೦ರಲ್ಲಿ 'ಸುವಾಸಿನಿ' ಎಂಬ ಪತ್ರಿಕೆಯಲ್ಲಿ ಪ್ರಕಟಗೊಂಡ 'ನನ್ನ ಚಿಕ್ಕಪ್ಪ' 'ನನ್ನ ಚಿಕ್ಕತಾಯಿ',

'ಕಮಲಾಪುರದ ಹೋಟಲಿನಲ್ಲಿ' ಮುಂತಾದ ಕತೆಗಳು. ಇವುಗಳನ್ನು ಪಂಜೆ ಮಂಗೇಶರಾಯರು ಬರೆದವರು. ಈ ಕಾಲದಲ್ಲಿ ಸಣ್ಣ ಕತೆಗಾರರಾಗಿ ಕೆರೂರು ವಾಸುದೇವಾಚಾರ್ಯರು, ಎಂ.ಎಸ್.ಕಾಮತರು, ಮಾಸ್ತಿ ವೆಂಕಟೇಶ ಅಯ್ಯಂಗಾರರು ಮುಂತಾದವರು ಕಂಡುಬಂದರು. ಮಾಸ್ತಿಯವರು ಸಣ್ಣ ಕತೆಗಳಿಗೆ ಸಮಗ್ರ ಸ್ವರೂಪವನ್ನು ತಂದು ಕೊಟ್ಟವರು ಎಂದು ಹೇಳಬಹುದು. ಮಾಸ್ತಿಯವರು ಬದುಕಿನ ಅನುಭವಗಳ ಸಂಕೀರ್ಣತೆಯನ್ನು ಕತೆಗಳ ಮೂಲಕ ಹಿಡಿದಿಟ್ಟರು. ಸಂಕೀರ್ಣ ಅನುಭವಗಳ ಅರಿವು ಅವರ ಕತೆಗಳಲ್ಲಿ ಕಂಡುಬಂದವು. ಅವರ ಕತೆಗಳು ತಮ್ಮದೇ ಆದ ಕಥಾ ನಿರೂಪಣೆಯ ತಂತ್ರಗಾರಿಕೆಯನ್ನು ಗುರ್ತಿಸುವಂತೆ ಕಂಡುಬಂದವು. ಮಾಸ್ತಿಯವರ ಕತೆಗಳಲ್ಲಿ ಪ್ರೀತಿ-ಪ್ರೇಮ, ನೋವು, ಅನ್ಯಾಯ, ಮೋಸ, ದುಷ್ಟತನದ ಬಗ್ಗೆ ಚಿತ್ರಿಸಿದ್ದಾರೆ. ಉನ್ನತ ಅಧಿಕಾರಿಯಾಗಿದ್ದ ಮಾಸ್ತಿಯವರು ಸಮಾಜದಲ್ಲಿ ನಡೆಯುವ ದುಷ್ಟತನವನ್ನು ನೋಡಿದ್ದರು. ಅವರ ಕತೆಗಳಲ್ಲಿ ಸಮಾಜದ ಬಗೆಗಿನ ಅರಿವು ಇದೆ. ಮಾಸ್ತಿಯರ ನಂತರ ಕನ್ನಡದಲ್ಲಿ ಕಥಾ ಸಾಹಿತ್ಯವು ಹಲವರಿಂದ ಕಂಡುಬಂತು. ಇವರು ಒಂದಲ್ಲಾ ಒಂದು ರೀತಿಯಲ್ಲಿ ಮಾಸ್ತಿಯವರ ಕತೆಗಳಿಂದ ಪ್ರೇರಣೆಯನ್ನು ಪಡೆದದ್ದೂ ಉಂಟು. ಅವರಲ್ಲಿ ಎಂ.ವಿ. ಸೀತಾರಾಮಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಅಶ್ವತ್ಥ, ಭಾರತೀಪ್ರಿಯ, ಸಿ.ಕೆ.ವೆಂಕಟರಾಮಯ್ಯ, ಆನಂದ ಮುಂತಾದವರು.

ಪ್ರಾರಂಭದ ಕನ್ನಡದ ಕತೆಗಳು ಗ್ರಾಮೀಣ ಬದುಕಿನ ಹಿನ್ನೆಲೆಯನ್ನು ಹೊಂದಿದ್ದವು. ಈ ಕತೆಗಳು ಗ್ರಾಮೀಣ ಬದುಕಿನ ದಟ್ಟ ಅನುಭವಗಳನ್ನು ಕಟ್ಟಿದವು. ಕುವೆಂಪು, ಬೇಂದ್ರೆ ಮುಂತಾದವರ ಕತೆಗಳು ಈ ಕಾಲದಲ್ಲಿ ಕಂಡುಬಂದವು. ಆಧುನಿಕ ಸಾಹಿತ್ಯ ಪ್ರಕಾರಗಳು ಸೃಷ್ಟಿಗೊಂಡ ಕಾಲದಲ್ಲಿ ಬ್ರಿಟೀಷ್ ಸಾಮ್ರಾಜ್ಯಶಾಹಿಯ ಆಳ್ವಿಕೆ ಇಂಡಿಯಾದ ಹಲವು ಭಾಗಗಳಲ್ಲಿತ್ತು. ಇದರಲ್ಲಿ ಕರ್ನಾಟಕವೂ ಸೇರಿತ್ತು. ಸ್ಥಳೀಯ ಊಳಿಗಮಾನ್ಯಶಾಹಿಯು ಬ್ರಿಟೀಶ್ ಸಾಮ್ರಾಜ್ಯಶಾಹಿಯ ವಿರುದ್ಧ ದಂಗೆ, ಹೋರಾಟ, ಚಳುವಳಿಯನ್ನು ನಡೆಸುತ್ತಿತ್ತು. ಅವು ಕೆಲವು ಕಡೆ ಒಟ್ಟಾಗಿಯೂ; ಮತ್ತೆ ಕೆಲವು ಕಡೆ ಬಿಡಿಯಾಗಿಯೂ ಹೋರಾಟವನ್ನು ನಡೆಸುತ್ತಿದ್ದವು. ವಿದ್ಯಾವಂತರ ಅಥವ ಪ್ರಜ್ಞಾವಂತರ ಕಲ್ಪನೆಯಲ್ಲಿ ಸ್ವಾತಂತ್ರ್ಯ ಹೋರಾಟವು ತುಂಬಿತ್ತು. ದೇಶಪ್ರೇಮವು ನಾಡಿನ ಇತಿಹಾಸ, ಸಂಸ್ಕೃತಿ, ಕಲೆ, ಸಂಪ್ರದಾಯ, ಆಚರಣೆಯಲ್ಲಿ ತುಂಬಿತ್ತು. ಪರಿಸರದ, ಪ್ರಕೃತಿಯ ಬಗೆಗಿನ ಚಿತ್ರಣಗಳು ಕತೆ-ಕಾದಂಬರಿಗಳಲ್ಲಿ ಕಂಡುಬಂದವು. ಚರಿತ್ರೆಯ ವಸ್ತುಗಳು ಕಥಾ ಸಾಹಿತ್ಯದಲ್ಲಿ ಸೇರಿಕೊಂಡವು. ಕೆಲವು ಅನುವಾದ ಕಾದಂಬರಿಗಳೂ ಈ ಸಂದರ್ಭದಲ್ಲಿ ಕನ್ನಡಕ್ಕೆ ಬಂದವು. ರಾಷ್ಟ್ರೀಯತೆಗೆ ಸಂಬಂಧಿಸಿದ ಕಾದಂಬರಿಗಳು ನಾಡು-ನುಡಿಯ ಬಗ್ಗೆ ಅಂತರಾಳದ ಅಭಿಮಾನದಿಂದ ಹುಟ್ಟಿಕೊಂಡವು.

ನವೋದಯ ಸಂದರ್ಭದ ನಂತರದಲ್ಲಿ ಪ್ರಗತಿಶೀಲ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ಅಸ್ತಿತ್ವಕ್ಕೆ ಬಂತು. ೧೯೪೩ರಲ್ಲಿ ಪ್ರಗತಿಶೀಲ ಲೇಖಕರ ಸಂಘವು ಸ್ಥಾಪನೆಯಾಯಿತು. ಈ ಸಂದರ್ಭದಲ್ಲಿ ಸ್ವಾತಂತ್ರ್ಯ ಹೋರಾಟವು ತೀವ್ರ ಸ್ವರೂಪವನ್ನು ಹೊಂದಿತ್ತು. ನವೋದಯ ಸಾಹಿತ್ಯ ಸಂದರ್ಭದಲ್ಲಿ ಬ್ರಿಟೀಶ್ ಸಾಮ್ರಾಜ್ಯಶಾಹಿಗೆ ನೇರವಾಗಿ ಪ್ರತಿಭಟಿಸಲು ಆಗದಂತ ಸ್ಥಿತಿಯಲ್ಲಿ ಸಾಹಿತಿಗಳು ಇದ್ದರು. ಈ ಸಂದರ್ಭದಲ್ಲಿ ರಾಷ್ಟ್ರೀಯ ಚಳುವಳಿ ಆಗಿನ್ನೂ ಪ್ರಬಲಗೊಳ್ಳುತ್ತಿತ್ತು. ಪ್ರಗತಿಶೀಲ ಸಾಹಿತ್ಯ ಸಂದರ್ಭದಲ್ಲಿ 'ರಾಷ್ಟ್ರೀಯ ಸ್ವಾತಂತ್ರ್ಯ' ಚಳುವಳಿಗಾರರಲ್ಲಿ ತುಂಬಿತ್ತು. ಅದು ಅವರಿಗೆ ಚೈತನ್ಯ ಮತ್ತು ಸ್ಫೂರ್ತಿಯನ್ನು ಕೊಡುತ್ತಿತ್ತು. ಬ್ರಿಟೀಷ್ ಸಾಮಾಜ್ಯಶಾಹಿಯ ಧೋರಣೆಯಿಂದ ಜನಸಾಮಾನ್ಯರ ಸಂಕಷ್ಟಗಳು ಮತ್ತು ಅದರ ವಾಸ್ತವವು ಲೇಖಕರಲ್ಲಿ ಕೆದಕತೊಡಗಿತು. ಈ ಲೇಖಕರು ತಮ್ಮ ಹಿಂದಿನ ಲೇಖಕರಿಗಿಂತ ಭಿನ್ನವಾಗಿ ಬರೆಯಲು ತೊಡಗಿದರು. ಸಾಮಾಜಿಕ ಸಮಸ್ಯೆಗಳನ್ನು ಕುರಿತು ಶೋಷಣೆಯ ವಿರುದ್ಧ ಲೇಖಕರು ಬರೆದರು. ಇವರ ಬರವಣಿಗೆಯಲ್ಲಿ

ಶೋಷಿತ ಸಮುದಾಯಗಳು ಒಳಗೊಂಡವು. ಇವರು ದಲಿತರನ್ನು ಕುರಿತು, ಅವರ ಸಮಸ್ಯೆಯನ್ನು ಕುರಿತು ಬರವಣಿಗೆಯನ್ನು ಪ್ರತ್ಯೇಕವಾಗಿ ಬರೆಯಲಿಲ್ಲ. ಪಾರಂಪರಿಕವಾಗಿದ್ದ ಸಾಮಾಜಿಕ ಮೌಲ್ಯಗಳನ್ನು ಪ್ರಶ್ನಿಸಿದರು. ಸಮಾಜದ ಮೂಲಭೂತವಾದಿತನದ ವ್ಯವಸ್ಥೆಯ ಬಗ್ಗೆ ತೀವ್ರವಾದ ಅಸಮಾಧಾನವನ್ನು ವ್ಯಕ್ತಪಡಿಸಿದರು. ನವೋದಯ ಸಾಹಿತ್ಯದ ಮಿತಿಯನ್ನು ಪ್ರಗತಿಶೀಲ ಲೇಖಕರು ಗುರ್ತಿಸಿದರು. ಸಾಮಾಜಿಕ ವಾಸ್ತವಿಕತೆಗೆ ಒತ್ತನ್ನು ಕೊಟ್ಟರು. ಇದು ಸಾಮಾಜಿಕ ಜವಾಬ್ದಾರಿಯತ್ತ ಇತ್ತು. ಸಾಮಾಜಿಕ ಸಮಸ್ಯೆಗಳು ಮತ್ತು ಅವುಗಳಿಗೆ ಇದ್ದ ಪಟ್ಟಭದ್ರ ಕಾರಣಗಳನ್ನು ಪ್ರಗತಿಶೀಲ ಲೇಖಕರು ಎತ್ತಿಹಿಡಿದರು. ಅವುಗಳನ್ನು ವಿರೋಧಿಸಿ ತಮ್ಮ ಸಾಹಿತ್ಯದ ವಸ್ತುವನ್ನಾಗಿ ಮಾಡಿಕೊಂಡರು. ಇದು ಜನಸಾಮಾನ್ಯರ ಗಮನ ಸೆಳೆಯಿತು. ನವೋದಯ ಸಾಹಿತ್ಯದ ಕಥಾ ಪ್ರಕಾರದಲ್ಲಿಯೂ ದಲಿತ ಬದುಕಿನ ಚಿತ್ರಣಗಳು ಅಲ್ಲಲ್ಲಿ ಸೂಕ್ಷ್ಮವಾಗಿ ಕಂಡುಬಂದವು. ಆದರೆ ಅದೇ ಒಂದು ಮುಖ್ಯ ಸಾಹಿತ್ಯಕ ವಸ್ತುವಾಗಿ ಕಂಡುಬರಲಿಲ್ಲ. ಅಂತೆಯೇ ಪ್ರಗತಿಶೀಲ ಸಾಹಿತ್ಯದ ಕಥಾ ಪ್ರಕಾರದಲ್ಲೂ ದಲಿತರ ಬದುಕಿನ ಚಿತ್ರಣಗಳು ಕಂಡು ಬಂದರೂ ಅದು ಕೂಡ ಮುಖ್ಯ ಸಾಹಿತ್ಯಿಕ ವಸ್ತುವಾಗಿ ಕಂಡುಬರಲಿಲ್ಲ. ಈ ಸಾಹಿತ್ಯ ಪಂಥಗಳು ತಮ್ಮದೇ ಆದ ಸಾಹಿತ್ಯ ವಸ್ತುವಿಗೆ ಸಂಬಂಧಪಟ್ಟಂತೆ ನಿಯಮಗಳನ್ನು ರೂಪಿಸಿಕೊಂಡಿದ್ದವು. ಅವುಗಳ ಅಡಿಯಲ್ಲಿ ಕೃತಿ ರಚನೆಗಳು ಆದವು.

ನವೋದಯ ಸಂದರ್ಭದ ಕತೆಗಳಲ್ಲಿ ಕುವೆಂಪು ಅವರ 'ಸಾಲದ ಮಗು' ಹಾಗೂ 'ಯಾರೂ ಅರಿಯದ ವೀರ' ಭಾರತೀಪ್ರಿಯರ 'ಮೋಚಿ', ಕ.ವೆಂ.ರಾಜಗೋಪಾಲರ 'ಹೊಲತಿಯ ಹಾಳು', ಕೊರಡ್ಕಲ್ ಶ್ರೀನಿವಾಸರಾಯರ 'ಧನಿಯರ ಸತ್ಯನಾರಾಯಣ' ಮುಂತಾದ ಕತೆಗಳು ಕಂಡು ಬಂದವು. 'ಧನಿಯರ ಸತ್ಯನಾರಾಯಣ' ಕತೆಯು ಶೋಷಣೆಯ ವಿರುದ್ಧದ ಪ್ರತಿಭಟನೆಯನ್ನು ಕಲಾತ್ಮಕವಾಗಿ ಹಿಡಿದಿಟ್ಟಿದೆ. ಬಡತನದ ಮುಗ್ಧತೆಯನ್ನು ಇಲ್ಲಿ ಗ್ರಹಿಸಲಾಗಿದೆ. 'ಯಾರೂ ಅರಿಯದ ವೀರ' ಕತೆಯ ಧಣಿನಿಷ್ಠೆಯು, ದಲಿತರ ಬದುಕನ್ನು, ಅದರ ವಾಸ್ತವವನ್ನು ಕತೆಯಲ್ಲಿ ತುಂಬಿರುವುದು ಗಮನಾರ್ಹವಾದದ್ದು.

ಪ್ರಗತಿಶೀಲ ಸಾಹಿತ್ಯ ಚಳುವಳಿಯ ಲೇಖಕರು ತಮ್ಮ ವೈಚಾರಿಕ ವಿಚಾರವನ್ನು ಪ್ರಬಲವಾಗಿ ಪ್ರಕಟಿಸಿದರು. ಈ ಚಳುವಳಿಯ ನೇತೃತ್ವವನ್ನು ಅ.ನ.ಕೃಷ್ಣರಾಯರು ವಹಿಸಿಕೊಂಡು ಮುನ್ನಡೆಸಿದರು. ಪ್ರಗತಿಶೀಲರ ಬರವಣಿಗೆಯಲ್ಲಿ ಕೆಲವು ಸಮಸ್ಯೆಗಳ ಕೇಂದ್ರಗಳಾದವು. ವೇಶ್ಯಾಸಮಸ್ಯೆ, ಹಸಿವು, ಕೊಳಕು, ಶೋಷಣೆ, ಬಡತನ, ಕೋಮು ಸಂಘರ್ಷ, ಹೆಣ್ಣಿನ ತ್ಯಾಗ, ಪ್ರೀತಿ, ಬಲಿದಾನ ಮುಂತಾದ ಸಾಂಪ್ರದಾಯಿಕ ವಸ್ತುಗಳು ಬರವಣಿಗೆಯಲ್ಲಿ ಬಂದವು. ಈ ಹೊತ್ತಿಗೆ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟವು ಜನರಲ್ಲಿ ಜಾಗೃತಿಯನ್ನು ಮೂಡಿಸಿತ್ತು. ಪರಕೀಯರ ಆಳ್ವಿಕೆ ಮತ್ತು ಅವರ ದಬ್ಬಾಳಿಕೆ ಜನಸಾಮಾನ್ಯರಲ್ಲಿ ಗೊತ್ತಾಗುತ್ತಿತ್ತು. ಪ್ರಬಲವಾದ ಆಳುವ ಶಕ್ತಿ ಮತ್ತು ಅವರ ಹಿಂದಿನ ಕ್ರೌರ್ಯವು ಎಚ್ಚರಿಸಿತು. ಸಾಂಪ್ರದಾಯಿಕ ವಿಷಯ ವಿಚಾರಗಳು ಊಳಿಗಮಾನ್ಯ ವ್ಯವಸ್ಥೆಯ ಯಜಮಾನಿಕೆಯ ಕಡೆಗೆ ವಿರೋಧದ ದನಿಯು ಕಂಡುಬಂತು. ಅ.ನ.ಕೃಷ್ಣರಾಯ, ಬಸವರಾಜ ಕಟ್ಟೀಮನಿ, ನಿರಂಜನ, ಚದುರಂಗ, ಕೋ.ಚೆನ್ನಬಸಪ್ಪ ಮುಂತಾದವರ ಕಥಾ ಪ್ರಕಾರಗಳ ಪಾತ್ರಗಳಲ್ಲಿ ದಲಿತ ಬದುಕು ಒಂದು ವಸ್ತುವಾಗಿ ಕಂಡು ಬಂದವು. ಇವು ಓದುಗನನ್ನು ಓದಿಸಿಕೊಂಡು ಹೋಗುವ ಗುಣವನ್ನು ಹೊಂದಿದವು. ಪ್ರಗತಿಶೀಲರು ಸಾಂಪ್ರದಾಯಿಕ ಮೌಲ್ಯಗಳ ಬಗ್ಗೆ

ಅಸಮಾಧಾನವನ್ನು ಪ್ರಕಟಿಸಿ ಅವುಗಳ ಸಮಸ್ಯೆಗಳ ಸೂಕ್ಷ್ಮತೆಯನ್ನು ಗ್ರಹಿಸಲು ಪ್ರಯತ್ನಿಸಿದರು. ಲೇಖಕರು ಓದುಗರ ಸಾಮಾಜಿಕ ಪ್ರಜ್ಞೆಯನ್ನು ತೀಕ್ಷ್ಣಗೊಳಿಸಿದರು. ಈ ಲೇಖಕರ ಜೀವನದ ದೃಷ್ಟಿಯ ಹಿಂದೆ ತಮ್ಮದೇ ಆದ ನಿಶ್ಚಿತ ಮೌಲ್ಯಗಳ ಗಟ್ಟಿಯಾದ ಪ್ರಪಂಚವಿತ್ತು. ಇದರ ಹಿಂದೆ ತಮ್ಮ ಕಲ್ಪನೆಗೆ ತಕ್ಕಂತ ಸಾಮಾಜಿಕ ವಾಸ್ತವಿಕತೆಯನ್ನು ಲೇಖಕರು ಬರವಣಿಗೆಯಲ್ಲಿ ತಂದರು.

ನವೋದಯ, ಪ್ರಗತಿಶೀಲ ಲೇಖಕರ ನಂತರ ಭಿನ್ನ ದೃಷ್ಟಿಕೋನ ಹೊಂದಿದ ನವ್ಯ ಲೇಖಕರು ಕನ್ನಡ ಸಾಹಿತ್ಯದಲ್ಲಿ ಕಂಡುಬಂದರು. ತನ್ನ ಸುತ್ತಮುತ್ತಲಿನ ಜಗತ್ತನ್ನು ಅರ್ಥಮಾಡಿಕೊಳ್ಳುವ ಏಕಾಂಗಿ ಮನುಷ್ಯರಾಗಿ ಈ ಲೇಖಕರು ಕಂಡುಬಂದರು. ಸಾಮಾಜಿಕ ಸಮಸ್ಯೆಗಳಿಗಿಂತ ವ್ಯಕ್ತಿಯ ವೈಯಕ್ತಿಕ ಸಮಸ್ಯೆಗಳು ಇಲ್ಲಿ ಮುಖ್ಯವಾದವು. ವ್ಯಕ್ತಿಯ ಕೇಂದ್ರದಿಂದ ಅವನ ಸಮಾಜವನ್ನು ಸುತ್ತುವರೆದು ಸಂವೇದನೆಗಳ ಮೂಲಕ ಆಗುವ ಪರಿಣಾಮಗಳನ್ನು ಇವರು ಗ್ರಹಿಸಿದರು. ವ್ಯಕ್ತಿಯ ತುಮುಲಗಳು, ಅವನ ಮಾನಸಿಕ ಜಗತ್ತನ್ನು ಶೋಧಿಸಿದರು. ಸಂಕೇತಗಳ, ಪ್ರತಿಮೆಗಳ ಮೂಲಕ ಅರ್ಥವನ್ನು ನವ್ಯರು ತಮ್ಮ ಕಥಾ ಸಾಹಿತ್ಯದಲ್ಲಿ ಕಟ್ಟಿದರು. ನವೋದಯ, ಪ್ರಗತಿಶೀಲ ಲೇಖಕರ ಸೃಜನಶೀಲ ರಚನೆಗಿಂತ ಭಿನ್ನವಾಗಿ ನವ್ಯ ಲೇಖಕರು ಬರೆದರು. ಶಾಂತಿನಾಥದೇಸಾಯಿ, ಪಿ.ಲಂಕೇಶ್, ಯು.ಆರ್.ಅನಂತಮೂರ್ತಿ, ಪೂರ್ಣಚಂದ್ರತೇಜಸ್ವಿ, ಬಿ.ಸಿ.ರಾಮಚಂದ್ರಶರ್ಮ, ಕೆ.ಸದಾಶಿವ, ಚಿತ್ತಾಲ ಮುಂತಾದವರು ಪ್ರಮುಖವಾಗಿ ಕಂಡು ಬಂದರು. ಇವರ ಕೆಲವು ಕತೆಗಳಲ್ಲಿ ಶೋಷಿತ ಬದುಕಿನ ಸೂಕ್ಷ್ಮತೆಗಳು ಸಂಕೇತವಾಗಿ ಕಂಡುಬಂದವು. ಪಿ.ಲಂಕೇಶ್ ಅವರ 'ರೊಟ್ಟಿ' ಕತೆಯಲ್ಲಿ ಹಸಿವು ಮುಖ್ಯವಾಗುತ್ತದೆ. ಅದರ ಸಂಬಂಧದ ಮನಸ್ಥಿತಿಗಳು ಕೆಲಸ ಮಾಡುವುದು ಇಲ್ಲಿ ಕಂಡುಬರುತ್ತದೆ. ಹಸಿದ ಮುದುಕಿ, ಹಸಿದ ಭಿಕ್ಷುಕ ಇವರಿಬ್ಬರ ನಡುವಿನ ರೊಟ್ಟಿಯ ಕಿತ್ತಾಟ ಅದನ್ನು ಕಂಡ ಜನರ ಪ್ರತಿಕ್ರಿಯೆ ಇಲ್ಲಿ ಕಂಡುಬರುತ್ತದೆ. ಇಲ್ಲಿ ಲೇಖಕರು ಸಾಮಾಜಿಕ ಸ್ಥಿತಿಯ ವ್ಯವಸ್ಥೆಯ ಸ್ವರೂಪವನ್ನು ಇಡುತ್ತಾರೆ. ಅವರ ಅರ್ಥೈಸುವಿಕೆಯು ಓದುಗರಿಗೆ ಸೇರುತ್ತದೆ. ದಲಿತ ಕಥಾ ಸಾಹಿತ್ಯಕ್ಕೆ ಮೊದಲು ಸಾಹಿತ್ಯದ ಮೂರು ಘಟ್ಟಗಳ ಗ್ರಹಿಕೆಯನ್ನು ನೋಡಲಾಯಿತು. ಅವುಗಳು ತಮ್ಮೊಳಗೆ ವಿಶಿಷ್ಟತೆಯ ತಂತ್ರಗಳನ್ನು ತಮ್ಮ ಸಾಹಿತ್ಯ ಪ್ರಕಾರಗಳಲ್ಲಿ ಗುರುತಿಸಿಕೊಂಡಿದ್ದಾರೆ.

## ಕನ್ನಡ ದಲಿತ ಕಥಾ ಸಾಹಿತ್ಯ ಕುರಿತು

ಇಲ್ಲಿ ಕನ್ನಡ ದಲಿತ ಕಥಾ ಸಾಹಿತ್ಯವನ್ನು ಕುರಿತಂತೆ ಕೆಲವು ಮುಖ್ಯ ಅಂಶಗಳನ್ನು ಚರ್ಚಿಸಲಾಗುವುದು. ಈ ಹಿಂದೆ ನವೋದಯ, ಪ್ರಗತಿಶೀಲ, ನವ್ಯಸಾಹಿತ್ಯ ಪರಂಪರೆಯನ್ನು ನೋಡಲಾಯಿತು. ಇವುಗಳಿಗಿಂತ ಭಿನ್ನವಾಗಿ ದಲಿತ ಲೇಖಕರು ತಮ್ಮ ಬದುಕನ್ನು; ಅದರ ಅನುಭವವನ್ನು ಸಾಹಿತ್ಯಗೊಳಿಸಿದರು. ದಲಿತರು ಬದುಕಲ್ಲಿ ಬಹುತೇಕವಾಗಿ ಮೌಖಿಕ ಪರಂಪರಗೆ ಸೇರಿದವರು. ಕತೆಗಳನ್ನು ಹೇಳುವ, ಕೇಳುವ, ಪರಂಪರೆಯಲ್ಲಿ ಇವರು ಇದ್ದವರು. "ಅನೇಕ ವರ್ಷಗಳಿಂದ ಅಕ್ಷರದಿಂದ ವಂಚಿತರಾಗಿದ್ದ ದಲಿತ ಸಮುದಾಯ ಮೊದಲಬಾರಿಗೆ ತಮ್ಮನ್ನು ಹೊಸ ಲೋಕಕ್ಕೆ ತೆರೆದುಕೊಂಡಿದೆ. ಮೌಖಿಕ ಪರಂಪರೆಯಲ್ಲಿದ್ದ ದಲಿತ ಕಥೆ, ಹಾಡು, ಕುಣಿತ ಮುಂತಾದ ಕಲಾಪ್ರಕಾರಗಳು ಸಾಹಿತ್ಯವಾಗಿ ರೂಪಾಂತರಗೊಳ್ಳುತ್ತಿರುವುದು ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮಹತ್ವದ ಸಂಗತಿಯಾಗಿದೆ"[೪]. ದಲಿತ ಲೇಖಕ ಮೌಖಿಕ ಪರಂಪರೆಯಿಂದ ಹೊರಬಂದು ಬರೆಯಲು ತೊಡಗಿದಾಗ ಆತನ ಬದ್ಧತೆಯು ಬಹು ಮುಖ್ಯವಾಗುತ್ತದೆ.

ದಲಿತ ಲೇಖಕನ ಹಿಂದೆ ತನ್ನ ಶೋಷಿತ ಸಮುದಾಯವಿರುತ್ತದೆ. ಶೋಷಿತ ಅನುಭವದ ತಾಜಾತನವು ತನ್ನ ರಕ್ತ ಮಾಂಸಗಳಲ್ಲಿ ಸೇರಿಕೊಂಡಿರುತ್ತದೆ. ಅಲ್ಲದೆಯೂ ಅದಕ್ಕೆ ಕಾರಣವಾದ ಸಮಾಜ, ಸಮಾಜದ ವ್ಯವಸ್ಥೆ ಇರುತ್ತದೆ. ಇಲ್ಲಿ ದಲಿತ ಲೇಖಕನು ಅನೇಕ ತೊಡಕುಗಳಿಗೆ ಅನಿವಾರ್ಯವಾಗಿ ಬದ್ಧನಾಗುತ್ತಾನೆ. ಈಗಾಗಲೇ ಸಾಹಿತ್ಯಸೃಷ್ಟಿ ಮತ್ತು ಅವುಗಳ ಓದು, ಅದರ ಗ್ರಹಿಕೆ ಒಂದು ಕಡೆ ಅಂತರ್ಗತವಾಗಿರುತ್ತದೆ. ದಲಿತ ಲೇಖಕನ ಬರವಣಿಗೆಯು ಪ್ರಜ್ಞಾಪೂರ್ವಕವಾಗಿಯೇ ಇಲ್ಲವೆ ಅಪ್ರಜ್ಞಾಪೂರ್ವಕವಾಗಿಯೇ ತಮ್ಮ ಬದುಕಿನ ಹಿನ್ನೆಲೆಯ ಎಚ್ಚರಿಕೆ ಇರುತ್ತದೆ. ಇಲ್ಲಿ ಲೇಖಕನ ಪರಿಸರ ಮತ್ತು ಅವನು ಬದುಕುತ್ತಿರುವ ಸಾಂಸ್ಕೃತಿಕ ಸಂದರ್ಭವು ಮುಖ್ಯವಾಗುತ್ತದೆ. ದಲಿತ ಲೇಖಕ ಬರವಣಿಗೆಗೆ ತೊಡಗಿದಾಗ ಅವನಿಗೆ ಎದುರಾಗುವ ಪ್ರಶ್ನೆಗಳು ಇಲ್ಲಿ ಮುಖ್ಯವಾಗುತ್ತವೆ.

ದಲಿತರಿಗೆ ಬರವಣಿಗೆಯು ತನ್ನ ಪರಿಸರದಿಂದಲೇ ದೂರವಾದದ್ದು. ಇಲ್ಲಿ ದಲಿತ ಬರಹಗಾರರಿಗೆ ಏನನ್ನು ಕುರಿತು ಬರೆಯಬೇಕು? ಯಾವ ವಸ್ತು ವಿಷಯವನ್ನು ಕುರಿತು ಬರೆಯಬೇಕು?, ಅದನ್ನು ಹೇಗೆ ಬರೆಯಬೇಕು? ಯಾರಿಗಾಗಿ ಬರೆಯಬೇಕು?, ಅದನ್ನು ಓದುವ ವರ್ಗ ಯಾವುದು? ಎಂಬುವು ಎದುರಾಗುತ್ತವೆ. ಏಕೆಂದರೆ ಬರವಣಿಗೆಯಲ್ಲಿ ತೊಡಗಿದ ಲೇಖಕರು ಬರಹಗಾರರ ಗುಂಪಲ್ಲಿ ಸೇರಿಕೊಳ್ಳುತ್ತಾರೆ. ಅಂದರೆ ಓದುವ ವರ್ಗಕ್ಕೆ ವಸ್ತು ವಿಷಯವನ್ನು ಕೊಡುವವರಾಗಿರುತ್ತಾರೆ. ಇದು ಬರಹಗಾರರಿಗೆ ಸಾಮಾನ್ಯವಾದ ಅಂಶ. ಅಂದರೆ ಇಲ್ಲಿ ದಲಿತ ಸಮುದಾಯದಿಂದ ಬಂದವರಿಗೆ ಹಿಂದೆ ಬಂದ ಸಾಂಪ್ರದಾಯಿಕ ಸಾಹಿತ್ಯದಂತೆ ಬರೆದರೆ ಅವನ ಸಾಂಸ್ಕೃತಿಕ ಭಿನ್ನತೆ ತಮ್ಮ ಸಮುದಾಯಗಳ ಸಾಮಾಜಿಕ ಕಳಕಳಿ ಸಾಹಿತ್ಯದಲ್ಲಿ ಅಭಿವ್ಯಕ್ತಿಗೊಳ್ಳುವುದೇ ಇಲ್ಲ. ಇದು ದಲಿತ ಬರೆಹಗಾರರಿಗೆ ಅಥವಾ ಶೋಷಿತ ಬರಹಗಾರನಿಗೆ ತನ್ನ ಲಿಖಿತ ರಚನೆಯಲ್ಲಿ ವೈಶಿಷ್ಟ್ಯತೆಯನ್ನು ಗಮನಿಸಲೇಬೇಕಾದ ಅನಿವಾರ್ಯ ಬಂದೊದಗುತ್ತದೆ.

ದಲಿತ ಬರಹಗಾರನಿಗೆ ತನ್ನ ಅನುಭವ ಮತ್ತು ಪರಿಸರಗಳು ಬರವಣಿಗೆಯ ವಸ್ತುಗಳಾದವು. ಇವು ಅನ್ಯ ಸಮುದಾಯದವರ ಅನುಭವ ಮತ್ತು ಪರಿಸರಕ್ಕಿಂತ ಭಿನ್ನವಾಗಿ ಕಂಡವು. ದಲಿತರ ಪರಿಸರ ಅನುಭವವು ಸರಳವಾದದ್ದಲ್ಲ. ಅದರ ಸ್ವರೂಪಗಳು ಮುಖ್ಯವಾಗುತ್ತವೆ. ಅವುಗಳು ಹಸಿವು, ಶೋಷಣೆ, ಬಡತನ, ನೋವು, ಪ್ರೀತಿ-ಪ್ರೇಮಗಳು, ಹಿಂಸೆ, ಕಾಮ, ಕನಸುಗಳು, ಪುರಾಣಗಳು, ಆಶೋತ್ತರ ಮುಂತಾದವುಗಳು. ಇವು ದಲಿತ ಸಮುದಾಯಗಳಲ್ಲಿ ಇವೆ. ಇವನ್ನು ದಲಿತ ಸಮುದಾಯಗಳಲ್ಲಿಯೇ ಇವೆ ಎಂದು ಸೀಮಿತಗೊಳಿಸಬೇಕಿಲ್ಲ. ಇವು ದಲಿತೇತರ ಸಮುದಾಯಗಳಲ್ಲಿಯೂ ಇರಬಹುದು. ಆದರೆ ಇಲ್ಲಿ ದಲಿತರ ಸಮಸ್ಯೆಯ ಸ್ವರೂಪವೇ ಬೇರೆ; ದಲಿತೇತರರ ಸಮಸ್ಯೆಯ ಸ್ವರೂಪವೇ ಬೇರೆಯದು. ಅವುಗಳು ತೀವ್ರತೆಗಳಿಗೆ ಸಂಬಂಧಪಟ್ಟಿರುತ್ತವೆ; ಅವುಗಳ ಮಾನಸಿಕ ಸಂಕಷ್ಟಗಳಿಗೆ ಸಂಬಂಧಪಟ್ಟಿರುತ್ತವೆ.

ಪ್ರತಿಯೊಬ್ಬ ವ್ಯಕ್ತಿಯೂ ಹಸಿವನ್ನು ಹೊಂದುವ ಸಾರ್ವತ್ರಿಕವಾದ ಗುಣವನ್ನು ಹೊಂದಿದ್ದಾನೆ. ಅಲ್ಲದೆ ಹಸಿವಿನ ಅನುಭವವಿರುತ್ತದೆ. ಈ ಹಸಿವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನತೆಯನ್ನು ಹೊಂದಿದೆ. ಅಂದರೆ ವ್ಯಕ್ತಿಯ ಸ್ಥಿತಿಯನ್ನು ಅವಲಂಬಿಸಿರುತ್ತದೆ. ಅದು ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯ ಆಧಾರದ ಮೇಲಿರುತ್ತದೆ. ಅಂದರೆ ಇಲ್ಲಿ ಒಬ್ಬ ಜೀತಗಾರನ ಹಸಿವು, ಕೂಲಿಕಾರನ ಹಸಿವು, ಭಿಕ್ಷುಕನ ಹಸಿವು, ಶ್ರೀಮಂತನ ಹಸಿವು ಒಂದೇ ಅಲ್ಲ. ಶ್ರೀಮಂತರು ಹಸಿವಿಗೆ ಪರದಾಡುವ ಸ್ಥಿತಿ ಇರುವುದಿಲ್ಲ. ಆ ಹಸಿವು ಕಾಲಕಾಲಕ್ಕೆ ನಿಗದಿತ ವೇಳೆಯಲ್ಲಿ ತನ್ನ ಹಸಿವನ್ನು ತೀರಿಸಿಕೊಳ್ಳುತ್ತಾರೆ.

ಹಸಿದ ಶ್ರೀಮಂತರ ಕಣ್ಣ ಮುಂದೆ ವಿಲಾಸೀ ಭಕ್ಷ್ಯಭೋಜನ ಊಟಗಳು ಎದುರಾಗುತ್ತವೆ. ಆದರೆ ಹಸಿದ ಭಿಕ್ಷುಕರ, ಜೀತಗಾರರ, ಕೂಲಿಕಾರರ ಕಣ್ಣಮುಂದೆ ಅನ್ನ, ಗಂಜಿ, ತಂಗಳು ಊಟ ಹಳಸಿದ ಆಹಾರ ಪದಾರ್ಥಗಳು ಕಾಣಸಿಗಬಹುದು. ಇಲ್ಲಿ ಹಸಿವು ಪ್ರತಿಯೊಬ್ಬರಲ್ಲೂ ಅವರವರು ಇರುವ ಸ್ಥಿತಿಯನ್ನು ಅವಲಂಬಿಸಿಯೇ ಇರುತ್ತದೆ. ಇಂತಹ ವಸ್ತು ವಿಷಯವನ್ನು ದಲಿತ ಬರಹಗಾರರು ಆಯ್ದುಕೊಂಡರು. ದಾಖಲಾಗಿರುವ ಲಿಖಿತ ಪರಂಪರೆಗಿಂತ ಭಿನ್ನರಚನೆಗೆ ತೊಡಗುವುದು ದಲಿತ ಲೇಖಕನಿಗೆ ಒಂದು ಸವಾಲಾಗಿಯೇ ಎದುರಾಗಿತ್ತು. ಜಾತಿ, ಶೋಷಣೆ, ಅನಕ್ಷರತೆ, ಜೀತ, ಕೂಲಿ, ನಂಬಿಕೆಗಳು, ಸಂಪ್ರದಾಯಗಳು, ಕರ್ತವ್ಯ ಇವುಗಳನ್ನು ಮೇಲುವರ್ಗದವರು ನಿರ್ಮಿಸಿದವುಗಳು ಆಗಿರುತ್ತವೆ. ಇವುಗಳನ್ನು ಬರಹಗಾರರು ಜಾಗರೂಕತೆಯಿಂದ ಕತೆ-ಕಾದಂಬರಿಗಳಲ್ಲಿ ಕಟ್ಟುವ ಕ್ರಿಯೆಯನ್ನು ನಡೆಸಿದ್ದಾರೆ.

ದಲಿತ ಬರಹಗಾರರು ಜಾತಿ ಪ್ರಶ್ನೆಯನ್ನು ಪ್ರಮುಖವಾಗಿ ಇಟ್ಟುಕೊಂಡು ಸಾಹಿತ್ಯವನ್ನು ಸೃಜನಶೀಲಗೊಳಿಸುತ್ತಾನೆ. ಅಂದರೆ ಅಲ್ಲಿ ಸಕ್ರಿಯವಾಗಿ ಅವರು ಅವರ ಸಮುದಾಯಕ್ಕೆ ಒತ್ತುಕೊಡುತ್ತಾರೆ. ದಲಿತ ಸಮುದಾಯಗಳ ಸ್ಥಿತಿ ಇಲ್ಲಿ ಬಿತ್ತರಗೊಳ್ಳುತ್ತವೆ. ಇದನ್ನು ಪ್ರಗತಿಪರ ದಲಿತೇತರರ; ದಲಿತಪರ ಕಾಳಜಿಯಲ್ಲಿ ಹೇಳಲು ಬರುವುದಿಲ್ಲ. ಇಲ್ಲಿ ಬಹುಪಾಲು ಮೇಲುಜಾತಿ, ಮೇಲುವರ್ಗದವರು ಅವರವರ ಆರ್ಥಿಕ ಹಾಗೂ ರಾಜಕೀಯ ಲಾಭಕ್ಕಾಗಿ ದಲಿತ ಜಾತೀಯ ಪರವಾಗಿರುತ್ತಾರೆ. ದಲಿತ ಲೇಖಕರಿಗೆ ಇದು ಮಾನವ ನಿರ್ಮಿತವಾದ ಮಾನವ ವಿರೋಧಿ ಸಾಮಾಜಿಕ ಕ್ರಿಯೆಯಾಗಿ ಕಂಡುಬರುತ್ತದೆ. ದಲಿತೇತರರಲ್ಲಿನ ದಲಿತರ ಬಗೆಗಿನ ಸೃಜನಶೀಲತೆಯ ಕಾಳಜಿಗಳು ಪ್ರಮುಖವಾಗುವುದಿಲ್ಲ. ಅವು ಒಂದು ಐಡಿಯಾಲಜಿಯಾಗುತ್ತವೆ. ದಲಿತ ಲೇಖಕರಿಗೆ ಒಂದು ಜನಾಂಗದ ಅನುಭವವು ಹಿನ್ನೆಲೆಯಾಗಿರುತ್ತದೆ ಮತ್ತು ಮಾನವನ ಬದುಕಿನ ಪ್ರಾಥಮಿಕ ಸಮಸ್ಯೆಗಳು ವಸ್ತುಗಳಾಗುತ್ತವೆ.

ಸಾಮಾಜಿಕ ಕಟು ವಾಸ್ತವವು ದಲಿತ ಲೇಖಕರಿಗೆ ಮುಖ್ಯವಾಗುತ್ತದೆ. ಇಲ್ಲಿ ದಲಿತ ಲೇಖಕರ ಕಣ್ಣ ಮುಂದೆ ಸಮಸ್ಯೆಯ ಸುಳಿಯಲ್ಲಿ ನರಳುತ್ತಿರುವ ತನ್ನ ಸಮುದಾಯವಿರುತ್ತದೆ. ಇವು ಈ ದಲಿತ ಲೇಖಕರಿಗೆ ಮೊದಲು ಸಾಮಗ್ರಿಗಳಾಗುತ್ತವೆ. ಈ ವಸ್ತುಗಳನ್ನು ಏಕೆ ಬರೆಯಬೇಕು ಮತ್ತು ಅದನ್ನು ಯಾವ ರೀತಿಯಲ್ಲಿ ಬರೆಯಬೇಕು ಎಂಬುದು ಮುಖ್ಯವಾಗುತ್ತದೆ. ಅಂದರೆ ದಲಿತರ ಬದುಕಿನ ಹಲವು ಮಗ್ಗುಲುಗಳ ಸಂಕಷ್ಟಗಳನ್ನು ಯಥಾವತ್ತಾಗಿ ದಾಖಲೆಗೊಳಿಸುವುದಲ್ಲ. ಅವುಗಳನ್ನು ಸೃಜನಶೀಲತೆಗೆ ತರುವುದು ಈ ಲೇಖಕರಿಗಿರುತ್ತದೆ. ಇಲ್ಲಿಯ ಸಾಹಿತ್ಯದ ಆಶಯವು ಓದುಗರಲ್ಲಿ ಸಮಾಜದ ಬಗೆಗಿನ ಹಲವು ಮಗ್ಗುಲನ್ನು ತೆರೆದಿಡುವುದು ಆಗಿರುತ್ತದೆ. ಅಲ್ಲದೆಯೂ ಹೊಸ ಬಗೆಯ ಚಿಂತನೆಗೆ ಈಡುಮಾಡುತ್ತದೆ. ಇದು ಇಡಿಯಾಗಿ ಸಾಹಿತ್ಯದ ಆಶಯದ ಪ್ರಶ್ನೆ ಆಗಬಹುದು. ದಲಿತ ಲೇಖಕರ ಸೃಜನಶೀಲ ಸಾಹಿತ್ಯದ ಅರ್ಥೈಕೆಯಲ್ಲಿ ತಾತ್ವಿಕತೆಯ ಚರ್ಚೆಯು ಏಳುತ್ತದೆ. ದಲಿತ ಲೇಖಕನ ವಸ್ತು ದಲಿತೇತರರಿಗೆ ಪ್ರಶ್ನಾತ್ಮಕ ವಸ್ತುವಾಗಬಹುದು.

ದಲಿತ ಲೇಖಕರು ಪ್ರಶ್ನಾತ್ಮಕ ವಸ್ತುವನ್ನು ಏಕೆ ಬರೆಯಬೇಕು? ಅದನ್ನು ಯಾರಿಗಾಗಿ ಬರೆಯಬೇಕು? ಅದನ್ನು ಓದುವ ವರ್ಗ ಯಾವುದು? ಎಂಬುವುಗಳು ಮುಖ್ಯವಾಗುತ್ತವೆ. ದಲಿತ ಲೇಖಕ ಕತೆ-ಕಾದಂಬರಿಯನ್ನು ಬರೆಯಲು ಹೊರಟಾಗ ಎದುರಾಗುವ ಮುಖ್ಯ ಪ್ರಶ್ನೆಗಳು ನಿರೂಪಣೆಯ ತಂತ್ರಗಾರಿಕೆ. ಇದು ನಿರೂಪಣೆಯ ಸ್ವರೂಪದಲ್ಲಿರಬಹುದು; ಇಲ್ಲವೆ

ಕಲಾತ್ಮಕತೆಯಲ್ಲಿರಬಹುದು. ದಲಿತ ಬರಹಗಾರರಿಗೆ ತನ್ನ ಸಮಕಾಲೀನ ಬರವಣಿಗೆಗಳೂ ಇರಬಹುದು; ಇದಲ್ಲದೆ ತನ್ನ ಸುತ್ತಮುತ್ತಲಿನ ಹಲವಾರು ಭಿನ್ನ ಮಾದರಿಯ ನಿರೂಪಣೆಯನ್ನು ಬಿಟ್ಟು ಹೊಸದೆನ್ನುವ ನಿರೂಪಣಾ ಮಾದರಿಯನ್ನು ಸೃಷ್ಟಿಮಾಡಬಹುದು. ಈ ಮಾದರಿಗಳು ವಿಮರ್ಶಕರಿಗೆ ಹೆಚ್ಚು ಪ್ರಸ್ತುತವೆನಿಸುತ್ತವೆ. ಅದನ್ನು ಸಾಮಾಜಿಕ ಸಮಕಾಲೀನ ಒತ್ತಡಗಳನ್ನು ಕುರಿತ ಹಿನ್ನೆಲೆಯಲ್ಲೂ ಚರ್ಚಿಸಬಹುದು. ಹಾಗೆಯೇ ಕತೆ-ಕಾದಂಬರಿಯ ನಿರೂಪಣೆ, ತಂತ್ರಗಾರಿಕೆಯನ್ನು ಗಂಭೀರವಾಗಿ ಪರಿಗಣಿಸಬಹುದು.

ಕತೆಯ ನಿರೂಪಣಾಭಾಷೆ; ಕತೆಯ ಪರಿಸರಕ್ಕೆ ಸಂಬಂಧಪಟ್ಟ ಲೇಖಕನ ಭಾಷೆ; ಮತ್ತು ಕತೆಯ ಪಾತ್ರಗಳ ಭಾಷೆ ಎಂಬ ಮೂರು ಬಗೆಯಲ್ಲಿ ಕತೆ-ಕಾದಂಬರಿಯನ್ನು ಹೆಣೆದಿರುವ ಭಾಷೆಯು ಕಂಡುಬರುತ್ತದೆ. ಈ ಮೂರು ಭಾಷೆಗಳಲ್ಲಿಯೂ ಸಾಕಷ್ಟು ಭಿನ್ನತೆಗಳು ಇರುತ್ತವೆ. ಇವುಗಳು ಹೀಗೀಗೆ ಇರಬೇಕೆಂಬ ನಿಯಮವು ವಿಮರ್ಶೆ ಬಯಸುತ್ತದೆ. ಅದು ವಿಮರ್ಶೆಯ ನಿರ್ಧಾರಿಕೆಯಲ್ಲಿ ಇರುತ್ತದೆ. ಈ ಮೂರು ಬಗೆಯ ಭಾಷೆಗಳು ಒಂದೇ ರೀತಿಯಲ್ಲಿ ಇರುವುದು ಉಂಟು; ಅಲ್ಲದೆ ಬೇರೆ ಬೇರೆ ರೀತಿಯಲ್ಲಿ ಇರುವುದೂ ಉಂಟು. ಗ್ರಾಂಥಿಕ ಭಾಷೆಯಲ್ಲಿ ಇದ್ದದ್ದು ಕ್ರಮೇಣದಲ್ಲಿ ಪ್ರಾದೇಶಿಕ ಹಿನ್ನೆಲೆಯ ಭಾಷೆಗಳು, ಅವುಗಳ ಉಪಭಾಷೆಗಳು ಸೇರಿಕೊಂಡವು. ಜೊತೆಗೆ ನುಡಿಗಟ್ಟುಗಳು ಗಾದೆ ಒಗಟುಗಳು ಕಂಡುಬಂದವು. ಇವುಗಳು ದಲಿತ ಸಂಸ್ಕೃತಿಯನ್ನು ಬಿಂಬಿಸಿದವು. ಲೇಖಕರು ಸಾಮಾನ್ಯವಾಗಿ ತಾವು ಬರೆದದ್ದನ್ನು ಜನ ಓದಬೇಕೆಂದು ಸಹಜವಾಗಿ ಬಯಸುತ್ತಾರೆ. ಓದುಗರ ಸಲುವಾಗಿಯೇ ಲೇಖಕರು ತಮ್ಮಲ್ಲಿ ಹುದುಗಿದ್ದ ಸುಪ್ತಜ್ಞಾನದ ಹರಿವನ್ನು ಹರಿಸುತ್ತಾರೆ. ಬರೆಯುವುದೇ ಓದುವ ಸಲುವಾಗಿ. ದಲಿತ ಲೇಖಕರಿಗೆ ಓದುಗರ ಪ್ರಶ್ನೆಯು ಮುಖ್ಯವಾಗುತ್ತದೆ. ಇಲ್ಲಿ 'ಓದುಗರು ಯಾರು?' ಎಂಬುದು ಮುಖ್ಯವಾದುದು. ಇದು ದಲಿತ ಲೇಖಕನಿಗೆ ಎದುರಾಗುತ್ತದೆ. ಇಲ್ಲಿ ದಲಿತ ಸಾಹಿತ್ಯದ ವಸ್ತುವಿಷಯ, ಅದರ ತಂತ್ರ, ನಿರೂಪಣಾಶೈಲಿಗೆ ಸಂಬಂಧಿಸಿರುತ್ತದೆ.

ದಲಿತ ಲೇಖಕರು ಭಾಷೆಯ ಬಳಕೆಯಲ್ಲಿ ಗ್ರಾಂಥಿಕ ಭಾಷೆ ಮತ್ತು ಪ್ರಾದೇಶಿಕ ಆಡುಭಾಷೆಯ ಆಯ್ಕೆಯಲ್ಲಿ, ಮತ್ತು ಅವುಗಳ ಮಿಶ್ರಣವಾದ ಭಾಷೆಗಳಿಗೆ ಸಂಬಂಧಿಸಿದಂತೆ ವಿಚಿತ್ರವಾದ ಸಮಸ್ಯೆಯನ್ನು ಎದುರಿಸುವುದು ಕಂಡು ಬರುತ್ತದೆ. ಅದು ಓದುಗರ ಕಡೆಯಿಂದಲೂ ಸಂಬಂಧಿಸಿದ ಪ್ರಶ್ನೆ ಮುಖ್ಯವಾಗಬಹುದು.

ದಲಿತ ಲೇಖಕರ ಬರವಣಿಗೆಯು ಓದುವ ವರ್ಗಕ್ಕೆ ಸಂಪೂರ್ಣವಾಗಿ ಸಂಬಂಧಿಸಿರುತ್ತದೆ. ಹಾಗಾದರೆ ಓದುವ ವರ್ಗ ಯಾವುದು? ಈ ವರ್ಗದಲ್ಲಿ ದಲಿತರ ಪಾತ್ರವೆಷ್ಟು? ದಲಿತೇತರರ ಪಾತ್ರವೆಷ್ಟು ಎಂಬುದು ತಾತ್ವಿಕ ಪ್ರಶ್ನೆಯಾಗಿ ಏಳುತ್ತದೆ. ಈ ಲೇಖಕ ಯಾರನ್ನು ಕುರಿತು ಬರೆಯುತ್ತಾನೆಯೋ ಅವರಿಗಾಗಿ ಬರೆಯುವುದಿಲ್ಲ. ಯಾರಿಗಾಗಿ ಬರೆಯುತ್ತಾನೆಯೇ ಅವರಿಗಾಗಿ ಬರೆಯುವುದಿಲ್ಲ. ಇದು ದಲಿತ ಲೇಖಕನ ತೊಡಕುಗಳಲ್ಲಿ ಒಂದು. ಇದು ಸಮಾಜದ ದಲಿತರ ಬಗೆಗಿನ ಸಂಬಂಧವಿರುವುದು ಆಗಿರುವುದರಿಂದ ಸಮಾಜದ ವಿವಿಧ ಸ್ತರಗಳಲ್ಲಿ ಬದುಕುವ ಜನರಲ್ಲಿ ಓದುಗರು ಯಾವ ಪ್ರಮಾಣದಲ್ಲಿರುತ್ತಾರೆ ಎಂಬುದು ಮುಖ್ಯವಾಗುತ್ತದೆ. ದಲಿತ ಸಾಹಿತ್ಯದ ಓದುವ ವರ್ಗವು ಸಮಾಜದ ಅಕ್ಷರ ಕಲಿತ ಪ್ರತಿಷ್ಠಿತ ಮೇಲು ಜಾತಿಯ ಸಮುದಾಯದವರೇ ಆಗಿರುತ್ತಾರೆ. ತನ್ನವರಲ್ಲದ ಓದುಗರನ್ನು ಗಮನದಲ್ಲಿಟ್ಟುಕೊಂಡು ದಲಿತ ಲೇಖಕನು ಕತೆ-ಕಾದಂಬರಿಗಳನ್ನು ರಚಿಸುತ್ತಾನೆ. ಅದು ಅವರಿಗೆ ತಲುಪಬೇಕು ಎಂಬುದು ದಲಿತ

ಲೇಖಕನಿಗಿರುತ್ತದೆ. ಸಾಹಿತ್ಯ ಪ್ರಕಾರಗಳಲ್ಲಿ ಮರೆಯಾಗಿದ್ದ ಸಮಾಜದ ವಾಸ್ತವವನ್ನು ದಲಿತ ಸಾಹಿತ್ಯವು ಕೊಡುವುದು ಮುಖ್ಯವಾಗಿರುತ್ತದೆ. ಅವು ದಲಿತ ಕಥಾ ಸಾಹಿತ್ಯದಲ್ಲಿ ಕಂಡುಬಂದಿವೆ.

ಸಮಾಜದಲ್ಲಿ ಸಂಪ್ರದಾಯಸ್ಥ ಸಮಾಜವು ಒಂದು ಕಡೆ ಇದ್ದರೆ; ಇನ್ನೊಂದು ಕಡೆ ವೈಚಾರಿಕ ಚಿಂತನೆ ಸಾಗಿಬರುತ್ತದೆ. ಈ ಎರಡರ ನಡುವೆ ಮನುಷ್ಯ ಎರಡನ್ನೂ ಒಪ್ಪಿಕೊಂಡು ಆಧುನಿಕ ಜಗತ್ತಿನ ಎಲ್ಲಾ ಮಜಲುಗಳನ್ನು ಪ್ರವೇಶಿಸುತ್ತಿದ್ದಾನೆ. ಇತ್ತ ಧರ್ಮ, ಜಾತಿ, ಸಂಪ್ರದಾಯ, ನಂಬಿಕೆ ಬಿಡದೆ ಆಧುನಿಕತೆಗೆ ಸೇರಿಕೊಳ್ಳುತ್ತಿರುವುದು ಇಂದು ಕಂಡುಬರುತ್ತಿದೆ. ಹೀಗೆ ಬದುಕಿನ ಹಲವು ಸಂಗತಿಗಳು ಕಂಡುಬಂದಂತೆ ಕನ್ನಡದಲ್ಲಿ ದಲಿತ ಸಾಹಿತ್ಯವು ಕಂಡು ಬಂತು. ಇದೊಂದು ಸಾಮಾಜಿಕ ಅನಿವಾರ್ಯವಾಗಿತ್ತು. ಈ ಪ್ರಕಾರವು ದಾಖಲೆಗೊಳ್ಳದ ತನ್ನ ದಲಿತ ಲೋಕವನ್ನು ಸಾಹಿತ್ಯಗೊಳಿಸಿತು. ಇದರ ಫಲಿತಾಂಶಗಳ ಚರ್ಚೆಯು ಬೇರೆಯ ಆಯಾಮವನ್ನು ಪಡೆದುಕೊಂಡಿದೆ. ಇಲ್ಲಿ ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ದಲಿತ ಬರಹದ ಬಗ್ಗೆ ಸೈದ್ಧಾಂತಿಕ, ಪ್ರಶ್ನೆ ಏಳಬಹುದು.

ಈ ಹಿಂದೆ ದಲಿತ ಕಥಾ ಸಾಹಿತ್ಯದ ಬಗ್ಗೆ ಅದರ ತಾತ್ವಿಕ ಸ್ವರೂಪದ ಕೆಲವು ಅಂಶಗಳನ್ನು ಚರ್ಚೆಯಲ್ಲಿ ಇಡಲಾಯಿತು. ಮುಂದೆ ದಲಿತ ಕತೆ-ಕಾದಂಬರಿಗಳ ವಸ್ತು ವಿಷಯವನ್ನು ಅದರ ಸಾಮಗ್ರಿಯನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದು. ಕೆಲವು ಕಥೆ ಕಾದಂಬರಿಯ ವಿವರಗಳನ್ನು ಅವುಗಳ ಸೂಕ್ತ ಭಾಗಗಳನ್ನು ಇಲ್ಲಿ ಕೊಡಲಾಗುವುದು. ಅದು ತನ್ನ ಸೃಜನಶೀಲತೆಯ ಮೂಲಕ ಏನನ್ನು ಹೇಳಲು ಹವಣಿಸುತ್ತಿದೆ ಎಂಬುದನ್ನು ಅದರ ಸಾಂಸ್ಕೃತಿಕ ಸಂದರ್ಭದಲ್ಲಿ ಚರ್ಚಿಸಲಾಗುವುದು. ಅದು ತನ್ನ ಸಾಹಿತ್ಯಕ ಅಂಶವು ಏನನ್ನು ಹೇಳಲು ಇಷ್ಟಪಡುತ್ತಿದೆ ಎಂಬುದನ್ನು ಇಲ್ಲಿ ಗ್ರಹಿಸಲಾಗುವುದು.

ದೇವನೂರು ಮಹಾದೇವ ಅವರ 'ಡಾಂಬರು ಬಂದದು' ಕತೆಯಲ್ಲಿ ಕೆಲವು ಪ್ರಸಂಗಗಳನ್ನು ಇಟ್ಟುಕೊಂಡು ಚರ್ಚೆಯನ್ನು ಮುಂದೆ ಬೆಳಸಲಾಗುವುದು. ಕತೆಯು ಇಲ್ಲಿ ಹನ್ನೆರಡು ವಿಷಯವನ್ನು ಇಟ್ಟುಕೊಂಡಿದೆ. ಡಾಂಬರು ಬಂದುದು ಬದಲಾವಣೆಯನ್ನು ಕುರಿತದ್ದಾಗಿದೆ. ಈ ಬದಲಾವಣೆಯಲ್ಲಿ ಬಂದೊದಗುವ ಹಲವು ರೀತಿಯ ತೊಡಕುಗಳು ಈ ಕತೆಯಲ್ಲಿ ಮುಖ್ಯವಾಗುತ್ತವೆ. ಹಳ್ಳಿಯ ಮಣ್ಣಿನ ರಸ್ತೆಯನ್ನು ಡಾಂಬರು ರಸ್ತೆಯನ್ನಾಗಿ ಮಾರ್ಪಾಡಿಸುವ ಕೆಲಸದ ಪೂರ್ವಸಿದ್ಧತೆ ಇಲ್ಲಿ ಕಂಡುಬರುತ್ತದೆ. ಡಾಂಬರು ಗ್ರಾಮೀಣ ಜನತೆಗೆ ಹೊಸದು. ಈ ಗ್ರಾಮೀಣ ಜನತೆಯ ಪ್ರತಿಕ್ರಿಯೆ ಇಲ್ಲಿ ಮುಖ್ಯವಾದದ್ದು. ಆಳುವ ವರ್ಗವು ಸಾಮಾಜಿಕ ವ್ಯವಸ್ಥೆಯಲ್ಲಿ ತಮ್ಮ ಅನುಕೂಲಕ್ಕೆ ತಕ್ಕಂತೆ ಆಧುನಿಕತೆಯ ಉಪಯೋಗವನ್ನು ದುರುಪಯೋಗಪಡಿಸಿಕೊಂಡಿರುವುದು ಇಲ್ಲಿ ಕಂಡುಬರುತ್ತದೆ. ಆಳುವ ಪಟ್ಟಭದ್ರ ಹಿತಾಸಕ್ತಿ ಅಥವಾ ಊರ ಯಜಮಾನಿಕೆಯು ಆಧುನಿಕತೆಯ ಜನೋಪಯೋಗಿ ಕೆಲಸವನ್ನು ಹಿಡಿದು ಜನರನ್ನು ಮೋಸಗೊಳಿಸುವುದನ್ನು ಈ ಕತೆಯಲ್ಲಿ ಊರ ಪಟೇಲ ಮಾಡುತ್ತಾನೆ. ಇಲ್ಲಿ ಪ್ರಶ್ನೆಮಾಡುವವರು; ಪ್ರಶ್ನೆಯನ್ನು ಮಾಡದೇ ಇರುವವರು ಎರಡು ವಿಭಿನ್ನ ಮನಸ್ಥಿತಿಯವರಾಗಿ ಕಾಣಿಸುತ್ತಾರೆ. ಅದಕ್ಕೆ ಕಾರಣಗಳು ಬೇರೆ, ಬೇರೆ ರೀತಿಯಲ್ಲಿವೆ.

ಟಾರು ಊರಿಗೆ ಬರುವುದಕ್ಕಿಂತ ಹಿಂದಿನ ಸ್ಥಿತಿ ಮತ್ತು ನಂತರದ ಸ್ಥಿತಿಯು ಊರ ಭೌತಿಕ ಲಕ್ಷಣದಲ್ಲಿ ಕಂಡುಬರುತ್ತದೆ. "ದೊಡ್ಡ ರಸ್ತೆಯಿಂದ ಅದೇ ದಾರಿ ಹಿಡಿದು ಹಿಂದಕ್ಕೆ ಬಂದರೆ ಕಳ್ಳಿ ಕವುಚಿಕೊಂಡು ಅದು ಗವ್ವನೆ ಊರವರೆಗೂ ಬಂದು ದೆವ್ವ ನಿಂತ ಅರಳಿಮರಗಳ ಬಳಚಿ ಮುಂದೆ ಮೂರು ಸೆಲೆಯಾಗಿ ಒಡೆದುಕೊಂಡು ಊರೊಳಕ್ಕೆ

ಧಾವಿಸುತ್ತದೆ''[೨]. ಇಲ್ಲಿ ಟಾರು ಊರಿಗೆ ಪ್ರವೇಶ ಮಾಡುವುದಕ್ಕಿಂತ ಮೊದಲು ನಿಸರ್ಗದ ಪ್ರಕೃತಿ ಇತ್ತು. ನಂತರದಲ್ಲಿನ ರಸ್ತೆಯ ಸಲುವಾಗಿ ಟಾರ ಪ್ರವೇಶವು ಊರಲ್ಲಿ ಪ್ರಕೃತಿಯನ್ನು ನಾಶಮಾಡಿತು. ಆಧುನಿಕತೆಯ ಸೌಲಭ್ಯಗಳ ಪ್ರವೇಶವು ಪ್ರಾಕೃತಿಕ ನಾಶವನ್ನು ಮಾಡುತ್ತದೆ. ಅದು ತನ್ನದೇ ಆದ ಪ್ರಕೃತಿಯನ್ನು ನಿರ್ಮಿಸಿಕೊಳ್ಳುತ್ತದೆ. ಇಲ್ಲಿ ಒಂದನ್ನು ಪಡೆದುಕೊಳ್ಳಲು ಮತ್ತೊಂದನ್ನು ಕಳೆದುಕೊಳ್ಳುವ ಪರಿಸ್ಥಿತಿ ಇದೆ. ಲೇಖಕರು ಅದರ ಸೂಕ್ಷ್ಮದತ್ತ ಗಮನ ಹರಿಸಿದ್ದಾರೆ. ''ಈಗ ಊರ ಮುಂದಲು ಒಂದು ರಣರಂಗವೆ. ಹಿಂದೆ ನೋಡಿದಷ್ಟು ಎತ್ತರಕ್ಕೆ ಹಬ್ಬುತ್ತಿದ್ದ ಅರಳಿ ಮರಗಳು ಈಗ ನೆಲಕಂಡಿವೆ. ಹಿಂದೆ ಸೆಟೆದು ನಿಂತ ಅರಳೀ ಮರಗಳ ಮರೆಯಲ್ಲಿ ಊರ ಕಂಡವರಿಗೆ ಬಿಕೋ ಅನ್ನಿಸಲೇ ಬೇಕು. ಅವು ಇದ್ದವು ಎನ್ನುವುದಕ್ಕೆ ಎಲ್ಲೂ ಎಳ್ಳಷ್ಟೂ ಸುಳಿವು ಕಾಣದು. ಅವು ಇದ್ದಂತ ಸ್ಥಳಗಳಲ್ಲಿ ಮಿಷನ್ನು ಓಡಾಡುತ್ತಿವೆ''[೩] ಮನುಷ್ಯನ ಆಲೋಚನೆಯ ಆಧುನಿಕತೆಯು ಇಲ್ಲಿ ಪ್ರಕೃತಿಯನ್ನು ಬಲಿತೆಗೆದುಕೊಂಡಿದೆ. ಇದು ಬದಲಾವಣೆಗೆ ಸಂಬಂಧಿಸಿದೆ.

ಇಲ್ಲಿ ಎರಡು ತಲೆಮಾರಿನವರು ಕಾಣಸಿಗುತ್ತಾರೆ. ಅಂದರೆ ಗೆರೆ ಎಳೆದು ಕಾಲಮಾನವನ್ನು ಇದರಲ್ಲಿ ಗುರ್ತಿಸಲು ಆಗುವುದಿಲ್ಲ. ಅಂದರೆ ಈ ತಲೆಮಾರಿನವರಲ್ಲಿ ಶಿಕ್ಷಣ ಪಡೆದು ವ್ಯವಸ್ಥೆಯ ವಿರುದ್ಧ ನಿಂತವರು ಮತ್ತು ಹಳೆಯ ತಲೆಮಾರಿನವರು ಕಾಣಸಿಗುತ್ತಾರೆ. ಹಳೆಯ ತಲೆಮಾರಿನವರು ಶಿಕ್ಷಣವನ್ನು ಪಡೆಯದೆ ಊರ ನಿಯಮಕ್ಕೆ ತಲೆಹಾಕುತ್ತಾ ಬಂದವರು ಆಗಿರುತ್ತಾರೆ. ಶಿಕ್ಷಣ ಪಡೆದವರು ವ್ಯವಸ್ಥೆಯನ್ನು ವಿರೋಧಿಸುತ್ತಲೇ ವ್ಯವಸ್ಥೆಯೊಂದಿಗೆ, ಆಳುವ ವರ್ಗದವರಿಂದ ನಿಷ್ಟುರಕ್ಕೆ, ನಿಂದನೆಗೆ ಒಳಗಾದವರು ಆಗಿರುತ್ತಾರೆ. ಇವರು ಲಕುಮ, ರಾಜಪ್ಪ, ಮಾದು, ಶಂಬು. ಈ ನಾಲ್ವರು ಸಿಟಿಯಲ್ಲಿ ಓದಿ ತಮ್ಮ ಊರಿನ ಪರಿಸರಕ್ಕೆ ಸೇರಿಕೊಂಡಿರುತ್ತಾರೆ. ಇವರ ವಿರೋಧವು ಆಧುನಿಕತೆಗಲ್ಲ; ಅದರ ಬಳಕೆಯಲ್ಲಿನ ಸೋರುವಿಕೆಗೆ ವಿರೋಧವಾಗಿರುತ್ತದೆ. ಇದು ಪ್ರಗತಿಪರ ಆಲೋಚನೆಗೆ ಸಂಬಂಧಿಸಿರುವುದು ಆಗಿರುತ್ತದೆ. ಪ್ರಗತಿಯ/ಬದಲಾವಣೆಯ ಹೆಸರಲ್ಲಿನ ದುರುಪಯೋಗಕ್ಕೆ ಪ್ರತಿಭಟನೆ ಇವರದಾಗಿರುತ್ತದೆ. ಇಲ್ಲಿ ಸರ್ಕಾರಿ ಕೆಲಸಗಳಿಗೆ ಸಂಬಂಧಿಸಿದೆ. ಊರ ಪಟೇಲನಿಗೆ ರಸ್ತೆಯ ಕಂಟ್ರಾಕ್ಟು ದೊರೆತಿರುವುದು ಊರ ಸಂಬಂಧದ ಅವನ ಯಜಮಾನಿಕೆಯಿಂದ. ಈ ಪಟೇಲ ತನ್ನಿಚ್ಛೆಯಂತೆ ಊರನ್ನು ನಿರ್ವಹಿಸುವಂತೆ ಸಾರ್ವಜನಿಕರ ಸಂಬಂಧದ ಸರ್ಕಾರಿ ಕೆಲಸವನ್ನು ಅಂತೆಯೇ ನಿರ್ವಹಿಸಲು ಪ್ರಯತ್ನಿಸುತ್ತಾನೆ. ಇದು ವ್ಯವಸ್ಥೆಯು ಪಟ್ಟಭದ್ರ ಹಿತಾಸಕ್ತಿಯ ಪಾಲಾಗುವುದು ಇಲ್ಲಿ ಮುಖ್ಯವಾಗುತ್ತದೆ.

ರಸ್ತೆಗೆ ಬಿಡುಗಡೆಯಾದ ಹಣವನ್ನು ದೇವಸ್ಥಾನ ಊರ್ಜಿತ ಎಂಬ ಹೆಸರಲ್ಲಿ ದುರುಪಯೋಗವಾಗಬಾರದೆಂಬುದರ ಸಲುವಾಗಿ ನೊಂದವರ ಪತ್ರವು ಬಂದದ್ದು ಶಿಕ್ಷಣ ಕಲಿತು ಪ್ರಶ್ನೆ ಮಾಡುತ್ತಿದ್ದ ಹುಡುಗರ ಮೇಲೆ ಬಿತ್ತು. ಇಲ್ಲಿ ತಪ್ಪಿತಸ್ಥನ ಅಳುಕು ಇದ್ದದ್ದೇ. ಆದರೂ ತಪ್ಪಿತಸ್ಥನು ಸತ್ಯವನ್ನು ಮುಚ್ಚಿಡಲು ಪ್ರಯತ್ನಿಸುತ್ತಾನೆ. ''ಪಟೇಲರು ನಡುಮಧ್ಯೆ ಕುಂತವರೆ. ಲಾಟೀನು ಬೆಳಕು ನೇರ ಅವರ ಮೊಖಕ್ಕೆ ಬೀಳುತ್ತಿತ್ತು. ಅವರ ಮುಖದಲ್ಲಿ ತೆಳ್ಳನೆ ಬೆವರಾಡುವುದನ್ನು ಹಣೆಗೆ ನೆರಿಗೆ ಎದ್ದು ಮಾಯವಾಗಿ ಎದ್ದು ಹೋಗುವ ಬಗೆಯನ್ನು ಕಾಣಬಹುದು''[೪]. ತಪ್ಪಿತಸ್ಥ ಪಟೇಲನ ಅರಿವು ತನಗಿದೆ. ಆದರೂ ತನಗೆ ಅಡ್ಡಿ ಉಂಟುಪಡಿಸಿದವರನ್ನು ಬಡಿಯುವುದಕ್ಕೆ ತನ್ನ ಪ್ರಭುತ್ವದ ಪರಿಸರವನ್ನು ಬಳಸಿಕೊಳ್ಳುತ್ತಾನೆ. ಅದಕ್ಕೆ ಸಹಕಾರಿಯಾಗಿ ನಿಲ್ಲುವ ಊರಿನ ಶಾನುಬೋಗ ಕಂಡುಬರುತ್ತಾನೆ. ಇವರ ತೀರ್ಮಾನವು ಊರ ವಿದ್ಯಾವಂತ ಯುವಕರ ವಿರುದ್ಧವಾಗಿರುತ್ತದೆ. ವಿದ್ಯಾವಂತ ಯುವಕರಿಗೆ ದೇವಸ್ಥಾನದ ಊರ್ಜಿತ

ಮುಖ್ಯವಾಗುವುದಿಲ್ಲ. ಇವರಿಗೆ ಸಾರ್ವಜನಿಕ ಅನುಕೂಲಕರವಾದ ರಸ್ತೆಯ ಕೆಲಸ ಮುಖ್ಯವಾಗುತ್ತದೆ. ಇಲ್ಲಿ ದೇವಸ್ಥಾನ, ಅದರ ಪೂಜೆ, ಪ್ರವೇಶವು ಕೆಲವೇ ಕೆಲವರ ಉಪಯೋಗಕ್ಕೆ ಬರುವಂತಹದು. ಅದರಲ್ಲಿನ ಜಾತೀಕೇಂದ್ರಿತ ತಾರತಮ್ಯಕ್ಕೆ ವಿದ್ಯಾವಂತ ಯುವಕರು ಒಪ್ಪದೇ ಸಂಬಂಧಿಸಿದವರಿಗೆ ದೂರು ಅರ್ಜಿಯನ್ನು ಸಲ್ಲಿಸಿರುವುದು ಕಂಡುಬರುತ್ತದೆ. ಆದರೆ ಜಾತಿವ್ಯವಸ್ಥೆಯ ಮೂಲಭೂತವಾದಿತನವನ್ನು ಇರಬೇಕೆನ್ನುವ ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿದ ಮೇಲು ಜಾತಿಯವರ ಆಸಕ್ತಿಯು ಸಾರ್ವಜನಿಕ ಹಿತಾಸಕ್ತಿಗಿಂತ ಪ್ರತಿಷ್ಠಿತ ಸಮುದಾಯದವರ ಹಿತಕ್ಕೆ ಒತ್ತುಕೊಡುವುದು ಇಲ್ಲಿ ಕಂಡುಬರುತ್ತದೆ. ಈ ನಡುವೆ ಹೊಸದರ ಪ್ರವೇಶವು ಎದುರಾಗುವುದು ಟಾರು ಮಕ್ಕಳ ಕೈಯಿಗೆ ಬಾಯಿಗೆ ಅಂಟಿಕೊಳ್ಳುವುದು; ತಮ್ಮ ಅನುಕೂಲಕ್ಕೆ ಜನಸಾಮಾನ್ಯರು ಟಾರನ್ನು ತೂತು ಮಡಿಕೆಗೆ ಮೆತ್ತುವುದು. ಟಾರನ್ನು ತಮ್ಮ ಅನುಕೂಲಕರ ಸಾಧನವಾಗಿ ಮಾಡಿಕೊಳ್ಳುವುದು ಕಂಡುಬರುತ್ತದೆ. ಇಲ್ಲಿ ಅದರಾಚೆಯ ತೂತು ಮಡಕೆಗೆ ಟಾರು ಮೆತ್ತಿ ಸೋರುವ ನೀರನ್ನು ನಿಲ್ಲಿಸಿ ಮಡಕೆಯನ್ನು ಕಾಯಿಸಿದಾಗ ಅದು ಜಿನಿತು ಹೋಗುವ ಸತ್ಯವು ಮರೆಯಲ್ಲಿರುವಂತಹದು. ಇಂತಹ ಮರೆಯ ಸತ್ಯವು ಗೊತ್ತಾಗುವುದೇ ಇಲ್ಲ.

ದೂರು ಅರ್ಜಿಯಿಂದ ಬಂದ ಮಹಜರಿಗೆ ಪೋಲೀಸರ ವ್ಯಾನು ಕಷ್ಟ ಪಟ್ಟುಕೊಂಡು ಊರ ಮುಂದೆ ಬಂದು ನಿಲ್ಲುವುದು. ಇಲ್ಲಿ ರಸ್ತೆಕೆಲಸ ಆಗಿಲ್ಲ. ಟಾರ ಡ್ರಮ್ಮುಗಳು ಊರಾಚೆ ಎಲ್ಲೋ ಗುಂಡಿಯಲ್ಲಿ ಬಿದ್ದಿವೆ. ಅವುಗಳು ಜಿನಿತು ಗುಂಡಿಗೆ ಇಳಿದಿದೆ. ರಂಗಪ್ಪನ ಮಗ ಆಗುಂಡಿಗೆ ಇಳಿದಿದ್ದ. "ಟಾರು ಹಿಡಿದುಕೊಂಡಿತ್ತು. ಎರಡೂ ಕೈಗಳನ್ನು ಟಾರಿನ ಡ್ರಮ್ಮು ಕಚ್ಚಿಕೊಂಡಿತ್ತು ಮೆಯ್ಯಿ, ಕಯ್ಯಿ ಮೊಖ ಅನ್ನದೆ ಟಾರು ಟಾರುಗಿತ್ತು. ಮತ್ತೂ ಹತ್ತಿರದಿಂದ ನೋಡಿದರೆ ಆ ಹೈದನ ಮೈಯೊಳಗೆ ಇನ್ನೂ ಜೀವ ಆಡುತ್ತಿತ್ತು"[೫]. ಊರ ಭೌತಿಕ ಬದಲಾವಣೆಯು ಅದರ ಆಳುವ ವರ್ಗದವರಿಂದ ಜನ ಸಾಮಾನ್ಯರ ಬದುಕು ಸಂಕಷ್ಟದ ಸ್ಥಿತಿಗೆ ಸಿಕ್ಕಿಕೊಳ್ಳುವುದು ಕಂಡುಬರುತ್ತದೆ. ಅದು ರಂಗಪ್ಪನ ಮಗನ ಸ್ಥಿತಿಯಲ್ಲಿರುತ್ತದೆ. ಮೇಲುನೋಟಕ್ಕೆ ಸತ್ತಿದ್ದು ಅವನ ಜೀವವು ಹತ್ತಿರದಿಂದ ಕಂಡಾಗಲೇ ಇದೆ ಎಂದು ಕಂಡುಬರುತ್ತದೆ. ಇಂಥ ಸೂಕ್ಷ್ಮತೆಯಲ್ಲಿ ಬದಲಾವಣೆ ಅಥವಾ ಪ್ರಗತಿ ಕಾರ್ಯದಲ್ಲಿ ಒಳಗೊಳ್ಳುವ ಆಳುವ ವರ್ಗದ ಪಾತ್ರವು ಕಂಡುಬರುತ್ತದೆ. ಅದಕ್ಕೆ ಬಲಿಯಾಗುವುದು ಜನಸಾಮಾನ್ಯರೇ ಹೊರತು ಆಳುವ ವರ್ಗದ ಪ್ರತಿನಿಧಿ ಪಟೇಲ ನಂತವರಲ್ಲ. ಇದು ಇಂದಿಗೂ ವಾಸ್ತವವಾಗಿದೆ.

'ಗ್ರಸ್ತರು' ಕತೆಯಲ್ಲಿ ಪಟ್ಟಣದಿಂದ ಬಂದ ದಲಿತ ಹುಡುಗನ ಪಾತ್ರವು ವಿಶಿಷ್ಟವಾಗಿ ಕಾಣಿಸಿಕೊಳ್ಳುತ್ತದೆ. ಇವನಿಗೆ ಊರ ಗೌಡರೇ ಓದಲು ಸಹಾಯ ಮಾಡಿರುತ್ತಾರೆ. ಅವರು ಸಾಲಕೊಟ್ಟು ಕೆಲಸವನ್ನು ಕೊಡಿಸಿರುತ್ತಾರೆ. ಇಲ್ಲಿ ಗೌಡನು ಮಾಡಿದ ಸಹಾಯವು ಒಳ್ಳೆಯ ಆಶಯ ಉಳ್ಳದ್ದಾದರೂ ಅವನಿಗೆ ಹಣಕೊಟ್ಟಿದ್ದರ ಲೆಕ್ಕಪತ್ರಗಳ ಲೆಕ್ಕಾಚಾರವು ಇರುತ್ತದೆ. ಗೌಡನ ಸ್ವಾರ್ಥವು ಭೂಮಿಗೆ ಸಂಬಂಧಪಟ್ಟಿರುತ್ತದೆ. ಈ ಹುಡುಗನ ಅವ್ವಳ ಎದುರು ಗೌಡರು ಆಡುವ ಮಾತುಗಳು "ಹುಡ್ಗ ಯೋಗ್ಯ ಅಂತ ಸಾವಿರ್ದವಗ್ರೂ ಸಾಲ ಕೊಟ್ಟೆ. ಸ್ವಾಮಿಗಳ ಕಾಲ್ಗೆ ಬಿದ್ದು ಕೆಲ್ಸ ಕೊಡ್ಸಿದವ ನಾನು ಇವ್ವೆ. ಈಗ ಎಷ್ಟರವನು ಅಂತ ಗೊತ್ತಾಯ್ತು ತಕ್ಕೊ. ನಾ ಹೇಳೋದು ಇಷ್ಟೆ ಅಸ್ಲು ಬಡ್ಡಿ ಜೊತ್ಮಾಡ್ಕಂಡು ಹಟ್ಟಿ ಬಾಗ್ಲು ಮೆಟ್ಟೋದಕ್ಕೆ ಹೇಳು ಇಲ್ಲ, ನೀನೆ ಕಂಡಿದ್ದಿ ಹೊಲ ಅಂಗೈಯಗ್ಲ ಉಳಿಯಕ್ಕಿಲ್ಲ"[೬] ಇಲ್ಲಿ ಮೂರು ತರಹದ ಜನ ಕಾಣುತ್ತಾರೆ. ಗೌಡ, ದಲಿತ ಹುಡಗ, ಅವನ ತಾಯಿ. ಈ ಮೂವರದೂ ಭಿನ್ನ ಪ್ರವೃತ್ತಿಯನ್ನು

ಉಳ್ಳಂತವರು. ಗೌಡ ಶೋಷಣೆಯ ಇನ್ನೊಂದು ಮಜಲನ್ನು ಕಂಡುಕೊಂಡಿದ್ದಾನೆ. ಆಧುನಿಕ ಶಿಕ್ಷಣವು ದಲಿತರನ್ನು ತನ್ನಕಡೆಗೆ ಹಾತೊರೆಸುತ್ತದೆ. ದಲಿತರು ಶಿಕ್ಷಣದ ಕಡೆ ಮುಖಮಾಡಿದ ತಕ್ಷಣ ಅವರಿಗೆ ಸಹಕಾರಿ ಮನೋಭಾವವನ್ನು ತುಂಬಿ ಗೌಡರಂತ ಪಟ್ಟಭದ್ರ ಹಿತಾಸಕ್ತಿಗಳು ಇದ್ದ ಭೂಮಿಯನ್ನು ಕಬಳಿಸುವುದು ಆಗಿರುತ್ತದೆ. ದಲಿತ ಸಮುದಾಯಗಳು ಹಳ್ಳಿಯಲ್ಲಿದ್ದರೆ ಗೌಡ, ಪಟೇಲ, ಅಥವಾ ಉಳ್ಳವರ ಮನೆಯಲ್ಲಿ ಜೀತ, ಅಥವಾ ಕೂಲಿಯನ್ನು ಮಾಡುತ್ತಾ ಅವರ ಅಧೀನದಲ್ಲಿರಬೇಕು. ಇಲ್ಲವೆ ಇದ್ದ ಅಲ್ಪಸ್ವಲ್ಪ ಜಮೀನನ್ನು ಕೊಟ್ಟು ನಗರ ಸೇರಬೇಕು. ಗೌಡ ಎಂಥದೋ ಉದ್ಯೋಗಕ್ಕೆ ಸೇರಿಸುವುದು ಅದರಿಂದ ಅವರ ಆಸ್ತಿ ಪಡೆಯುವುದು; ಅದಕ್ಕೆ ತಕ್ಕಂತ ದಾಖಲೆಗಳನ್ನು, ಲೆಕ್ಕಪತ್ರಗಳನ್ನು ಇಟ್ಟುಕೊಳ್ಳುವುದು ಕಂಡುಬರುತ್ತದೆ. ಹುಡುಗನ ತಾಯಿಗೆ ಧಣಿನಿಷ್ಠೆಯು ಮುಖ್ಯವಾಗಿ ಕಾಣುತ್ತದೆ. ಅದು ಅವಳ ಹಿನ್ನೆಲೆಯಿಂದಲೂ ನಡೆದು ಬಂದದ್ದು ಆಗಿರುತ್ತದೆ. ಈ ಹುಡುಗನಿಗೆ ಸ್ವತಂತ್ರದ ಹುಡುಕಾಟ, ಅದರ ದ್ವಂದ್ವಗಳು, ಅಸಹಾಯಕ ಸ್ಥಿತಿಯನ್ನು ತಲುಪಿಸಿವೆ. ಗೌಡನನ್ನು ಎದುರಿಸಲಾರದೆ ಅವನೊಂದಿಗೆ ಹೊಂದಿಕೊಳ್ಳಲಾರದೆ ತೊಳಲಾಡುತ್ತಾನೆ. ಮುಖ್ಯವಾಗಿ ಇದು ತನ್ನ ಸಾಮಾಜಿಕ ಭದ್ರತೆಯನ್ನು ಅವಲಂಬಿಸಿರುತ್ತದೆ. ಅದಕ್ಕೆ ಎಟುಕಿಸಿಕೊಳ್ಳಲಾರದೆ ಪರಿತಪಿಸುವುದು ಕಂಡುಬರುತ್ತದೆ. ಈ ಹುಡುಗನು ತನ್ನ ಹಿರಿಯ ಅನಕ್ಷರಸ್ಥ ತಲೆಮಾರಿನವರಂತೆ ವ್ಯವಸ್ಥೆಯೊಂದಿಗೆ ಹೊಂದಾಣಿಕೆಯ ಬದುಕು ಈತನಿಗೆ ಕಷ್ಟಕರವಾಗಿ ಎದುರಾಗುತ್ತದೆ.

'ಗ್ರಸ್ತರು' ಕತೆಯ ಹುಡುಗ ಮತ್ತು ಅವನ ಹಿರಿಯ ತಲೆಮಾರಿನವರಲ್ಲಿನ ಭಿನ್ನತೆಯ ಮನಸ್ಥಿತಿಯಂತೆ 'ಅಮಾಸ' ಕತೆಯಲ್ಲಿ ಎರಡು ಪಾತ್ರಗಳಲ್ಲಿ ಇವೆ. ಈ ಎರಡು ಪಾತ್ರಗಳಲ್ಲಿಯೂ ಭಿನ್ನವಾಗಿ ಅವುಗಳ ನೆಲೆಯಲ್ಲಿ ಕಂಡುಬರುತ್ತವೆ. ಆದರೆ ಅವರ ಬದುಕು ಒಂದೇ ಆಗಿರುತ್ತದೆ. ಈ ಪಾತ್ರಗಳಲ್ಲಿ ವಯಸ್ಸಿನ ಅಂತರವಿದೆ. ಇಬ್ಬರೂ ಮಠದ ಅನ್ನದಲ್ಲಿ ಜೀವನ ಸಾಗಿಸುತ್ತಾರೆ. ಬದುಕಲ್ಲಿ ನೆಲೆಯನ್ನು ಕಾಣದ ಇವರು ಶ್ರಮದ ಆಧಾರದಿಂದ ಬದುಕ ಅನುಭವಿಸುವವರು. ಇವರಿಬ್ಬರಲ್ಲೂ ಹುಲಿಯಾಸದ ಚಿತ್ರಣ ಇದೆ. ಕುರಿಯಯ್ಯ ಅಮಾಸನ ವಯಸ್ಸಿನಲ್ಲಿದ್ದಾಗ ಹುಲಿವೇಶವ ಹಾಕಿ ಕುಣಿದು ದೊಡ್ಡಗೌಡರಿಂದ ಶಬ್ಬಾಷ್‌ಗಿರಿಯನ್ನು ಪಡೆದುಕೊಳ್ಳುತ್ತಾನೆ. ಆ ಗೌಡನು ತಲೆದೂಗಿ "ಅಂಗಿ ಬಟ್ಟೆ ಇನಾಮು ಕೊಡುತ್ತಾ 'ನೀ ಇರೋಷ್ಟು ಕಾಲ ನಮ್ಮ ಹಟ್ಟೀಲೆ ಇರು. ನೀನು ಉಂಡ ಊಟ, ಹಾಕಿಕೊಂಡ ಬಟ್ಟೆ, ಒಂದಿಷ್ಟು ಕುರಿ ನೋಡ್ಕೊ ಅಷ್ಟೇನೆ' "[೭] ಕುರಿಯಯ್ಯನ ಕಾಲದಲ್ಲಿ ಗೌಡ ಇನಾಮು ಕೊಟ್ಟು ಶಬ್ಬಾಷ್ ಎಂದದ್ದು ಅಂದಿನ ಕಾಲಮಾನಕ್ಕೆ ಸರಿಹೊಂದುವುದು ಆಗಿತ್ತು. ನಂತರದ ಕಾಲಮಾನದ ಅಮಾಸ ಹುಲಿವೇಶವ ಹಾಕಿ ಕುಣಿಯುವುದು ಇಲ್ಲಿ ಬೆರಗುಗೊಳಿಸುತ್ತದೆ. "ಅಮಾಸನಿಗೆ ಯಾರು ಹೇಳಿಕೊಟ್ಟಿದ್ದರೊ ಏನ ಕಥೆಯೊ, ಎಲ್ಲರಿಗಿಂತಲು ವೈನಾಗಿ ಹೆಜ್ಜೆ ಹಾಕುತ್ತಿದ್ದನು. ಎಲ್ಲರು ಬೆರಗಿನಿಂದ ಎಲ್ಲಾ ಇವ್ನ ಅಂದು ಕೊಂಡು ಅಮಾಸನನ್ನೆ ನೋಡುವುದು ಮಾಡುತ್ತಿದ್ದರು. ಅಷ್ಟಕ್ಕೆ ಅಲ್ಲಿಗೆ ಹೆಂಗಸೂ ಅನ್ನದೆ ಬಂದು ನಿಂತು ನೋಡುವುದಕ್ಕೆ ಬಂದು ಬಿಟ್ಟಿತು. ಬಂಗಾರಿಗಂತು ಅಮಾಸನಿಂದ ಕಣ್ಣು ಕೀಳುವುದಕ್ಕೇ ಆಗಲಿಲ್ಲ. ಅಮಾಸನನ್ನು ನೋಡುತ್ತಾ ನೋಡುತ್ತ ಮತ್ತೆ ಅವಳೊಳಗೆ ಕಂಕುಳಿಗೆ ಒಂದು ಕಂದ ಅಂತ ಬೇಕು ಎಂಬಂಥ ಅತ್ಯುಗ್ರ ಆಸೆ ಉಂಟಾಯಿತು"[೮] ಬಂಗಾರಿಯ ಬಯಕೆಗೆ ಅಮಾಸನ ಕುಣಿತದ ಆಕರ್ಷಣೆ ಒಂದು ಕಡೆಯಾದರೆ ; ಈ ಕುಣಿತವು ಊರ ಮೇಲುವರ್ಗದವರಿಗೆ ಕುಣಿತ ನಿಂತರೂ ಕಣ್ಣು ಕಟ್ಟಿದಂತೆ ನಿಲ್ಲುವುದು, ಅದು ಕಾಡುವುದು ಮತ್ತೊಂದು ಕಡೆ ಬರುತ್ತದೆ. "ಊರವರ ಕಣ್ಣು ಎತ್ತ ಹೋದರೂ ನಿದ್ದೆಮಾಡಲು ಕಣ್ಣು ಮುಚ್ಚಿದರೂ ಅಥವಾ ಹೆಂಡ್ತೀಗೆ ಸೀರೆ ಬಿಚ್ಚಿಬೆತ್ತಲೆ ಮಾಡಿ ನೋಡಿದರೂ ಕುಣಿಕವೆ ಥಂಗು ಥಂಗು ಥಂಗುಚುಕ್ಕಿ ತಮ್ಮಟೆ ದನಿ

ಜೊತೆಲೇನೆ ಕಾಣುತ್ತಿತ್ತು''[೯]. ಗೌಡರ ಮತ್ತು ಮೇಲುವರ್ಗದವರ ನಿದ್ದೆಯನ್ನು ಹುಲಿವೇಶವು ಕೆಡಿಸಿತ್ತು. ನಿದ್ದೆ ಬರದ ಗೌಡನು ಮರಿಹುಲಿಯ ವೇಶವನ್ನು ಹಾಕಿ ಹದಕ್ಕೆ ಕುಣಿದವನು ತನ್ನ ಹಟ್ಟಿಯ ಜೀತಗಾರ ಅಮಾಸನೆಂದು ತಿಳಿದು ಅತ್ಯಾಶ್ಚರ್ಯಚಕಿತನಾದ. ''ಗೌಡರ ಕಣ್ಣುಗಳ ಮುಂದೆ ಅಮಾಸ ಹುಲಿಯಾಸ ಹಾಕಿ ಬಗೆಬಗೆಯಾಗಿ ಕುಣಿಯುತ್ತ ಬಂತೊ''[೧೦] ಕುರಿಯಯ್ಯನ ಕಾಲದ ಹುಲಿವೇಷದ ಕುಣಿತಕ್ಕೂ ಅಮಾಸನ ಕಾಲದ ಹುಲಿವೇಷದ ಕುಣಿತಕ್ಕೆ ಸಮಾಜದ ಮೇಲುವರ್ಗದ ಪ್ರತಿಕ್ರಿಯೆಯು ಭಿನ್ನವಾದಂತಹದು ಆಗಿರುತ್ತದೆ. ಅದು ಕಾಲಮಾನದ ಬದಲಾವಣೆಯ ಭಿನ್ನತೆಗೆ ಸಂಬಂಧಿಸಿರುತ್ತದೆ. ಹುಲಿ, ಕಿರುಬ, ಚಿರತೆ ಇವುಗಳ ವೇಷವನ್ನು ಹಾಕಿ ಕುಣಿಯುವವರು ದಲಿತ ಸಮುದಾಯದವರು. ಇವರ ಕುಣಿತ, ಅದರ ಆರ್ಭಟ ಮತ್ತು ಅದರತ್ತ ಮನ ಸೆಳೆಯುವಿಕೆಯು ಮುಖ್ಯವಾಗುತ್ತದೆ. ತಮ್ಮ ಶೋಷಣೆಯ ಅರಿವು ದಲಿತೇತರರಿಗೆ ಗೊತ್ತಾಗುತ್ತಿದೆ. ಆದರೂ ಅದನ್ನು ಮುಂದುವರೆಸಿಕೊಂಡು ಬರುತ್ತಿದ್ದಾರೆ. ದಲಿತರ ಶಕ್ತಿಯ ಸಂಕೇತವು ಹುಲಿಗಳಾಗಿ, ಚಿರತೆಗಳಾಗಿ, ಕಿರುಬಗಳಾಗಿ ಮರಿಹುಲಿಯಾಗಿ ಕಂಡುಬಂದಿದೆ. ಇವುಗಳು ಕುಣಿಯುತ್ತಾ ಬಂದರೆ ಅದರಲ್ಲೂ ಅಮಾಸನು ''ತಮಟೆಯ ದನಿಗೆ ಹೆಜ್ಜೆಯ ಹಾಕುತ್ತ ಬಂದನೆಂದರೆ ಜನಕ್ಕೆ ಜನವೆ ಫರ್ಲಾಂಗು ದೂರ ಜಿಗಿಯುತ್ತಿತ್ತು. ಕುಣಿತವು ಬೀದಿಗೆ ಬಂದಾಗ ಹೆಂಗ್ಸು ಮಕ್ಕಳು ಜಗಲಿಗೆ ಇಳಿದೇನೆ ಜೀವ ಹಿಡಕಂಡು ನೋಡುತ್ತಿದ್ದರು.''[೧೧] ದಲಿತ ಸಮುದಾಯಗಳ ಸಾಂಸ್ಕೃತಿಕ ಒಗ್ಗೂಡುವಿಕೆಯ ಶಕ್ತಿಯು ದಲಿತೇತರರನ್ನು ಇಲ್ಲಿ ಯೋಚನೆಗೀಡುಮಾಡುತ್ತದೆ. ಅದು ಕಾಲದಿಂದ ಕಾಲಕ್ಕೆ ಭಿನ್ನತೆಯನ್ನು ಮೈಗೂಡಿಸಿಕೊಂಡಿರುತ್ತದೆ. ಈ ಕತೆಯು ಬಂದ ಹೊತ್ತಿನಲ್ಲಿ ಆಗಿನ್ನೂ ದಲಿತ ಚಳುವಳಿ ಹುಟ್ಟಿದ್ದು ಒಂದು ಸಂಗತಿ. ಹಾಗೆಯೇ ಆಗಿನ್ನೂ ದಲಿತರಲ್ಲಿ ಮೂಡುತ್ತಿದ್ದ ಸಂಸ್ಕೃತಿಯ ಅರಿವಿನ ಪ್ರಜ್ಞೆಯು ಮತ್ತೊಂದು ಸಂಗತಿ. ಇದಕ್ಕೆ ದಲಿತೇತರ ಪ್ರತಿಕ್ರಿಯೆಯು ಮುಖ್ಯವಾಗುತ್ತದೆ. ಅವುಗಳ ಸೂಕ್ಷ್ಮಗ್ರಹಿಕೆಗೆ ಹುಲಿವೇಷದ ಕುಣಿತವು ಒಂದು.

'ಮಾರಿಕೊಂಡವರು' ಕತೆಯಲ್ಲಿ ಪ್ರಮುಖವಾಗಿ ಮೂರು ಪಾತ್ರಗಳಿವೆ. ಇಲ್ಲಿ ವ್ಯವಸ್ಥೆಯ ಕ್ರೌರ್ಯಕ್ಕೆ ಸಿಕ್ಕಿ ಅದರ ಪರಮಾವಧಿಯನ್ನು ಲಕ್ಷ್ಮಿ, ಬೀರ ತಲುಪಿ ನಿರ್ಗತಿಕರಾಗಿರುತ್ತಾರೆ. ಬೀರನ ಅಸಹಾಯಕ ಸ್ಥಿತಿಯು ಅವನನ್ನು ಶೋಷಣೆಯ ಅಂಚಲ್ಲಿ ತಂದು ನಿಲ್ಲಿಸಿದೆ. ಕಿಟ್ಟಪ್ಪನು ಇಲ್ಲಿ ಭೂಮಾಲೀಕರ ಮಗ. ಲಕ್ಷ್ಮಿಯ ಸಂಬಂಧವು ಕಿಟ್ಟಪ್ಪನೊಂದಿಗೆ ಇರುವುದನ್ನು ಪ್ರಶ್ನಿಸಲು ಆಗದಂತ ಸ್ಥಿತಿಯಲ್ಲಿ ಗಂಡ ಬೀರನು ಇರುತ್ತಾನೆ. ಇವನಿಗೆ ಅನ್ನ ಹಾಕುವ ಧಣಿಯು ಇಲ್ಲಿ ಕಾಡುತ್ತಾನೆ. ಈ ಸಂಬಂಧವನ್ನು ಪ್ರತಿಭಟಿಸಲು ಅಸಹಾಯಕತೆಯು ಬೀರನನ್ನು ಕಾಡುತ್ತದೆ. ಅದನ್ನು ಎದುರಿಸಲು ಆಗದಂತ ಸ್ಥಿತಿಯಲ್ಲಿ ಬೀರ ಬದುಕುತ್ತಿರುತ್ತಾನೆ. ಅಂದರೆ ಈ ಸಂಬಂಧದ ಬಗ್ಗೆ ಬೀರನಿಗೆ ಒಪ್ಪಿಗೆ ಇದೆ ಎಂದು ಅರ್ಥವಲ್ಲ. ರೋಷ, ಸೇಡನ್ನು ಇದಕ್ಕೆ ಪ್ರತಿಯಾಗಿ ಹೊಂದಿಯೇ ಇದ್ದಾನೆ. ಬೀರನ ಸಾಮಾಜಿಕ ಸ್ಥಿತಿಯು ಕಿಟ್ಟಪ್ಪನಂತವರನ್ನು ಎದುರಾಕಿಕೊಂಡು ಬದುಕುವಂತೆ ಇರುವುದಿಲ್ಲ. ಏಕೆಂದರೆ ಪರರ ಆಶ್ರಯದಲ್ಲಿ ಬದುಕುವ ಸ್ಥಿತಿಯಲ್ಲಿ ಅವರು ಇರುತ್ತಾರೆ. ಅಂದರೆ ಆ ಸ್ಥಿತಿಗೆ ಮೇಲುವರ್ಗದವರು, ಜಾತಿಯವರು ಪೋಷಿಸಿಕೊಂಡು ಬಂದಿರುತ್ತಾರೆ. ಆದ್ದರಿಂದ ಸೇಡನ್ನು, ರೋಷವನ್ನು ಪ್ರತಿಭಟಿಸಲು ಅಮಲು ಬೇಕಾಗುತ್ತದೆ. ಇದು ಲೆಕ್ಕಕ್ಕೆ ಬರದಂತ ಪ್ರತಿಭಟನೆ ಎಂದು ಸಮಾಜದ ನಂಬಿಕೆಯಲ್ಲಿ ಇದೆ (ಕುಡಿದು ಮಾತಾಡಿದ್ದು ಎಂದು). ಸಾಮಾಜಿಕ ವ್ಯವಸ್ಥೆಯ ಬಲಾಢ್ಯ ಕೋಮಿನವರು, ಆರ್ಥಿಕ ಸಾಮಾಜಿಕ ಸ್ಥಿತಿವಂತರು, ಕೆಳಜಾತಿಯ ಶೋಷಣೆಯನ್ನು ಮಾಡುವುದು ಅವರ ಸಾಮಾಜಿಕ ಕ್ರಿಯೆಗಳಲ್ಲಿ ಒಂದಾಗಿದೆ. ಕಿಟ್ಟಪ್ಪ ಮೂರು ಜನ ಹೆಂಗಸರಿಗೆ ತನ್ನನ್ನು ಮಾರಿಕೊಂಡಿದ್ದರೂ ಅದು ಮುಖ್ಯವಾಗುವುದಿಲ್ಲ.

ಏಕೆಂದರೆ ಅವನ ಹಿರಿಯ ತಲೆಮಾರಿನವರು ಭೂಮಾಲೀಕರಾಗಿದ್ದು ತಮ್ಮ ಸಾಮಾಜಿಕ ಸ್ಥಿತಿ ಮತ್ತು ಅಂತಸ್ತಿನಲ್ಲಿ ಮೇಲಿನವರು ಆಗಿರುತ್ತಾರೆ. ಇದನ್ನು ಮೇಲುವರ್ಗ ಪೋಷಿಸುತ್ತದೆ. ಆದರೆ ಬೀರ ಲಕ್ಷ್ಮಿ ಕಿಟ್ಟಪ್ಪನಿಗೆ ಮಾರಿಕೊಂಡಿರುತ್ತಾರೆ. ಇಲ್ಲಿ ಲಕ್ಷ್ಮಿಯ ದೇಹವನ್ನಷ್ಟೇ ಅಲ್ಲ ಮಾರಿಕೊಂಡಿರುವುದು; ಬೀರ ಲಕ್ಷ್ಮಿಯರು ತಮ್ಮ ಬದುಕನ್ನೆ ಮಾರಿಕೊಂಡಿರುವುದು ಮುಖ್ಯವಾಗುತ್ತದೆ.

ಸಾಮಾಜಿಕ ವ್ಯವಸ್ಥೆಯು ತನ್ನ ನಿಯಮಗಳನ್ನು ಹೊಂದಿರುತ್ತದೆ. ಅದು ಬದುಕಲ್ಲಿ ಪ್ರಬಲರು ದುರ್ಬಲರನ್ನು ಬಳಸಿಕೊಂಡಿಯೇ ಬಂದಿದೆ. ದುರ್ಬಲರು ಅನಿವಾರ್ಯದ ಬದುಕನ್ನು ಅನುಭವಿಸುತ್ತಾ ಬದುಕುತ್ತಾರೆ. ಅದಕ್ಕೆ ಪರ್ಯಾಯ ಸಿಗುವ ತನಕ ಅನಿವಾರ್ಯವಾಗಿ ಇದ್ದ ವ್ಯವಸ್ಥೆಯಲ್ಲಿ ಬದುಕುತ್ತಾರೆ. ಆಧುನಿಕ ಶಿಕ್ಷಣದ ನಂತರದಲ್ಲಿ; ಅದರಲ್ಲೂ ಪ್ರಜಾಸತ್ತಾತ್ಮಕ ವ್ಯವಸ್ಥೆಯು ಜಾರಿಗೆ ಬರುವ ತನಕ ದಲಿತ ಸಮುದಾಯಗಳಿಂದ ಪ್ರಶ್ನೆಗಳು ಎದ್ದದ್ದು ಇಲ್ಲವೇ ಇಲ್ಲ; ನಂತರದ ದಿನಮಾನಗಳಲ್ಲಿ ಅಲ್ಲಲ್ಲಿ ಪ್ರತಿಭಟನೆ ಮತ್ತು ಪ್ರತಿರೋಧಗಳು ಕಂಡುಬಂದದ್ದನ್ನು ನೋಡುತ್ತೇವೆ. ಇದನ್ನು 'ಡಾಂಬರು ಬಂದದ್ದು' ಕತೆಯ ಲಕುಮ, ರಾಜಪ್ಪ, ಮಾದು, ಶಂಭು, 'ಗ್ರಸ್ತರು' ಕತೆಯ ವಿದ್ಯಾವಂತ ಹುಡುಗ ಇಂಥ ಮುಂತಾದ ಪಾತ್ರಗಳಿವೆ.

ದಲಿತ ಕುಟುಂಬದ ಆಂತರಿಕ ಬಿಕ್ಕಟ್ಟಿಗೆ ಜಮೀನ್ದಾರಿ ವ್ಯವಸ್ಥೆಯ ಮತ್ತು ಆಡಳಿತ ವರ್ಗದವರ ಆಕ್ರಮಣ, ಅದರ ಕ್ರೌರ್ಯ ನಡೆಯುವುದು 'ಒಡಲಾಳ' ಕಥೆಯ ವಸ್ತು. ಇಲ್ಲಿ ದಲಿತ ಕುಟುಂಬದ ಅಸಹಾಯಕತೆಯ ಸ್ಥಿತಿಯನ್ನು ಕಥೆಯು ಹೊಂದಿದೆ. ದಲಿತ ಹೆಣ್ಣಿನ ಪಾತ್ರದ ಮೂಲಕ ಕತೆ ಬಿಚ್ಚಿಕೊಳ್ಳುತ್ತದೆ. ಈ ಕತೆಯಲ್ಲಿ ಸಾಕವ್ವನ ಹುಂಜ ಕಳವಾಗುವುದು, ಅದನ್ನು ಹುಡುಕುವುದು ಕಂಡುಬರುತ್ತದೆ. ಹುಂಜ ಕಳವಾಗುವುದು ದಲಿತ ಬದುಕನ್ನು ಚಿತ್ರಿಸಲು ಸಾಂಕೇತಿಕವಾಗಿ ಕಂಡು ಬಂದಿದೆ. ಹುಂಜ ಕಳೆದು ಹೋಗುವುದು ಸಾಕವ್ವಳಿಗೆ ದುಃಖವನ್ನು ಆವರಿಸಿಕೊಳ್ಳುತ್ತದೆ. ಈ ವಿಷಯ ಇಡೀ ಕೇರಿಗೆ ಹರಡುತ್ತದೆ. ಈ ಹುಂಜವನ್ನು ಸಾಕವ್ವ ದೇವರಿಗೆ ಬಿಟ್ಟಿರುತ್ತಾಳೆ. ಸಂಕಟವನ್ನು ತುಂಬಿಕೊಳ್ಳುತ್ತಾಳೆ. ಹುಂಜ ಕಳವಾದುದರ ವಾಸ್ತವವನ್ನು ಅರಿತಂತೆ ಇವಳ ಕುಟುಂಬದವರು ನಿರ್ಲಿಪ್ತರಾಗುತ್ತಾರೆ. ಇಲ್ಲಿ ಕಂಡು ಬರುವಂತಹುದು ದಲಿತರಲ್ಲಿ ಇದ್ದ ಆಸ್ತಿಯು ಸಾಕವ್ವಳ ಹುಂಜನಂತಹುದು. ಹುಂಜ ಕಳೆದು ಹೋದರೂ, ಅಂಗಳದಲ್ಲಿ ನಿಂತಂಥ ಸಾಕವ್ವನ ಕಣ್ಮುಂದೆ ಅವಳ ಹುಂಜನ ಅಂದ ಚಂದವು ಒಡಾಡಿತು. ಸಂಪಾದಿಸಿದ್ದರ; ಸಾಕಿದ್ದರ ಒಡೆತನವು ಕಾಣೆಯಾಗಿ, ಇದರಿಂದ ಸಾಕವ್ವಳು ಸಿಟ್ಟು, ದುಃಖ, ಕಣ್ಣೀರನ್ನು ಹಾಕುತ್ತಾಳೆ. ಅವಳ ಬೈಗುಳವು ಕದ್ದವರನ್ನು ಊಹಿಸಿ ಬೈಯ್ಯುವುದರಲ್ಲಿ ನಿಲ್ಲುತ್ತವೆ. ಇಲ್ಲಿ ದಲಿತರು ಬದುಕಲ್ಲಿ ಕಳಕೊಂಡಿದ್ದಕ್ಕೆ ಪ್ರತಿಭಟನೆಯಾಗಿ ಬೈಗುಳಗಳು ನಿಲ್ಲುತ್ತವೆ. ಬೈಗುಳಗಳು ದಲಿತರ ಬದುಕಲ್ಲಿ ಕಂಡುಬರುವ ಸಹಜಕ್ರಿಯೆಗಳಲ್ಲಿ ಒಂದು. ಬೈಗುಳ ಪ್ರತಿಭಟನೆಯ ಒಂದು ಅಸ್ತ್ರ. ಆದರೆ ಇವರಿಗೆ ಇಲ್ಲಿ ಮಾನಸಿಕ ಲಾಭಗಳಷ್ಟೇ ಹೊರತು ಯಾವುದೇ ರೀತಿಯ ಭೌತಿಕ ಲಾಭಗಳಿಲ್ಲ. ತನ್ನ ಪರಿಸರದಲ್ಲಿ ಕಳೆದುಹೋದದ್ದು ಸಿಗುವುದಿಲ್ಲ ಎಂಬುದರ ಅರಿವು ಸುಪ್ತವಾಗಿ ಅಡಗಿರುವಂತಹದ್ದು. ದಲಿತೇತರ ಸಮುದಾಯಗಳು ಅಥವಾ ಆಳುವ ವರ್ಗಗಳು ದಲಿತರ ಬೈಗುಳಗಳನ್ನು ದಲಿತರ ಮಿತಿಯೆಂದು ಪರಿಗಣಿಸಿ ಬೈಗುಳಕ್ಕೆ ಬಿಟ್ಟು ಮತ್ತೆ ಅದಕ್ಕೆ ತಕ್ಕಂತ ಶೋಷಣೆಯ ಮಾರ್ಗಗಳು ಯಾವುವು ಎಂಬುದನ್ನು ಕಂಡುಕೊಳ್ಳುತ್ತಾರೆ. ಅದು ದಲಿತರ ಸಂಕಷ್ಟಗಳನ್ನು ಅರಿತೇ ಶೋಷಣೆಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ದಲಿತೇತರ, ಆಳುವ ವರ್ಗಗಳು ಮಾಡಿಕೊಳ್ಳುತ್ತವೆ. ಸಾಕವ್ವಳು ಹುಂಜವನ್ನು ಕಳಕೊಂಡ ಸಂಕಷ್ಟಗಳು ಒಂದೆಡೆ ಇದ್ದರೆ; ಸಾಹುಕಾರ ಎತ್ತಪ್ಪನವರ ಕಡಲೇ ಕಾಯಿ ಕಳ್ಳತನ ಮತ್ತೊಂದು

ಕಡೆ ಇರುವುದು ಕಂಡು ಬರುತ್ತದೆ. ಇಲ್ಲಿ ಎರಡೂ ಕೂಡ ಕಳೆದುಹೋದದಕ್ಕೆ ಸಂಬಂಧಪಟ್ಟಿರುತ್ತವೆ. ಆದರೆ ಕಡಲೇಕಾಯಿ ಕದ್ದವರ ಪರಿಗಣನೆ ಇಲ್ಲಿ ಮುಖ್ಯವಾಗುತ್ತದೆ. ಅದು ಸಮುದಾಯಗಳಲ್ಲಿನ ಸಾಮಾಜಿಕ ಅಂತಸ್ತು ಮತ್ತು ಬದುಕಿನ ವಹಿವಾಟಿನ ಆರ್ಥಿಕ ಸಂಬಂಧಕ್ಕೆ ಸಂಬಂಧಪಟ್ಟಿರುತ್ತದೆ. ಸಾಹುಕಾರ ಎತ್ತಪ್ಪಗೌಡನ ಮನೆಯ ಮಾಲು ಹೋಗಿದ್ದನ್ನು ಹುಡುಕಲು ಆಳುವ ವರ್ಗವನ್ನು ಪೋಷಿಸಿಕೊಂಡು ಬರುವ ಅಧಿಕಾರಿ ವರ್ಗವಿದೆ; ಪೋಲೀಸರಿದ್ದಾರೆ. ಅವರು ಜಪ್ತಿ ಮಾಡುತ್ತಾರೆ. ಆದರೆ ಸಾಮಾಜಿಕ ಬದುಕಿನ ಸಂಕಷ್ಟವನ್ನು ಎದುರಿಸುತ್ತಿರುವ ಸಾಕವ್ವಳ ಮನೆಯ ಮಾಲು ಕಳೆದುಹೋದಾಗ ಜನರು ಅವಳ ಮಾತನ್ನು ಕಿವಿಗೆ ಹಾಕಿಕೊಳ್ಳುವುದಿಲ್ಲ. ಅಂತಹ ಸ್ಥಿತಿಯಲ್ಲಿ ದಲಿತರ ಬದುಕು ಇದೆ. ಅಲ್ಲದೆಯೂ ಸರ್ಕಾರಿ ಅಧಿಕಾರಿಗಳಿಗೆ ತನ್ನ ಸಂಕಷ್ಟಗಳನ್ನು ಹೇಳಿಕೊಂಡರೂ ಕೂಡ ಅಲ್ಲಿ ಅವಳಿಗೆ ದೊರಕುವ ಪ್ರತಿಫಲವೇ ಬೇರೆಯದಾಗಿರುತ್ತದೆ. ಇಲ್ಲಿ ಎತ್ತಪ್ಪಗೌಡನಿಗೆ ಸಿಕ್ಕಂತ ಪುರಸ್ಕಾರ ಸಾಕವ್ವಳಿಗೆ ಸಿಗುವುದಿಲ್ಲ. ಅದು ವ್ಯಕ್ತಿ ಮತ್ತು ಸಮುದಾಯದ ಹಿನ್ನೆಲೆಗೆ ಸಂಬಂಧಪಟ್ಟಿರುವುದು ಆಗಿರುತ್ತದೆ. ಕಳೆದು ಹೋದ ಹುಂಜವನ್ನು ಹುಡುಕಲು ಪೋಲೀಸರು ಅದರ ಜೊತೆ ಹುಂಜವನ್ನು ಪಡೆದುಕೊಂಡು ಹೋಗುವುದು ಇಲ್ಲಿ ಕಂಡುಬರುತ್ತದೆ. ಕತೆಗಾರರು ಈ ಹೊತ್ತಿನ ಬದಲಾವಣೆಯ ಸಂದರ್ಭವನ್ನು ಇಲ್ಲಿ ಬಹಳ ಸಾಂಕೇತಿಕವಾಗಿ ತಂದಿದ್ದಾರೆ. ಎರಡು ಹುಂಜಗಳು ಸಾಕವ್ವಳಿಂದ ಬೇರಾಯಗುವುದು ಶೋಷಿತ ವ್ಯವಸ್ಥೆಯ ಭಿನ್ನತೆಯನ್ನು ತೋರುತ್ತವೆ. ಅಂದರೆ ಸಾಕವ್ವಳ ಮೊದಲ ಹುಂಜ ಹೋದದ್ದು ಸಾವಿರಾರು ವರ್ಷಗಳಿಂದ ಬಂದ ಊಳಿಗಮಾನ್ಯ ಪದ್ಧತಿಯ ಶೋಷಕರಿಂದ. ಎರಡನೇ ಹುಂಜ ಹೋದದ್ದು ಸಮಾಜವನ್ನು ಕಾಪಾಡುವ, ರಕ್ಷಿಸುವ ಹೆಸರಲ್ಲಿ ಇರುವ ಆಡಳಿತ ವರ್ಗದವರಿಂದ. ಆಧುನಿಕ ಸಂದರ್ಭದಲ್ಲಿನ ಎಚ್ಚರವು ದಲಿತ ಸಮುದಾಯಗಳ ಮೇಲೆ ಎಷ್ಟರಮಟ್ಟಿಗಿದೆ ಎಂಬುದನ್ನು ಕತೆಗಾರರು ಸೂಕ್ಷ್ಮವಾಗಿ ವಿವರಿಸಿದ್ದಾರೆ. ಜಮೀನ್ದಾರಿ ವ್ಯವಸ್ಥೆ ಮತ್ತು ಆಧುನಿಕ ಆಡಳಿತ ವ್ಯವಸ್ಥೆಯು ಸಂಕೀರ್ಣಗೊಳಿಸುವ ಪ್ರವೃತ್ತಿಯನ್ನು ಬದಲಾವಣೆಯ ಸಂದರ್ಭದಲ್ಲಿ ಗ್ರಹಿಸಲಾಗಿದೆ.

ದಲಿತರು ಸಾಮಾಜಿಕ ಕಟ್ಟಳೆಗಳಿಗೆ, ನೀತಿ ನಿಯಮಗಳಿಗೆ, ಜಾತಿ-ಧರ್ಮಗಳಿಗೆ ಬದ್ಧರಾಗಿರುವುದು ದಲಿತ ಕಥೆಗಳಲ್ಲಿ ಪ್ರಮುಖವಾಗಿವೆ. ಅವುಗಳು ದಲಿತರ ಬದುಕಲ್ಲಿವೆ. ಇವುಗಳನ್ನು ಮೀರುವುದೂ ಉಂಟು. ಅದಕ್ಕೆ ಪರಿಣಾಮಕಾರಿ ಒತ್ತಡಗಳು ಬೇರೆಯ ರೀತಿಯದು. ಅದು ಶಿಕ್ಷಣ ಇರಬಹುದು; ಇಲ್ಲವೆ ವೈಚಾರಿಕ ಜ್ಞಾನ ಇರಬಹುದು. ಇವು ದಲಿತರ ಕತೆಗಳಲ್ಲಿ ಕಂಡುಬರುವ ವಾಸ್ತವಿಕತೆ. ಈ ವಾಸ್ತವಿಕತೆಯಲ್ಲಿ ದಲಿತರ ಬದುಕು ಅನಾವರಣಗೊಂಡಿರುತ್ತದೆ. ದಲಿತ ವಾಸ್ತವಿಕ ಸ್ಥಿತಿಯನ್ನು ಹೇಳುವುದು ಒಂದು ಕಡೆಯಾದರೆ; ಮತ್ತೊಂದು ಕಡೆ ಅದನ್ನು ಮೀರುವುದು ಮತ್ತೊಂದು ಪ್ರಮುಖವಾದ ಸಂಗತಿ. ಇದು ಪ್ರತಿಭಟನೆಯು ಸಾಗುವ ಪ್ರಕ್ರಿಯೆಯಾಗಿ ಕಥೆಗಳಲ್ಲಿ ಕಂಡುಬರುತ್ತದೆ. ಇವುಗಳಿಗೆ ಸಮಕಾಲೀನ ವಿದ್ಯಮಾನಗಳು ಕಾರಣವಾಗಬಹುದು. ಇವು ಬದಲಾವಣೆಯ ಕಡಗೆ ಮುಖಮಾಡಿಕೊಂಡಿರುವಂತವುಗಳೂ ಹೌದು.

'ಮೂಡಲ ಸೀಮೇಲಿ ಕೊಲೆಗಿಲೆ ಮುಂತಾಗಿ' ಕತೆಯಲ್ಲಿ ಮೇಸ್ತ್ರು ಮತ್ತು ರಂಗಪ್ಪನ ಪಾತ್ರಗಳು ಒಂದೇ ತಲೆಮಾರಿನ ಎರಡು ಭಿನ್ನ ಲಕ್ಷಣಗಳನ್ನು ಹೊತ್ತ ಪಾತ್ರಗಳಾಗಿವೆ. ಮೇಸ್ತ್ರು ಜಾತಿಯಿಂದ ಹೊಲೇರು ವೃತ್ತಿಯಲ್ಲಿ ಮೇಸ್ತ್ರು. ಮೇಸ್ತ್ರಿಗೆ ಸಿಕ್ಕ ಮರ್ಯಾದೆ; ಮತ್ತು ಅವರೊಂದಿಗಿನ ಸಂವಹನವು ಅಶಿಕ್ಷಿತ ರಂಗಪ್ಪನೊಂದಿಗೆ ಮೇಲುಜಾತಿಯ ಶಾಸ್ತ್ರಿಗಳಿಂದ ಪುರಸ್ಕಾರವಿಲ್ಲ. ಶಾಸ್ತ್ರಿ ರಂಗಪ್ಪನೊಂದಿಗಿನ ಒಡನಾಟವು ಶ್ರಮದ ಕಡೆಗೆ; ದುಡಿಸಿಕೊಳ್ಳುವ ಕಡೆಗೆ ಹೆಚ್ಚು ಒತ್ತನ್ನು

ಕೊಡುವುದು ಆಗಿರುತ್ತದೆ. 'ನೋಡಿ ಇವ್ರೆ ನಮ್ಮ ರಂಗಪ್ಪ ಅಂತಂದ್ರೆ ವ್ಯವಸಾಯದಲ್ಲಿ ನಿಸ್ಸೀಮ'[೧೪] ಶಾಸ್ತ್ರಿಗಳು ರಂಗಪ್ಪನ ಕೆಲಸದ ಬಗ್ಗೆ ಹೊಗಳಿಕೆಯನ್ನು ಹೇಳಿ, ಹೇಳಿ ದುಡಿಮೆಗೆ ಕೇಂದ್ರೀಕರಿಸುವುದು ಆಗಿರುತ್ತದೆ. ಇದು ಮೇಲುವರ್ಗದವರು ಕೆಳವರ್ಗದವರನ್ನು ಅವರವರ ಕೆಲಸಕ್ಕೆ ಕೇಂದ್ರೀಕರಿಸುವುದಾಗಿರುತ್ತದೆ. ಅದು ಕುಲವೃತ್ತಿಗೆ ಮತ್ತು ಭೂಮಿಯೊಂದಿಗಿನ ಶ್ರಮದ ಕೆಲಸಗಳಿಗೆ ಸಂಬಂಧಪಟ್ಟಿರುತ್ತದೆ. ಇದರಿಂದ ದಲಿತರು ತಮ್ಮ ಸಾಮಾಜಿಕ ಸ್ಥಾನಗಳಿಂದ ಹೊರಬರಲಾರದೆ ಅಲ್ಲೇ ಉಳಿಯಲು ಕಾರಣವಾಗುತ್ತದೆ. ಹೀಗೆ ದೇವನೂರು ಮಹದೇವ ಅವರು ತಮ್ಮ ಕಥೆಗಳಲ್ಲಿ ದಲಿತಲೋಕದ ವಿಶಿಷ್ಟ ತಾಕಲಾಟಗಳನ್ನು ಕಟ್ಟಿಕೊಟ್ಟಿದ್ದಾರೆ.

ಸೈದನು ಸವರ್ಣೀಯರ ಬಾವಿಯಿಂದ ಕದ್ದು ನೀರು ತರುವುದು; ಒಂದು ದಿನ ಸಿಕ್ಕಿ ಹಾಕಿಕೊಳ್ಳುವುದು ಅದರಿಂದ ದಂಡ ಹಾಕಿಸಿಕೊಳ್ಳುವುದು ಅರವಿಂದ ಮಾಲಗತ್ತಿಯವರ 'ತೂತಿನ ದುಡ್ಡು ಮತ್ತು ನೀರು' ಕತೆಯಲ್ಲಿದೆ. ಇಲ್ಲಿ ಸೈದನು ನೀರನ್ನು ತರಲು ಊರವರು ಮಲಗಿದಾಗ ಬಾವಿಗೆ ಹೋಗುವುದು ವ್ಯವಸ್ಥೆಯ ವಿರೋಧಕ್ಕೆ ಹೆಜ್ಜೆಯನ್ನು ಇಟ್ಟಂತೆ. ಮನುಷ್ಯನಿಗೆ ಅತ್ಯಗತ್ಯಗಳಲ್ಲಿ ಒಂದಾದ ನೀರಿಗಾಗಿ ಪಡುವ ಯಾತನೆಯು ಅತ್ಯಂತ ಘೋರವಾದದ್ದು. ಸಂಪ್ರದಾಯಬದ್ಧ ಮೇಲುಜಾತಿಯವರಿಂದ ದಲಿತರು ನೀರನ್ನು ಹಾಕಿಸಿಕೊಂಡು ಬರುವುದು ಜಾತಿವ್ಯವಸ್ಥೆಯ ನಿಯಮವನ್ನು ಪಾಲಿಸಿದಂತೆ. ಇದನ್ನು ಆಳುವ ವರ್ಗವು ಪೋಷಿಸಿಕೊಂಡು ಬರುತ್ತದೆ. ಇದನ್ನು ಅನಿವಾರ್ಯವಾಗಿ ಪಾಲಿಸುವ ದಲಿತರು ಒಂದೆಡೆಯಾದರೆ, ಅದನ್ನು ಸೈದ ವಿರೋಧಿಸುತ್ತಾನೆ. ಇಲ್ಲಿ ಬದುಕಿನ ಅನಿವಾರ್ಯಕ್ಕೆ ಮೀರುವುದು ಸಾಮಾಜಿಕ ವ್ಯವಸ್ಥೆಯೆದುರು ಹೆಜ್ಜೆಯನ್ನು ಇಟ್ಟಂತೆ. ಹಾಗೆಯೇ ಸಂಪ್ರದಾಯವು ದಲಿತರ ಬದುಕಲ್ಲಿ ಮಾರಕ ಎಂಬುದಕ್ಕೆ ಜನಾರ್ದನ ಎರ್ಪಕಟ್ಟೆಯವರ 'ಲೆಕ್ಕ' ಕತೆಯು ಸಾಕ್ಷಿಯಾಗಿ ನಿಲ್ಲುತ್ತದೆ. ಸಂಪ್ರದಾಯವನ್ನು ವಿರೋಧಿಸುವ ವಿದ್ಯಾವಂತ ದಲಿತರು ಇಲ್ಲಿ ಕಂಡುಬರುತ್ತಾರೆ. ಶಿಕ್ಷಣ ಎನ್ನುವುದು ಕ್ರಾಂತಿಯನ್ನು ತಂದು ಕೊಡುತ್ತದೆ. ಸಂಪ್ರದಾಯಗಳ ಹೆಸರಲ್ಲಿ ಹಲವಾರು ಮೋಸಗಳು ದಲಿತರ ಬದುಕಲ್ಲಿ ಬಂದೊದಗುತ್ತವೆ. ಅವುಗಳನ್ನು ದಲಿತರು ತಮಗೆ ಅರಿವಿಲ್ಲದಂತೆ ಮೈಗೂಡಿಸಿಕೊಂಡಿರುತ್ತಾರೆ. ಅದು ಸರಿ ತಪ್ಪು ಎಂಬುದು ಅವರಿಗೆ ಬೇಕೀ ಆಗಿರುವುದಿಲ್ಲ. ಸಂಪ್ರದಾಯ ತಮ್ಮ ಬದುಕಿನ, ಜೀವನದ ಒಂದು ಅಂಗ. ಶಿಕ್ಷಣ ಪಡೆದು ವೈಚಾರಿಕತೆಗೊಂಡ ಯುವ ತಲೆಮಾರುಗಳು ಸಂಪ್ರದಾಯ, ಆಚರಣೆಗಳನ್ನು ಪುರಸ್ಕರಿಸದೆ ಅವುಗಳನ್ನು ಪ್ರಶ್ನಿಸುತ್ತಾರೆ. ಇವರು ಸಂಪ್ರದಾಯಗಳನ್ನು ಒಡೆಯುವ ಕೆಲಸವನ್ನು ಮಾಡುತ್ತಾರೆ. ಈ ಕತೆಯಲ್ಲಿ ಮದುಮಗ ಮಾಧವ ವಿದ್ಯಾವಂತ. ಅವನು ಮದುವೆಯಾದ ವಧುವನ್ನು ಬಿಟ್ಟುಹೋಗುವ ಸಂಪ್ರದಾಯವನ್ನು ಮುರಿಯುತ್ತಾನೆ. "ಜಾತಿ ಸಂಪ್ರದಾಯದ ಪ್ರಕಾರ ನಾನು ತಾಳಿ ಕಟ್ಟಿದ ಹುಡುಗಿ ನನ್ನ ಹೆಂಡತಿ. ಇನ್ನು ಇವಳನ್ನು ಬಿಟ್ಟು ಹೋಗುವುದು ಈ ಕಾಲಕ್ಕೆ ಒಪ್ಪುವ ನ್ಯಾಯ ಅಲ್ಲ..... ಎಂದೋ ತಪ್ಪಿದ ಲೆಕ್ಕದ ಮಾತು ಈಗ ಅಗತ್ಯವಿಲ್ಲ. ಕಾಲ ಬದಲಾದ ಹಾಗೆ ನಾವೂ ಬದಲಾಗಬೇಕು."[೧೫] ತಾತ್ವಿಕತೆಯ ಪ್ರತಿಭಟನೆಯು ಪ್ರಜ್ಞಾವಂತ ಯುವಕರಿಗೆ ಪ್ರೋತ್ಸಾಹ ನೀಡುತ್ತದೆ. ಇದರಿಂದ ಸಂಪ್ರದಾಯ ವಿರೋಧದ ದನಿಗೆ ಮಾಧವನಂತ ಯುವಕರು ದನಿಗೂಡಿಸುವುದು ಮುಖ್ಯವಾಗುತ್ತದೆ. ಇದೊಂದು ಬದಲಾವಣೆಯ ಸೂಕ್ಷ್ಮ ಕುರುಹು. ಇದರಾಚೆಯಲ್ಲಿನ ಸಂಪ್ರದಾಯ ವಿರೋಧದ ನೆಲೆಯನ್ನು ಆಧುನಿಕತೆಯ ಹಿನ್ನೆಲೆಯಲ್ಲಿ ಗ್ರಹಿಸಬಹುದು.

ಶಿಕ್ಷಣದ ಮೂಲಕ ಸಂಘಟನೆ, ನಂತರದಲ್ಲಿ ಹೋರಾಟ ಇವು ದಲಿತ ಚಳುವಳಿಯ ಆಶಯ. ಮನಜ ಅವರ 'ಸ್ಫೋಟ' ಕಥೆಯು ದಲಿತ ಚಳುವಳಿ ವಸ್ತುವನ್ನು ಹಿನ್ನೆಲೆಯಾಗಿಟ್ಟುಕೊಂಡಿದೆ. ಹಳ್ಳಿಗಳಲ್ಲಿನ ಜಾತಿ ವ್ಯವಸ್ಥೆ ಮತ್ತು

ಅವುಗಳ ಸಂಘರ್ಷದಲ್ಲಿ ಈ ಕತೆ ನಡೆಯುತ್ತದೆ. ಇಲ್ಲಿ ಮುಖ್ಯವಾಗಿ ದಲಿತರ ಪ್ರತಿಭಟನೆಯನ್ನು ಬಗ್ಗು ಬಡಿಯುವ ಮೇಲು ಜಾತಿಗಳ ಕುತಂತ್ರಗಾರಿಕೆ ಇಲ್ಲಿ ಪ್ರಮುಖವಾದ ವಸ್ತುವಿಷಯವಾಗಿದೆ. ಈ ಕತೆಯಲ್ಲಿ ಗುಡ್ಡಯ್ಯನ ಹೋರಾಟವು ಪ್ರಮುಖವಾಗಿದೆ. ಅದು ಅವನು ತೆಗೆದುಕೊಳ್ಳುವ ನಿರ್ಧಾರದ ಮೇಲಿರುತ್ತದೆ. ಗುಡ್ಡಯ್ಯನು ತನ್ನ ಮಗಳ ಮೇಲೆ ನಡೆದ ಅತ್ಯಾಚಾರಕ್ಕೆ ನ್ಯಾಯ ಸಿಗುವವರೆಗೂ ಹೋರಾಡುತ್ತೇನೆಂಬ ನಿರ್ಧಾರವು ಇಲ್ಲಿದೆ. ಇಲ್ಲಿ ದಲಿತ ಚಳುವಳಿ ಮತ್ತು ರಾಜಕೀಯದ ನಡುವೆ ಆಧುನಿಕ ಜಗತ್ತಿನ ಹೋರಾಟದ ಹಲವು ಮಗ್ಗಲುಗಳು ಕಾಣಿಸುತ್ತವೆ.

ಜಾತೀಯತೆಯ ಮನಸ್ಸುಗಳು ಮತ್ತು ಜಾತೀಯತೆಯನ್ನು ಮೀರಿ ನಿಲ್ಲುವ ಮನಸ್ಸುಗಳನ್ನು ಸೋಮಣ್ಣ ಹೊಂಗಳ್ಳಿಯವರ 'ಕೊಟ್ಟಿಗೆಗೆ ಬಂದ ಕಡಸು' ಕತೆಯಲ್ಲಿ ನೋಡಬಹುದು. ಜಮೀನ್ದಾರಿ ವ್ಯವಸ್ಥೆ ಮತ್ತು ಆ ವ್ಯವಸ್ಥೆಗೆ ಹೊಂದಿಕೊಂಡು ಅವರ ಮನೆಯಲ್ಲಿ ಜೀತಗಾರರಾಗಿ ಬದುಕುವವರು ಇಲ್ಲಿ ಕಾಣಸಿಗುತ್ತಾರೆ. ಗವಿಸಿದ್ದ, ಸಿದ್ಧ, ರಾಚ ಈ ಮೂವರು ಗೌಡರು ಮನೆಯ ಜೀತಗಾರರು. ಇವರ ಹಟ್ಟಿಯ ರಾಮು, ಗೌಡರ ಮಗಳು ಭಾಗ್ಯಳನ್ನು ಪ್ರೀತಿಸಿ ಮದುವೆಯಾಗುವ ಸಂದರ್ಭವು ಇಲ್ಲಿ ಪ್ರಮುಖವಾಗುತ್ತದೆ. ಗಂಡು ಹೆಣ್ಣಿನ ತಾಯಂದಿರು ಈ ಸಂಘರ್ಷದಿಂದ ಪ್ರಾಣವನ್ನು ಕಳೆದುಕೊಳ್ಳುತ್ತಾರೆ. ಯುವ ಮನಸ್ಸುಗಳು ಇಲ್ಲಿ ಅಂತರ್‌ಜಾತಿ ವಿವಾಹವಾಗುತ್ತಾರೆ. ಆದರೆ ಹಳೆಯ ತಲೆಮಾರಿನವರಿಗೆ ಒಪ್ಪಿಗೆ ಇರುವುದಿಲ್ಲ. ಇಲ್ಲಿ ಪಟ್ಟಭದ್ರ ಹಿತಾಸಕ್ತಿಯನ್ನು ಹೊಂದಿರುವವರು ಕಟ್ಟುಪಾಡಗಳನ್ನು ಕಾಪಾಡಿಕೊಂಡು ಬರುತ್ತಾರೆ. ಹಿರಿಯ ಕಿರಿಯ ತಲೆಮಾರಿನವರಲ್ಲಿ ಭಿನ್ನತೆ ಇದೆ. ಹಿರಿಯ ತಲೆಮಾರಿನವರು ಸಂಪ್ರದಾಯದ ಪರವಾಗಿದ್ದರೆ, ಕಿರಿಯ ತಲೆಮಾರಿನವರು ಸಂಪ್ರದಾಯವರನ್ನು ವಿರೋಧಿಸುತ್ತಾರೆ. ಗೌಡನ ಮನೆಯಿಂದ ಕಳೆದು ಹೋದ ಕಡಸನ್ನು ಹುಡುಕುವ ತಂತ್ರಗಾರಿಕೆಯನ್ನು ಈ ಕತೆಯಲ್ಲಿ ಬಳಸಲಾಗಿದೆ. ಪಟ್ಟಭದ್ರ ಹಿತಾಸಕ್ತಿಯನ್ನು ತಿರಸ್ಕರಿಸಿ ಯಾವುದನ್ನು ಕೀಳು ಎಂದು ಕರೆಯಲ್ಪಟ್ಟಿತೋ ಅದನ್ನು ಮೌಲ್ಯಗೊಳಿಸುವುದು ದಲಿತ ಸಾಹಿತ್ಯದ ಪ್ರಮುಖ ಪ್ರಯತ್ನ. ''ನಿಜವಾಗಿ ದುಡಿಮೆಯ ಕೀಳೀಕರಣ ಜಗತ್ತಿನ ಈ ವಂಶಪಾರಂಪರ್ಯವನ್ನು ಒಡೆದದ್ದೇ ಕೈಗಾರೀಕರಣ ಮತ್ತು ಆಧುನಿಕತೆಗಳು ಎನಿಸುತ್ತದೆ. ಆಧುನಿಕವಾಗಿ ಚಪ್ಪಲಿ ತಯಾರಿಸುವ-ಮಾರುವ ಕೆಲಸಗಳು ಜಾತಿಯ ಜತೆ ಸಂಬಂಧ ಕಳೆದುಕೊಳ್ಳುತ್ತಿರುವುದನ್ನು ನಾವು ಕಡೆಗಣಿಸಲಾರದು.

ನೆಲೆಗೊಂಡ ಮೌಲ್ಯಕಲ್ಪನೆಯನ್ನು ಪಲ್ಲಟ ಮಾಡಲು ಕೀಳನ್ನು ಮೌಲ್ಯೀಕರಿಸಲು ಬಗೆಬಗೆಯ ಹಾದಿಗಳನ್ನು ಸಂಸ್ಕೃತಿಗಳನ್ನು ಕಂಡುಕೊಂಡಿದೆ. ಅವುಗಳಲ್ಲಿ ಒಂದೆಂದರೆ ಅಸಾಂಪ್ರದಾಯಕವಾಗಿ ಆಲೋಚಿಸುವುದು. ಬೇಕೆಂದೇ ಉಲ್ಲಾಹೊಡೆಯುವುದು. ಮತ್ತೊಂದೆಂದರೆ ತಿರಸ್ಕೃತ ಜಗತ್ತನ್ನು ಅತ್ಯಂತ ಪ್ರೀತಿಯಿಂದ ಆತ್ಮೀಯವಾಗಿ ಚಿತ್ರಿಸುತ್ತಾ ಹೋಗುವುದು''[೧೫]. ಇಲ್ಲಿ ಉತ್ಪ್ರೇಕ್ಷೆಗೊಳಿಸುವುದು ಎಂದಲ್ಲ. ಇಲ್ಲಿ ದಲಿತ ಬದುಕನ್ನು ಅನಾವರಣಗೊಳಿಸುವುದು ಮುಖ್ಯ. ಇಲ್ಲಿ ನಿರ್ಲಕ್ಷ್ಯಕ್ಕೊಳಗಾದ ಮತ್ತು ಇನ್ನೊಂದು ಮಗ್ಗುಲನ್ನು ದಾಖಲಿಸುವ ಕೆಲಸವು ಇಲ್ಲಿ ಮುಖ್ಯವಾಗಿದೆ.

ಮೊಗಳ್ಳಿ ಗಣೇಶ್ ಅವರ 'ಬುಗುರಿ' ಕತೆಯಲ್ಲಿ ತಣಿಗೆ ಮತ್ತು ಹೇಲು ಗುಂಡಿಯ ವರ್ಣನೆಯು ಇದೆ. ತಣಿಗೆಯ ಹೊಳಪು ಅದರ ಮೇಲಿನ ಸುಂದರ ಭಂಗಿಯ ಹೆಣ್ಣಿನ ಚಿತ್ರ, ಸೂರ್ಯ ಚಂದ್ರ ಮುಂತಾದ ಪ್ರಕೃತಿಯ ಚಿತ್ರವು ಒಂದು ರೂಪವನ್ನು ಪಡೆದು ಒಂದು ದೊಡ್ಡ ಸಾಂಸ್ಕೃತಿಕ ಘಟಕವಾಗಿ ಕತೆಯಲ್ಲಿ ಚಿತ್ರಿತಗೊಂಡಿದೆ. ಇಲ್ಲಿ ಪೂರ್ವಿಕರ ಚರಿತ್ರೆಯನ್ನು ಹೇಳುವುದು ದಲಿತ ಚರಿತ್ರೆಯ ಆಧುನಿಕ ಸಂದರ್ಭದಲ್ಲಿ ಬಹಳ ಮುಖ್ಯವಾದುದು. ತಣಿಗೆಯೊಂದಿಗಿನ

ಭಾವನಾತ್ಮಕ ಸಂಬಂಧವು ಇಡೀ ಕೇರಿಯನ್ನು ಆವರಿಸಿರುವುದು ಅದರ ಹಿನ್ನೆಲೆಯು ವಿಸ್ತಾರವಾಗಿದೆ. ಕತೆಯಲ್ಲಿ "ನಾವು ಹುಡುಗರು ಒಬ್ಬೊಬ್ಬರೂ ಆ ತಟ್ಟೆಯಲ್ಲಿ ಊಟ ಮಾಡಿದರೆ ಮಾತ್ರ ನಮಗೆ ಎಲ್ಲ ತರಹದ ಒಳ್ಳೆಯ ಬುದ್ಧಿ, ವಿದ್ಯೆ, ಭವಿಷ್ಯ ಸಾಧ್ಯವಾಗುತ್ತದೆಂದು ತಾತ ನಮಗೆ ಹೇಳಿದ್ದ"[೧೬]. ತಮ್ಮ ಸಂಸ್ಕೃತಿಯಲ್ಲಿ ಹಲವು ಸಂದರ್ಭಗಳಲ್ಲಿ ಬಳಕೆಯಾಗುವ ತಣಿಗೆಯು ಹೊಸ ಆಲೋಚನೆಯಲ್ಲಿ ಪ್ರಮುಖವಾಗಿದೆ. ಇದು ಹುಟ್ಟಿದರೂ ಬೇಕು, ಸತ್ತರೂ ಬೇಕು, ಕೆಟ್ಟರೂ ಬೇಕು. ಮತ್ತೆ ಕೆಲವು ಶುಭ ಸಂದರ್ಭಗಳಲ್ಲಿಯೂ ಈ ತಣಿಗೆಯನ್ನು ಬಳಸುವುದು ಇದೆ. ದಲಿತರ ಸಾಂಸ್ಕೃತಿಕ ಬಿಂಬವು ಈ ಕತೆಯಲ್ಲಿ ತಣಿಗೆಯ ಮೂಲಕ ವ್ಯಕ್ತವಾಗಿದೆ. "(ಹಲಗೆ ದಲಿತ ಸಂಸ್ಕೃತಿಗಳಲ್ಲಿ ದೇವರು, ಸಾವು, ಮದುವೆ, ಸಂಭ್ರಮ ಎಲ್ಲ ಕಡೆ ಏಕತ್ರವಾಗಿ ಬಳಕೆಯಾಗುತ್ತದೆ.)"[೧೭] ದಲಿತರರು ಮತ್ತು ತಮಟೆಯ ನಡುವಿನ ಸಂಬಂಧವು ಅತ್ಯಂತ ನಿಕಟವಾದಂತಹದು. ದಲಿತರು ಇದನ್ನು ಬಡಿಯುವುದು ಸಾಂಸ್ಕೃತಿಕವಾಗಿ ತಮ್ಮ ಪರಂಪರೆಯ ಹಿಂದಿನಿಂದಲೂ ಇದೆ. ದಲಿತ ಚಳುವಳಿಯ ಕೆಲವು ಕಾರ್ಯಕ್ರಮಗಳಲ್ಲಿ, ಮತ್ತು ಕಾರ್ಯಕ್ರಮಗಳ ಉದ್ಘಾಟನೆಯಲ್ಲಿ ತಮಟೆಯ ಮೊಳಗು ಇಂದಿಗೂ ಇದೆ. ಅಲ್ಲದೆ ದಲಿತರ ಬದುಕಿನ ಹಲವು ಸಂದರ್ಭಗಳಲ್ಲಿ ತಮಟೆಯನ್ನು ಬಾರಿಸುವುದನ್ನು ನೋಡುತ್ತೇವೆ.

'ಬುಗರಿ' ಕತೆಯ ಹೇಲುಗುಂಡಿಯ ವರ್ಣನೆಯಲ್ಲಿ ದಲಿತರ ಬದುಕಿನ ವಾಸ್ತವಿಕತೆಯನ್ನು ನೋಡಬಹುದು. ಅದು ಚಿಕ್ಕಣ್ಣನು ತನ್ನ ಹಿತ್ತಲಲ್ಲಿ ಕಟ್ಟಿಸಿದ ಕಕ್ಕಸ್ಸು ಗುಂಡಿಯು ಊರಿಗೆ ಹೊಸ ವ್ಯವಸ್ಥೆಯಾಗಿ ಸೇರಿಕೊಂಡಿತು. ಮೈಸೂರು ಪೇಟೆಯಿಂದ ತನ್ನ ತಮ್ಮ ಶಾಂತನಿಗೆ ಹೆಣ್ಣು ತಂದದ್ದರಿಂದ ಚಿಕ್ಕಣ್ಣನು ಕಕ್ಕಸ್ಸು ಗುಂಡಿಯನ್ನು ತೆಗೆಸಿದ್ದ. ಇಲ್ಲಿ ನಗರ ಸಂಪರ್ಕ ಮತ್ತು ನಗರ ವಾಸಿಗಳು ಹಳ್ಳಿಗೆ ಬರುವ ಸಂದರ್ಭದಲ್ಲಿ ಅವರಿಗೆ ದೊರಕಿಸಿಕೊಡುವ ಸೌಲಭ್ಯಗಳು ಯಾವ ಯಾವ ರೀತಿಯಲ್ಲಿ ಸಮಸ್ಯೆಯ ವಸ್ತುಗಳಾಗುತ್ತವೆ ಎಂಬುದು ಮುಖ್ಯವಾಗುತ್ತದೆ. ನಗರದ ಕಕ್ಕಸ್ಸಿನ ಒಳಚರಂಡಿ ವ್ಯವಸ್ಥೆಗೂ ಮತ್ತು ಹಳ್ಳಿಗಳ ಕಕ್ಕಸ್ಸು ಗುಂಡಿಯ ವ್ಯವಸ್ಥೆಗೂ ಕಂಡುಬರುವ ಭಿನ್ನತೆಗಳು ಇಲ್ಲಿ ಕಂಡುಬಂದಿದೆ. ಈ ಗುಂಡಿಗೆ ಗೌಡರ ಮನೆಯ ಕೋಣ ಗುಂಡಿಗೆ ಬಿದ್ದು ಸತ್ತ ಅದನ್ನು ತೊಳೆದು ಕೊಯ್ದು ತಿನ್ನುವುದು; ಅದೇ ರೀತಿ ಹಂದಿ ಬೀಳುವುದು ಅದನ್ನು ತಿನ್ನುವುದು ಇಲ್ಲಿ ದಲಿತರ ಬದುಕಿನ ವಾಸ್ತವವನ್ನು ತೆರೆಯುತ್ತದೆ. ದಲಿತರಿಗೆ ಹಸಿವು ಮುಖ್ಯವಾಗುತ್ತದೆ. ಆ ರೀತಿಯಲ್ಲಿ ಅವರ ಬದುಕು ಇರುತ್ತದೆ. ಹಾಗೆ ಇರುವಂತೆ ಸಾಮಾಜಿಕ ವ್ಯವಸ್ಥೆಯು ರೂಪಿಸಿದೆ.

ಮುಳ್ಳೂರು ನಾಗರಾಜ 'ಮರಣ ಮಂಡಲ ಮಧ್ಯದೊಳಗೆ' ಕಾದಂಬರಿಯ ಆಶಯವು ಒಂದು ಬಗೆಯ ವರ್ಣ ಸಂಕರವನ್ನು ಪ್ರತಿಪಾದಿಸುವುದು ಆಗಿದೆ. ಇಲ್ಲಿ ಆಳುವ ವರ್ಗಗಳು ಜಾತಿ, ಜಾತಿಗಳನ್ನು ಪ್ರತೇಕವಾಗಿಟ್ಟು ಗಟ್ಟಿಗೊಳಿಸುತ್ತವೆ. ಇದಕ್ಕೆ ವಿರುದ್ಧವಾದಂತ 'ಸಮ ಸಮಾಜದ' ನಿರ್ಮಾಣದ ಆಶಯದ್ಧೀ ಕೃತಿಯಲ್ಲಿದೆ. ವರ್ಣಸಂಕರದ ಪ್ರಶ್ನೆಯು ದಲಿತ ಕಥಾಸಾಹಿತ್ಯದಲ್ಲಿ ಕಂಡುಬರುವ ಪ್ರಧಾನ ಆಶಯಗಳಲ್ಲೊಂದು. ಹಾರುವರ ಜಾತಿಯ ಮಾಳುಗಮ್ಮ ಮತ್ತು ಹೊಲೇರ ಸಂಗಯ್ಯನ ಮಗನಾಗಿ ಸಿಂಗಾರ ಹುಟ್ಟುತ್ತಾನೆ. ಈತನ ತಂದೆ ತಾಯಿಯ ಮರಣವಾದ ನಂತರ ರಾಕಾಸಿಯ ಸಾಕುಮಗನಾಗುತ್ತಾನೆ. ಸಿಂಗಾರ ವರ್ಣಸಂಕರದಿಂದ ಹುಟ್ಟಿದವನು. ಈತನು ಶೋಷಕ ದೊರೆಯಾದ ಭೂಪಾಲನನ್ನು ಅವನತಿಗೆ ಕಾರಣವಾಗುವಂತಹ ಪರಿಸರದ ನಿರ್ಮಾಣ ಮಾಡುತ್ತಾನೆ.

ದೇವನೂರ ಮಹಾದೇವರ 'ಕುಸುಮ ಬಾಲೆ'ಯಲ್ಲಿ ಗುರ್ತಿಸಬೇಕಾದ ಪ್ರಮುಖವಾದ ಪಾತ್ರವು ಚೆನ್ನನದು. ಈತ ಆಧುನಿಕ ಜಗತ್ತಿನ ಎಲ್ಲಾ ದ್ವಂದ್ವಗಳನ್ನು ಒಳಗೊಂಡ ವ್ಯಕ್ತಿಯಾಗಿ ಕಾಣುತ್ತಾನೆ. ಚೆನ್ನ ಓದಿದವನು. ಬಿ.ಎ. ಫೇಲಾದವನಾಗಿದ್ದಾನೆ. ಈತನಿಗೆ ನೌಕರಿ ಇಲ್ಲ. ಈತನು ಇಂದಿನ ದಲಿತ ಯುವಪ್ರತಿನಿಧಿಯಾಗಿ ನಿಲ್ಲುತ್ತಾನೆ. ಬಹುತೇಕ

ದಲಿತ ಹುಡುಗರು ಶಿಕ್ಷಣದಲ್ಲಿ ಬಿ.ಎ. ಯನ್ನು ಕಲಿತವರು; ಮತ್ತು ಅದರಿಂದ ಯಾವ ಕೆಲಸವೂ ಸಿಗದೆ ನಿರುದ್ಯೋಗಿಗಳಾಗಿರುವವರು. ಚೆನ್ನನು ತನ್ನ ಹಿಂದಿನ ತಲೆಮಾರಿನವರಂತೆ ಗಟ್ಟಿಮುಟ್ಟಾಗಿರದೆ ದುರ್ಬಲನಾಗಿರುತ್ತಾನೆ. ಮೇಲುಜಾತಿಯ ಕುಸುಮಾಳನ್ನು ಚೆನ್ನ ಪ್ರೀತಿಸುತ್ತಾನೆ. ಪರಿಣಾಮ ಪ್ರೀತಿ ಮುಂದುವರೆದು ಇವರಿಬ್ಬರ ಕೂಡುವಿಕೆಯಿಂದ ಕುಸುಮಾ ಮಗುವನ್ನು ಹಡೆಯುತ್ತಾಳೆ. ಇದು ಚೆನ್ನನ ಕೊಲೆಗೆ ಕಾರಣವಾಗುತ್ತದೆ. ಚೆನ್ನನ ಕೊಲೆಯು ಅವನ ಕೇರಿಯವರಿಗೆ ಸಂಬಂಧಿಕರಿಗೆ, ಮತ್ತು ಅವನ ಮನೆಯವರಿಗೆ ಬಹಿರಂಗಗೊಳ್ಳುವುದಿಲ್ಲ. ಭೂಮಾಲಿಕ, ಬಂಡವಾಳಗಾರ ಆಳುವ ವರ್ಗವು ಚೆನ್ನನಂತ ಹಲವರನ್ನು ಬಲಿತೆಗೆದುಕೊಂಡಿದೆ. ಅದು ಒಂದು ಕಾಲದಲ್ಲಿ ನೇರವಾಗಿಯೇ ನಡೆಯುತ್ತಿತ್ತು. ಚನ್ನನ ಬದುಕಿನ ಸಂದರ್ಭದಲ್ಲಿ ದಲಿತರು ಶಿಕ್ಷಣವನ್ನು ಪಡೆಯುತ್ತಿದ್ದದ್ದು ಮುಖ್ಯವಾಗಿರುವುದು ಆಗಿದೆ. ಇದರಿಂದ ದಲಿತರು ಸಂಘಟನೆಯನ್ನು ಕಟ್ಟಿ ಅದರ ಮೂಲಕ ಹಲವು ಪ್ರಶ್ನೆಗಳು ಸಮಾಜದ ಪ್ರತಿಷ್ಠಿತ ಸಮುದಾಯಗಳಿಗೆ ಎದುರು ಎತ್ತಿದರು. ಈ ಸಂದರ್ಭದಲ್ಲಿ ದಲಿತೇತರರು ಚನ್ನನ ಕೊಲೆ ಮಾಡಿದ್ದನ್ನು ಮುಚ್ಚಿಡುವುದು ಅತ್ಯಂತ ಆಲೋಚನೀಯವಾದದ್ದು. ಆದ್ದರಿಂದ ಚೆನ್ನನ ಕೊಲೆಯನ್ನು ಬೇರೆ ರೀತಿಯಲ್ಲಿಯೇ ಕಟ್ಟಿಕೊಡುತ್ತಾರೆ. ಅದು ಕಲ್ಪನೆಗೆ ಸೇರುತ್ತದೆ. ಚೆನ್ನನ ಸಮುದಾಯದವರು, ಮನೆಯವರು ಚೆನ್ನನ ಬಗ್ಗೆ ಕಲ್ಪನಾಲೋಕದಲ್ಲಿದ್ದು; ಅವನ ಬರುವಿಕೆಗೆ ಕಾಯುತ್ತಿರುತ್ತಾರೆ. ಚೆನ್ನನು ಸತ್ತಿರುವ ವಾಸ್ತವವು ಇವರಿಗೆ ತಿಳಿಯುವುದೇ ಇಲ್ಲ. ಇವರ ಕಲ್ಪನೆಯು ಚೆನ್ನನು ಬೊಂಬಾಯಿಯಲ್ಲಿ ಇರುವನೆಂದೂ; ಅಲ್ಲಿಯ ದೊರೆಯ ಮಗನಿಗೆ ಸಮನೆಂದೂ; ಇಂದಿರಾಗಾಂಧಿ ಇವನ ಮುಂದೆ ಏನೇನೂ ಅಲ್ಲ ಎಂಬುದರ ಭ್ರಮೆಯ ಜಗತ್ತನ್ನು ನಿರ್ಮಿಸಿಕೊಂಡಿದ್ದಾರೆ. ತಮ್ಮ ಮಗನ ಬಗ್ಗೆ ಅತ್ಯಂತ ಎತ್ತರದ ಕಲ್ಪನೆಯನ್ನು ಕಟ್ಟಿಕೊಂಡು ಇವನ ಮನೆಯವರೂ ಕಾಯುತ್ತಿರುತ್ತಾರೆ. ಕಲ್ಪನೆಯೊಂದಿಗಿನ ಕತೆಯ ನಂಟು ದಲಿತರಿಗೆ ವಂಶಪಾರಂಪರಾಗತವಾದುದು. ಇವು ದಲಿತ ಸಮುದಾಯಗಳ ಸಾಂಸ್ಕೃತಿಕ ಅಧ್ಯಯನದಿಂದ ಕಂಡುಬರುತ್ತವೆ.

ಜಾತಿ ವ್ಯವಸ್ಥೆಯನ್ನು ಚೆನ್ನನು ಮೀರುವುದರಿಂದ ಅವನು ಕೊಲೆಯಾಗುತ್ತಾನೆ. ಇದನ್ನು ಅರಿಯದ ಅವನ ತಂದೆ-ತಾಯಿ, ಸಂಬಂಧಿಕರು, ಕೇರಿಯವರು ಒಂದು ಕಲ್ಪನೆಯಲ್ಲಿಯೇ ಬದುಕುತ್ತಾರೆ. ಹಾಗೆಯೇ ಈ ಕಾದಂಬರಿ ನಡೆಯುತ್ತದೆ. ಇವರು **'ಸಂಬಂಜ ಅನ್ನೋದು ದೊಡ್ಡದು ಕನ'** ಎಂದು ಕನಸು ಕಾಣವುದು ಊಳಿಗ ಮಾನ್ಯಶಾಹಿಯ ಸಂಕೀರ್ಣತೆಯಲ್ಲಿ ದಲಿತ ಬದುಕು ಯಾವ ರೀತಿಯಲ್ಲಿದೆ ಎಂಬುದು ಗೊತ್ತಾಗುತ್ತದೆ. ದಲಿತರ ಕಲ್ಪನೆ ಇಲ್ಲಿ ಮುಖ್ಯವಾಗಿರುತ್ತದೆ. ಅಂದರೆ ಇವರ ಕಲ್ಪನೆಯಲ್ಲಿ ರಾಜತ್ವ, ಮತ್ತು ಪ್ರಜಾಪ್ರತಿನಿಧಿಯ ರಾಜಕಾರಣಿ ಇವರ ಎರಡು ವ್ಯವಸ್ಥೆಗಿಂತಲೂ ಇವರು ಪ್ರಮುಖರಾದವರು. ಇವರು ಒಂದು ಎತ್ತರದ ಸ್ಥಿತಿಯನ್ನು ಕಲ್ಪಿಸಿಕೊಂಡಿರುವುದು ದಲಿತ ಸಮುದಾಯಗಳು ಭವಿಷ್ಯದಲ್ಲಿ ಒಂದು ಸ್ಥಿತಿಗಳನ್ನು, ನೆಲೆಯನ್ನು ಕಾಣುವುದಾಗಿದೆ. ಇದು ತಮ್ಮ ಸಮುದಾಯಗಳ ಬದುಕಿಗಿಂತ ಭಿನ್ನವಾದದ್ದರ ಚಿತ್ರಣವನ್ನು ಕಣ್ಣ ಮುಂದೆ ಕಟ್ಟಿಕೊಂಡಿದ್ದಾರೆ.

ಊಳಿಗಮಾನ್ಯಶಾಹಿಯ ವಿಕೃತಿಗಳನ್ನು ಪ್ರತ್ಯೇಕವಾಗಿ ಅನುಭವಿಸುವ ದಲಿತರಿಗೆ ಅದರ ನೋವು ಎದುರಿಗೆ ಗೊತ್ತಾದರೂ ಅವರ ಅರಿವು ಅನಕ್ಷರಸ್ಥ ತಲೆಮಾರಿನವರಿಗೆ ಕಂಡುಬರುವುದಿಲ್ಲ. ಆದರೆ ಅಕ್ಷರಸ್ಥ ದಲಿತರು ಇದನ್ನು ಬಹುತೇಕವಾಗಿ ಪ್ರತಿಭಟಿಸುತ್ತಾರೆ. ಇದನ್ನು ಗಾರೆಸಿದ್ದಾವನು ಕದ್ದು ಎಳನೀರನ್ನು ಕುಡಿದಿದ್ದರ ಪ್ರಸಂಗದಲ್ಲಿ ನೋಡಬಹುದು. ಹದಿನಾರು ಎಳೆನೀರನ್ನು ಗಾರೆಸಿದ್ದಾವ ಕಿತ್ತುಕುಡಿದು ತೋಟದ ಒಡೆಯನಿಗೆ ಸಿಕ್ಕಿ ಬೀಳುತ್ತಾನೆ. ಸಿಕ್ಕಿ ಬಿದ್ದ ಗಾರೆಸಿದ್ದಾವನಿಗೆ ಒಡೆಯರು ಹೊಡೆದಿರುತ್ತಾರೆ. ಏಟನ್ನು ತಿಂದ ಗಾರೆಸಿದ್ದಾವನಿಗಿಂತ ಏಟನ್ನು ಕೊಟ್ಟವರೇ

ಸುಸ್ತಾಗುತ್ತಾರೆ. ಈ ಪ್ರಸಂಗದಲ್ಲಿ ಮೇಷ್ಟ್ರು ನಾಗರಾಜನ ಪಾತ್ರವು ಪ್ರಮುಖವಾಗುತ್ತದೆ. ''ಏನ್ರೀ ಸ್ವಾಮಿ, ಇಷ್ಟಕ್ಕೆ ಕಂಬಕ್ಕಟ್ಟಿ ಹೊಡ್ಡಿದ್ದೀರಲ್ಲಾ ನಿಮ್ದೂ ತಪ್ಪಲ್ವಾ?......... ಅದೂ ತಪ್ಪೇಯ. ಅದ್ಕ ನೀವ್ಗಳು ಕಟ್ಟಾಕಂಡು ಹೊಡ್ದಿರದೂ ತಪ್ಪೇಯ ಆ ಎಳನೀರನ್ನೂ ಅದ ಕಿತ್ತವರನ್ನು ಪೋಲೀಸ್‌ಗೆ ಕೊಡಬೇಕಿತ್ತು. ಅದು ಬಿಟ್ಟು''[೧೮] ಇಲ್ಲಿ ಊಳಿಗಮಾನ್ಯ ಒಡೆಯರ ನ್ಯಾಯಪದ್ಧತಿ ಸರಿಯಲ್ಲ ಎಂಬುದು ಶಿಕ್ಷಣವನ್ನು ಹೊಂದಿದ ನಾಗರಾಜನ ಅಭಿಪ್ರಾಯ. ಊಳಿಗಮಾನ್ಯ ಒಡೆಯರ ನ್ಯಾಯ ಪದ್ಧತಿಗಿಂತ ಪ್ರಜಾಪ್ರಭುತ್ವದ ನ್ಯಾಯಪದ್ಧತಿಯಲ್ಲಿ ದಲಿತರಿಗೆ ನಿಜವಾದ ನ್ಯಾಯ ದೊರಕುತ್ತದೆ ಎಂದು ಸ್ಪಷ್ಟವಾದ ನಂಬಿಕೆ ಇದೆ.

ಮನಜರ 'ಮಾಗಿ' ಕಾದಂಬರಿಯಲ್ಲಿನ ಮಾಗಿಯ ಪಾತ್ರವು ಬಹಳ ವಿಶಿಷ್ಟವಾದದ್ದು. ಮಾಗಿ ಚಿಕ್ಕ ವಯಸ್ಸಿನಲ್ಲೇ ಮದುವೆಯಾಗುತ್ತಾಳೆ. ಸಂಸಾರ ಜವಬ್ದಾರಿಯನ್ನು ಹೊತ್ತುಕೊಂಡು ಹೆಂಡತಿಯಾಗಿ ಅತ್ತಿಗೆಯಾಗಿ, ನಾದಿನಿಯಾಗಿ, ತಾಯಿಯಾಗಿ ಕಾಣಿಸಿಕೊಳ್ಳುತ್ತಾಳೆ. ಮಾಗಿಯು ಬಡತನದ ಅತ್ಯಂತ ದಾರುಣಸ್ಥಿತಿಯನ್ನು ತಲುಪಿ ಬದುಕುತ್ತಾಳೆ. ''ದಲಿತ ಕುಟುಂಬದ ಹೆಣ್ಣೊಬ್ಬಳು ದಲಿತ ಕುಟುಂಬದ ಗಂಡಿಗಿಂತ ಮತ್ತು ಮೇಲುವರ್ಗದ ಹೆಣ್ಣಿಗಿಂತ ಹೆಚ್ಚು ಶೋಷಣೆಗೆ ಒಳಗಾದವಳು. ಕುಟುಂಬದ ಎಲ್ಲಾ ಸದಸ್ಯರ ಅಪೇಕ್ಷೆಗಳಿಗೆ ಅನುಗುಣವಾಗಿ ಕೆಲಸಮಾಡುವುದಷ್ಟೇ ಅಲ್ಲದೆ ಕುಟುಂಬದ ಆರ್ಥಿಕತೆ ಬಹುಪಾಲು ಹೊರೆಯನ್ನು ಹೊರಬೇಕಾಗಿರುವುದರಿಂದ ದಲಿತ ಹೆಣ್ಣೊಬ್ಬಳು ಎರಡೂ ನೆಲೆಗಳಿಗೆ ಹೆಚ್ಚು ಶೋಷಣೆಗೆ ಒಳಗಾದವಳು. ಇಂತಹ ಹೆಣ್ಣಾದ ಮಾಗಿಯ ಮೂಲಕ ದಲಿತ ಹೆಣ್ಣಿನ ಬದುಕಿನ ನೋವಿನ ಮುಖವನ್ನು ಮಾಗಿ ಕಾದಂಬರಿ ಪ್ರಕಟಿಸಿದೆ. ಮಗ ವಸಂತನನ್ನು ಶಾಲೆಗೆ ಸೇರಿಸುವ ಶಿಕ್ಷಣ ಕೊಡಿಸುವ ಹಟದಿಂದ ಮಾಗಿ ಪಡುವ ದೈಹಿಕ ಮತ್ತು ಮಾನಸಿಕ ಶ್ರಮ, ಭೂಮಿಯನ್ನು ಹೊಂದಿ ಫಲ ಪಡೆಯುವ ಸ್ಥಿತಿ ಈ ಕಾದಂಬರಿ ಶಿಕ್ಷಣ ಮತ್ತು ದುಡಿಮೆಯ ಮೂಲಕ ದಲಿತ ಬದುಕಿನ ಪ್ರಗತಿಯ ಸೂಚನೆಯನ್ನು ಕೊಡುತ್ತದೆ.''[೧೯] ಇಲ್ಲಿ ಅಕ್ಷರ ಜ್ಞಾನವು ದಲಿತ ಸಮುದಾಯಗಳಿಗೆ ಅನಿವಾರ್ಯ ಮತ್ತು ಅಗತ್ಯ ಎಂಬುದು ಇಲ್ಲಿ ಮುಖ್ಯವಾಗುತ್ತದೆ.

ಅರವಿಂದ ಮಾಲಗತ್ತಿಯವರ 'ಕಾರ್ಯ' ಕಾದಂಬರಿಯುಲ್ಲಿ ''ಅಕ್ಕವ್ವ ಪ್ರತಿನಿಧಿಸಿರುವುದು ಲೌಕಿಕ ಸ್ಥಿತಿಯನ್ನು. ಇವಳಿಗೆ ತಾನು ನಡೆಸಬೇಕಾದ ಆಚರಣೆಗಳಿಗಿಂತಲೂ ತಾನು ಕಳೆದುಕೊಂಡ ಎಮ್ಮೆ ಮುಖ್ಯವಾಗುತ್ತದೆ. ಇದರಿಂದ ಆಚರಣೆಯು ಛೇದಗೊಳ್ಳುತ್ತದೆ. ಈ ರೀತಿ ಛೇದಗೊಳ್ಳುವುದೇ ದಟ್ಟ ಪ್ರಾದೇಶಿಕ, ಜನಾಂಗವೊಂದರ ರೀತಿ ರಿವಾಜುಗಳನ್ನು ವಿರೋಧಿಸುವ ನೆಲೆಯೇ ಆಗಿರುತ್ತದೆ. ಅಕ್ಕವ್ವ ವರ್ತನೆಯಲ್ಲಿ ಆಸ್ತಿಮಾಡುವ, ಆಸ್ತಿ ಸಂರಕ್ಷಿಸುವ ಮನೋಭಾವವು ಇದ್ದು ಅತ್ಯಂತ ಅನಿವಾರ್ಯ ಪ್ರಸಂಗಗಳಲ್ಲಿ ಆಚರಣೆಯನ್ನು ಕೂಡಾ ವಿರೋಧಿಸುವ ಮಾನವ ಸ್ವಭಾವವನ್ನು ಈ ಪಾತ್ರವು ಪ್ರತಿನಿಧಿಸುವುದನ್ನು ಕಾಣಬಹುದು. ಇದು ಲೌಕಿಕ ಸ್ಥಿತಿಯ ಯಥಾವತ್ತಾದ ಚಿತ್ರಣವಾಗಿದೆ. ಅಕ್ಕವ್ವ ಇದರ ಮೂಲಕ ಸಮಾಜವನ್ನು ಎದುರಿಸುತ್ತಾಳೆ''[೨೦]. 'ಕಾರ್ಯ'ವನ್ನು ಕೇಂದ್ರವಾಗಿಟ್ಟುಕೊಂಡು ಈ ಕಾದಂಬರಿ ಬೆಳೆಯುತ್ತದೆ.

ಮಹಾದೇವರ 'ಒಡಲಾಳ'ದಲ್ಲಿ ಪುಟ್ಟ ಗೌರಿಯು ಗೋಡೆಯ ಮೇಲೆ ನವಿಲು ಚಿತ್ರವನ್ನು ಬರೆಯುತ್ತಾಳೆ. ಇಲ್ಲಿ ಪುಟ್ಟ ಗೌರಿಯು ವಿಶಿಷ್ಟವಾಗಿಯೇ ಚಿತ್ರಬರೆಯುತ್ತಾಳೆ. ಸಾಂಪ್ರದಾಯಿಕವಾಗಿ ಚಿತ್ರವನ್ನು ತಲೆಯಿಂದ ಶುರುಮಾಡದೆ ಕಾಲಿನಿಂದ ಶುರುಮಾಡಿ. ನವಿಲು ಚಿತ್ರವನ್ನು ಬರೆಯುತ್ತಾಳೆ. ಇದನ್ನು ಕಂಡ ಶಿವೂ ಅತ್ಯಂತ ಖುಷಿಗೊಂಡು ಸಾಕವ್ವಳಿಗೆ

ಹೇಳುತ್ತಾನೆ. ಅದಕ್ಕೆ ಸಾಕವ್ವ ಗೋಣಗುತ್ತಾಳೆ. ಸಾಕವ್ವಳಿಗೆ ಕಳೆದುಹೋದ ಹುಂಜನ ಮೇಲೆ ತನ್ನ ಗಮನವ ಕೇಂದ್ರೀಕರಿಸುವುದು ಇಲ್ಲಿ ಮುಖ್ಯವಾಗುತ್ತದೆ. ಆದರೆ ಪುಟ್ಟಗೌರಿ ಶಿವೂ ಅವರ ಕಾಳಜಿಯೇ ಬೇರೆಯಾಗಿರುತ್ತದೆ. ಸಾಕವ್ವಳ ತುಡಿತವೇ ಬೇರೆಯಾಗಿ ನಿಲ್ಲುತ್ತದೆ. ಇಲ್ಲಿ ದಲಿತರ ಯುವಪ್ರತಿಭೆಯಲ್ಲಿ ಮೂಡಿರುವ ಕಲಾಪ್ರತಿಭೆಯನ್ನು ಕತೆಗಾರರು ಗೋಡೆಯ ಮೇಲೆ ಕುಣಿಯುವ ನವಿಲಿನ ಚಿತ್ರದಲ್ಲಿ ಮೂಡಿಸಿದ್ದಾರೆ. ದಲಿತರಲ್ಲಿ ಕಲೆಗೆ ಬಡತನವಿಲ್ಲ. ಅದು ಜೀವಂತಗೊಂಡಿದೆ ಎಂಬುದು ನವಿಲ ಚಿತ್ರದಲ್ಲಿ ಮೂಡಿಬಂದಿದೆ.

ಶಿವರುದ್ರ ಕಲ್ಲೋಳ್ಕರ 'ಹೊಲೆಗೇರಿ ರಾಜಕುಮಾರ' ಕಾದಂಬರಿಯಲ್ಲಿ ಸುಮತಿಯ ಪಾತ್ರವು ವಿಶಿಷ್ಟವಾಗಿ ಕಂಡುಬರುತ್ತದೆ. ಸುಮತಿಯ ಛಲವು ಅವಳು ಬದುಕಲ್ಲಿ ಸ್ವೀಕರಿಸುವ ಧೈರ್ಯವು ತನ್ನ ಮುಂದಿನ ಪೀಳಿಗೆಯ ಭವಿಷ್ಯದ ಕನಸನ್ನು ಹೊತ್ತಿರುತ್ತದೆ. ಗಂಡನ ಆಶ್ರಯ ಇಲ್ಲದೆಯೂ ಬದುಕಬಲ್ಲೆ, ಹೆತ್ತ ಮಕ್ಕಳನ್ನು ಸಾಕಬಲ್ಲೆ ಎಂಬ ಆತ್ಮ ವಿಶ್ವಾಸವನ್ನು ತಂದುಕೊಂಡು ಪಣ ತೊಡುತ್ತಾಳೆ. ಇದು ಬದಲಾವಣೆಗೆ ಪ್ರಮುಖವಾದಂತಹದು. ಸ್ತ್ರೀಯರ ಸ್ವಾವಲಂಬನೆಯ ಬಗೆಗೆ ಸ್ಫೂರ್ತಿಯನ್ನು ನೀಡುತ್ತದೆ. ಇಲ್ಲಿ ಅಸಹಾಯಕತೆಯನ್ನು ಮೆಟ್ಟಿನಿಂತು ಅನಿವಾರ್ಯ ಜೀವನೋತ್ಸಾಹವು ಕಂಡುಬರುತ್ತದೆ. ಸುಮತಿ ದಲಿತ ಸಂಘದ ಮೆರವಣಿಗೆಯಲ್ಲಿ ಸೇರಿಕೊಳ್ಳುವುದು ಘೋಷಣೆ ಕೂಗುವುದು ದಲಿತರ ಬದುಕಿಗೆ ಹೋರಾಟದ ಅನಿವಾರ್ಯತೆಯನ್ನು ಪ್ರಕಟಿಸುತ್ತದೆ. ದಲಿತ ಬದುಕೇ ಹೋರಾಟಕ್ಕೆ ಪ್ರಚೋದನೆಯನ್ನು ನೀಡುತ್ತದೆ. 'ದಲಿತ ಮಹಿಳಾ ಒಕ್ಕೂಟ' ದಲಿತ ಚಳುವಳಿಯ ಒಂದು ಭಾಗವಾಗಿರುವುದು ವಿಮೋಚನಾ ಆಶಯವನ್ನು ಈ ಕಾದಂಬರಿಯು ಹೊಂದಿದೆ. ದಲಿತ ಚಳುವಳಿಯಲ್ಲಿ ಸ್ತ್ರೀಯರು ಭಾಗವಹಿಸುವುದು ಅವರ ಬದುಕಿನ ಆಂತರಿಕ ತುಮುಲಕ್ಕೆ ಒಂದು ಅರ್ಥವನ್ನು ಕೊಡುವುದು ಆಗಿದೆ.

ಇದುವರೆಗೆ ದಲಿತ ಕಥಾಸಾಹಿತ್ಯವನ್ನು ಕುರಿತಂತೆ ಚರ್ಚಿಸಲಾಯಿತು. ಇಲ್ಲಿ ಸಾಂಸ್ಕೃತಿಕ ಭಿನ್ನತೆಯನ್ನು ಕಥೆ-ಕಾದಂಬರಿಗಳ ಮೂಲಕ ನೋಡಲಾಗಿದೆ. ದಲಿತ ಬದುಕನ್ನು ಭಿನ್ನ ಪಾತ್ರಗಳ ಮೂಲಕ ಅವುಗಳ ವಿಭಿನ್ನತೆಯನ್ನು ನೋಡಲಾಗಿದೆ. ಇವುಗಳೆಲ್ಲವೂ ದಲಿತ ಲೇಖಕರ ಭಿನ್ನ ಜೀವನಾನುಭವದಿಂದ ಕೂಡಿದೆ. ದಲಿತರ ಪರಿಸರದಲ್ಲಿ ಕಂಡುಬರುವ ಊಳಿಗಮಾನ್ಯ ಒಡೆತನಕ್ಕೆ ವಿರುದ್ಧವಾದ ಪ್ರಶ್ನೆಯನ್ನು ತಮ್ಮ ಬದುಕಿನ ಬದಲಾವಣೆಯ/ವಾಸ್ತವ ಚಿತ್ರಣದಿಂದ ಸಮಗ್ರ ಕಥಾ ಸಾಹಿತ್ಯದ ಪ್ರಧಾನ ಆಶಯವನ್ನು ಚರ್ಚಿಸಲಾಯಿತು.

## ಅಡಿ ಟಿಪ್ಪಣಿಗಳು

೧. ಸಂ. ಎಲ್.ಹನುಮಂತಯ್ಯ. ಬಿ.ಚಿನ್ನಸ್ವಾಮಿ. 'ದಲಿತ ಕಥೆಗಳು' ಪ್ರಸ್ತಾವನೆಯಲ್ಲಿ

೨. ದೇವನೂರು ಮಹಾದೇವ, 'ಡಾಂಬರು ಬಂದದು' ಕತೆ, 'ಮಹಾದೇವ ಅವರ ಕೃತಿಗಳು', ಪುಟ ೩೦

೩. - ಅದೇ - ಪುಟ ೩೧

೪. - ಅದೇ - ಪುಟ ೩೪

೫. - ಅದೇ - ಪುಟ ೩೭

೬. - ಅದೇ - 'ಗ್ರಸ್ತರು' ಕತೆ. ಪುಟ ೯

೭. - ಅದೇ - 'ಅಮಾಸ' ಕತೆ, ಪುಟ ೫೦

೮. - ಅದೇ - ಪುಟ ೫೨

೯. - ಅದೇ - ಪುಟ ೫೫

೧೦. - ಅದೇ - ಪುಟ ೫೬

೧೧. - ಅದೇ - ಪುಟ ೫೫

೧೨. ಒಡಲಾಳ ಕತೆ -ಅದೇ- ಪುಟ ೬೧

೧೩. ಜನಾರ್ದನ ಏರ್ಪಕಟ್ಟೆ, ಸಂ.ಎಲ್ ಹನುಮಂತಯ್ಯ ಬಿ.ಚಿನ್ನಸ್ವಾಮಿ 'ಲೆಕ್ಕ' 'ದಲಿತ ಕತೆಗಳು' ಪುಟ ೪೪

೧೪. ದೇವನೂರು ಮಹಾದೇವ, 'ದೇವನೂರು ಮಹಾದೇವ ಅವರ ಕೃತಿಗಳು', ಪುಟ ೪೨

೧೫. ರಹಮತ್ ತರೀಕೆರೆ, 'ಮರದೊಳಗಣ ಕಿಚ್ಚು', ಪುಟ ೧೯೯

೧೬. ಮೊಗಳ್ಳಿ ಗಣೇಶ್, 'ಬಗುರಿ', ಪುಟ ೪೯

೧೭. ರಹಮತ್ ತರೀಕೆರೆ, 'ಮರದೊಳಗಣ ಕಿಚ್ಚು', ಪುಟ ೨೦೩

೧೮. ದೇವನೂರು ಮಹಾದೇವ, 'ದೇವನೂರು ಮಹಾದೇವ ಅವರ ಕೃತಿಗಳು', ಪುಟ ೧೪೫-೧೪೬

೧೯. ಸಂ. ಅರವಿಂದ ಮಾಲಗತ್ತಿ, 'ನಾಲ್ಕು ದಲಿತೀಯ ಕಾದಂಬರಿಗಳು', ಪುಟ ೧೬

೨೦. ಸಂ. ಸಬೀಹಾ ಭೂಮಿಗೌಡ, 'ಕಾರ್ಯ ವಿಮರ್ಶಾಲೋಕ', ಪುಟ ೨೦

## ಕನ್ನಡದ ದಲಿತ ಆತ್ಮಕಥನಗಳು

ಕನ್ನಡದ ದಲಿತ ಆತ್ಮಕಥನಗಳಾದ ಸಿದ್ಧಲಿಂಗಯ್ಯನವರ 'ಊರುಕೇರಿ' ಮತ್ತು ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಈ ಎರಡು ಕೃತಿಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

ಆತ್ಮಕಥನವು ವ್ಯಕ್ತಿಯೊಬ್ಬನ ವೈಯಕ್ತಿಕ ಜೀವನದ ಲಿಖಿತ ದಾಖಲೆ. ಈ ವೈಯಕ್ತಿಕ ಜೀವನದ ಲಿಖಿತ ದಾಖಲೆಗೆ ಅಂಟಿಕೊಂಡಂತೆ ವ್ಯಕ್ತಿಯ ಪರಿಸರ, ಅವನ ಸಮುದಾಯ ಮತ್ತು ಅನುಭವಗಳು ಹೊಂದಿಕೊಂಡಿರುತ್ತವೆ. ಆತ್ಮಕಥನವು ವ್ಯಕ್ತಿತ್ವವನ್ನು ದಾಖಲೆಗೊಳಿಸುವ ಮಹತ್ವದ ಪ್ರಕಾರ. ಇಲ್ಲಿ ವ್ಯಕ್ತಿಯ ನೆನಪುಗಳು ಮತ್ತು ಅವನ ಭಾವನೆಗಳ ಮರುಕಳಿಗಳು ಆಗಿರುತ್ತವೆ. ಅವುಗಳು ಸಂತ್ಯಾಂಶಗಳ ಘಟನೆಗಳನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತಗೊಳಿಸುತ್ತವೆ. ಆತ್ಮಕಥನವು ವ್ಯಕ್ತಿಯ ಹಿನ್ನೆಲೆಯನ್ನು ಗುರ್ತಿಸುವಲ್ಲಿ ಸಾಧ್ಯವಾಗುತ್ತವೆ. ಆತ್ಮಕಥೆಯ ರಚನೆಯಲ್ಲಿ ಬರಹಗಾರನ ಪಾತ್ರವೇನು ಎಂಬುದು ವ್ಯಕ್ತವಾಗುತ್ತದೆ. ಆತ್ಮಕಥನವನ್ನು ಬರೆಯುವವನು ತನ್ನ ಸಮಕಾಲಿನ ಸಂದರ್ಭದ ಬಗ್ಗೆ; ಅವನ ಸ್ಥಿತಿಯ ಬಗ್ಗೆ ಬರೆಯುತ್ತಾನೆ. ವ್ಯಕ್ತಿಯ ಅವನ ಸಮಕಾಲಿನ ಸಂದರ್ಭದ ಸಮಾಜದಲ್ಲಿ ಅವನ ಸ್ಥಿತಿ ಹೇಗೆ ಇತ್ತು? ಎಂಬುದು ಆತ್ಮಕಥನದಲ್ಲಿ ಗೊತ್ತಾಗುತ್ತದೆ. ಆತ್ಮಕಥನವನ್ನು ಬರೆಯುವವನಿಗೆ ಯಾವ ಸಂಕೋಚವೂ ಇಲ್ಲದೆ ತನ್ನ ಬದುಕಿನ ಸಿಹಿಕಹಿ ನೆನಪುಗಳೆಲ್ಲವನ್ನು ಬರೆಯುವ ಅವಕಾಶವಿರುತ್ತದೆ. ಇಲ್ಲಿ ತನ್ನ ಮನದಾಳದ ಸುಖ, ದುಃಖಗಳನ್ನು ಬಿಚ್ಚಿಡುವುದರಿಂದ ಆತ್ಮಕಥೆಯನ್ನು ಬರೆಯುವವನಿಗೆ ಒಂದು ರೀತಿಯ ತೃಪ್ತಿ ಇರುತ್ತದೆ.

ದಲಿತ ಆತ್ಮಕಥನಗಳನ್ನು ಚರ್ಚಿಸುವಾಗ ಅವುಗಳ ಭಿನ್ನತೆಗಳು ಕಂಡುಬರುತ್ತವೆ. ಅವುಗಳು ಇತರೆ ದಲಿತೇತರರ ಆತ್ಮಕಥನಗಳಿಗಿಂತ ಭಿನ್ನತೆಯನ್ನು ಹೊಂದಿರುತ್ತವೆ. ಅವುಗಳನ್ನೆಲ್ಲಾ ಇಲ್ಲಿ ಚರ್ಚೆಗೆ ಎತ್ತಿಕೊಳ್ಳದೆ ಕನ್ನಡ ದಲಿತ ಆತ್ಮಕಥನಗಳಾದ 'ಊರುಕೇರಿ' ಮತ್ತು 'ಗೌರ್ಮೆಂಟ್ ಬ್ರಾಹ್ಮಣ' ಕೃತಿಯನ್ನು ಗಮನಿಸಲಾಗುವುದು. ಈ ಎರಡು ಕೃತಿಗಳಲ್ಲಿ ಕಂಡು ಬರುವ ಮುಖ್ಯ ಅಂಶ ತಮ್ಮ ಬದುಕನ್ನು, ಮತ್ತು ತಮ್ಮ ಜನಾಂಗದ ಬದುಕನ್ನು ವಿವರಿಸುವುದು. ಅಲ್ಲದೆಯೂ ಆ ಬದುಕಿನಿಂದ ತಾವು ಭಿನ್ನವಾಗಿರುವುದನ್ನು ತಮ್ಮ ಬೆಳವಣಿಗೆಯ ಹಂತದಲ್ಲಿ ವಿವರಿಸಿರುವುದು. ಅಂದರೆ ಜನಾಂಗದ ಬದುಕಿಗಿಂತ; ತಮ್ಮ ಸಮುದಾಯದ ಬದುಕಿಗಿಂತ ತಮ್ಮ ಬದುಕು ಭಿನ್ನ ಎಂದು ಅವರ ಈ ಬರವಣಿಗೆಯಲ್ಲಿ ಕಂಡುಬಂದಿವೆ. ಓದುಗರಿಗೆ ಈ ಕೃತಿಗಳ ಕರ್ತೃಗಳಾದ ಮಾಲಗತ್ತಿಯವರು ಬುದ್ಧಿವಂತ ಪ್ರಾಧ್ಯಾಪಕರಾಗಿಯೂ

ಸಿದ್ಧಲಿಂಗಯ್ಯನವರು ಯಾವುದಕ್ಕೂ ಸಿಕ್ಕಿಬೀಳದ ಜಾಣ್ಮೆಯ ವ್ಯಕ್ತಿಯಾಗಿ ಕಾಣಿಸುತ್ತಾರೆ. ತಮ್ಮ ಅನುಭವಗಳನ್ನು ಅದರ ಹಿಂದಿನ ಅಭಿವ್ಯಕ್ತಿಯನ್ನು ಜಾಗೃತ ಮನಸ್ಸಿನ ಎಚ್ಚರದಿಂದ ತಮ್ಮ ಆತ್ಮಕಥನಗಳನ್ನು ಕಟ್ಟಲು ಇಷ್ಟಪಟ್ಟಿದ್ದಾರೆ. ಈ ಕೃತಿಗಳು ಒಬ್ಬ ದಲಿತ ಓದುಗನಿಗೆ ಸಾಮಾನ್ಯವಾಗಿ ಅಂತಹದ್ದೇನು ಅನುಭವವೆನಿಸದಿದ್ದರೂ ದಲಿತೇತರ ಓದುಗರಿಗೆ ತಾವು ನಿರೀಕ್ಷಿಸಿದ ಮಟ್ಟಕ್ಕಿಂತಲೂ ತಾವು ಹಿಂದೆದೂ ಓದಿಲ್ಲದ, ಕಂಡಿಲ್ಲದ ಅನುಭವವು ಸಹೃದಯತೆಯಲ್ಲಿ ಮೂಡಬಹುದು. ಅಲ್ಲದೆ ಆಶ್ಚರ್ಯವೂ ಆಗಬಹುದು.

ಸಮೂಹದಿಂದ ವ್ಯಕ್ತಿಯನ್ನು ಗುರ್ತಿಸಿಕೊಳ್ಳಲು ಜೀವನಚರಿತ್ರೆಗಳು ಹುಟ್ಟಿಕೊಂಡರೆ; ಆತ್ಮಚರಿತ್ರೆಗಳಲ್ಲಿ ತನ್ನ ಸಮಾಜದಲ್ಲಿ ತಾನು, ತನ್ನ ಸ್ಥಾನ ಏನು ? ತನ್ನ ಸಮುದಾಯದಲ್ಲಿ ತಾನು ಹೇಗೆ ಭಿನ್ನ ಎಂಬುದೂ ಕೂಡ ವ್ಯಕ್ತಿಯಲ್ಲಿ ಹುಟ್ಟುತ್ತವೆ. ಅದು ತನ್ನ ಬದುಕಿನ ಬೆಳವಣಿಗೆಯನ್ನು ವಿವರಿಸುವುದು ಆಗಬಹುದು. ಜನಾಂಗ, ಸಮುದಾಯದಿಂದ ಬೇರ್ಪಡುವ ಮನಃಸ್ಥಿತಿಯು ವ್ಯಕ್ತಿಯಲ್ಲಿ ಏರ್ಪಟ್ಟಾಗ ಆತ್ಮಕಥೆಗಳು ಹುಟ್ಟುತ್ತವೆ. ಆಗ ತಮ್ಮ ಬದುಕಿನ ವೈವಿಧ್ಯಮಯ ಭಿನ್ನತೆಗಳ ಬಗ್ಗೆ ಹೇಳಿಕೊಳ್ಳುತ್ತಾರೆ. 'ಊರು ಕೇರಿ' ಮತ್ತು 'ಗೌರ್ಮೆಂಟ್ ಬ್ರಾಹ್ಮಣ' ಕೃತಿಗಳನ್ನು ಉದ್ದೇಶದಲ್ಲಿಟ್ಟುಕೊಂಡು ಇಲ್ಲಿ ನಿರ್ವಚಿಸಲಾಗಿದೆ. ಈ ಎರಡು ಆತ್ಮಕಥನಗಳು ಒಂದು ರೀತಿಯಲ್ಲಿ ತಮ್ಮ ಸಮುದಾಯವನ್ನು ಕೇಂದ್ರವಾಗಿಟ್ಟುಕೊಂಡು, ಮತ್ತೊಂದು ರೀತಿಯಲ್ಲಿ ತಮ್ಮ ಸಮುದಾಯವನ್ನು ಕೇಂದ್ರವಾಗಿಟ್ಟುಕೊಳ್ಳದೆ ಸಮುದಾಯದಿಂದ ನಾನೊಬ್ಬನೆಂದೂ ನಿರ್ವಚಿಸಿಕೊಳ್ಳಲಾಗಿದೆ. ಇಲ್ಲಿ ವ್ಯಕ್ತಿಕೇಂದ್ರಿತ ಪ್ರಜ್ಞೆಯಿಂದ ಸಮುದಾಯದ ಜೊತೆಗಿನ ಒಡನಾಟವನ್ನು ಕುರಿತಂತೆ ಈ ಆತ್ಮಕಥನಗಳನ್ನು ಕಟ್ಟಿದ್ದಾರೆ. ಸಮುದಾಯಗಳಲ್ಲಿ ಲೇಖಕರು ತಮ್ಮ ನೆಲೆಯನ್ನು ಗುರ್ತಿಸಿಕೊಳ್ಳಲು ಮಾತ್ರ ತಂದಂತೆ ಕಂಡುಬಂದರೂ ಅದರ ಸಂಬಂಧವು ಗಾಢವಾಗಿ ಮೈದುಂಬಿಕೊಂಡಿವೆ.

ದಲಿತ ಆತ್ಮಕಥನಗಳು ದಲಿತೇತರ ಆತ್ಮಕಥನಗಳಿಗಿಂತ ಭಿನ್ನವಾಗಿ ಏಕೆ ನಿಲ್ಲುತ್ತವೆ ಎಂಬ ಪ್ರಶ್ನೆಯನ್ನು ಹಾಕಿಕೊಂಡರೆ ಅವುಗಳಿಗೆ ಸಂಬಂಧಿಸಿದ ವಿವಿಧ ಮಜಲುಗಳನ್ನು ಅರ್ಥಮಾಡಿಕೊಳ್ಳಬಹುದು. ಅಂದರೆ, ದಲಿತೇತರ ಆತ್ಮಕಥನಗಳಲ್ಲಿ ವ್ಯಕ್ತಿಯು ಸಮಾಜದೊಂದಿಗಿನ ಒಡನಾಟದೊಂದಿಗೆ ಅವನ ಶ್ರೇಯಸ್ಸು ಕಂಡುಬರುತ್ತದೆ. ದಲಿತೇತರರ ಬದುಕು ಒಂದು ಸಾಮಾಜಿಕ ಪ್ರತಿಷ್ಠೆಯಿಂದ ಕೂಡಿರುತ್ತದೆ. ಅಲ್ಲದೆಯೂ ತನ್ನದೇ ಆದ ಒಂದು ಮಟ್ಟದ ಸಾಮಾಜಿಕ ಸ್ಥಾನ-ಮಾನಗಳನ್ನು ದಲಿತೇತರ ಸಮುದಾಯಗಳು ಹೊಂದಿರುತ್ತವೆ. ಈ ದಲಿತೇತರ ವ್ಯಕ್ತಿಗೆ ಸಮಾಜದೊಂದಿಗಿನ ಬದುಕಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ ಯಾವ ಆಘಾತವೂ ಕಂಡು ಬರುವುದಿಲ್ಲ. ದಲಿತರ ಬದುಕಲ್ಲಿ ಕಂಡುಬಂದ ಆಘಾತದ ತೀವ್ರತೆಯ ಹಿನ್ನೆಲೆಯು ದಲಿತೇತರಲ್ಲಿ ಇರುವುದಿಲ್ಲ. ದಲಿತೇತರು ವ್ಯವಸ್ಥಿತ ಸಮಾಜದ ಭದ್ರತೆಯಲ್ಲಿ ತಮ್ಮ ಬದುಕನ್ನು ಕಟ್ಟಿಕೊಂಡಿರುತ್ತಾರೆ. ಆದುದರಿಂದ ದಲಿತೇತರ ಆತ್ಮಕಥನಕಾರರಿಗೂ ದಲಿತ ಆತ್ಮಕಥನಕಾರರಿಗೂ ಸಾಕಷ್ಟು ಭಿನ್ನತೆಗಳು ಇವೆ. ದಲಿತರು ಬರೆಯಲು ಶುರು ಮಾಡಿದ್ದು ಈಚಿಗೆ. ದಲಿತರ ಬದುಕು ಸಂಪೂರ್ಣವಾಗಿ ಮೌಖಿಕ ಪರಂಪರೆಗೆ ಸೇರಿಕೊಂಡಿತ್ತು. ಈ ಪರಂಪರೆಯವರು ಸಾಂಸ್ಕೃತಿಕ ಚಟುವಟಿಕೆಗಳನ್ನು ಹಲವು ರೀತಿಯಲ್ಲಿ ಮೈಗೂಡಿಸಿಕೊಂಡಿದ್ದರು. ಅವುಗಳು ಕಥನ, ಕಾವ್ಯ, ಪದ, ನಾಟಕ ಮುಂತಾದವುಗಳಲ್ಲಿ ಸೇರಿಕೊಂಡಿದ್ದವು. ಆದರೆ ಇಂದು ಅಕ್ಷರ ಕಂಡ ದಲಿತ ಜಗತ್ತು ತನ್ನ ಸಾಹಿತ್ಯ ಪ್ರಕಾರಗಳಲ್ಲಿಯೂ ತನ್ನ ಸಮುದಾಯದ ವಾಸ್ತವಿಕ ಹಿನ್ನೆಲೆಯನ್ನು ಹೊಂದಿದೆ. ಇವರ ಸಾಹಿತ್ಯ ಸೃಷ್ಟಿಯು ಈಗಾಗಲೇ ಇದ್ದ ಸಾಹಿತ್ಯ ಸೃಷ್ಟಿಗಿಂತ ಭಿನ್ನತೆಯನ್ನು ಹೊಂದಿವೆ. ಈ ಭಿನ್ನತೆಗಳು ಸ್ವ-ಅನುಭವ ಮತ್ತು ಸ್ವ-ವಿವರಗಳಿಂದ ಕೂಡಿ ಭಿನ್ನತೆಯಲ್ಲಿ ಅಭಿವ್ಯಕ್ತಗೊಂಡಿವೆ.

ದಲಿತರಿಂದ ರಚನೆಗೊಂಡ ಆತ್ಮಕಥನಗಳು ಯಾರಿಗಾಗಿ ಎಂಬ ಪ್ರಶ್ನೆಯು ಮುಖ್ಯವಾಗುತ್ತದೆ. ಅವು ದಲಿತ ಬರಹಗಾರ ತನ್ನ ಅನುಭವವನ್ನು ಅನುಭವಿಸುತ್ತಿರುವ ತನ್ನ ಸಮುದಾಯಗಳ ಅನಕ್ಷರಸ್ಥ ವ್ಯಕ್ತಿಗೂ; ಆಥವಾ ಸಮಾಜದ ಅಕ್ಷರಸ್ಥ ಯಜಮಾನಿಕೆಯನ್ನು ಮಾಡುತ್ತಿರುವ ಜನಾಂಗಕ್ಕೋ ಎಂಬುದು ಇಲ್ಲಿ ಮುಖ್ಯವಾಗುತ್ತದೆ. ತಮ್ಮ, ತಮ್ಮ ಜನಾಂಗದ ಸ್ಥಿತಿಯನ್ನು ಪರಿಚಯಿಸುವ ಉದ್ದೇಶ ದಲಿತ ಆತ್ಮಕಥನಕಾರನಿಗೆ ಇರುತ್ತದೆ. ಇದು ಲೇಖಕನ ಬದುಕಿನ ಹಿನ್ನೆಲೆಯಾಗಿರುತ್ತದೆ. ಈ ಹಿನ್ನೆಲೆಯನ್ನು ಓದುವ ವರ್ಗಕ್ಕೆ ನೀಡುವುದು ಆತ್ಮ ಕಥನಕಾರನ ಆಶಯವಾಗಿರುತ್ತದೆ. ಅಲ್ಲದೆಯೂ ತನ್ನ ಬದುಕಿನ ಹಿನ್ನೆಲೆಯಾಗಿರುತ್ತದೆ. ಇಲ್ಲಿ ತನ್ನ ಬದುಕಿನ ಹಿನ್ನೋಟವನ್ನು ಬಿಚ್ಚಿಡುವುದರಿಂದ ಒಂದು ರೀತಿಯ ಆತ್ಮತೃಪ್ತಿಯನ್ನು ನೀಡುತ್ತದೆ. ಆದ್ದರಿಂದ ದಲಿತ ಆತ್ಮಕಥೆಗಳು ವಿಶಿಷ್ಟವಾಗುತ್ತದೆ.

ಈವೊತ್ತಿನ ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ತಮ್ಮ ಬದುಕಿನ ತುಣುಕುಗಳನ್ನು ದಾಖಲೆಗೊಳಿಸುವುದು ಆತ್ಮಕಥನಕಾರನಿಗೆ ಏಕೆ ಅನಿವಾರ್ಯವಾಗುತ್ತದೆ ಎಂಬುದಕ್ಕೆ ಹಲವು ಕಾರಣಗಳು ಕಂಡುಬರುತ್ತವೆ. ಇಂಡಿಯಾವು ಪ್ರಪಂಚದ ಎರಡನೆಯ ಮಹಾಯುದ್ಧದ ತನಕವೂ ವಸಾಹತುಶಾಹಿ ಆಡಳಿತದ ಬಿಗಿಯಲ್ಲಿತ್ತು. ಈ ಯುದ್ಧದ ನಂತರದಲ್ಲಿ ಇಂಡಿಯಾವು ನವವಸಾಹತುಶಾಹಿಯ ಹಿಡಿತಕ್ಕೆ ಒಳಗಾಯಿತು. ಅಂದರೆ ೧೯೪೭ರಲ್ಲಿ ಸಾಮ್ರಾಜ್ಯಶಾಹಿಯು ಅಂತರ್‌ರಾಷ್ಟ್ರೀಯ ಹಣಕಾಸು ನಿಧಿಯ ಷರತ್ತುಗಳಿಗೆ ಮತ್ತು ನಂತರದ ಇಂತಹ ಅಂತರಾಷ್ಟ್ರೀಯ ಸಾಮ್ರಾಜ್ಯಶಾಹಿಯ ಹಲವಾರು ಷರತ್ತುಗಳಿಗೆ ಬದ್ಧವಾಯಿತು. ಅವುಗಳು ಕೆಲವು ಒಪ್ಪಂದಗಳ ಮೇರೆಗೆ ತಮ್ಮ ತಮ್ಮ ಸಂಪನ್ಮೂಲಗಳ ವಹಿವಾಟನ್ನು ನಡೆಸುತ್ತಿವೆ. ಸಾಮ್ರಾಜ್ಯಶಾಹಿ ರಾಷ್ಟ್ರಗಳು ಇಂಡಿಯಾದಂತಹ ತೃತೀಯ ಜಗತ್ತಿನ ದೇಶಗಳನ್ನು ಇಂದಿಗೂ ನಿಯಂತ್ರಿಸುತ್ತಿವೆ. ಅವುಗಳು ಒಂದು ಹಂತದಲ್ಲಿ ಕೆಲಸ ನಿರ್ವಹಿಸುತ್ತಿವೆ. ಅವುಗಳ ಜಾಗತೀಕರಣ, ಆಧುನೀಕರಣ, ಉದಾರೀಕರಣ, ಖಾಸಗೀಕರಣಗಳಾಗಿ ದೇಶವನ್ನು ಒಡೆದು ಆಳುತ್ತಿವೆ. ಹಳ್ಳಿಗಳ ದೇಶವಾದ ಭಾರತವು 'ಗ್ಲೋಬಲ್ ವಿಲೇಜ್' ಆಗುತ್ತಿದೆ. ದುರಂತವೆಂದರೆ ಈ ಹಳ್ಳಿಗಳಲ್ಲಿ ದಲ್ಲಾಳಿ ಬಂಡವಾಳಶಾಹಿ, ಊಳಿಗಮಾನ್ಯಶಾಹಿ ವ್ಯವಸ್ಥೆಗೆ ಸಾಮ್ರಾಜ್ಯಶಾಹಿಯು ಪೂರಕವಾಗಿ ಪೋಷಿಸುತ್ತಿದೆ. ಆದ್ದರಿಂದ ಸಾಮ್ರಾಜ್ಯಶಾಹಿಯ ಧೋರಣೆಯು ಆಳುವ ವರ್ಗಕ್ಕೆ ಸಹಾಯಕವಾಗುತ್ತಿದೆ. ಇಂತಹ ಸಂದರ್ಭದಲ್ಲಿ ಸಾಮ್ರಾಜ್ಯಶಾಹಿಯ ಧೋರಣೆಯು ವ್ಯಕ್ತಿಕೇಂದ್ರಿತ ನೆಲೆಯಿಂದ ಸಮುದಾಯವನ್ನು, ಅದರ ಸಮಾಜವನ್ನೂ ನೋಡುತ್ತಿದೆ. ವ್ಯಕ್ತಿಯು ಸಮುದಾಯದಿಂದ ಬೇರ್ಪಟ್ಟು; ತನ್ನ ವೈಯುಕ್ತಿಕ ನೆಲೆಯಲ್ಲಿ ಯೋಚನೆ ಮಾಡುತ್ತಿದ್ದಾನೆ. ಹಾಗೆ ಮಾಡುವ ಹಾಗೆ ಜಾಗತಿಕ ವಿದ್ಯಮಾನದ ಆಮಿಷಗಳು ಒಳಗುಮಾಡಿಕೊಡುತ್ತಿವೆ. ಮನುಷ್ಯ ಸಂಬಂಧದ ನಡುವೆ ಯಾವಾಗ ಆಧುನಿಕತೆ ಮತ್ತು ಜಾಗತಿಕತೆಯ ಸವಾಲುಗಳು ಎದುರಾದವೋ ಆಗ ಕರಳುಬಳ್ಳಿಯ ಸಂಬಂಧಗಳು ಬೇರ್ಪಟ್ಟು ನಿಂತವು. ವ್ಯಕ್ತಿಯು ತನ್ನ ಸಮುದಾಯದಿಂದ ಬೇರ್ಪಟ್ಟು ಸ್ವತಂತ್ರವಾಗಿರಲು ಪ್ರಯತ್ನಪಟ್ಟ. ಈ ಆಧುನಿಕತೆಯ ಹಲವು ಮಜಲುಗಳು ಅವಿಭಕ್ತ ಕುಟುಂಬವನ್ನು ಒಡೆದು ಸಣ್ಣ ಸಣ್ಣ ಕುಟುಂಬಗಳನ್ನಾಗಿ ಮಾಡಿದವು. ತನ್ನ ಸುತ್ತ ತನ್ನ ಕುಟುಂಬದ ಸುತ್ತಾ ವ್ಯಕ್ತಿಯು ಯೋಚಿಸಲು ತೊಡಗಿದ. ಇದರ ಫಲವಾಗಿ ದಲಿತ ಲೇಖಕರು ದಲಿತೇತರರಂತೆ ಆಧುನಿಕತೆಗೆ ಸಂಬಂಧಿಸಿದಂತೆ ಪೂರಕವಾಗಿ ನಿಂತರು. ಆದರೆ ದಲಿತರು, ದಲಿತ ಲೇಖಕರು ದಲಿತೇತರಿಗಿಂತ ಭಿನ್ನ ವಾತಾವರಣದಿಂದ ಬಂದಂತವರಾಗಿದ್ದರಿಂದ ಈ ದಲಿತ ಯುವ ಪೀಳಿಗೆಯವರು ತಮ್ಮ ಹಿಂದಿನ ಪೀಳಿಗೆಯವರ ಬದುಕಿಗಿಂತ ಭಿನ್ನವಾಗಿ ಬದುಕತೊಡಗಿದರು. ದಲಿತ ನೌಕರಸ್ಥರು ತಮ್ಮ ಬದುಕನ್ನು ನೌಕರಿ ಸಿಕ್ಕಮೇಲೆ ಒಂದು ಮಟ್ಟದ ವ್ಯವಸ್ಥೆಯನ್ನು ಕಟ್ಟಿಕೊಂಡರು. ಅದು ತನ್ನ

ಓಂಟನ ಮತ್ತು ಇಂಟನ ಅನುಭವ ಲೋಕದ ಹಾಗೂ ತನ್ನ ಅನುಭವದ ವಾಸ್ತವ ಅನುಭವಕ್ಕೆ ವಾರಸುದಾರಿಕೆಯನ್ನು ಕಂಡು ಕೊಂಡಿತು. ದಲಿತರ ತಮ್ಮ ಓಂದಿನ ಬದುಕಿನ ಅನುಭವದ ಲೋಕವು ಮತ್ತು ಆಳುವ ಯಜಮಾನಿಕೆಯು ನೌಕರರು ದಲಿತನಲ್ಲಿ ಹೊಸ ಬದುಕನ್ನು ರೂಪಿಸಿಕೊಳ್ಳುವಂತೆ ಪ್ರೇರಕವಾಯಿತು. ಇಲ್ಲಿ ವ್ಯಕ್ತಿಯು ತನ್ನ ಬದುಕಿನ ಹಿನ್ನೆಲೆ ಮತ್ತು ಅವನ ಸಮುದಾಯದಿಂದ ಬೇರ್ಪಟ್ಟು ಸಂಪೂರ್ಣವಾಗಿ ಹೊರ ನಿಂತಾಗ ಅದರ ವ್ಯತ್ಯಾಸ ಕಂಡು ಬಂತು. ಇದರ ತಾತ್ವಿಕ ಪ್ರಶ್ನೆಯು ಬೇರೆ ರೀತಿಯದು. ಇದಕ್ಕೆ ಮುಖ್ಯವಾಗಿ ಬದಲಾಗುತ್ತಿರುವ ಆಧುನಿಕ ಜಗತ್ತಿನ ಪರಿಸರ ಮುಖ್ಯವಾಗುತ್ತದೆ. ಅಲ್ಲದೆ ಅವರ ಬದುಕಲ್ಲಿ ಅವರು ದಾಟಿಬಂದ ಮೈಲುಗಲ್ಲುಗಳ ಸಾಧನೆಯ ಹಾದಿಯ ಹೆಗ್ಗುರುತುಗಳೂ ಕೂಡ ಕಾರಣವಾಗುತ್ತವೆ.

ವ್ಯಕ್ತಿ ಭಿನ್ನತೆ ಎನಿಸಿಕೊಳ್ಳುವುದು ಅವನ ಸಮುದಾಯದಿಂದ ಬೇರ್ಪಟ್ಟಾಗ. ಹಸಿವು, ಬಡತನದ ಸಂಕಷ್ಟಗಳು, ಜಾತಿನಿಂದನೆ, ಅವಮಾನ ಮುಂತಾದವುಗಳನ್ನು ಪ್ರಸ್ತಾಪಿಸಿ ಅವುಗಳನ್ನು ನೆನಸಿಕೊಳ್ಳುವುದು, ಅವುಗಳಿಂದ ಭಿನ್ನವಾಗಿರುವ ನೆಲೆಯನ್ನು ವ್ಯಕ್ತಿಯು ಕಂಡಾಗ ಮಾತ್ರ ಸಾಧ್ಯವಾಗುತ್ತದೆ. ಸಂಪ್ರದಾಯಗಳು; ಅವುಗಳಿಂದಾಗುವ ತಮ್ಮ ಜನಾಂಗದ ಶೋಷಣೆಗಳು ಈ ಆತ್ಮಕಥನಗಳಲ್ಲಿ ಮುಖ್ಯವಾಗಿ ಕಂಡುಬಂದವು. 'ಗೌರ್ಮೆಂಟ್ ಬ್ರಾಹ್ಮಣ' ದಲ್ಲಿನ 'ಓದುವ ಮುನ್ನ ಓದುಗರೊಂದಿಗೆ' ಭಾಗದಲ್ಲಿ ಓದುಗರೊಂದಿಗೆ ಮಾಲಗತ್ತಿಯವರು ಹೇಳಿಕೊಂಡಿದ್ದಾರೆ. "ನಾನೊಬ್ಬ ಸಾಮಾನ್ಯ ಮನುಷ್ಯ. ಹೀಗೆಂದ ಮಾತ್ರಕ್ಕೆ ಇಲ್ಲಿಯ ಅನುಭವಗಳು ಒಬ್ಬ ಸಾಮಾನ್ಯ ಮನುಷ್ಯನ ಅನುಭವಗಳೇ ಆಗಿವೆ ಎಂದು ಹೇಳಲಾರೆ. ಆದರೆ ಸಾಮಾನ್ಯ ದಲಿತನೊಬ್ಬನ ಅನುಭವಗಳು ಎನ್ನುವುದನ್ನು ಹೇಳದಿರಲಾರೆ".[೧] ಸಾಮಾನ್ಯ ಮನುಷ್ಯನಿಗೂ ದಲಿತನಿಗೂ ಇರುವ ಅನುಭವ, ನೋವು, ನಲಿವು, ಅದರ ಬದುಕು ಬೇರೆ ಬೇರೆಯ ರೀತಿಯದು ಎಂಬುವುದು ಒಂದೆಡೆಯಾದರೆ; ಮತ್ತೊಂದೆಡೆಯಲ್ಲಿ "ನನ್ನೂರಿನಲ್ಲಿ ನನ್ನ ಕೇರಿಯಲ್ಲಿ ಈಗ ನಾನೇ ಪರಕೀಯನಾಗಿ ಬಿಟ್ಟಿದ್ದೇನೆ. ಹಾಗೆಯೇ ನಗರದ ನಡುವೆ ಬದುಕುವ ಸ್ನೇಹಿತರ ಸಂಬಂಧ ಇದಕ್ಕಿಂತಲೂ ಭಿನ್ನವಾಗೇನಿಲ್ಲ. ಆ ಗ್ರಾಮೀಣ ವ್ಯವಸ್ಥೆಯ ಸ್ನೇಹಿತರ ಮತ್ತೊಂದು ಮುಖ. ಈ ನಗರದ ಪ್ರಜ್ಞಾವಂತ ಸ್ನೇಹಿತರ ನಡುವೆಯೂ ಅನಾಮಿಕನಾಗಿ ಬದುಕುವ ಬಗೆ ಬರುತ್ತದೆಂದು ನಾನಂದುಕೊಂಡಿರಲಿಲ್ಲ"[೨]. ಆಧುನಿಕ ಶಿಕ್ಷಣ, ಅದರಿಂದ ಬಂದ ನೌಕರಿ, ಮತ್ತು ನಗರದ ಬದುಕು, ಹಳ್ಳಿಯಿಂದ ನಗರಕ್ಕೆ ಬಂದವರನ್ನು ಪುನಃ ತನ್ನ ಹಿಂದಿನ ಊರಿಗೆ ಹೋಗಲು ಇಷ್ಟಪಡಿಸಲಿಲ್ಲ. ಇಲ್ಲಿ ಎರಡು ರೀತಿಯಲ್ಲಿ ಭಿನ್ನತೆಯನ್ನು ಹೊಂದಿರುವರು ಕಾಣುತ್ತಾರೆ. ಅದರಲ್ಲಿ ಮೊದಲನೆಯವರು ಶಿಕ್ಷಣದಿಂದ ಹೊರಬಂದು ನಗರದ ಜೀವನಕ್ಕೆ ಹೊಂದಿಕೊಂಡಿರುವರು. ಎರಡನೆಯವರು ತನ್ನೂರಿನಲ್ಲಿ ಸಾಮಾಜಿಕ ವ್ಯವಸ್ಥೆಯೊಂಟಗೆ ಪ್ರತಿಭಟಿಸಲಾರದಂತ ಸ್ಥಿತಿಯಲ್ಲಿ ಇರುವವರು. ಈ ಆತ್ಮಕಥನಕಾರರು ಆಧುನಿಕಗೊಳ್ಳುತ್ತಿರುವ ನಗರಗಳಲ್ಲಿ ಬದುಕಿದರೂ ಎಲ್ಲೋ ಒಂದು ಕಡೆ ಅವರಿಗೆ ಅತೃಪ್ತಿ ಇದೆ. ಇದು ಧರ್ಮದ ಹೆಸರಲ್ಲಿ ಬಲಗೊಳುತ್ತಿರುವ ಜಾತಿವ್ಯವಸ್ಥೆ ಮತ್ತು ಪ್ರಬಲಗೊಳ್ಳುತ್ತಿರುವ ಜಾಗತೀಕರಣ ಪ್ರಕ್ರಿಯೆಯ ಉದಾರೀಕರಣ, ಖಾಸಗೀಕರಣ ಮತ್ತು ಆಧುನೀಕರಣಗಳು ಕಾರಣವಾಗಬಹುದು. ಹಳ್ಳಿಗಳ ಬದುಕಲ್ಲಿ ಸವರ್ಣೀಯರೊಂದಿಗೆ ದಲಿತರು ಒಂದು ರೀತಿಯ ಸಮಸ್ಯೆಗಳನ್ನು ಎದುರಿಸಿದರೆ; ನಗರಗಳಲ್ಲಿ ಬದುಕುವ ದಲಿತರು ಮತ್ತೊಂದು ರೀತಿಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಾ ಬಂದಿದ್ದಾರೆ. ನಗರಗಳಲ್ಲಿ ಈಗೀಗ ಸೇರ್ಪಡೆಯಾಗುತ್ತಿರುವ ದಲಿತರ, ದಲಿತ ನೌಕರರ ಸ್ಥಿತಿಯು ಇದೇ ರೀತಿಯ ಸವಾಲನ್ನು ಹೊಂದಿದೆ. ಇವು ಜಾತಿಯ ಶ್ರೇಣೀಕೃತ ವ್ಯವಸ್ಥೆಯೊಂದಿಗೆ ಬಹಳ ಜಟಿಲವಾಗಿವೆ.

ಸಿದ್ಧಲಿಂಗಯ್ಯನವರ 'ಊರುಕೇರಿ' ಕೃತಿಯನ್ನು ಅಧ್ಯಯನ ದೃಷ್ಟಿಯಿಂದ ಎರಡು ಭಾಗಗಳನ್ನಾಗಿ ವಿಂಗಡಿಸಬಹುದು. ಮೊದಲನೆಯದು ಸಿದ್ಧಲಿಂಗಯ್ಯನವರು 'ಊರುಕೇರಿ' ಆತ್ಮಕಥನ. ಇದನ್ನು ಸಿದ್ಧಲಿಂಗಯ್ಯನವರು ಐದು ಭಾಗವನ್ನಾಗಿ ವಿಂಗಡಿಸಿಕೊಂಡದ್ದಾರೆ. ಈ ಐದು ಭಾಗಗಳಲ್ಲಿಯೂ ತಮ್ಮ ಬದುಕಿನ ಘಟನೆಗಳಿಗೆ ಸಂಬಂಧಪಟ್ಟಂತೆ ಹೇಳಿಕೊಂಡಿದ್ದಾರೆ. ಈ ಕೃತಿಯ ಎರಡನೆಯ ಭಾಗದಲ್ಲಿ ಡಾ. ಡಿ. ಆರ್. ನಾಗರಾಜ್ ಅವರ ಹಿನ್ನುಡಿ ಇದೆ. ಈ ಹಿನ್ನುಡಿಯು "ಬಡವರ ನಗುವಿನ ಶಕ್ತಿ" ಎಂದು ನಾಗರಾಜರು ಹೆಸರಿಸಿದ್ದಾರೆ. ಮುನ್ನುಡಿ ಇಲ್ಲದ ಈ ಕೃತಿಯು ದೀರ್ಘವಾದ ಹಿನ್ನುಡಿಯನ್ನು ಹೊಂದಿದೆ. ಈ ಆತ್ಮಕಥನದಲ್ಲಿ ಲೇಖಕರು ನನ್ನ ಮಾತು ಎಂಬುದರಲ್ಲಿ "ಈ ಕೃತಿಯನ್ನು ಹಿರಿಯ ನಾಯಕ, ನನ್ನ ಬದುಕಿಗೆ ಹೊಸ ತಿರುವನ್ನು ನೀಡಿದವರು ರಾಮಕೃಷ್ಣ ಹೆಗಡೆ. ನನ್ನ ಆತ್ಮಕಥೆ ಅವರಿಗೆ ಅರ್ಪಣೆ ಮಾಡುತ್ತಿರುವುದು ನನ್ನಲ್ಲಿ ಹೆಚ್ಚಾಗಿ ಸಂತೋಷ ಉಂಟುಮಾಡಿದೆ."[೩] ಮತ್ತೊಂದೆಡೆ ಹಿನ್ನುಡಿಗೆ ನಾಗಾರಾಜರು "ಬಡವರ ನಗುವಿನ ಶಕ್ತಿ" ಎಂಬ ಶೀರ್ಷಿಕೆಯ ಕೆಳಗೆ ಬರೆದಿದ್ದಾರೆ. ಲೇಖಕರು ಈ ಆತ್ಮಕಥೆಯಲ್ಲಿ ತಮ್ಮ ಬದುಕಿನ ಹಲವು ಸಂಗತಿಗಳನ್ನು, ವಿಷಯಗಳನ್ನು, ಅದರ ಹಿನ್ನೋಟವನ್ನು ಬಿಚ್ಚಿಟ್ಟಿದ್ದಾರೆ. ಅದನ್ನು ರಾಮಕೃಷ್ಣ ಹೆಗಡೆಯವರಿಗೆ ಅತ್ಯಂತ ಸಂತೋಷದಿಂದ ಅರ್ಪಿಸಿದ್ದಾರೆ. ಇಲ್ಲಿ ಲೇಖಕರೇ ಹೇಳಿಕೊಂಡಂತೆ ತಮ್ಮ ಬದುಕಿನ ಹೊಸ ತಿರುವನ್ನು ತಂದುಕೊಟ್ಟವರು ರಾಮಕೃಷ್ಣ ಹೆಗಡೆಯವರು ಎಂದು ಹೇಳಿಕೊಂಡಿದ್ದಾರೆ. ಈ 'ಊರು ಕೇರಿ'ಯ ಸಿದ್ಧಲಿಂಗಯ್ಯನವರ ಬದುಕಿನ ಸಂದರ್ಭವು ಹೆಗಡೆಯವರ ಒಡನಾಟದ ಪೂರ್ವದ ಸಂದರ್ಭಕ್ಕೆ ಸಂಬಂಧಿಸಿರುವಂತಹದ್ದು. ಇವರು ಬಾಲ್ಯದಿಂದ ಸಂಶೋಧನ ಸಹಾಯಕನಾಗಿ ಕನ್ನಡ ಅಧ್ಯಯನ ಕೇಂದ್ರಕ್ಕೆ ಸೇರುವ ತನಕದ ಕೆಲವು ಪ್ರಮುಖ ಸಂಗತಿಗಳನ್ನು ಇಲ್ಲಿ ಹೇಳಿಕೊಂಡಿರುವುದು ಇದೆ. ಈ ಆತ್ಮಕಥನದಲ್ಲಿ ಕಂಡುಬಂದಂತೆ ಪ್ರತಿಯೊಂದು ಹಂತದಲ್ಲಿಯೂ ಸಿದ್ಧಲಿಂಗಯ್ಯನವರ ಬೆಳವಣಿಗೆಯನ್ನು ನೋಡಬಹುದು. ದಲಿತರ ಬದುಕಿನ ಹಿನ್ನೆಲೆಯ ದೃಷ್ಟಿಕೋನದ ತಾತ್ವಿಕತೆಯಲ್ಲಿ ಈ ಆತ್ಮಕಥನಗಳು ಚರ್ಚೆಗೆ ಮುಖ್ಯವೆನಿಸುತ್ತವೆ.

ಅಸಮಾನತೆಯ ವ್ಯವಸ್ಥೆಯ ವಿರುದ್ಧ ದಲಿತರು ದನಿ ಎತ್ತಲು ಶುರು ಮಾಡಿದ್ದು ಈಗಿನ ಶಿಕ್ಷಣ ಪಡೆದುದರ ಮೂಲಕ. ಆದು ಬಲಗೊಂಡಿದ್ದು ಸಾಮಾಜಿಕ ವ್ಯವಸ್ಥೆಯಲ್ಲಿ ತಾತ್ವಿಕವಾಗಿ ಮತ್ತು ಸೈದ್ಧಾಂತಿಕವಾಗಿ ನೆಲೆಯೂರಿದಾಗ. ಬಹುತೇಕವಾಗಿ ದಲಿತರು ಸರ್ಕಾರಿ ನೌಕರಿಯನ್ನು ಹಿಡಿದಾಗ, ಅವರ ಬದುಕಿನ ವಾಸ್ತವವನ್ನು ತಾತ್ವಿಕ ಪ್ರಶ್ನೆಗೆ ಒಳಗುಮಾಡಿದಾಗ ಹಲವು ಪ್ರಶ್ನೆಗಳು ಏಳುತ್ತವೆ. ಅವು ತಮ್ಮ ಸಾಮುದಾಯಿಕ ಬಿಕ್ಕಟ್ಟುಗಳೂ ಕೂಡ ಆಗಿರುತ್ತವೆ ತಮ್ಮ ಹಿಂದಿನ ಹಳ್ಳಿಗಳ ಬದುಕಿನಿಂದ ಅಥವಾ ಮೂಲಭೂತವಾದಿ ಪರಿಸರದಲ್ಲಿ ಪ್ರಶ್ನಿಸಲು ಆಗದಂತ ಸ್ಥಿತಿಯಿಂದ ಬೇರ್ಪಟ್ಟು ನಿಲ್ಲುತ್ತವೆ. ಅವುಗಳು ಹೊಸ ವ್ಯವಸ್ಥೆಯೊಂದಿಗೆ ಅಂಟಿಕೊಳ್ಳುತ್ತಾ, ಆಧುನಿಕತೆಯನ್ನೂ ಸ್ವೀಕರಿಸುತ್ತಾ, ದೇಶೀಯತೆಯನ್ನು ತನ್ನೊಳಗೆ ಪ್ರಶ್ನೆಯನ್ನು ಹಾಕಿಕೊಂಡು ತಮ್ಮ ಸಾಧ್ಯತೆಯ ಮಿತಿಯನ್ನು ಗುರ್ತಿಸಿಕೊಳ್ಳುವಲ್ಲಿ ಪ್ರಮುಖವಾದವು. ಆದ್ದರಿಂದಲೇ ದಲಿತ ಚಳುವಳಿ ಹಳ್ಳಿಯಲ್ಲಿ ಬದುಕುವ ದಲಿತ ಅವಿದ್ಯಾವಂತ ಅನಕ್ಷರಸ್ಥರನ್ನು ಒಳಗೊಳ್ಳಲಿಲ್ಲ. ದಲಿತ ಚಳುವಳಿಯು ದಲಿತ ಮಧ್ಯಮ ವರ್ಗದವರನ್ನು ಸ್ಪಂದಿಸಿತು. ದಲಿತರಿಗೆ ಚಳುವಳಿಗಿಂತ; ದಲಿತ ಚಳುವಳಿಯ ಕಾರ್ಯಕ್ರಮಗಳಿಗಿಂತ ತಮ್ಮ ಬದುಕ ಆಚರಣೆ, ಸಂಪ್ರದಾಯ, ನಂಬಿಕೆಗಳು ಮುಖ್ಯವಾದವು. ದಲಿತ ಚಳುವಳಿಯು (ಹೋರಾಟ) ತನ್ನ ಸಮುದಾಯಗಳ ಸಂಪ್ರದಾಯ, ನಂಬಿಕೆ ಹಾಗೂ ಅವುಗಳ ಆಚಾರ ವಿಚಾರಗಳ ಕೇಂದ್ರದಿಂದ ಹೊರಡದೆ ದಡೀರನೆ ಅವುಗಳನ್ನು ತಿರಸ್ಕರಿಸುವ, ವಿರೋಧಿಸುವ ನೆಲೆಯಿಂದ ಹೊರಟಿತು. ಇದು

ಚಳುವಳಿಯ ದೌರ್ಬಲ್ಯವೆಂದಲ್ಲ. ಅದೊಂದು ಮಿತಿ. ಏಕೆಂದರೆ ದಲಿತರು ಹುಟ್ಟಿನಿಂದ ಬಂದ ಸಂಪ್ರದಾಯ, ನಂಬಿಕೆ, ಆಚರಣೆಗಳನ್ನು ಬಿಡುವುದು ಅಷ್ಟು ಸುಲಭವಾಗಿರಲಿಲ್ಲ. ದಲಿತ ಚಳುವಳಿಯು ಸಮಾಜದ ವಿರೋಧದ ನೆಲೆಯನ್ನು, ದಲಿತ ಸಮುದಾಯಗಳನ್ನು ಅರ್ಥಮಾಡಿಕೊಳ್ಳಲು ಹಲವಾರು ವರ್ಷಗಳು ಹಿಡಿಯಬೇಕಾಗಿದೆ. ಆ ಹಿನ್ನೆಲೆಯಲ್ಲಿ ದಲಿತ ಸಮುದಾಯ ಮತ್ತು ದಲಿತ ಚಳುವಳಿಯ ನಡುವೆ ಸೈದ್ಧಾಂತಿಕ ಅಂತರ ಏರ್ಪಟ್ಟಿದ್ದನ್ನು ನೋಡಬಹುದು.

ಶಿಕ್ಷಣವು ದಲಿತರ ಬದಲಾವಣೆಗೆ ತಳಪಾಯವಾಗಿದೆ. ಅದು ದಲಿತರಿಗೆ ಕಾಣದ ಜಗತ್ತನ್ನು ಪ್ರವೇಶಿಸಲು ದಾರಿ ದೀವಿಗೆಯಾಗಿದೆ. ಇಲ್ಲಿ ಕಂಡುಬಂದ ದಲಿತರ ಅವಕಾಶಗಳು ಸಂಪೂರ್ಣವಾಗಿ ದಲಿತರನ್ನು ಒಳಗೊಂಡಿವೆ ಎಂದು ಹೇಳಲಾಗುವುದಿಲ್ಲ. ಅವುಗಳ ಗಾಳಿಯಷ್ಟೇ ದಲಿತರಿಗೆ ತಾಗಿತು. ಅಕ್ಷರ ಕಲಿತ ದಲಿತ ನೌಕರರು ಉಸಿರಾಡಿಕೊಂಡರು. ಆದರಿಂದ ದಲಿತರು ಸಮರ್ಪಕವಾಗಿ ಉಣ್ಣಲು ಆಹಾರ, ಉಡಲು ಬಟ್ಟೆ, ಇರಲು ಮನೆಯನ್ನು ಒಳಗೊಳ್ಳಲಿಲ್ಲ.

ಅರವಿಂದ ಮಾಲಗತ್ತಿಯವರ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥನದಲ್ಲಿ ೨೨ ಬಿಡಿ ಲೇಖನಗಳಿವೆ. ಇವು ಕೆಲವು ಘಟನೆ ಪ್ರಸಂಗಗಳನ್ನು ಇಟ್ಟುಕೊಂಡಿವೆ. ಮಾಲಗತ್ತಿಯವರ ಆತ್ಮಕಥನದಲ್ಲಿ ಅವರ ಬಾಲ್ಯದಿಂದ ಕೆಲಸಕ್ಕೆ ಸೇರುವವರೆಗಿನ ತಮ್ಮ ಬದುಕಿಗೆ ಸಂಬಂಧಿಸಿದ ವಿವರಗಳಿದ್ದರೆ; ಸಿದ್ಧಲಿಂಗಯ್ಯನವರ 'ಊರು ಕೇರಿ' ಕೃತಿಯಲ್ಲಿ ತಮ್ಮ ವೈಯಕ್ತಿಕ ವಿವರಗಳ ನಡುವೆಯೂ ಸಂಪ್ರದಾಯಗಳ ಬಗೆಗಿನ ಅವರ ತಾರ್ಕಿಕ ನೆಲೆಯನ್ನು ವ್ಯಕ್ತಪಡಿಸಿದ್ದಾರೆ. "ದಲಿತ ಕೇರಿಗೂ ಊರ ಸಂಪ್ರದಾಯಗಳಿಗೂ ಆಶ್ಚರ್ಯಕರವಾದ ರೀತಿಯ ಸಂಬಂಧಗಳಿವೆ. ಈ ಸಂಬಂಧಗಳು ದಲಿತರಿಗೆ ಮಾರಕವಾಗಿಯೂ ದಲಿತೇತರಿಗೆ ಪೂರಕವಾಗಿ ಕೆಲಸ ಮಾಡುತ್ತವೆ. ಊರಿನ ಪ್ರತಿಯೊಂದು ಕೆಲಸ ಕಾರ್ಯಗಳಲ್ಲಿ ದಲಿತರಿಗೆ ಅವಕಾಶ ಕೊಡಲಾಗಿದೆ. ಎನ್ನುವ ನೆಪದಲ್ಲಿ ಅವರ ಬದುಕನ್ನು ಅಡಕೊತ್ತಿನಲ್ಲಿಟ್ಟು ಅಡಕೆಯಂತೆ ಕತ್ತರಿಸುತ್ತಾರೆ"[೪]. ಈ ಪ್ರಜ್ಞೆಯು ತಮ್ಮ ಸಮುದಾಯದಿಂದ; ತನ್ನ ಪರಿಸರದಿಂದ ಹೊರನಿಂತಾಗ ಗೊತ್ತಾಗುತ್ತದೆ. ಏಕೆಂದರೆ ಸಂಪ್ರದಾಯಗಳಲ್ಲಿ ತೊಡಗುವ ದಲಿತರಿಗೆ ಸರಿ-ತಪ್ಪುಗಳ ಅರಿವು ಇರುವುದಿಲ್ಲ. ಅದರತ್ತ ಯೊಚಿಸವ ಕಡೆಗೂ ಗಮನ ಹರಿಸುವುದಿಲ್ಲ. ಸಂಪ್ರದಾಯ, ಆಚರಣೆಗಳನ್ನು ಪಾಲಿಸುವುದು ತನ್ನ ಕರ್ತವ್ಯಗಳು ಎಂದುಕೊಂಡಿರುತ್ತಾರೆ. ಇವರು ಹಳ್ಳಿಗಳಲ್ಲಿ ವಾಸಿಸಿ, ತನ್ನ ಶೋಷಿತ ಬದುಕನ್ನು ಶೋಷಣೆ ಎಂದು ಪರಿಗಣಿಸದೆ, ತನ್ನ ಪಾಲಿಗೆ ಬಂದುದೆಂದು ಸ್ವೀಕರಿಸುವ ಬದುಕು ಆಗಿರುತ್ತವೆ.

'ಊರು ಕೇರಿ', 'ಗೌರ್ಮೆಂಟ್ ಬ್ರಾಹ್ಮಣ' ಕೃತಿಯಲ್ಲಿ ತಮ್ಮ ಜನಾಂಗವನ್ನು ಕುರಿತ ಪ್ರಸ್ತಾಪವಿದ್ದರೂ ಇಂಥ ಅನೇಕ ಸಂಗತಿಗಳು ದಲಿತ ಸಾಹಿತ್ಯದಲ್ಲಿ ಕಂಡುಬಂದಿವೆ. ಈ ಲೇಖಕರ ಬದುಕಿನ ವಾಸ್ತವಾಂಶ ಮತ್ತು ತಮ್ಮ ಅನುಭವವನ್ನು ಲೇಖಕರ ಈ ಕೃತಿಗಳ ಮೂಲಕ ಕಾಣುತ್ತವೆ.

'ಊರು ಕೇರಿ' ಆತ್ಮಕಥನದ ಕಾಲಾವಧಿಯನ್ನು ಅಧ್ಯಯನದ ದೃಷ್ಟಿಯಿಂದ ಮೂರು ಭಾಗವಾಗಿ ವಿಂಗಡಿಸಿಕೊಳ್ಳಬಹುದು. ಅವುಗಳು

(೧) ಶಿಕ್ಷಣಕ್ಕೆ ಸಂಬಂಧಿಸಿದ ಶಾಲೆಯ ಕಾಲಾವಧಿ. (೨) ಶಿಕ್ಷಣಕ್ಕೆ ಸಂಬಂಧಿಸಿದ ಕಾಲೇಜು ಮತ್ತು ಹಾಸ್ಟೆಲ್ ಜೀವನದ ಕಾಲಾವಧಿ (೩) ಶಿಕ್ಷಣದ ಮೂಲಕ ಪ್ರಗತಿಪರ ವೇದಿಕೆಗಳು, ಸಂಘಟನೆಗಳು ಹಾಗೂ ಗಣ್ಯವ್ಯಕ್ತಿಗಳ ನಡುವಿನ

ಸಂಬಂಧದ ಕಾಲಾವಧಿಯಾಗಿ ವಿಂಗಡಿಸಬಹುದು. ಹಾಗೆಯೇ 'ಗೌರ್ಮೆಂಟ್ ಬ್ರಾಹ್ಮಣ' ಆತ್ಮಕಥನವನ್ನು ಎರಡು ಭಾಗವನ್ನಾಗಿ ಮಾಡಬಹುದು. (೧) ಹಳ್ಳಿಯ ಜೀವನ, (೨) ನಗರ ಜೀವನ.

ಸಾಮಾನ್ಯವಾಗಿ ದಲಿತರು ಶ್ರಮಜೀವಿಗಳು. ಇವರು ಈ ಶ್ರಮವನ್ನು ಭೂಮಾಲಿಕರ ಮನೆಯಲ್ಲಿ ವ್ಯಯಮಾಡುತ್ತಾರೆ. ಬಹುವಾಗಿ ದಲಿತರ ಶ್ರಮವು ಭೂಮಿಯ ನಡುವೆ ಇರುತ್ತದೆ. ಆದರೆ ಭೂಮಿಯೊಂದಿಗೆ ಶ್ರಮದ ಪ್ರತಿಫಲವಾಗಿ ದುಡಿದದ್ದನ್ನು ತಿನ್ನುವ ಅವಕಾಶವು ದಲಿತರಿಗೆ ಇರುವುದಿಲ್ಲ. ಬದುಕಲು ಅಗತ್ಯವಾದ ಆಹಾರಕ್ಕೆ ಒಡೆಯನನ್ನೇ ಆಶ್ರಯಿಸುತ್ತಾರೆ. ಈ ಎರಡು ಕೃತಿಗಳಲ್ಲಿ ಊಟಕ್ಕೆ ಕಾಯುವ ಸ್ಥಿತಿಯನ್ನು 'ಬ್ರಾಹ್ಮಣರ ಮನೆಯ ರುಚಿ ತಂಗಳು' 'ಹೆಣದ ದುಡ್ಡು ಮತ್ತು ಮದುವೆಯ ಊಟ' ಈ ವಿಷಯ ಪ್ರಸ್ತಾಪದಲ್ಲಿ ಕಂಡುಬರುತ್ತವೆ. ಆಹಾರಕ್ಕೆ ಹಬ್ಬ ಹರಿದಿನ ಜಾತ್ರೆಗಳನ್ನು ಕಾಯುವ ಸ್ಥಿತಿಯು ಈ ದಲಿತ ಆತ್ಮಕಥನಗಳಲ್ಲಿ ಕಂಡುಬಂದಿದೆ.

ಯಾವುದೇ ವ್ಯಕ್ತಿಯು ತನ್ನ ಸಮುದಾಯದಿಂದ ತನ್ನನ್ನು ಗುರ್ತಿಸಕೊಳ್ಳಲು ಪ್ರಯತ್ನಿಸುವುದು ಆ ಸಮುದಾಯದವರು ಮತ್ತು ಅಸಕ್ತರು ನಿರೀಕ್ಷಿಸಿದಾಗ ಮಾತ್ರ. ಅದಕ್ಕೆ ವ್ಯಕ್ತಿಯು ಸಮುದಾಯದಿಂದ ಭಿನ್ನವಾದ ಚಟುವಟಿಕೆಯನ್ನು ಹೊಂದಿರಬೇಕಾಗುತ್ತವೆ. ಹೀಗಿರುವಾಗ ವ್ಯಕ್ತಿಗೆ ಸಮುದಾಯದಿಂದ ಆತಂಕ ತುಡಿತವು ಹೆಚ್ಚಾದಾಗ ಗುರ್ತಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ.

ವ್ಯಕ್ತಿಯ ದೈಹಿಕ ಕಸರತ್ತಿನ ಜಾಣ್ಮೆಗಿಂತ ಬೌದ್ಧಿಕ ಜಾಣ್ಮೆಯು ಬಹಳ ಮುಖ್ಯವಾಗುತ್ತದೆ. ಬೌದ್ಧಿಕ ಜಾಣ್ಮೆಯ ಸಂಗತಿಗಳು 'ಊರು ಕೇರಿ' ಕೃತಿಯಲ್ಲಿನ ಕೆಲವು ಸಂಗತಿಗಳು ಅದರ ವಿವರಣೆಯಲ್ಲಿವೆ. ಇನ್ಸ್ಪೆಕ್ಟರ್ ತರಹದ ಮೂಕಾಭಿನಯದಲ್ಲಿ ಮಾಸ್ತರ್ ಮತ್ತು ಗೆಳೆಯರಿಂದ ಪಡೆದ ಮೆಚ್ಚುಗೆಯನ್ನು ಸಿದ್ದಲಿಂಗಯ್ಯನವರು ಹೇಳಿಕೊಂಡಿದ್ದಾರೆ. ಜಾಣತನವಿಲ್ಲದಿದ್ದರೆ ನಾವು ನಿರ್ಲಕ್ಷ್ಯಕ್ಕೆ ಒಳಗಾಗುತ್ತೇವೆ ಎಂಬ ಅಂಶಗಳು ಇಲ್ಲಿ ಗಮನಾರ್ಹವಾಗಿವೆ.

ಆಸ್ತಿಕತೆ, ನಾಸ್ತಿಕತೆಗೆ ಸಂಬಂಧಿಸಿದ ಹಲವು ಸಂಗತಿಗಳು ಇಲ್ಲಿವೆ. ಆಸ್ತಿಕತೆಯನ್ನು ನಂಬಿಕೊಂಡಿದ್ದ ಹಿರಿಯ ಜನ ಮಗನ ಶ್ರೇಯಸ್ಸನ್ನು ಬಯಸಿ ಸಿದ್ಧಲಿಂಗಯ್ಯನವರನ್ನು ಅವರ ತಂದೆತಾಯಿಯರು ದೇವಸ್ಥಾನಕ್ಕೆ ಕರೆದುಕೊಂಡು ಬಂದಿರುತ್ತಾರೆ. ಈ ದೇವಸ್ಥಾನದಲ್ಲಿ ಪೂಜಾರಿಯು ಕಿರೀಟವನ್ನು ತಲೆಯ ಮೇಲಿಟ್ಟು ಆಶೀರ್ವದಿಸುವ ಸಂದರ್ಭದಲ್ಲಿ ಸಿದ್ದಲಿಂಗಯ್ಯನವರು ಅದನ್ನು ಗಣನೆಗೆ ತೆಗೆದುಕೊಳ್ಳದೆ ಅಪಹಾಸ್ಯಕ್ಕೆ ಕೀರಿಟವನ್ನು, ಪೂಜಾರಿಯನ್ನು ಒಳಪಡಿಸುತ್ತಾರೆ. ಪೂಜಾರಿಯು ಸಿದ್ಧಲಿಂಗಯ್ಯನವರ ತಂದೆತಾಯಿಯವರಿಗೆ ಪೂಜಾ ಕಿರೀಟವನ್ನು ಇಟ್ಟಂತೆ ಸಿದ್ಧಲಿಂಗಯ್ಯನವರ ತಲೆಯ ಮೇಲೂ ಇಟ್ಟಾಗ ಅದನ್ನು ಹಾಕಿಕೊಂಡು ಓಡಿ ಹೋಗುತ್ತಾರೆ. ಈ ಸಂದರ್ಭದಲ್ಲಿ ಪೂಜಾರಿ ಸಂಕಷ್ಟಕ್ಕೆ ಗುರಿಯಾಗುತ್ತಾನೆ. ನಂತರದ ಕಾಲಮಾನದಲ್ಲಿ ಸಿದ್ದಲಿಂಗಯ್ಯನವರು ಕರ್ನಾಟಕ ಗ್ರಾಮದೇವತೆಗಳ ಬಗ್ಗೆ ಸಂಶೋಧನೆಯನ್ನು ನೆಡೆಸಿರುವುದು ಗಮನಾರ್ಹವಾಗಿದೆ. ಇಲ್ಲಿ ಆಸ್ತಿಕತೆ, ನಾಸ್ತಿಕತೆಯ ಪ್ರಶ್ನೆಯಲ್ಲ. ಇದು ಸಂಸ್ಕೃತಿಯ ಪ್ರಶ್ನೆ. ಸಮುದಾಯಗಳನ್ನು, ಸಂಸ್ಕೃತಿಯನ್ನು, ಆ ಸಂಸ್ಕೃತಿಯ ವಿವಿಧ ಆಯಾಮಗಳನ್ನೂ ಕುರಿತು ಅಧ್ಯಯನ ಮಾಡುವುದು ಮುಖ್ಯವಾಗುತ್ತದೆ. ದೆವ್ವದೇವರುಗಳಲ್ಲಿ ನಂಬಿಕೆಯನ್ನು ಹೊಂದದ ಸಿದ್ದಲಿಂಗಯ್ಯನವರು ದೆವ್ವ, ದೇವರುಗಳ ಬಗೆಗಿನ ನಿರಾಕರಣೆಯನ್ನು ನೊಡುತ್ತೇವೆ. ನಮ್ಮ ಕೇರಿಯ ಜನ ಸ್ಮಶಾನಕ್ಕೆ ಹೋಗಲು ಹೆದರುತ್ತಿದ್ದರು.

ಆದರೆ ಆ ಸ್ಮಶಾನದಲ್ಲಿ ನನಗೆ ಕವನ ಬರೆಯಲು ಸ್ಫೂರ್ತಿ ಸಿಗುತ್ತಿತ್ತು ಎಂದು ಹೇಳಿಕೊಳ್ಳುವುದು ಇಲ್ಲಿ ಮುಖ್ಯವಾಗುತ್ತದೆ. ಆಸ್ತಿಕತೆಯನ್ನು ನಂಬಿಕೆಗಳನ್ನು ಹೊಂದಿದ ಸಮುದಾಯದಿಂದ ಬಂದು ಅದನ್ನು ಮೀರಿ ನಿಲ್ಲುವುದು ಆತ್ಮಕಥನಕಾರರ ಭಿನ್ನತೆಯನ್ನು ತೋರುತ್ತದೆ. "ಗೋರಿಗಳನ್ನು ನೋಡುವುದರಲ್ಲಿ ಒಂದು ಆಕರ್ಷಣೆಯಿತ್ತು. ಯಾಕೋ ನನಗೆ ಸ್ಮಶಾನ ಬಹಳ ಇಷ್ಟವಾಯಿತು. ಅಲ್ಲಿಗೆ ನಿತ್ಯವೂ ಸಂಜೆ ಹೋಗತೊಡಗಿದೆ. ಯಾವುದಾದರೂ ಒಂದು ಗೋರಿಯ ಮೇಲೆ ಕೂರತೊಡಗಿದೆ. ಪದ್ಯಗಳ ಸಾಲುಗಳು ತಾನೇ ತಾನಾಗಿ ಹೊಳೆಯತೊಡಗಿದವು"[೯]. ನಂಬಿಕೆಯನ್ನು ಮುರಿಯುವ ಪ್ರಯತ್ನದಲ್ಲಿ ತಮ್ಮ ಬದುಕಿನ ಭಿನ್ನತೆಯನ್ನು ಪ್ರಸ್ತಾಪಿಸಿರುವುದು ಈ ಆತ್ಮಕಥನದಲ್ಲಿದೆ. ಇದೇ ಕೃತಿಯಲ್ಲಿ ಇನ್ನೊಂದು ಉದಾಹರಣೆಯನ್ನೂ ಆ ಸಂದರ್ಭದಲ್ಲಿ ನಡೆದ ಘಟನೆಯನ್ನು ವಿವರಿಸಿದ್ದಾರೆ. ಇಲ್ಲಿನ ವಿವರಣೆಯಲ್ಲಿ ಸಮೂಹದಿಂದ ತಾವು ಹೊರಟು ತಮ್ಮಲ್ಲಿಗೆ ಏಕತ್ರಗೊಂಡಿರುವುದು ಕಂಡು ಬರುತ್ತದೆ. ಇಲ್ಲಿಯ ಘಟನೆಯನ್ನು ಘಟನೆಯಾಗಿ ನೋಡುವುದು ಒಂದು ರೀತಿಯಾದರೆ ಅದನ್ನು ಒಬ್ಬ ವ್ಯಕ್ತಿಯ ಮೂಲಕ ನೋಡುವುದು ಮತ್ತೊಂದು ರೀತಿಯದು. ಏಕ್ಸಪೋ ೭೦ ಚಳುವಳಿಯನ್ನು ವಿವರಿಸುತ್ತಾ, "ವಿದ್ಯಾರ್ಥಿಗಳು ಉಗ್ರಚಳುವಳಿ ಮಾಡಿದರು. ವಿದೇಶಕ್ಕೆ ಹೋಗಬೇಕಾದ ವಿದ್ಯಾರ್ಥಿ ನಿಯೋಗದಲ್ಲಿ ಮಂತ್ರಿಗಳ ಸಂಬಂಧಿಕರುಗಳೇ ಹೆಚ್ಚು ಎಂಬುದು ಚಳುವಳಿಕಾರರ ದೂರು. ವಿದ್ಯಾರ್ಥಿಗಳು ಸೆಂಟ್ರಲ್ ಕಾಲೇಜಿಗೆ ಬೆಂಕಿ ಹಚ್ಚಿದರು. ಮೇಜು ಕುರ್ಚಿಗಳನ್ನು ನಾಶ ಮಾಡಿದರು. ಪ್ರಯೋಗಶಾಲೆಗಳನ್ನು ನಾಶ ಮಾಡಿದರು. ಬೆಂಕಿಯ ಜ್ವಾಲೆ ಉರಿಯುವುದನ್ನು ನಾವು ಭಯ ಮತ್ತು ಕುತೂಹಲದಿಂದ ನೋಡುತ್ತಿದ್ದವು. ಪೋಲೀಸರು ನಮ್ಮನ್ನು ಅಟ್ಟಿಸಿಕೊಂಡು ಬಂದರು. ನಾವು ಕಾಲೇಜಿನ ಕ್ಯಾಂಟೀನಿಗೆ ನುಗ್ಗಿದೆವು. ಪೋಲೀಸರು ಕ್ಯಾಂಟೀನಿಗೂ ನುಗ್ಗಿ ಬಚ್ಚಿಟ್ಟುಕೊಂಡಿದ್ದ ಹುಡುಗರನ್ನು ಚಚ್ಚತೊಡಗಿದರು. ಪೋಲೀಸರ ಹೊಡೆತವನ್ನು ತಡೆಯಲಾರದೆ ಹುಡುಗರು ದನ ಕರುಗಳಂತೆ ಅರುಚುತ್ತಿದ್ದರು. ಕೆಲವರ ತಲೆಯೊಡೆದು ರಕ್ತ ಸೋರುತ್ತಿತ್ತು. ನಾನು ಚಾಣಾಕ್ಷತೆಯಿಂದ ನನ್ನ ಪ್ಯಾಂಟು ಶರಟನ್ನು ಕಳಚಿ ಮೇಜಿನ ಕೆಳಗಿಟ್ಟು ನಿಕ್ಕರ್ ಬನೀನಲ್ಲಿ ತಟ್ಟೆ ಲೋಟ ಕೈಯಲ್ಲಿ ಹಿಡಿದುಕೊಂಡು ಕ್ಯಾಂಟೀನಿನ ಕ್ಲೀನರ್ ರೀತಿಯಲ್ಲಿ ಅಡ್ಡಾಡತೊಡಗಿದೆ. ಕ್ಲೀನರ್ ಇರಬಹುದೆಂದು ಪೋಲೀಸರು ನನ್ನನ್ನು ಮುಟ್ಟಲಿಲ್ಲ. ಏಟಿನಿಂದ ಹೇಗೋ ತಪ್ಪಿಸಿಕೊಂಡೆ. ಒಳಗೊಳಗೇ ಆನಂದಿಸಿದೆ"[೬]. ಸಿದ್ಧಲಿಂಗಯ್ಯನವರು ಭಾಗವಹಿಸಿದ ಸಂಘಟನೆಗಳ ಬಗ್ಗೆ; ಅವುಗಳಲ್ಲಿ ಅವರ ಪಾಲ್ಗೊಳ್ಳುವಿಕೆಯ ಬಗ್ಗೆ; ತಮ್ಮ ಸಾಹಿತ್ಯ ರಚನೆಯ ಬಗ್ಗೆ ಹಿರಿಯ ಸಾಹಿತಿಗಳ ಪರಿಚಯದ ಬಗೆಗಿನ ಅನುಭವಗಳನ್ನು ಹೇಳಿಕೊಂಡಿರುವುದು ಆತ್ಮಕಥನದಲ್ಲಿ ಕಂಡುಬರುತ್ತದೆ.

ಸತ್ತ ಕುರಿಗಳು ಮತ್ತು ಮಾಂಸದ ಮಾರಾಟದ ಸಂದರ್ಭವನ್ನು ಮಾಲಗತ್ತಿಯವರು ವಿವರಿಸುತ್ತಾ "ಚಿಕ್ಕವನಿದ್ದಾಗ ಮಾಂಸ ಮಾರಾಟದ ಸಂದರ್ಭದಲ್ಲಿ ನನ್ನ ಕೆಲಸಗಳೆಂದರೆ ಮಾವ ಕುರಿಯ ಚರ್ಮವನ್ನು ಸುಲಿಯುವಾಗ ಚರ್ಮಕ್ಕೆ ನೀರು ಹಾಕುವುದು ಆನಂತರ ಕುರಿಯ ದೇಹದಲ್ಲಿ ಇರುವ ಕರುಳು, ಪಚ್ಚಿ, ಕರ್ಚಿನ ಚೀಲ, ಕಲೇಜಾ, ಗುರದಾ ಇವುಗಳೆಲ್ಲವನ್ನು ತೊಳೆದು ಸ್ವಚ್ಛವಾಗಿಸುವುದು"[೭] ಕುರಿ ಕುಯ್ಯುವಾಗ ತಮ್ಮ ಮತ್ತು ತಮ್ಮ ಅಣ್ಣನ ಕೆಲಸವನ್ನು ವಿವರಿಸುತ್ತಾ "ಅದು ಈಗ ನೆನಸಿಕೊಂಡರೆ ಅಯ್ಯೋ ಎಂದು ಹೇಸಿಗೆ ಎನಿಸುತ್ತದೆ."[೮] ಇದು ಸಂಪೂರ್ಣವಾಗಿ ತನ್ನ ಹಿಂದಿನ ಜಗತ್ತಿಗಿಂತ ಭಿನ್ನವಾದಂತ ಬದುಕು ನಿರ್ಮಾಣಗೊಂಡಿರುವುದರಿಂದ ಸಾಧ್ಯವಾಗುತ್ತದೆ. ಮಾಂಸಾಹಾರಿಗಳಾದ ದಲಿತರಿಗೂ ಮಾಂಸಕ್ಕೂ ನಿಕಟ ಸಂಬಂಧವು ಇಂದಿಗೂ ಇರುವುದು ಕಂಡುಬರುತ್ತದೆ. ಇಂಥ ಸಂದರ್ಭದಲ್ಲಿ ವ್ಯಕ್ತಿಯ ಬದಲಾವಣೆಯೂ ಹೊಸ ಪರಿಸರವನ್ನು ಹುಡುಕುತ್ತದೆ. ಅದಕ್ಕೆ ತಕ್ಕಂತೆ ಹೊಂದಿಕೊಂಡು ಹೋಗಲು ಪ್ರಯತ್ನಿಸುತ್ತವೆ.

ಇದುವರೆಗೆ ದಲಿತ ಆತ್ಮಚರಿತ್ರೆಗಳ ಬಗೆಗಿನ ಲೇಖಕರ ನಿಲುವುಗಳನ್ನು ಅವುಗಳ ಸಮಕಾಲೀನ ಸಂದರ್ಭದಲ್ಲಿ ಕಂಡುಬಂದ ಭಿನ್ನತೆಯ ಅಂಶಗಳನ್ನು ಚರ್ಚಿಸಲಾಯಿತು. ಈ ಎರಡು ಆತ್ಮ ಕಥನಗಳು ದಲಿತ ಅನುಭವಗಳನ್ನು ಮೊದಲಬಾರಿಗೆ ಹೊತ್ತುಕೊಂಡು ಅಭಿವ್ಯಕ್ತಗೊಂಡಿವೆ. ಇವುಗಳ ಅಭಿವ್ಯಕ್ತಿಯು ದಾಖಲಾಗದ ಕನ್ನಡದ ದಲಿತ ಆತ್ಮಕಥನಗಳ ಪ್ರಕಾರಕ್ಕೆ ಅಡಿಪಾಯವನ್ನು ಹಾಕಿವೆ. ಈ ಆತ್ಮಕಥನಗಳಲ್ಲಿ ಬರುವವುಗಳೆಲ್ಲವೂ ಲೇಖಕರ ಬದುಕಿನ ಬವಣೆಯ ಸಂದರ್ಭದಲ್ಲಿ ಕಂಡುಬಂದಂತವುಗಳೇ ಆಗಿವೆ. ಇವು ದಲಿತ ಲೇಖಕರ ವೈಯಕ್ತಿಕ ಅಧ್ಯಯನಕ್ಕೆ ಅತ್ಯುತ್ತಮ ದಾಖಲೆಗಳಾಗುತ್ತವೆ.

**ಅಡಿಟಿಪ್ಪಣಿಗಳು**

೧. ಅರವಿಂದ ಮಾಲಗತ್ತಿ, 'ಓದುವ ಮುನ್ನ ಓದುಗರೊಂದಿಗೆ' 'ಗೌರ್ಮೆಂಟ್ ಬ್ರಾಹ್ಮಣ'

೨. -- ಅದೇ --

೩. ಸಿದ್ಧಲಿಂಗಯ್ಯ 'ಊರು ಕೇರಿ' ನನ್ನ ಮಾತು ಎಂಬುದರಿಂದ

೪. ಅರವಿಂದ ಮಾಲಗತ್ತಿ, 'ಗೌರ್ಮೆಟ್ ಬ್ರಾಹ್ಮಣ', ಪುಟ ೨೮

೫. ಸಿದ್ಧಲಿಂಗಯ್ಯ, 'ಊರು ಕೇರಿ', ಪುಟ ೮೭

೬. ಸಿದ್ಧಲಿಂಗಯ್ಯ, 'ಊರು ಕೇರಿ', ಪುಟ ೧೦೩

೭. ಅರವಿಂದ ಮಾಲಗತ್ತಿ 'ಗೌರ್ಮೆಟ್ ಬ್ರಾಹ್ಮಣ', ಪುಟ ೨೦

೮. -- ಅದೇ --

## ಕನ್ನಡ ದಲಿತ ವಿಮರ್ಶೆಯ ನೆಲೆಗಳು ಮತ್ತು ಇತರೆ ಬರಹಗಳು

ಈ ಅಧ್ಯಾಯದಲ್ಲಿ ಕನ್ನಡ ದಲಿತ ಸೃಜನೇತರ ಬರವಣಿಗೆಗಳು ಚರ್ಚೆಗೆ ಒಳಗೊಳ್ಳುವವು. ಈ ಬರವಣಿಗೆಗಳ ನೆಲೆಯನ್ನು ಗ್ರಹಿಸಿ ತಾತ್ವಿಕ ಚೌಕಟ್ಟಲ್ಲಿ ಇಲ್ಲಿ ಚರ್ಚೆಗೆ ಒಳಪಡಿಸಲಾಗುವುದು. ಇಲ್ಲಿ ಕೆಲವು ಲೇಖನಗಳು, ಸಂಸ್ಕೃತಿ ಬಗೆಗಿನ ಕೃತಿಗಳು, ಸಂಶೋಧನಾ ಕೃತಿಗಳು, ವಿಮರ್ಶೆಯ ಬರಹಗಳು ಚರ್ಚೆಯಲ್ಲಿ ಒಳಗೊಳ್ಳುವವು.

ಕನ್ನಡದಲ್ಲಿ ದಲಿತ ಸಾಹಿತ್ಯ ಪ್ರಕಾರ ಕಂಡುಬಂದಷ್ಟು ದಲಿತ ವಿಮರ್ಶೆ ಬರಹಗಳು ಕಂಡುಬರಲಿಲ್ಲ. ಆದರೂ ಕೆಲವು ಅಲ್ಲಲ್ಲಿ ಕಂಡುಬಂದರೂ ಅವುಗಳು ಕಥೆ-ಕಾದಂಬರಿ, ಕಾವ್ಯಗಳು ಚರ್ಚೆಗೊಂಡಷ್ಟು ಇವುಗಳು ಚರ್ಚೆಗೊಳ್ಳಲಿಲ್ಲ. ದಲಿತ ಸಾಹಿತ್ಯದಲ್ಲಿ ದಲಿತ ಬದುಕನ್ನು ಕಟ್ಟಿಕೊಟ್ಟಂತೆ ವಿಮರ್ಶೆಯಲ್ಲಿ ಕಟ್ಟಿಕೊಡಲಿಲ್ಲ. ಆದರೂ ದಲಿತ ಬರಹಗಾರರು ತಾವು ಕಂಡ ಸಂಸ್ಕೃತಿಯನ್ನು, ಸಮಾಜವನ್ನು, ಸಾಹಿತ್ಯವನ್ನು ಕುರಿತು ವಿಮರ್ಶೆ ಬರೆದುದು ಕಂಡು ಬಂದಿವೆ. ಇಲ್ಲಿ ಕೆಲವು ದಲಿತ ಬರಹಗಾರರ ಬರಹಗಳನ್ನು ಮುಖ್ಯವಾಗಿ ಕೇಂದ್ರವಾಗಿರಿಸಿಕೊಳ್ಳಲಾಗಿದೆ.

ದಲಿತ ವಿಮರ್ಶೆಯಲ್ಲಿ ದಲಿತ ಬದುಕ ಕುರಿತ ಚಿಂತನೆಗಳು ಹೀಗೆ ಬಿಚ್ಚಿಕೊಂಡಿವೆ. “ದಲಿತರ ಬೌದ್ಧಿಕ ಮಾನಸಿಕ ಹಾಗೂ ದೈಹಿಕ ದಿವಾಳಿತನಕ್ಕೆ ಬ್ರಾಹ್ಮಣರು ಪರೋಕ್ಷವಾಗಿಯೂ ಗೌಡರು ಪ್ರತ್ಯಕ್ಷವಾಗಿಯೂ ಕಾರಣರಾಗಿದ್ದಾರೆ ಎಂದು. ಬ್ರಾಹ್ಮಣನ ಕೆಳಗೆ ಗೌಡ, ಗೌಡನ ಕೆಳಗೆ ದಲಿತರು. ಜಾತಿಯ ಈ ಪಿರಮಿಡ್ ರಚನೆಯಲ್ಲಿ ಬ್ರಾಹ್ಮಣನ ಪಾದ ಶೂದ್ರನ ತಲೆಯ ಮೇಲಿದ್ದರೆ ಶೂದ್ರನ ಪಾದಗಳು ದಲಿತನ ತಲೆಯ ಮೇಲಿವೆ. ಹಾಗಾಗಿ ದಲಿತರ ಮೇಲಿನ ತುಳಿತವು ಬ್ರಾಹ್ಮಣನಿಗಿಂತ ಶೂದ್ರನಿಂದ ನೇರವೂ ತೀವ್ರವೂ ಆಗಿ ಪರಿಣಮಿಸಿ ಅಮಾನುಷವಾಗುತ್ತದೆ”[1] ಸಾಮಾಜಿಕ ಸಂರಚನೆಯ ಜಾತಿ ವ್ಯವಸ್ಥೆಯ ತಾರತಮ್ಯ ಬದುಕಲ್ಲಿ ದಲಿತರ ಶೋಷಣೆಯ ಪ್ರಶ್ನೆ ಯಾವ ನೆಲೆಯದ್ದು ಎಂಬುದು ಮುಖ್ಯವಾಗುತ್ತದೆ. ದಲಿತರು ತನ್ನ ಎಲ್ಲಾ ಮೇಲು ಜಾತಿಯವರಿಂದ ಶೋಷಣೆಗೆ ಒಳಗೊಂಡಿರುವವರೇ ಆಗಿದ್ದರೂ ಯಾವ ಜಾತಿಯವರು ತಮ್ಮ ಅಧೀನದಲ್ಲಿರಿಸಿಕೊಂಡಿದ್ದಾರೆ ಎಂಬುದು ಬಿ.ಕೃಷ್ಣಪ್ಪನವರ ತಾತ್ವಿಕ ಪ್ರಶ್ನೆಯಾಗುತ್ತದೆ. ಸಾಮಾಜಿಕ ಶ್ರೇಣೀಕರಣದ ತುದಿಯಲ್ಲಿರುವ ಬ್ರಾಹ್ಮಣರು ಇತರ ಜಾತಿಯವರನ್ನು ಕೀಳಾಗಿ ಕಂಡಿರುವುದು ಒಂದೆಡೆಯಾದರೆ; ದಲಿತರಿಗೆ ಶ್ರೇಣೀಕರಣದ ಮೇಲಿನ ಎಲ್ಲಾ ಜಾತಿಯವರೂ ಕೀಳಾಗಿ ಕಾಣುವುದು, ಶೋಷಣೆ ಮಾಡುವುದು ಇದೆ. ಬ್ರಾಹ್ಮಣರು ಇತರ ಜಾತಿಯವರನ್ನು ಕೀಳಾಗಿ ಕಂಡಂತೆ ದಲಿತರನ್ನು ಕೀಳಾಗಿ ಕಾಣುತ್ತಾರೆ. ಆದರೆ ಅವರಿಗಿಂತ ಕೆಳಗಿರುವ ಮತ್ತು ದಲಿತರಿಗಿಂತ ಮೇಲಿನ ಸ್ತರದಲ್ಲಿರುವ ಶೂದ್ರರು ದಲಿತರನ್ನು ಕೀಳಾಗಿ ಕಾಣುತ್ತಾರೆ. ಶೂದ್ರರು ಭೂಮಿ ಮತ್ತು ಬಂಡವಾಳವನ್ನು ಹೊಂದಿ ದಲಿತರ ಶ್ರಮವನ್ನು ದುಡಿಮೆಗೆ ಬಳಸಿಕೊಳ್ಳುತ್ತಾರೆ. ಈ ಬಗ್ಗೆ ಎಲ್. ಹನುಮಂತಯ್ಯನವರ ವಿಚಾರಗಳು ಹೀಗಿವೆ. “ಬ್ರಾಹ್ಮಣ ಊರ ಲೆಕ್ಕಿಗನಾದರೆ ಅವನ ಸೇವಕ ಕೆಳಜಾತಿಯ

ಹೊಲೆಮಾದಿಗನಾಗಿರುತ್ತಾನೆ. ಊರ ಪಟೇಲನಾಗಿ ಬ್ರಾಹ್ಮಣನ ನಂತರದ ಜಾತಿಯವನು ಭೂಮಾಲೀಕನಾಗಿರುತ್ತಾನೆ."[೨] ಬ್ರಾಹ್ಮಣ ಶೂದ್ರ ದಲಿತರ ನಡುವಿನ ಅಂತರಗಳು ಜಾತಿ, ವೃತ್ತಿ ಮತ್ತು ಆರ್ಥಿಕತೆಗೆ ಸಂಬಂಧಪಟ್ಟಿದ್ದು ಅವುಗಳಿಂದ ಸಾಮಾಜಿಕ ಸ್ಥಾನಮಾನಗಳು ನಿರ್ಮಿತಗೊಂಡಿರುತ್ತವೆ. "ದಲಿತರು ಭೂಮಿಯ ಸಂಬಂಧದಲ್ಲಿ ಪರಕೀಯರು. ಜಮೀನ್ದಾರರ ಜಮೀನಿನಲ್ಲಿ ಕೃಷಿ ಕೂಲಿಕಾರರಾಗಿ ದುಡಿಯುವವರು. ಇಂದಿಗೂ ಶೇಕಡವಾರು ಕೃಷಿ ಕೂಲಿಗಾರರ ಸಂಖ್ಯೆಯಲ್ಲಿ ದಲಿತರು ಹೆಚ್ಚಾಗಿ ಇರುವುದನ್ನು ಗಮನಿಸಿದರೆ ಈ ಸಂಖ್ಯೆಯ ಸತ್ಯ ತಿಳಿಯುತ್ತದೆ. ಭಾರತದ ಜಾತಿ ವ್ಯವಸ್ಥೆಯಲ್ಲಿ ಮಧ್ಯಮ ಜಾತಿಗಳು ಭೂಮಿಯನ್ನು ಹೊಂದಿರುವುದರಿಂದ ದಲಿತರು ನೇರವಾಗಿ ಮಧ್ಯಮ ಜಾತಿಗಳ ಅಡಿಯಲ್ಲಿ ಬರುತ್ತಾರೆ. ಆದ್ದರಿಂದಲೇ ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳಲ್ಲಿ ಮಧ್ಯಮ ಜಾತಿಗಳು ಅರ್ಥಾತ್ ಭೂಮಾಲೀಕ ಜಾತಿಗಳು ನೇರವಾಗಿ ಹೊಣೆಗಾರರಾಗಿದ್ದಾರೆ".[೩] ಬಡತನ, ಹಸಿವು, ವಸತಿ ಇವು ದಲಿತರನ್ನು ಆವರಿಸಿಕೊಂಡಿರುವ ಮೂಲಭೂತ ಸಮಸ್ಯೆಗಳು. ಇವುಗಳು ದಲಿತರನ್ನು ಉಚ್ಚ ಜಾತಿಯವರು ತುಚ್ಚವಾಗಿ ಕಾಣಲು, ತಮ್ಮ ಅನುಕೂಲಕ್ಕೆ ಬಳಸಿಕೊಳ್ಳಲು ಕಾರಣವಾಗಿವೆ. "ಎಡ ಪಂಥೀಯ ವಿಚಾರಧಾರೆ ಗ್ರಾಮೀಣ ಸಮಾಜವನ್ನು ಭೂಮಾಲೀಕ ಸಮಾಜವೆಂದು ವಿಶ್ಲೇಷಣೆ ಮಾಡುತ್ತದೆ. ಸಾವಿರಾರು ಎಕರೆ ಜಮೀನಿರುವ ಭೂಮಾಲಿಕತ್ವದ ಪದ್ಧತಿ ನಮ್ಮ ಸಮಾಜದ ವ್ಯವಸ್ಥೆಯನ್ನು ನಿಯಂತ್ರಿಸುತ್ತದೆ. ಅಂಬೇಡ್ಕರ್ ಲೋಹಿಯಾ ಮುಂತಾದವರು ಭಾರತದಲ್ಲಿ ಜಾತಿಯೇ ವರ್ಗವಾಗಿದೆ ಎಂದು ಹೇಳಿದ್ದಾರೆ. ಜಾತಿ ಶೋಷಣೆಯೇ ವರ್ಗ ಶೋಷಣೆಯಾಗಿ ಮಾರ್ಪಟ್ಟಿದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ."[೪] ಇದು ದಲಿತರ ಅವ್ಯವಸ್ಥಿತ ಸಾಮಾಜಿಕ ಸ್ಥಾನದಿಂದ ಕಂಡುಬರುತ್ತದೆ. "ದಲಿತರ ಮೂಲಭೂತ ಸಮಸ್ಯೆ ಭೂಮಿಯ ಒಡತನದ ಸಮಸ್ಯೆ. ಇದನ್ನು ಅವಲಂಬಿಸಿಯೇ ಅವರ ಸಾಮಾಜಿಕ ಸ್ಥಾನಮಾನಗಳು ನಿರ್ಧಾರವಾಗುತ್ತವೆ. ಅವರಿಗೆ ಬೇಕಾಗಿರುವುದು ಊಟ, ಬಟ್ಟೆ ಮತ್ತು ಮಳೆ ಬಂದರೂ ಸಹ ಬೀಳದಿರುವ ಮನೆಗಳು. ಇದು ಬದುಕಿಗಾಗಿ ನಡೆಯುವ ಹೋರಾಟ"[೫]. ದಲಿತ ಸಂಘಟನೆಗಳು ಈ ದಿಕ್ಕಲ್ಲಿ ಹೋರಾಟಾತ್ಮಕ ಬದುಕನ್ನು ನಡೆಸುತ್ತಿವೆ.

ದಲಿತ ಬರಹಗಾರರು ಇಂದು ವಿಮರ್ಶಾ ನೆಲೆಯಲ್ಲಿ ತಮ್ಮನ್ನು ಗುರ್ತಿಸಿಕೊಳ್ಳುತ್ತಿದ್ದಾರೆ. ಆಧುನಿಕ ಶಿಕ್ಷಣವು ಸಂಸ್ಕೃತಿಯ ಚಿಂತನೆಯಲ್ಲಿ ಗಂಭೀರತೆಯನ್ನು ತಂದಿದೆ. "ಇಂಡಿಯಾದ ಸಂಪ್ರದಾಯಬದ್ಧ ಸಮಾಜದೊಳಗೆ ಮನುಷ್ಯ ಶಕ್ತಿಗಾಗಲಿ ಅವನ ಶ್ರಮಕ್ಕಾಗಲಿ ಯಾವ ಬೆಲೆಯೂ ಇಲ್ಲ. ಯಾಕೆಂದರೆ ಯಾವುದೇ ಒಳ್ಳೆಯದು ಕೆಟ್ಟದರ ಹಿನ್ನೆಲೆಯಲ್ಲಿ ದೈವದ ಅಥವಾ ದೆವ್ವದ ಕೈವಾಡವಿರುತ್ತದೆ"[೬] ಎಂಬ ನಂಬಿಕೆಯು ಗಾಡವಾಗಿ ಬೇರೂರಿದೆ. "ಬೂರ್ಜ್ವಾ ಶಿಕ್ಷಣ ಕುಸಿಯುತ್ತಿರುವ ತಿಳುವಳಿಕೆಗಳನ್ನು ತಿರಸ್ಕರಿಸುವುದು ಅಕ್ಷರಸ್ತ ದಲಿತರ ಕೆಲಸವಾಗಿದೆ"[೭]. ಈ ನಿಲುವು ದಲಿತ ವಿಮರ್ಶೆಯಲ್ಲಿ ಪರಿಪಕ್ವವಾಗಿ ನಿಂತಿದೆ.

ದಲಿತರು ಒಂದು ರೀತಿಯಲ್ಲಿ ಸಮುದಾಯದಿಂದ ಬೇರ್ಪಟ್ಟು ಮತ್ತೊಂದು ರೀತಿಯಲ್ಲಿ ಸಮುದಾಯದೊಂದಿಗೆ ಅಂಟಿಕೊಂಡು ಬರೆಯಲು ತೊಡಗಿದರು. ವೈಚಾರಿಕ ಜಗತ್ತಿಗೆ ಪ್ರವೇಶವಾದ ದಲಿತರು ತಮ್ಮ ಬರವಣಿಗೆಯ ನೆಲೆಗಳನ್ನು ಸಮುದಾಯ ಕೇಂದ್ರಿತಗೊಳಿಸಿದರು. ಅವುಗಳ ಪ್ರಸ್ತುತ ಆಧುನಿಕ ಜಗತ್ತಿನ ಸವಾಲುಗಳ ತಲ್ಲಣಗಳನ್ನು ಹಿಡಿಯಲು ಪ್ರಯತ್ನಿಸಿದವು. ದಲಿತ ಸಮುದಾಯಗಳ ಪರಂಪರೆಯನ್ನು ಸಾಂಸ್ಕೃತಿಕ ತಲ್ಲಣಗಳಿಗೆ ಮುಖಾಮುಖಿ ಮಾಡುವುದು ದಲಿತ ವಿಮರ್ಶೆಯಲ್ಲಿದೆ. ಮೊಗಳ್ಳಿ ಗಣೇಶರು 'ದೇಶಿ' ಕೃತಿಯ 'ನನ್ನ ಸೊಲ್ಲು' ಎಂಬುದರಲ್ಲಿ ಹೀಗೆ ಹೇಳಿದ್ದಾರೆ. "ದಲಿತ ಸಮುದಾಯಗಳು ಈ ಹೊತ್ತಿನಲ್ಲಿ ಜಾಗತೀಕರಣದ ತೆರೆದ ದಿಡ್ಡಿಬಾಗಿಲ ಪ್ರವಾಹದಲ್ಲಿ ಚರಿತ್ರೆಯ ಯಾವ

ಪೇಟೆಯ ನಗರದ ಲೋಕದ ಎಲ್ಲೆಗೆ ಎಸೆಯಲ್ಪಡುತ್ತವೆಯೋ ಎಂಬ ಅಳುಕು ನನಗೆ ಉಂಟಾಗಿದ್ದರೂ, ದಲಿತ ಸಂಸ್ಕೃತಿಯ ಆಳದ ಸಾಂಸ್ಕೃತಿಕ ಜೀವಕೋಶಗಳು ಇಪ್ಪತ್ತೊಂದನೇ ಶತಮಾನದ ಜೊತೆ ಹೇಗೆ ಮುಖಾಮುಖಿಯಾಗಿ ತನ್ನ ಅನನ್ಯತೆಗೆ ತಕ್ಕನಾದ ದೇಶಿ ಸಂಸ್ಕೃತಿಯನ್ನು ರೂಪಿಸಿಕೊಳ್ಳುತ್ತದೆ ಎಂಬುದರ ಕಡೆಗೆ ನನ್ನ ಆಸಕ್ತಿ ವಿಶೇಷವಾಗಿದೆ. ಹಾಗಾಗಿಯೇ ದಲಿತ ಸಮುದಾಯಗಳ ಆಳದ ಸೂಕ್ಷ್ಮಗಳನ್ನು ನಾವೀಗ ವಿಶಿಷ್ಟವಾಗಿ ಕೈಗೊಳ್ಳಬೇಕಾಗಿದೆ"[೮]. ಈ ನೆಲೆಯಲ್ಲಿ ದಲಿತ ಸಂಸ್ಕೃತಿ, ಕಲೆ, ಕಥನಗಳ ವೈವಿಧ್ಯಮಯ ಸೂಕ್ಷ್ಮತೆಗಳ ಹುಡುಕುವ ಪ್ರಯತ್ನ ದಲಿತ ಲೇಖಕರಲ್ಲಿವೆ. ಈ ತರಹದ ಬರಹಗಾರರಿಗೆ ಜನಪದ ಮೌಖಿಕ ಪರಂಪರೆಯ ಪಠ್ಯಗಳು ಪ್ರಮುಖವಾದವು. ಈ ಜನಪದ ಪಠ್ಯಗಳು ಕೇಳುವ ಪರಂಪರೆಯನ್ನು ಹೊಂದಿ ನಂಬಿಕೆ ಆಚರಣೆ ದೃಶ್ಯಗಳಿಗೆ ಮತ್ತು ಮನಸ್ಸಿಗೆ ಸಂಬಂಧಪಟ್ಟಿರುತ್ತವೆ. ಮೌಖಿಕ ಪರಂಪರೆಗೆ ಒತ್ತು ಕೊಟ್ಟ ಲೇಖಕರು ಮೌಖಿಕ ಪರಂಪರೆಯ ಸಾಂಸ್ಕೃತಿಕ ಜಗತ್ತನ್ನು ಅಧ್ಯಯನಕ್ಕೆ ಒಳಪಡಿಸಲು ಪ್ರಯತ್ನಿಸಿದರು. ಆ ಹಿನ್ನೆಲೆಯಲ್ಲಿ ಮೌಖಿಕ ಕಾವ್ಯ ಕಥನಗಳು ದಾಖಲಾದವು. ಕಲೆ ಸಂಸ್ಕೃತಿಗಳು ಅಧ್ಯಯನದ ಶಿಸ್ತಿಗೆ ಒಳಪಟ್ಟವು. ಅವುಗಳು ಸಮುದಾಯಗಳ ಬದುಕಿನಲ್ಲಿ ಒಂದು ಅವಿಭಾಜ್ಯ ಅಂಗವಾದವು.

"ಸಮಾಜದಲ್ಲಿ ಸರ್ವ ರೀತಿಯಲ್ಲಿ ಶೋಷಣೆಗೆ ಒಳಗಾಗಿರುವ ಮನುಷ್ಯನ ಬದುಕನ್ನು ಅರ್ಥವತ್ತಾಗಿ ಚಿತ್ರಿಸುವುದರ ಮುಖಾಂತರ : ಈ ರೀತಿ ಶೋಷಣೆಗೆ ಒಳಗಾದ ಮನುಷ್ಯನಿಗೇ ತಾನು ಏನು ಎಂಬುದರ ಅರಿವನ್ನು ಉಂಟುಮಾಡುವುದು. ಹೀಗೆ ಈತನಲ್ಲಿ ಅರಿವುಂಟುಮಾಡಿ ಹೊಸ ಜಗತ್ತಿನ ಆಲೋಚನೆಗಳ ಜೊತೆ ಹೊಂದಿಕೊಂಡು ಹೋಗುವಂತೆ ಮಾಡುವುದು ಸಾಹಿತ್ಯದ ಮೊದಲನೆ ಕೆಲಸ"[೯]. ದಲಿತ ಸಾಹಿತ್ಯವು ತಲೆ ತಲೆಮಾರುಗಳ ಸಾಂಸ್ಕೃತಿಕ ಶೋಷಣೆಯನ್ನು ತಿಳಿಯಪಡಿಸಿದರೆ; ಅದರ ಲೋಪದೋಷಗಳನ್ನು, ಅದರ ವಾಸ್ತವವನ್ನು ತಿಳಿಸುವ ಕೆಲಸವನ್ನು ವಿಮರ್ಶೆಯು ಮಾಡುತ್ತದೆ. ಓದುವ ವರ್ಗಕ್ಕೆ ಸಮಾಜದ ಕಟುವಾಸ್ತವವನ್ನು ಎತ್ತಿ ಹಿಡಿಯುತ್ತದೆ. "ಸಾಹಿತ್ಯದ ದೃಷ್ಟಿಯಲ್ಲಿ ವಿಮರ್ಶೆಯಲ್ಲಿ ರಿಯಾಯಿತಿ ಬೇಕಾಗಿಲ್ಲ. ಆದರೆ ಒಬ್ಬ ದಲಿತ ಸಾಹಿತಿ ಯಾವ ಸಮಾಜದ ಒಳಗೆ ಯಾವ ಸಂಸ್ಕೃತಿಯ ಒಳಗೆ ನಿಂತು ಬರೆದಿದ್ದಾನೆ ಎಂಬುದರ ಅರಿವು ವಿಮರ್ಶಕನಿಗಿರಬೇಕು. ಈಗಿನ ವಿಮರ್ಶಾ ಮಾನದಂಡವನ್ನು ತಿರಸ್ಕರಿಸುವುದಾದರೆ ಯಾವುದಿರಬೇಕೆಂದು ನಿರ್ಧಾರವಾಗಬೇಕು"[೧೦]. ಇಂಡಿಯಾದಲ್ಲಿನ ಬಹು ಸಂಸ್ಕೃತಿ, ಮತ್ತು ಬಹು ಸಮುದಾಯಗಳಿರುವ ದೇಶದಲ್ಲಿ ವಿಮರ್ಶೆ ಎಂಬುದು ಸಂಸ್ಕೃತಿಯ ಬಿಂಬಕವಾಗಬೇಕು. ಏಕೆಂದರೆ ವಸ್ತುನಿಷ್ಠತೆಯ ವಿಮರ್ಶೆಯು ಸಾಮುದಾಯಿಕ ಅನನ್ಯತೆಯನ್ನು ಬಯಸುತ್ತದೆ. ಆ ರೀತಿಯಲ್ಲಿ ವಿಮರ್ಶೆ ಮಾನದಂಡವಾಗಬೇಕೆಂಬುದು ತಾತ್ವಿಕ ಚರ್ಚೆ. ಇದನ್ನು ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನಚಿತ್ರ ಎಂಬ ಲೇಖನದಲ್ಲಿ ಉದಾಹರಣೆಯಾಗಿ ತೆಗೆದುಕೊಳ್ಳಬಹುದು. ಬಿ.ಕೃಷ್ಣಪ್ಪನವರು ಕುವೆಂಪು ಅವರ ಸೃಷ್ಟಿ ವಿಧಾನದ ಮೂರು ಸಂದಿಗ್ಧಗಳನ್ನು ಗುರ್ತಿಸಿದ್ದಾರೆ.

"೧. ಶೂದ್ರರಾದರೂ ರಾಮಕೃಷ್ಣಾಶ್ರಮದಲ್ಲಿ ಬೆಳೆದು, ರಾಮಕೃಷ್ಣ ಅರವಿಂದ ಮುಂತಾದವರ ತತ್ವಶಾಸ್ತ್ರದಲ್ಲಿ ಆಳವಾದ ನಂಬಿಕೆಯನ್ನಿಟ್ಟು ಹಿಂದೂ ಧರ್ಮವನ್ನು ಒಪ್ಪಿಕೊಳ್ಳುವುದು. ಅದೇ ಕಾಲಕ್ಕೆ ಆ ಮತದ ಈ ಮತದ ಕೊಳೆ ಸಾಕಿನ್ನು ಬನ್ನಿ ಮನುಜಮತಕೆ ಎಂದು ಕೈ ಬೀಸಿ ಕರೆಯುವುದು

೨. 'ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು' ಎಂದು ಸಮಾಜವಾದಿ ತತ್ವವನ್ನು ಒಪ್ಪಿಕೊಳ್ಳುವುದು, ಅದೇ ಸಂದರ್ಭಕ್ಕೆ ಸಮಾಜವಾದಕ್ಕೆ ವಿರುದ್ಧವಾದ ಜಮೀನ್ದಾರಿ ಉಳಿಗಮಾನ್ಯ ಪದ್ಧತಿಯನ್ನು ಬೆಂಬಲಿಸುವುದು.

೩. ಹಿಂದೂ ಜಾತಿ ವ್ಯವಸ್ಥೆಯ ಬ್ರಾಹ್ಮಣಶಾಹಿಯನ್ನು ವಿರೋಧಿಸುವುದು. ಅದೇ ಕಾಲಕ್ಕೆ ಶೂದ್ರರ ದಲಿತ ಶೋಷಣೆಯನ್ನು ಮೌನವಾಗಿ ಒಪ್ಪಿಕೊಳ್ಳುವುದು"[೧೧]. ಹೀಗೆ ಕುವೆಂಪು ಅವರ ಕಾದಂಬರಿಯ ಬಗ್ಗೆ ಬಿ.ಕೃಷ್ಣಪ್ಪನವರು ವಿಶ್ಲೇಷಣೆಯನ್ನು ನೀಡಿದ್ದಾರೆ. "ಕುವೆಂಪು ತಮ್ಮ ಕಾದಂಬರಿಗಳಲ್ಲಿ ದಲಿತರ ಇಂಥ ಪರಿಸ್ಥಿತಿಯನ್ನು ವರ್ಣಿಸುತ್ತಾರಾದರೂ ಅವರ ಅಂತಕರಣವೆಲ್ಲ ಊಳಿಗಮಾನ್ಯ ಜಮೀನ್ದಾರರ, ಗೌಡರ ಪರವಾಗಿದ್ದು ಬ್ರಾಹ್ಮಣ ವಿರೋಧಿಯೇ ಹೊರತು ದಲಿತಪರವಾಗಿಲ್ಲ..... ಕುವೆಂಪು ಅವರಿಗೆ ಮೇಲಿರುವ ಬ್ರಾಹ್ಮಣರು ಕಾಣುತ್ತಾರೆಯೇ ಹೊರತು ಕೆಳಗೆ ಒದ್ದಾಡುತ್ತಿರುವ ದಲಿತರ ಚಿತ್ರಭೇಧಗಳು ಅಷ್ಟಾಗಿ ಅರ್ಥವಾಗದೆ ಹೋಗುತ್ತವೆ."[೧೨] ದಲಿತ ವಿಮರ್ಶಕನ ಗ್ರಹಿಕೆಯು ಗ್ರಾಮ ಸಮಾಜದ ಬದುಕಿನ ಜಾತಿ ಹಿನ್ನೆಲೆಯ ಸಂಕಷ್ಟಗಳ ನೆಲೆಯಲ್ಲಿ ಹುಟ್ಟಿ ಬಂದಂತಹದ್ದು. ಅಕ್ಷರ ಕಲಿತ ದಲಿತರು ವೈದಿಕ ಸಂಸ್ಕೃತಿಯ ಜಾತಿವ್ಯವಸ್ಥೆ ಮತ್ತು ಅಸ್ಪೃಶ್ಯತೆಯ ಕ್ರೌರ್ಯ; ತಮ್ಮ ದುಃಸ್ಥಿತಿಗೆ ಕಾರಣವೆಂದು ನಂಬಿದವರು. ಅಂತೆಯೇ ತಮ್ಮ ಆಳುವ ಶೂದ್ರ ಭೂಮಾಲೀಕರ ಮತ್ತು ಬಂಡವಾಳಗಾರರ ನೇರ ಕ್ರೌರ್ಯವನ್ನು ತುಂಡು ತುಂಡಾಗಿ ಪ್ರಶ್ನಿಸಿದರು.

ವಿಮರ್ಶೆಯು ತನ್ನ ಗೃಹೀತ ನೆಲೆಯ ವಸ್ತುಸ್ಥಿತಿಯ ಮೇಲೆ ನಿಂತಿರುತ್ತದೆ. ಅದು ಸಮಾಜದ ಸಾಂಸ್ಕೃತಿಕ ವಿಶ್ಲೇಷಣೆಯ ನಿರ್ವಚನದಲ್ಲಿ ಖಚಿತಗೊಳ್ಳುತ್ತದೆ. ಏಕೆಂದರೆ ವಿಮರ್ಶಕ ಮತ್ತು ಅವನ ವಿಮರ್ಶೆ ಸಮಾಜದ ಒಂದು ಭಾಗವಾಗಿರುತ್ತದೆ. ಹಾಗೆಯೇ ಅವನ ಸಾಮಾಜಿಕ ವಿಶ್ಲೇಷಣೆಯು ಅವನು ಪ್ರತಿನಿಧಿಸುವ ಸ್ತರವೊಂದರ ವಿಶ್ಲೇಷಣೆಯೇ ಆಗಿರುತ್ತದೆ. ತನ್ನ ಗೃಹೀತದಲ್ಲಿ ತಾನು ಕಂಡ ಸಾಮಾಜಿಕ ಸ್ತರಗಳ ವೈರುದ್ಯ ಮತ್ತು ವೈವಿಧ್ಯಮಯತೆಯನ್ನು ವಿಮರ್ಶಕ ವಿವರಿಸುತ್ತಾನೆ. ಇದು ದಲಿತ ವಿಮರ್ಶಕನಲ್ಲಿಯೂ ಕಂಡು ಬರುತ್ತದೆ. ಈ ವಿಮರ್ಶೆಗಳು ಕಲಿತ ಸಮುದಾಯಗಳ ಸಂಕಥನಗಳನ್ನು ಒಳಗೊಂಡು ಮೌಖಿಕ ಪರಂಪರೆಗೆ ಒತ್ತು ಕೊಟ್ಟು ನಿರ್ವಚಿಸಲ್ಪಡುತ್ತವೆ. ಇವುಗಳು ಇರುವ ಶಿಷ್ಟ ಸಾಹಿತ್ಯವನ್ನು ಒಳಗೊಂಡು ಅವುಗಳಲ್ಲಿ ಕಂಡುಬರುವ ದಲಿತ ಸಮುದಾಯಗಳ ಧೋರಣೆಯನ್ನು ಹುಡುಕುತ್ತಾ; ಅವುಗಳಿಗೆ ಪ್ರೇರಣೆ, ಪ್ರಭಾವವನ್ನು ಶೋಧಿಸಿವೆ. ಹಾಗೆಯೇ ಇವುಗಳು ಭಾರತೀಯ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳುತ್ತಾ, ಜೊತೆಗೆ ಅದರೊಂದಿಗೆ ಭಿನ್ನವಾದ ಸಾಂಸ್ಕೃತಿಕ ಮತ್ತು ತಮ್ಮ ಸಮುದಾಯಗಳ ಅನನ್ಯತೆಗಳನ್ನು ಗುರ್ತಿಸುವ ನೆಲೆಗಳನ್ನು ದಲಿತ ವಿಮರ್ಶೆ ಒಳಗೊಂಡಿದೆ. "ದುರ್ಬಲ ಸಮುದಾಯಕ್ಕೆ ಇರುವ ಅತಿದೊಡ್ಡ ಬಿಡುಗಡೆಯ ಮಾರ್ಗವೆಂದರೆ ಅವರವರ ಫ್ಯಾಂಟಸಿಯೇ ಆಗಿರುತ್ತದೆ. ಸಮಾಜದಲ್ಲಿ ತಾನು ಮುಟ್ಟಲಾಗದ್ದನ್ನು ಪ್ರವೇಶಿಸಲಾಗದ್ದನ್ನು ಅನುಭವಿಸಲಾಗದ್ದನ್ನು ಕಾಣಲಾಗದ್ದನ್ನು ಸಾಧಿಸಿಕೊಳ್ಳಲು ರಮ್ಯಾದ್ಭುತ ಮಾಂತ್ರಿಕ ಕಲ್ಪನೆಗಳು ಚರಿತ್ರೆಯ ಉದ್ದಕ್ಕೂ ಅವರವರನ್ನು ಕಾಪಾಡಿಕೊಂಡೇ ಬಂದಿವೆ. ಇಂತಹ ಕಲ್ಪನೆಯಲ್ಲಿ ಆಯಾ ಸಮಾಜವು ತನ್ನ ಮೇಲಿನ ಆಕ್ರಮಣವನ್ನು ಹೇಳಿಕೊಂಡೇ ಬದುಕಿವೆ. ಈ ಹಿನ್ನೆಲೆಯಲ್ಲಿ ಯಾವುದೇ ಸಮಾಜವಿಜ್ಞಾನಿ ಅತ್ಯಂತ ಸೂಕ್ಷ್ಮವಾಗಿ ನಮ್ಮ ದೇಶದ ಮೌಖಿಕ ಪರಂಪರೆಯ ಒಳಗಿರುವ ಸಮಾಜದ ವಿನ್ಯಾಸಗಳನ್ನು ಕಂಡು ಕೊಳ್ಳಲೇ ಇಲ್ಲ"[೧೩]. ಇವುಗಳನ್ನು ಪ್ರಬಲವಾದ ಯಜಮಾನಿಕೆಯನ್ನು ಹೊಂದಿದ ಪುರೋಹಿತಶಾಹಿ ಸಮುದಾಯ ನಿರ್ವಹಿಸುತ್ತಾ ಬಂದದ್ದು ಇದೆ. ಇದು ಶಿಷ್ಟ ಮತ್ತು ಮೌಖಿಕ ಸಾಹಿತ್ಯಗಳಿಗೆ ಸಂಬಂಧಿಸಿದ್ದಾದರೆ ಅದರಂತೆಯೇ ದಲಿತ ಬದುಕಿನ ಒಡನಾಟದಲ್ಲಿ ದಲಿತೇತರ ಸಮುದಾಯಗಳು ಪುರೋಹಿತಶಾಹಿಯ ಆಳುವ ಕ್ರಮವನ್ನು ದಲಿತ ಸಮುದಾಯಗಳ ಮೇಲೆ ಪ್ರಯೋಗ ಮಾಡಿದವು. ಅವು ಭೂಮಾಲೀಕ ಬಂಡವಾಳಗಾರರ ಹಿನ್ನೆಲೆಯಲ್ಲಿ ಶ್ರೇಷ್ಠತೆ ಮತ್ತು ಕನಿಷ್ಠತೆಯನ್ನು ಸೃಷ್ಟಿ

ಮಾಡಿದವು. ಸಂಬಂಧಿಸಿದ ಹಿತಾಸಕ್ತಿಯನ್ನು ಇವು ಕಾಪಾಡುವಲ್ಲಿ ಯಶಸ್ವಿಯಾದವು. ಹೀಗಿದ್ದ ಸಂದರ್ಭದಲ್ಲಿ ಶೋಷಿತ ಸಮುದಾಯಗಳಲ್ಲಿ ತಮ್ಮೊಳಗೇ ಇದ್ದ ಸ್ವಾತಂತ್ರ್ಯದ ಬಯಕೆಯು ಮತ್ತು ಅವುಗಳ ಅಸಾಧಾರಣ ಕಲ್ಪನೆಗಳು ಕಥೆ ಕಾವ್ಯಗಳಾಗಿ ಮೌಖಿಕ ಪರಂಪರೆಯಲ್ಲಿ ಕಂಡುಬಂದವು. ಇವುಗಳು ತಮ್ಮ ಸಮುದಾಯಗಳ ಸಂಸ್ಕೃತಿಯನ್ನು ಒಳಗೊಂಡಿವೆ.

ಇವುಗಳ ಅಧ್ಯಯನ ಕ್ರಮವು ಯೂರೋಪಿನ ಅಧ್ಯಯನ ಕ್ರಮದಂತೆ ಕತೆ, ಕಾವ್ಯ, ಕಲೆ, ಸಂಪ್ರದಾಯ, ಆಚರಣೆ, ತತ್ವ, ಧರ್ಮಗಳಿಗೆ ಸಂಬಂಧಿಸಿದಂತೆ ಇವೆ. ಈ ಎಲ್ಲಾ ಅಧ್ಯಯನದ ಶಿಸ್ತುಗಳು ಮತ್ತು ಅವುಗಳ ಚರ್ಚೆಗಳು ಸಂಗ್ರಹಣೆ, ವಿವರಣೆ, ವಿಶ್ಲೇಷಣೆ, ವ್ಯಾಖ್ಯಾನಗಳಾಗಿ ದಲಿತ ಸಮುದಾಯಗಳ ಸಂಸ್ಕೃತಿಯಲ್ಲಿ, ಸಂಶೋಧನೆಯ ಸಾಮಗ್ರಿಗಳಾಗಿ ರೂಪುಗೊಂಡವು. ಈ ಶೋಧನೆಯ ಅಧ್ಯಯನ ಶಿಸ್ತುಗಳು ಮತ್ತು ಅವುಗಳ ಚರ್ಚೆಗಳು ಪಟ್ಟಭದ್ರ ಹಿತಾಸಕ್ತಿಯ ಸಂಸ್ಕೃತಿಯ ಚರ್ಚೆಯ ಆಚೆ ನಿಂತರೂ ಅವುಗಳು ಒಂದು ಬೌದ್ಧಿಕ ವಲಯಕ್ಕೆ ಸೀಮಿತಗೊಂಡು ಚರ್ಚೆಗೊಂಡವು. ಆದರೆ ಸಾಂಸ್ಕೃತಿಕವಾಗಿ ಈ ಚಿಂತನೆಗಳು ವಸ್ತು, ವ್ಯಕ್ತಿ, ಸಮುದಾಯಗಳನ್ನು ಒಳಗೊಳ್ಳಲಿಲ್ಲ. ಬೌದ್ಧಿಕ ವಲಯ ಮತ್ತು ಮಾಹಿತಿ ಸಾಮಗ್ರಿಯಾದ ವಸ್ತು ವಲಯದೊಂದಿಗೆ ಅಂತರವೇರ್ಪಟಿತು. ಅಂದರೆ ಈ ಎರಡೂ ಹೀಗೆ ಬೇರೆ ಬೇರೆಯಾಗಿ ಭಿನ್ನವಾಗಿ ಒಡೆದು ನಿಂತವು. ಇದನ್ನು ಹೀಗೆ ಅರ್ಥೈಸಿಕೊಳ್ಳಬಹುದು. ಒಬ್ಬ ಮೌಖಿಕ ಪರಂಪರೆಯ ಸಾಹಿತ್ಯದ ವಕ್ತೃವಿಗೂ ಮತ್ತು ಅದರ ಸಂಗ್ರಹಕಾರ ಮತ್ತು ವಿಶ್ಲೇಷಣಾಕಾರರ ನಡುವಿನ ನಿರ್ವಚನಗಳಿಗೂ ಅರ್ಥೈಸುವಿಕೆಯಲ್ಲಿ ಭಿನ್ನತೆಯನ್ನೂ ಹೊಂದಿರುತ್ತದೆ. ಮೌಖಿಕ ಪರಂಪರೆಯ ಕಾವ್ಯ, ಕಥೆ, ಒಗಟು, ಮಂತ್ರಗಳನ್ನು ಹೇಳುವವನಿಗೂ ಮತ್ತು ಅವುಗಳನ್ನು ವಸ್ತುವನ್ನಾಗಿಟ್ಟುಕೊಂಡು ವಿಶ್ಲೇಷಿಸುವ ನಿರ್ವಚನಕಾರನ ಅರ್ಥಕಲ್ಪನೆಯಲ್ಲಿ ಭಿನ್ನತೆ ಕಾಣಸಿಗುತ್ತದೆ. ಜಾನಪದ ಹಾಡುಗಾರರಿಗೆ ಅವರು ಹಾಡುವ ಹಾಡು ತನ್ನ ಹಿಂದಿನವರಿಂದ ಕಲಿತು ಕಟ್ಟುವ ಕ್ರಿಯೆಯಾಗಿದ್ದರೆ, ಸಾಂಪ್ರದಾಯಿಕತೆಯಾಗಿದ್ದರೆ ಅದನ್ನು ಶೋಧಿಸುವವನಿಗೆ ಒಂದು ಅಧ್ಯಯನದ ಕ್ರಮವಾಗಿರುತ್ತದೆ. ಇಲ್ಲಿ ಮುಖ್ಯವಾಗಿ ಹಾಡುಗಾರನ ನೆಲಗಟ್ಟೇ ಬೇರೆಯಾಗಿರುವಂತೆ ವಿಮರ್ಶಕನ ನೆಲೆಗಟ್ಟು ಬೇರೆಯಾಗಿರುತ್ತದೆ.

ಹಾಗೆ ದಲಿತ ಸಂಸ್ಕೃತಿ, ಚಿಂತನೆ, ಸಾಹಿತ್ಯವನ್ನು, ಸಮುದಾಯಗಳ ಪರಂಪರೆಯನ್ನು ಅರಿಯುವಲ್ಲಿ ದಲಿತ ಸಾಹಿತ್ಯ ಚಳುವಳಿಯು ಪ್ರಮುಖವಾಗಿ ಕಂಡು ಬಂತು. ಡಾ. ಸಿದ್ದಲಿಂಗಯ್ಯ, ದೇವನೂರು ಮಹಾದೇವ, ಎಚ್.ಗೋವಿಂದಯ್ಯ, ಮ.ನ.ಜವರಯ್ಯ, ಕೆ.ಬಿ.ಸಿದ್ದಯ್ಯ, ಅರವಿಂದ ಮಾಲಗತ್ತಿ, ಎಲ್. ಹನುಮಂತಯ್ಯ, ಮೊಗಳ್ಳಿ ಗಣೇಶ್ ಹೀಗೆ ಮುಂತಾದವರ ಸಾಹಿತ್ಯವು ಕರುಳಕಿತ್ತು ಗೂಡು ಕಟ್ಟಿರುತ್ತವೆ. ಹಾಗೆ ಅಭಿವ್ಯಕ್ತಿಗೊಂಡಿರುವುದಕ್ಕೆ ಹಿನ್ನೆಲೆಯು ಅವರ ನೋವು, ವೇದನೆ, ಅನುಭವಗಳು. ಅನುಭವವು ದಲಿತ ಸಾಹಿತ್ಯದಲ್ಲಿ ಮುಖ್ಯವಾಗಿದೆ. ಇಂಥ ಸಾಹಿತ್ಯದ ಹಿನ್ನೆಲೆಯನ್ನು ಚರ್ಚಿಸುವಾಗ, ವಿಮರ್ಶಿಸುವಾಗ ಸಾಂಸ್ಕೃತಿಕ ಹಿನ್ನೆಲೆಯ ತುಡಿತದ ಗಟ್ಟಿತನವು ಗೊತ್ತಾಗುತ್ತದೆ.

ಕರ್ನಾಟಕದಲ್ಲಿ ದಲಿತ ಸಾಹಿತ್ಯ ಮತ್ತು ಚಳುವಳಿಗಳ ನಂಟು ಒಂದಕ್ಕೊಂದು ಪೂರಕವಾಗಿಯೇ ಸಾಗಿಬಂದಿವೆ "ದಲಿತ ಚಳುವಳಿ ಒಂದು ಚಾರಿತ್ರಿಕ ಅನಿವಾರ್ಯತೆ. ಎಲ್ಲಿ ಕಮ್ಯುನಿಷ್ಟ್ ಚಳುವಳಿ ಬಲಹೀನವಾಗಿದೆಯೋ ಅಂಥ ರಾಜ್ಯಗಳಲ್ಲಿ ದಲಿತ ಚಳುವಳಿಯನ್ನು ಕಾಣುತ್ತಿದ್ದೇವೆ. ಮಹಾರಾಷ್ಟ್ರ, ಗುಜರಾತ್ ಮತ್ತು ಕರ್ನಾಟಕದಲ್ಲಿ ಮುಖ್ಯವಾಗಿ ಕಾಣುತ್ತಿದ್ದೇವೆ"[೪]. ಈ ದಲಿತ ಚಳುವಳಿಯು ಸಂಸದೀಯ ದಾರಿ ತುಳಿದಿರುವ ಬಗ್ಗೆ ಎಲ್. ಹನುಮಂತಯ್ಯನವರು

ಹೀಗೆ ಹೇಳಿದ್ದಾರೆ. "ದಲಿತರ ಹಕ್ಕುಗಳಿಗಾಗಿ ನಡೆಸುವ ಹೋರಾಟಗಳಲ್ಲಿ ಸಂವಿಧಾನದ ಚೌಕಟ್ಟಿನೊಳಗೆ ನಡೆಸುವ ಪ್ರತಿಭಟನೆ, ಚುನಾವಣೆಯ ಬಹಿಷ್ಕಾರ, ಮತಾಂತರದಿಂದ ದಲಿತರ ವಿಮೋಚನೆಯನ್ನು ಕಂಡು ಅಂಬೇಡ್ಕರ್‌ರ ದೃಷ್ಟಿಯಿಂದ ಮರುವಿಮರ್ಶೆ ಮಾಡುತ್ತಿರುವುದು ಸಂಘಟನೆಯ ದೃಷ್ಟಿಯಿಂದ ಆರೋಗ್ಯಕರವಾಗಿದೆ. ಆದರೂ ಮತಾಂತರ ಹಿಂದೂಧರ್ಮಕ್ಕೆ ಷಾಕ್ ಟ್ರೀಟ್‌ಮೆಂಟ್ ಕೊಡುವ ಏಕೈಕ ಅಸ್ತ್ರವಾಗಿ ದಲಿತರ ಬಳಿಯಲ್ಲಿ ಉಳಿದಿದೆ. ಅಂಬೇಡ್ಕರ್ ಬೂರ್ಜ್ವ ಪ್ರಜಾಪ್ರಭುತ್ವದ ಪರಿಧಿಯೊಳಗೆ ನಡೆಸಿದ ಹೋರಾಟವನ್ನು ಇನ್ನಷ್ಟು ಪ್ರಬಲವಾದ ಕ್ರಾಂತಿಕಾರಿ ಸಿದ್ಧಾಂತದ ಮೂಲಕ ಮುಂದುವರೆಸುವ ಅಗತ್ಯ ಇಂದಿನ ದಲಿತ ಸಂಘಟನೆಗಳ ಮೇಲಿದೆ"[೧೫]. ಇದು ಕರ್ನಾಟಕ ದಲಿತ ಚಳುವಳಿಯ ಮುಂದೆ ಇರುವ ವಸ್ತುಸ್ಥಿತಿಗೆ ಸಂಬಂಧಿಸಿದ್ದಾಗಿದೆ. ಹಾಗೆಯೇ ದಲಿತ ಚಳುವಳಿಯ ಸ್ವರೂಪ, ಆಶಯ ಮತ್ತು ಅದು ಹಿಡಿದಿರುವ ದಾರಿಯ ಬಗ್ಗೆ ಗಂಭೀರ ಚರ್ಚೆಗಳು ನಡೆದಿವೆ. ದಲಿತ ಚಳುವಳಿಯ ಪ್ರಮುಖ ಸಂಘಟನೆಯಾದ ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಜನತಾ ಪಕ್ಷದೊಂದಿಗೆ ಸೇರಿದ್ದು ಪ್ರಮುಖವಾಗಿ ಒಡಕನ್ನು ಹೊಂದಲು ಕಾರಣವಾಯಿತು. ಜನತಾಪಕ್ಷದೊಂದಿಗೆ ದ.ಸಂ.ಸ.ವು ಸೇರ್ಪಡೆಯಾದಾಗ ಬಿ.ಕೃಷ್ಣಪ್ಪನವರು ದೇವನೂರು ಮಹಾದೇವ ಅವರಿಗೆ ಬರೆದ ಪತ್ರದಲ್ಲಿ ಅವರ ನಿಲುವುಗಳು ಸ್ಪಷ್ಟವಾಗಿವೆ. "ದಸಂಸ ಮೂಲತಃ ಒಂದು ಚಳುವಳಿ ಎಂದು ಭಾವಿಸಿದ್ದೇನೆ. ರಾಜಕಾರಣಕ್ಕೂ-ಹೋರಾಟಕ್ಕೂ ಬಹಳ ದೂರ. ರಾಜಕಾರಣ ಮಾಡಹೊರಟವರು ಚಳುವಳಿ ಹೋರಾಟಗಳನ್ನು ಕೊಂದಿದ್ದಾರೆ ಎನ್ನುವುದಕ್ಕೆ ಇತಿಹಾಸ ಅಸಂಖ್ಯ ಉದಾಹರಣೆಗಳನ್ನು ಒದಗಿಸಿದೆ. ತಾವು ಅಂತ ಉದಾಹರಣೆಗಳನ್ನು ಪರಿಶೀಲಿಸಬೇಕಾಗುತ್ತದೆಂದು ನನ್ನ ಆಗ್ರಹ"[೧೬]. ಈ ಹೊತ್ತಿಗೆ ಪ್ರಬಲವಾಗಿದ್ದ ದಲಿತ ಸಂಘಟನೆಗೆ ರಾಜಕೀಯ ಅಸ್ತಿತ್ವ ಅಗತ್ಯವಿತ್ತು. ದ.ಸಂ.ಸ.ದ ರಾಜ್ಯ ಸಮಿತಿಯ ತೀರ್ಮಾನವು ಕಾಂಗ್ರೆಸ್ ಸರ್ಕಾರ ಹೇರಿದ್ದ ತುರ್ತು ಪರಿಸ್ಥಿತಿ, ಅದರ ಪರಿಣಾಮದ ವಿರುದ್ಧವಾಗಿತ್ತು. ತಮ್ಮ ಜವಾಬ್ದಾರಿಯಲ್ಲಿ ಹೊಸ ರಾಜಕೀಯ ಶಕ್ತಿಗಳಿಗೆ ಬೆಂಬಲಿಸಿತು. "ದಲಿತ ಸಂಘಟನೆಯು ಆನಂತರದಲ್ಲೂ ಪಕ್ಷ ರಾಜಕೀಯವನ್ನು ವಿಮರ್ಶಾತ್ಮಕವಾಗಿ ನೋಡುವ, ಪ್ರಶ್ನಿಸುವ ತತ್ವಕ್ಕಾಗಿ ಹೋರಾಡುವ ಮನೋಧರ್ಮವನ್ನೂ ಬೆಳಸಿಕೊಳ್ಳಬೇಕಿತ್ತು. ಅದರ ಬದಲು ಆಳುವ ಪಕ್ಷದ ಆಸ್ಥಾನ ಗುರುಗಳ ರೀತಿಯಲ್ಲಿ ಉಪದೇಶ ಮಾಡುತ್ತಾ, ಸಲಹೆ ನೀಡುತ್ತಾ ಕಾರ್ಯಕರ್ತರ ದಲಿತರ ನೋವು ದುಮ್ಮಾನಗಳನ್ನೂ ಸರಿಯಾಗಿ ಪ್ರತಿನಿಧಿಸಲು ಸೋತಿದ್ದು ಪ್ರಥಮ ಸೋಲಾಯಿತು. ಸಂಘಟನೆಯ ಶಕ್ತಿಯನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳಲು ಬಯಸಿದ ಪಕ್ಷರಾಜಕಾರಣ ಒಡ್ಡಿದ ಮೋಹಜಾಲದಲ್ಲಿ ಮುಳುಗಿದ ದಸಂಸದ ನಾಯಕರು ಅಧಿಕಾರ ಮತ್ತು ಭೋಗದ ಲಾಲಸೆಯಲ್ಲಿ ದಲಿತರನ್ನು ಮರೆತರು. ಸಂಘಟನೆ ಮತ್ತು ಅದರ ಮೂಲ ಶಕ್ತಿಯಾದ ಜನತೆಯ ನಡುವೆ ಕಂದರ ಏರ್ಪಟ್ಟಿತು. ಪಕ್ಷ ರಾಜಕೀಯ ಶಕ್ತಿಗಳು ನಾಯಕತ್ವದ ಕ್ರೂರತೆಯನ್ನು ಅನುಭವಿಸುತ್ತಿದ್ದ ದಲಿತರನ್ನು ಕಾರ್ಯಕರ್ತರನ್ನು ತಮ್ಮೆಡೆಗೆ ಸೆಳೆದುಕೊಳ್ಳುವ ಪ್ರಯತ್ನದಲ್ಲಿ ಸಾಕಷ್ಟು ಯಶಸ್ವಿಯಾದವು"[೧೭]. ಶಕ್ತಿ ರಾಜಕಾರಣದ ಪ್ರವೇಶವು ದಲಿತ ಸಂಘಟನೆಯಲ್ಲಿ ಸಣ್ಣಪುಟ್ಟ ಒಡಕುಗಳಾಗಿಯೇ ಮುಂದುವರೆದು ರಾಜಕೀಯ ಪಕ್ಷದೊಂದಿಗೆ ಸೇರಿಕೊಳ್ಳತೊಡಗಿದವು. ಹಾಗೆ ಜನತಾ ಪಕ್ಷ ಇಂದು ದಳ (ಯು) ಮತ್ತು (ಎಸ್), ಬಿ.ಎಸ್.ಪಿ, ಕಾಂಗ್ರೆಸ್ ಹೀಗೆ ರಾಜಕೀಯ ಪಕ್ಷದೊಂದಿಗೆ ಪರೋಕ್ಷವಾಗಿ ಬೆಂಬಲವನ್ನು ನೀಡುತ್ತಾ ಅದಕ್ಕೆ ತಕ್ಕನಾದ ಕಾರಣಗಳನ್ನು ದಲಿತರಿಗೆ ಮತ್ತು ಜನತೆಗೆ ಕೊಡುತ್ತಾ ಬಂದರು. ಹೀಗೆ ದಲಿತ ವಿಮರ್ಶೆಯ ಚಿಂತನೆಗಳು ಚರ್ಚೆಗೆ, ವಿವೇಚನೆಗೆ ಒಳಗುಮಾಡುವಷ್ಟು ಗಟ್ಟಿಯಾಗಿವೆ.

ಮತ್ತೆ ಕೆಲವು ಕೃತಿಗಳನ್ನು ನೋಡುವುದಾದರೆ 'ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನ', ಎಂಬ ಪುಸ್ತಕವನ್ನು ಅರವಿಂದ ಮಾಲಗತ್ತಿಯವರು ಬರೆದಿದ್ದಾರೆ. ಇದರಲ್ಲಿ ದಲಿತ ಸಾಹಿತ್ಯದ ಬಗ್ಗೆ, ದಲಿತ ಸಾಹಿತ್ಯ ಚಳುವಳಿಯ ಬಗ್ಗೆ, ದಲಿತರ ಬಗ್ಗೆ ತಾತ್ವಿಕವಾಗಿ ಚರ್ಚೆಯನ್ನು ಬೆಳಸಿದ್ದಾರೆ. ದಲಿತರು ಮತ್ತು ದಲಿತೇತರು ದಲಿತರ ಬಗ್ಗೆ ಬರೆದ ಸಾಹಿತ್ಯ ಅದು ದಲಿತ ಸಾಹಿತ್ಯವಾಗುತ್ತದೆ. ಎಂಬ ನಿಲುವಿನ ಮೇಲೆ ಚರ್ಚಿಸಿದ್ದಾರೆ. ಇಲ್ಲಿ ದಲಿತರ ಬದುಕಿನ ಸೂಕ್ಷ್ಮತೆಗಳು ಬಹಳ ಮುಖ್ಯ. ಅದು ದಲಿತರ ಬದುಕಿನ ಒಡಲಿಂದ ಮೂಡಿ, ಸಾಹಿತ್ಯ ಜಗತ್ತನ್ನು ಅನಾವರಣಗೊಳಿಸಬೇಕು ಎಂಬುದು ಮಾಲಗತ್ತಿಯವರ ಚಿಂತನದ ನೆಲೆಯಾಗಿದೆ. ಇವರು ಮತ್ತೊಂದು ಕಿರುಹೊತ್ತಿಗೆ 'ದಲಿತ ಸಾಹಿತ್ಯ ಪ್ರವೇಶಿಕೆ' ಎಂಬುದನ್ನು ಪ್ರಕಟಿಸಿದ್ದಾರೆ. ಇದರಲ್ಲೂ ದಲಿತ, ದಲಿತ ಪದ, ದಲಿತ ಪ್ರಜ್ಞೆ ದಲಿತ ಸಾಹಿತ್ಯದ ಸ್ವರೂಪ, ಪ್ರೇರಣೆ ಮತ್ತು ಪ್ರಭಾವ, ದಲಿತ ಸಾಹಿತ್ಯದ ನೆಲೆ ಹೀಗೆ ಹಲವು ವಿಷಯಗಳನ್ನೂ ಒಳಗೊಂಡು ಅದರ ಅರ್ಥವಿವರಣೆಯನ್ನು ಕೊಟ್ಟಿದ್ದಾರೆ.

'ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ' ಮ.ನ.ಜವರಯ್ಯನವರ ಸಂಶೋಧನೆ ಕೃತಿ. ದಲಿತ ಬಂಡಾಯದ ನೆಲೆಗಳನ್ನು ಅವುಗಳ ತಾತ್ವಿಕ ಚರ್ಚೆಯನ್ನು ಪ್ರಾಚೀನ ಕನ್ನಡ ಸಾಹಿತ್ಯದಿಂದ ಹಿಡಿದು ಆಧುನಿಕ ಕನ್ನಡ ಸಾಹಿತ್ಯದವರೆಗೂ ಗುರ್ತಿಸಿದ್ದಾರೆ. ಅದಲ್ಲದೆಯೂ ಲೇಖಕರ ಧೋರಣೆಯನ್ನು ಸಾಹಿತ್ಯ ಪರಂಪರೆಯ ಸಾಹಿತ್ಯದಲ್ಲಿನ ಜನ ವಿರೋಧಿ ನೆಲೆಗಳನ್ನು ಗುರ್ತಿಸಿದ್ದಾರೆ. ಅಲ್ಲದೆಯೂ ಅದರಲ್ಲಿ ಜನಪದ ನಿಲುವುಗಳನ್ನು, ಪ್ರಗತಿಪರ ಧೋರಣೆಗಳನ್ನು ಗುರ್ತಿಸಿದ್ದಾರೆ.

'ದಲಿತ ವರ್ಗದ ಶರಣರು' ಮ.ನ.ಜವರಯ್ಯನವರ ಮತ್ತೊಂದು ಸಂಶೋಧನೆ ಕೃತಿ. ಇದರಲ್ಲಿ ವೈದಿಕ ವಿರೋಧಿ ನೆಲೆಯಲ್ಲಿ ನಿರ್ವಚಿಸಿಕೊಳ್ಳಲು ಶೈವ ಮತ್ತು ವೀರಶೈವ ಧರ್ಮಗಳನ್ನು ಒಳಪಡಿಸಿದ್ದಾರೆ. ಜಾತಿ ಸಮುದಾಯಗಳಾದ ಹೊಲೆಯ, ಮಾದಿಗ, ಕುರುಬ, ಅಗಸ, ಬೆಸ್ತ, ಕ್ಷೌರಿಕ ಮುಂತಾದವರನ್ನು ದಲಿತ ನೆಲೆಯಲ್ಲಿ ನಿರ್ವಚಿಸಿಕೊಂಡಿದ್ದಾರೆ. ಹತ್ತು ಜನ ವಚನಕಾರರ ಜೀವನದ ಹಿನ್ನೆಲೆಯನ್ನು, ಅವರ ಬದುಕಿನ ಸಮಕಾಲೀನ ವಸ್ತುಸ್ಥಿತಿಯನ್ನು ಅವರವರ ವಚನಗಳ ತಾತ್ವಿಕ ನಿಲುವುಗಳಲ್ಲಿ ಚರ್ಚಿಸಿದ್ದಾರೆ.

'ಬಹುಜನ ಸಮಾಜ V/S ಬ್ರಾಹ್ಮಣ್ಯ' ಇದು ಸಿ.ಕೆ. ಮಹೇಶ್‌ರ ಕೃತಿ. ಇದರಲ್ಲಿ ಕಾನ್ಶಿರಾಂರನ್ನು ಪರಿಚಯಿಸುತ್ತಾ ಅವರ ರಾಜಕೀಯ ನಿಲುವಿನ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಬಿ.ಎಸ್.ಪಿ. ಪಕ್ಷದ ಪರಿಚಯವನ್ನು ವಿಚಾರಧಾರೆಯಂತೆ ಅದರ ಸ್ವರೂಪ ಮತ್ತು ಕಾರ್ಯಾಚರಣೆಗಳ ವಿವರಗಳನ್ನು ಹೇಳಿದ್ದಾರೆ.

'ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್' ಇದು ಗಂಗಾರಾಂ ಚಂಡಾಳರ ಕೃತಿ. ಕರ್ನಾಟಕ ದಲಿತ ಚಳುವಳಿಯ ಹಿನ್ನೆಲೆಯನ್ನು ವಿವರಿಸುತ್ತಾ ಅದಕ್ಕೆ ಅಂಬೇಡ್ಕರ್ ಅವರ ಪ್ರಭಾವವನ್ನು ಗುರ್ತಿಸಿದ್ದಾರೆ. ದಲಿತ ಚಳುವಳಿಯ ಮತ್ತು ದಲಿತ ಸಾಹಿತ್ಯದ ಸ್ವರೂಪದ ಕೆಲವು ಅಂಶಗಳನ್ನು ಇಲ್ಲಿ ಚರ್ಚೆಗೆ ಒಳಪಡಿಸಿದ್ದಾರೆ.

‘ದಲಿತ ಚಳುವಳಿ ಒಂದು ಅವಲೋಕನ’ ಡಾ. ವಿ. ಮುನಿವೆಂಕಟಪ್ಪ ಅವರು ಸಂಪಾದಿಸಿರುವ ಕೃತಿ ಇದು. ಇದರಲ್ಲಿ ಒಟ್ಟು ೧೯ ಲೇಖನಗಳಿವೆ. ಈ ಲೇಖನಗಳಲ್ಲಿ ಮುಖ್ಯವಾಗಿ ಎರಡು ಪ್ರಧಾನ ಚಿಂತನಾಕ್ರಮಗಳು ಕಂಡುಬರುತ್ತವೆ. ಅವುಗಳು ದಲಿತ ಚಳುವಳಿ ನಡೆದು ಬಂದ ತಾತ್ವಿಕ ವಿಚಾರಧಾರೆ ಆಗಿದೆ. ಮೊದಲನೆಯದು ದಲಿತ ಚಳುವಳಿಯ ಚಿಂತನಾಕ್ರಮವನ್ನು, ಅದಕ್ಕೆ ಪ್ರೇರಣೆ, ಪ್ರಭಾವ ಮತ್ತು ಅದರ ಅಗತ್ಯವನ್ನು ವಿವರಿಸುವುದು ಆಗಿದೆ. ಎರಡನೆಯದು ದಲಿತ ಚಳುವಳಿ ನಡೆದು ಬಂದ ದಾರಿಯ ಎಡರು ತೊಡರುಗಳನ್ನು ಗುರ್ತಿಸುವುದು ಆಗಿದೆ. ದಲಿತ ಚಳುವಳಿಯ ನಾಯಕರು / ಕಾರ್ಯಕರ್ತರು ಹಿಡಿದ ಶಕ್ತಿರಾಜಕಾರಣದ ಅಧಿಕಾರದ ವಿರೋಧವು ಈ ಕೃತಿಯ ಲೇಖನಗಳಲ್ಲಿವೆ. ಈ ವಿರೋಧವನ್ನು ಗುರ್ತಿಸಿಕೊಂಡು ದಲಿತ ಚಳುವಳಿಯು ಕಂಡುಕೊಳ್ಳಬೇಕಾದ ದಾರಿಯನ್ನು ಕುರಿತ ತಾತ್ವಿಕ ವಿಚಾರಗಳನ್ನು ಈ ಕೃತಿಯ ಲೇಖನಗಳು ಹೊಂದಿವೆ.

‘ಸೊಲ್ಲು’ ಮೊಗಳ್ಳಿ ಗಣೇಶರ ಸಂಸ್ಕೃತಿ ವಿಮರ್ಶೆ ಕೃತಿ. ಈ ಕೃತಿಯಲ್ಲಿ ಲೇಖಕರು ಸಂಸ್ಕೃತಿ ವಿಮರ್ಶೆಯನ್ನು ಮಾಡುತ್ತಾ; ಅವುಗಳನ್ನು ಹಲವು ನೆಲೆಗಳಲ್ಲಿ ವಿವರಿಸಲು ಪ್ರಯತ್ನಿಸಿದ್ದಾರೆ. ನಮ್ಮ ನಡುವಿನ ಸಂಕಥನಗಳ ವಿವರಣೆ ಮತ್ತು ಮೌಖಿಕ ಪರಂಪರೆಯ ಒಳನೋಟಗಳನ್ನು ಇಲ್ಲಿ ಸೂಕ್ಷ್ಮವಾಗಿ ಗ್ರಹಿಸಿದ್ದಾರೆ. ಇವುಗಳು ಒಂದು ಕಡೆ ಜಾನಪದ ನೆಲೆಯಲ್ಲಿ ನಿರ್ವಹಣೆ ಕಂಡುಬಂದರೂ; ಆ ನೆಲೆಯಲ್ಲಿ ಬದುಕಿನ ಹಲವು ಬಗೆಯ ಮಾನವ ಸಂಬಂಧದ ಬೌದ್ಧಿಕ ಮತ್ತು ಭೌತಿಕ ಹೊಂದಾಣಿಕೆಯ ಸಂಘರ್ಷ ಚಿಂತನೆಯನ್ನು ನಡೆಸಿದ್ದಾರೆ. ಅವುಗಳು ಆಧುನಿಕ ಸಂದರ್ಭದಲ್ಲಿ ತಾಕಲಾಟಗಳನ್ನು ತಾತ್ವಿಕ ಸ್ವರೂಪದಲ್ಲಿ ಇಡಲು ಪ್ರಯತ್ನಿಸಿದ್ದಾರೆ. ಕರ್ನಾಟಕ ಸಂಸ್ಕೃತಿ, ಸಂಸ್ಕೃತಿಯಲ್ಲಿನ ಅಪರಾಧಿತನದ ಬಗ್ಗೆ, ಸಂಕಥನಗಳ ಬಗ್ಗೆ, ದಲಿತರ ರಾಷ್ಟ್ರೀಯತೆಯ ಬಗ್ಗೆ ಸಸ್ಯ ಪ್ರಾಣಿ ಜೀವರಾಶಿಗಳ ಬಗ್ಗೆ-ಹೀಗೆ ಹಲವು ವಿಷಯಗಳ ಬಗ್ಗೆ ಚರ್ಚೆಯನ್ನು ಮಾಡಿದ್ದಾರೆ. ಹಾಗೆಯೇ ವ್ಯಕ್ತಿಸಂಬಂಧದ ಜ್ಞಾನದ ವಿಕಾಸವು ಸಂಸ್ಕೃತಿಯ ಬೆಳವಣಿಗೆಯ ಚರ್ಚೆಯು ಇಲ್ಲಿದೆ.

‘ಕಥನ’ ಮೊಗಳ್ಳಿ ಗಣೇಶರ ಮತ್ತೊಂದು ಕೃತಿ. ಈ ಕೃತಿ ಕಥನ ಪ್ರಬಂಧವನ್ನು ಹೊಂದಿದೆ. ಇಲ್ಲಿ ಲೇಖಕರು ಹೇಳಿಕೊಳ್ಳುವಂತೆ “ಕಥನದ ನೆಪದಲ್ಲಿ ಸ್ವತಃ ಲೇಖಕನೇ ಅರಿವನ್ನು ಪಡೆದ ಹಾಗೆಯೇ ತನ್ನ ಅನುಭವವನ್ನು ರೂಪಾಂತರಿಸುವ ತನ್ನ ಕಾಲವನ್ನು ಸಮುದಾಯವನ್ನು ಪ್ರತಿಪಾದಿಸುವ ನಿರೂಪಿಸುವ ಕಾಯಕವಾಗಿ ಇರುತ್ತದೆ. ಕಥೆಯ ಭಾರವನ್ನು ಪ್ರಬಂಧ ಹೊರಲಾರದಿದ್ದರೂ ಕಥೆಯೆಂಬ ಬಂಡೆಯನ್ನು ಮೀಟಿ ಉರುಳಿಸುವ ಸನ್ನೆಗೋಲಿನಂತೆ ಪ್ರಬಂಧವಿರುತ್ತದೆ”[೧೮] ಅಂತೆಯೇ ಇಲ್ಲಿನ ಕಥನಗಳನ್ನು ಕಥನ ಮಾದರಿಯಲ್ಲಿ ನೋಡಬಹುದು. ಇಲ್ಲಿ ಒಟ್ಟು ೨೪ ಕಥನ ಪ್ರಬಂಧಗಳಿವೆ.

‘ದೇಶಿ’ ಮೊಗಳ್ಳಿ ಗಣೇಶರ ಮತ್ತೊಂದು ಕೃತಿ. ಇದರಲ್ಲಿ ಜಾನಪದ ಅಧ್ಯಯನಗಳ ದೇಶಿಯ ನೆಲೆಗಳು ಕಂಡು ಬಂದಿವೆ. ಇಲ್ಲಿ ಜಾನಪದ ಸಾಹಿತ್ಯವನ್ನು, ಅಥವಾ ಮೌಖಿಕ ಪರಂಪರೆಯ ಸಾಹಿತ್ಯವನ್ನು ಪಠ್ಯವನ್ನಾಗಿ ನೋಡುವ ಕ್ರಮವಿದೆ. ಈ ಪಠ್ಯದಲ್ಲಿ ಮೌಖಿಕ ಪರಂಪರೆಯ ನೆಲೆಗಳನ್ನು, ಅವುಗಳ ಸಂಸ್ಕೃತಿಯನ್ನು ಗುರ್ತಿಸಲಾಗಿದೆ. ಇವುಗಳನ್ನು ಆಧುನಿಕ ಸಂದರ್ಭದಲ್ಲಿ ಮುಖಾಮುಖಿ ಮಾಡಿ, ದೇಶೀಯ ನೆಲೆಗಳ ಅಧ್ಯಯನ ಕ್ರಮಗಳಲ್ಲಿ ವಿವರಣೆಗಳನ್ನೂ ಕೊಡಲಾಗಿದೆ.

'ಜನಪದ ಸಾಹಿತ್ಯ : ದಲಿತ ಬದುಕು ಮತ್ತು ಸಂಸ್ಕೃತಿ' ಡಾ. ಅರ್ಜುನ ಗೊಳಸಂಗಿಯವರ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ. ಇವರಲ್ಲಿ ದಲಿತ ಸಮುದಾಯಗಳಾದ ಹೊಲೆಯರು, ಮಾದಿಗರು, ಡೊಂಬರು, ಡೋರರು, ಕಿಳ್ಳೆಕ್ಯಾತರು, ಸುಡುಗಾಡು ಸಿದ್ದರು, ಡಕ್ಕಲಿಗರು, ಕೊರವರು, ಸಮಗಾರರು, ಒಡ್ಡರು, ಇವರುಗಳ ಬದುಕು ಮತ್ತು ಸಂಸ್ಕೃತಿಯನ್ನು ಕುರಿತು ಅಧ್ಯಯನವನ್ನು ನಡೆಸಿದ್ದಾರೆ. ಇವರ ನಂಬಿಕೆ ಆಚರಣೆ, ಕಲೆ, ಸಂಪ್ರದಾಯ ಮತ್ತು ಹಬ್ಬಹರಿದಿನಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದಾರೆ. ಈ ಅಧ್ಯಯನವು ಉತ್ತರ ಕರ್ನಾಟಕಕ್ಕೆ ಸೀಮಿತಗೊಂಡು ಬೀದರ್, ಗುಲಬರ್ಗಾ, ರಾಯಚೂರು, ಬಳ್ಳಾರಿ, ಧಾರವಾಡ, ಬೆಳಗಾವಿ, ಬಿಜಾಪುರ ಜಿಲ್ಲೆಗಳನ್ನು ಒಳಗೊಂಡಿವೆ.

'ಸದನದಲ್ಲಿ ಸಿದ್ಧಲಿಂಗಯ್ಯ' ಕೃತಿಯನ್ನು ದೊಡ್ಡಹುಲ್ಲೂರು ರುಕ್ಕೋಜಿ ಸಂಪಾದಿಸಿದ್ದಾರೆ. ಈ ಕೃತಿಯನ್ನು ಸಂಪಾದಿಸುವ ಉದ್ದೇಶವನ್ನು ರುಕ್ಕೋಜಿ ಹೀಗೆ ಹೇಳಿದ್ದಾರೆ. "ಕಳೆದ ಆರು ವರ್ಷಗಳಲ್ಲಿ 'ಸಿದ್ಧಲಿಂಗಯ್ಯನವರು ಏನೂ ಮಾಡಲಿಲ್ಲ' ಎಂದು ಟೀಕಿಸುವವರು ಇದನ್ನು ವಿಶೇಷವಾಗಿ ಗಮನಿಸಬೇಕು. ಈಗಿನ ಗಾತ್ರದಲ್ಲಿ ೫೦೦ ಪುಟಗಳಾಗುವಷ್ಟು ಸಾಮಗ್ರಿ ನನ್ನ ಎದುರು ಇತ್ತು. ಅದರಲ್ಲಿ ವೈವಿಧ್ಯದ ದೃಷ್ಟಿಯಿಂದ ಮುಖ್ಯವಾದದ್ದನ್ನು ಮಾತ್ರ ಆರಿಸಿಕೊಂಡು ಇತರ ಹತ್ತಾರು ವಿಷಯಗಳನ್ನು, ಲೆಕ್ಕವಿಲ್ಲದಷ್ಟು ಮಧ್ಯ ಪ್ರವೇಶದ ಪ್ರಸಂಗಗಳನ್ನು ಕೈಬಿಟ್ಟಿದ್ದೇನೆ. ಇಲ್ಲಿ ನಾನು ಬರೆದಿರುವ ಈ ನಾಲ್ಕು ಹಿನ್ನೆಲೆಯ ಮಾತುಗಳು ಕವಿಯ ಭಾಷಣದ ಆಶಯಗಳಾಗಲಿ, ಪುಸ್ತಕಕ್ಕೆ ಪ್ರವೇಶಿಕೆಯಾಗಲಿ ಅಲ್ಲ. ಈ ಬಗೆಯದೇನಿದ್ದರೂ ಅದನ್ನು ಆಯಾ ಭಾಷಣಗಳೇ ಹೇಳುತ್ತವೆ. ಆದರೆ ಇವೆಲ್ಲಕ್ಕೂ ಇದ್ದಂಥ ಒಂದು ವೇದನೆಯ ಹಿನ್ನೆಲೆಯನ್ನು ಪ್ರಸ್ತಾಪಿಸುವುದಷ್ಟೇ ಇಲ್ಲಿ ನನ್ನ ಉದ್ದೇಶ"[೯]. ಇಲ್ಲಿಯ ಭಾಷಣಗಳು ಅಥವಾ ಚರ್ಚೆಗಳು ಸಭಾಪತಿ, ಉಪಸಭಾಪತಿ ಅಥವಾ ಮಂತ್ರಿ ಮಂಡಲದ ಎದುರು ಮಂಡಿಸಿದವುಗಳು. ಇಲ್ಲಿ ಇಪ್ಪತ್ತೊಂದು ವಿಷಯಕ್ಕೆ ಸಂಬಂಧಿಸಿದಂತೆ ನಡೆದ ಚರ್ಚೆ ದಾಖಲುಗೊಂಡಿದೆ. ಈ ಚರ್ಚೆಯಲ್ಲಿ ಸಿದ್ದಲಿಂಗಯ್ಯನವರ ಚರ್ಚೆಯ ವಿಷಯ ಮಂಡನೆಯು ಬಹು ಮುಖ್ಯವಾಗಿದೆ. ಈ ಚರ್ಚೆಯಲ್ಲಿ ಅಂತರ್ಜಾತಿ ವಿವಾಹ, ಗಿರಿಜನರ ದುರಂತ ಬದುಕು, ಬಾಬರಿ ಮಸೀದಿಯ ನಿರ್ನಾಮ, ಅಂಗನವಾಡಿ ಕಾರ್ಯಕರ್ತೆಯರ ಸಮಸ್ಯೆಗಳು, ದಲಿತರ ಮೇಲೆ ನಡೆದ ಹಲ್ಲೆ, ಬದನವಾಳು ಮಾರಣಹೋಮ, ಮೀಸಲಾತಿ ಕುರಿತು ಹೀಗೆ ಹಲವು ವಿಷಯಗಳು ಚರ್ಚೆಗೆ ಒಳಗೊಂಡಿವೆ. ಸಿದ್ಧಲಿಂಗಯ್ಯನವರು ಜನರೊಂದಿಗೆ ಇದ್ದು ಇಂತಹ ಸಮಸ್ಯೆಯನ್ನು ಎತ್ತಿಕೊಂಡು ಹೋರಾಡಿದಾಗ ಸಿಕ್ಕ ಪುರಸ್ಕಾರ ಅಥವಾ ಗೌರವವು ಎಂ.ಎಲ್.ಸಿ ಆದಾಗ ಸಿಗಲಿಲ್ಲ. ಅಲ್ಲಿಯ ಚರ್ಚೆಗಳು ಗೌಣವಾದವು. ಕಾರಣಗಳಲ್ಲೊಂದಂಶವನ್ನು ಹೀಗೆ ಗುರ್ತಿಸಬಹುದು. ದಲಿತರ ಸಮಸ್ಯೆ ಮತ್ತು ಅವರ ಹೋರಾಟವು ಅತ್ಯಂತ ಪ್ರಾಥಮಿಕ ಮಟ್ಟದ್ದು. ಆದ್ದರಿಂದ ಜನರೊಂದಿಗೆ ಜನನಾಯಕರಾಗಿದ್ದಾಗ ಅವರ ಮಾತಿನ ಬರಹದ ತೀವ್ರತೆಯ ಸ್ವರೂಪಕ್ಕೆ ಸಿಕ್ಕ ಪುರಸ್ಕಾರವು; ಸಮುದಾಯವನ್ನು ಬಿಂಬಿಸುವ ಶಕ್ತಿರಾಜಕಾರಣದ ನಾಯಕರಾದಾಗ ಸಿಗಲಿಲ್ಲ. ಇಲ್ಲಿ ಸಿದ್ಧಲಿಂಗಯ್ಯನವರಿಗೆ ಸಮುದಾಯದೊಂದಿಗೆ ಒಂದು ಅಂತರವೇರ್ಪಟ್ಟಿತು. ಆದ್ದರಿಂದ ಶಕ್ತಿ ರಾಜಕಾರಣದಲ್ಲಿನ ಮಾತುಗಳು ಗೌಣವಾಗಿ ಜನಸಾಮಾನ್ಯರಲ್ಲಿ ಕಂಡುಬಂದವು.

'ಅವತಾರಗಳು' ಸಿದ್ಧಲಿಂಗಯ್ಯನವರ ಮತ್ತೊಂದು ಕೃತಿ. ಇದು ವೈಚಾರಿಕ ಕೃತಿ. ಇಲ್ಲಿ ವೈಚಾರಿಕತೆಯನ್ನು ನಾಸ್ತಿಕತೆಯ ನೆಲೆಯಲ್ಲಿ ನಿಂತು ದೇವರು ಮತ್ತು ಮನುಷ್ಯರ ನಡುವಿನ ಮನುಷ್ಯನ ಪ್ರವೃತ್ತಿಯನ್ನು ಇಲ್ಲಿ

ವಿವೇಚಿಸಲಾಗಿದೆ. ಇದು ಒಂದು ರೀತಿಯಲ್ಲಿ ವಿಡಂಬನೆ ಕೃತಿಯೂ ಹೌದು. ದೇವರುಗಳ ಬಗೆಗಿನ ನಂಬಿಕೆಯನ್ನು, ಮತ್ತು ಅವುಗಳ ಅವತಾರಗಳನ್ನು ಅವುಗಳ ಹಿನ್ನೆಲೆ ಮತ್ತು ಪುರಾಣಗಳನ್ನು ವೈಚಾರಿಕ ನೆಲೆಯಲ್ಲಿ ಇಲ್ಲಿ ನೋಡಲಾಗಿದೆ. ಇಲ್ಲಿ ಶಿಷ್ಟ ಮತ್ತು ಪರಿಶಿಷ್ಟ ದೇವರುಗಳ ವಿಭಿನ್ನತೆಯನ್ನು ಗುರ್ತಿಸಿದ್ದಾರೆ. ಅವುಗಳಲ್ಲಿ ಕೆಲವು ಜಾನಪದ ಅಧ್ಯಯನಗಳ ನೆಲೆಯಂತೆ ಇವೆ. ದೇವರಿಗೆ ಅಂಟುಬಿದ್ದ ಭಕ್ತರ ಅವಾಂತರಗಳನ್ನು ಮತ್ತು ದೇವರ ನಂಬಿಕೆಗಳಲ್ಲಿನ ಅಜ್ಞಾನಗಳನ್ನು ವಿಡಂಬಿಸಿ ಅವುಗಳಿಗೆ ತಾತ್ವಿಕವಾದ ಅರ್ಥ ನಿರೂಪಣೆಯನ್ನು ನೀಡಲಾಗಿದೆ.

'ಗ್ರಾಮ ದೇವತೆಗಳು' ಇದು ಡಾ. ಸಿದ್ಧಲಿಂಗಯ್ಯನವರ ಸಂಶೋಧನ ಕೃತಿ. ಈ ಕೃತಿಯಲ್ಲಿ ಕರ್ನಾಟಕ ಗ್ರಾಮ ದೇವತೆಗಳನ್ನು ಸಂಶೋಧನೆಗೆ ಒಳಪಡಿಸಲಾಗಿದೆ. 'ಅವತಾರಗಳು' ಕೃತಿಯಲ್ಲಿ ದೈವಗಳನ್ನು ವೈಚಾರಿಕ ನೆಲೆಯಿಂದ ವಿಡಂಬನೆಗೆ ಒಳಪಡಿಸಿದರೆ; ಈ ಕೃತಿಯಲ್ಲಿ ಗ್ರಾಮದೇವತೆಗಳನ್ನು ಒಂದು ಅಧ್ಯಯನದ ಶಿಸ್ತಿಗೆ ಒಳಪಡಿಸಲಾಗಿದೆ. ಗ್ರಾಮದೇವತೆಗಳನ್ನು ಕುರಿತ ಪುರಾಣ, ಐತಿಹ್ಯ, ಆಚರಣೆ, ಅವುಗಳ ವರ್ಗೀಕರಣ ಮತ್ತು ವೈಶಿಷ್ಟ್ಯತೆಯನ್ನು ಚರ್ಚಿಸಿದ್ದಾರೆ. ಬದಲಾಗುತ್ತಿರುವ ಸಾಂಸ್ಕೃತಿಕ ಪರಿಸರದಲ್ಲಿ ಗ್ರಾಮದೇವಗಳ ಆಚರಣಾತ್ಮಕ ಸ್ವರೂಪಗಳು ಹೇಗೆ ಭಿನ್ನವಾಗುತ್ತವೆ ಎಂಬುದನ್ನು ಉದಾಹರಣೆಯ ಮೂಲಕ ವಿವರಿಸಿದ್ದಾರೆ. "ಆಧುನಿಕ ನಾಗರಿಕತೆಯ ತರ್ಕ ಒಂದು ಏಕರೂಪೀ ಜೀವನ ಕ್ರಮವನ್ನು ರೂಪಿಸುವುದಾಗಿದೆ. ಹಳೆಯ ಜ್ಞಾನ ವ್ಯವಸ್ಥೆಯ ಭಾವಲಯಗಳು ತೀವ್ರ ರೀತಿಯ ಹಿಂಸೆಯನ್ನು ಅನುಭವಿಸಿ ಕಣ್ಮರೆಯಾಗುತ್ತಿವೆ.(ಡಿ.ಆರ್.ನಾಗರಾಜ್, ಶಕ್ತಿ ಶಾರದೆಯ ಮೇಳ: ಪುಟ: ೩) ಗ್ರಾಮ ದೇವತೆಗಳು ಶ್ರೀಘ್ರವಾಗಿ ಕಣ್ಮರೆಯಾಗುತ್ತಿರುವುದು ಕೂಡ ಈ ನಾಗರಿಕತೆಯ ತರ್ಕದಲ್ಲೇ ನೋಡಬೇಕಾಗಿದೆ. ಆಧುನಿಕ ಬಂಡವಾಳಶಾಹಿ ನಾಗರಿಕತೆ ತನಗಿಂತ ಭಿನ್ನವಾದ ಲೋಕಗ್ರಹಿಕೆ, ನಂಬಿಕೆ, ಆಚರಣಾ ಕ್ರಮಗಳನ್ನು ನಿರ್ದಯವಾಗಿ ಹಿಸುಕಿಹಾಕುತ್ತಿದೆ"[೨೦]. ಆಧುನಿಕತೆಯನ್ನು ಒಪ್ಪಿಕೊಳ್ಳುವ ಕಡೆ ಗ್ರಾಮದೇವತೆಗಳು ಆರಾಧಕಾ ಪ್ರವೃತ್ತಿ ಬಿಗಿಗೊಂಡು ಪರಂಪರೆಯ ಮುಂದುವರಿಕೆಯಲ್ಲಿ ಸಾಗಿಬರುತ್ತಿದೆ. ಈ ಆರಾಧನಾಕ್ರಮಗಳ ವ್ಯಕ್ತಿಗಳು ಸಮುದಾಯಗಳ ಹಿನ್ನೆಲೆಯಲ್ಲಿ ಸಂಪ್ರದಾಯಗಳ ಚೌಕಟ್ಟಲ್ಲಿ ತಮ್ಮದಾಗಿಸಿಕೊಂಡಿರುವುದು ಇಲ್ಲಿ ಕಂಡುಬಂದಿದೆ. ಸಂಸ್ಕೃತಿಯ ಅಧ್ಯಯನಕ್ಕೆ ಪೂರಕವಾಗುವಂತೆ ಸಿದ್ಧಲಿಂಗಯ್ಯನವರು ಗ್ರಾಮದೇವತೆಗಳ ಅಧ್ಯಯನವನ್ನು ಕೈಗೊಂಡವರಲ್ಲಿ ಮೊದಲಿಗರು.

'ಅಲಕ್ಷಿತ ವಚನಕಾರರ ಲೋಕದೃಷ್ಟಿ' ಬಿ.ಎಂ.ಪುಟ್ಟಯ್ಯನವರ ಕೃತಿ. ಇಲ್ಲಿ ಅಲಕ್ಷಿತ ವಚನಕಾರ ಮತ್ತು ವಚನಕಾರ್ತಿಯರ ಲೋಕದೃಷ್ಟಿಯ ಬಗ್ಗೆ ಚರ್ಚಿಸಿದ್ದಾರೆ. ಇಲ್ಲಿ ಮಸಣಮ್ಮ, ಕಾಳವ್ವ, ರೇಚವ್ವ, ಕಾಮಮ್ಮ, ಲಕ್ಕಮ್ಮ, ಸೋಮಮ್ಮ, ಗುಡ್ಡವ್ವ ಮುಂತಾದ ವಚನಕಾರ್ತಿಯರ ವಚನಗಳು, ಸೋಮದೇವಯ್ಯ, ಕೀಲಾರದ ಭೀಮಣ್ಣ, ಒಕ್ಕಲಿಗ ಮುದ್ದಣ್ಣ ಗುಪ್ತ ಮಂಚಣ್ಣ ಮುಂತಾದವರ ವಚನಗಳು ಇಲ್ಲಿ ಚರ್ಚೆಗೆ ಒಳಪಟ್ಟಿವೆ. "ಅಂಗ-ಆತ್ಮ, ಕ್ರಿಯೆ-ಅರಿವು, ಬೆಳಗು-ಕಳೆ, ಆಕಾರ-ನಿರಾಕಾರ, ಕಾಯ-ಆತ್ಮ, ಕಾಯ-ಮನಸ್ಸು, ಸಾಕಾರ-ನಿರಾಕಾರ ಈ ರೀತಿಯಲ್ಲಿ ಸಂಕೇತಗಳು ಬಳಕೆಯಾಗಿವೆ. ಇವು ಪರಸ್ಪರ ಐಕ್ಯವಾಗಬೇಕೆಂಬ ನಿಲುವು ಇದೆ. ಪರಸ್ಪರ ಐಕ್ಯವಾಗಬೇಕೆಂದರೆ ಅಲ್ಲಿ ತತ್ವಶಾಸ್ತ್ರದ ತಿಳುವಳಿಕೆಯ ಪ್ರಕಾರ ಘರ್ಷಣೆ ನಡೆಯಲೇಬೇಕು. ಘರ್ಷಣೆ ಇಲ್ಲದೆ ವ್ಯತಿರೇಕಗಳ ನಡುವೆ ಐಕ್ಯತೆ ಖಂಡಿತಾ ಸಾಧ್ಯ ಇಲ್ಲ"[೨೧] ಎಂಬ ನಿಲುವಿನಲ್ಲಿ ವಚನಗಳನ್ನು, ವಚನಕಾರರನ್ನು ಇಲ್ಲಿ ಅರ್ಥೈಸಿದ್ದಾರೆ.

'ಕನ್ನಡ ದಲಿತ ಸಾಹಿತ್ಯ ಮತ್ತು ಪ್ರತಿಸಂಸ್ಕೃತಿ' ಬಿ.ಎಂ. ಪುಟ್ಟಯ್ಯನವರ ಅಪ್ರಕಟಿತ ಸಂಶೋಧನೆ ಕೃತಿ. ಇದು ಪುಟ್ಟಯ್ಯನವರ ಪಿಎಚ್.ಡಿ. ಮಹಾಪ್ರಬಂಧ. ಈ ಕೃತಿಯಲ್ಲಿ ಪ್ರತಿ ಸಂಸ್ಕೃತಿಯ ನಿರ್ವಚನವನ್ನು ಭೌತಿಕವಾದಿ ಚಿಂತನೆಗಳು, ಜೈನ ಚಿಂತನೆಗಳು, ಬೌದ್ಧ ಚಿಂತನೆಗಳು ಮತ್ತು ವಚನ ಚಿಂತನೆಗಳಲ್ಲಿ ಚರ್ಚಿಸಿದ್ದಾರೆ. ದಲಿತ ಸಾಹಿತ್ಯ ಮತ್ತು ಸಾಹಿತ್ಯೇತರ ಪ್ರಕಾರಗಳನ್ನು ಪ್ರತಿಸಂಸ್ಕೃತಿಯ ನೆಲೆಯಲ್ಲಿ ಚರ್ಚೆಗೆ ಒಳಪಡಿಸಿದ್ದಾರೆ.

'ಪ್ರೊ. ಬಿ. ಕೃಷ್ಣಪ್ಪ' ಇದು ಬಿ. ಕೃಷ್ಣಪ್ಪ ಅವರ ಚಿಂತನೆಗಳು ಮತ್ತು ಬರಹಗಳು. ಈ ಕೃತಿಯನ್ನು ಮೂರು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಮೊದಲನೆ ಭಾಗದಲ್ಲಿ ಅಂಬೇಡ್ಕರ್‌ರ ಚಿಂತನೆಯನ್ನು, ದೇವರ ಮತಾಂತರ, ಜಾತಿವಿನ್ಯಾಸ ಮತ್ತು ದಲಿತರ ಮೀಸಲಾತಿಯನ್ನು ಕುರಿತದ್ದಾಗಿದೆ. ಎರಡನೆಯ ಭಾಗದಲ್ಲಿ ಅಧ್ಯಾಪಕ, ವಿದ್ಯಾರ್ಥಿ ಶಿಕ್ಷಣದ ಮುಖವಾಣಿ ಎಂಬುದರಲ್ಲಿ ಶಿಕ್ಷಣಕ್ಕೆ ಸಂಬಂಧಪಟ್ಟಂತೆ ಅಧ್ಯಾಪಕರ ಮತ್ತು ವಿದ್ಯಾರ್ಥಿಗಳ ನಡುವಿನ ಸಂಬಂಧದ ಬಗ್ಗೆ ತಾತ್ವಿಕವಾಗಿ ಚರ್ಚೆಯನ್ನೆತ್ತಿದ್ದಾರೆ. ಮೂರನೆಯ ಭಾಗದಲ್ಲಿ ಕವಿ ಕಾವ್ಯ ದೃಷ್ಟಿ ಎಂಬುದರಲ್ಲಿ ಕಾವ್ಯದ ಬಗ್ಗೆ, ಭಾಷೆಯ ಬಗ್ಗೆ, ಕಾದಂಬರಿಗಳ ಬಗ್ಗೆ ಮತ್ತು ಇನ್ನಿತರ ವೈಚಾರಿಕ ಚಿಂತನೆಗಳು ಅಡಕವಾಗಿವೆ. ದಲಿತರ ಬದುಕಿನ ಸಾಮಾಜಿಕ ವಾಸ್ತವವನ್ನು ವಿವರಿಸುತ್ತಾ ಮೀಸಲಾತಿಯ ಅಗತ್ಯವನ್ನು ವಿವರಿಸಿದ್ದಾರೆ. ದಲಿತರಿಗೆ ಪ್ರಮುಖವಾದ ಶಿಕ್ಷಣವನ್ನು ಕುರಿತಂತೆ ಇವರ ಚಿಂತನೆ ಅನನ್ಯವಾದದ್ದು. ಇದರಲ್ಲಿ ದಲಿತರು ತಮ್ಮ ಜ್ಞಾನದ ದಿಗಂತವನ್ನು ಹೇಗೆ ವೃದ್ಧಿಗೊಳಿಸಿಕೊಳ್ಳಬೇಕು ಎಂತಲೂ; ಮತ್ತು ದಲಿತೇತರ ಕಥನ ಸಾಹಿತ್ಯದಲ್ಲಿ ದಲಿತರ ಬದುಕನ್ನು ಯಾವ ನೆಲೆಯಲ್ಲಿ ಅನಾವರಣಗೊಳಿಸುತ್ತಾರೆ ಎಂಬುದು ಇವರ ಬರಹದಲ್ಲಿ ಕಂಡುಬರುತ್ತವೆ. ಮೂಲತಃ ಸಾಮಾಜಿಕ ಹೋರಾಟಗಾರರಾದ ಕೃಷ್ಣಪ್ಪನವರು ವೃತ್ತಿಯಲ್ಲಿ ಪ್ರಾಧ್ಯಾಪಕರು. ಕರ್ನಾಟಕ ದಲಿತ ಚಳುವಳಿಯ ಮತ್ತು ಸಾಹಿತ್ಯ ಸಂದರ್ಭದಲ್ಲಿ ಇವರ ಕಾರ್ಯ ಪ್ರವೃತ್ತಿ ಅಮರವಾದದ್ದು.

ದಲಿತರ ಎಲ್ಲಾ ಬರವಣಿಗೆಗಳ ಪ್ರಾಥಮಿಕ ಪ್ರೇರಣೆ ಔಪಚಾರಿಕ ಶಿಕ್ಷಣ. ಪ್ರಜಾಪ್ರಭುತ್ವ ಆಡಳಿತ ವ್ಯವಸ್ಥೆಯಲ್ಲಿನ ಬದುಕು ಮತ್ತು ಆಧುನಿಕತೆಯ ಪ್ರವೇಶ ದಲಿತರ ಬದುಕಲ್ಲಿ ಕೊಂಚ ಹೊಸ ಅಲೆ ಮೂಡಲು ತೊಡಗಿಸಿತು. ಈ ನಿಟ್ಟಿನಲ್ಲಿ ದಲಿತರು ಪ್ರಜಾಪ್ರಭುತ್ವ ಮತ್ತು ಸಮಾನತೆಯನ್ನು ಕಂಡುಕೊಳ್ಳಲು ತಮ್ಮ ಅನನ್ಯತೆಯನ್ನು ಗುರ್ತಿಸಿಕೊಳ್ಳಲು ಪ್ರಯತ್ನಿಸಿದರು. ಇದರಲ್ಲಿ ಹೋರಾಟಾತ್ಮಕ, ಪ್ರತಿಭಟನಾತ್ಮಕ ಎಚ್ಚರಿಕೆಯ ಸಂಗತಿಗಳನ್ನು ಒಳಗೊಂಡಿತು. ಇದರೊಂದಿಗೆ ದಲಿತ ಬರಹಗಾರರು ಅಂಬೇಡ್ಕರ್, ಲೋಹಿಯಾ, ಮಾರ್ಕ್ಸ್, ಪೆರಿಯಾರ್, ಬುದ್ಧ, ಬಸವಣ್ಣ, ಗಾಂಧಿ ಇವರ ಪ್ರಭಾವ ಮತ್ತು ಪ್ರೇರಣೆಗಳಿಗೆ ಒಳಗಾಗಿದ್ದಾರೆ. ಅವುಗಳು ತಮ್ಮ ಬರವಣಿಗೆಯ ಹಿನ್ನೆಲೆಯಲ್ಲಿ ಮಾಡಿರುವ ತಾತ್ವಿಕ ಆಶಯದಲ್ಲಿ ಕೂಡಿವೆ. ಈ ಪ್ರೇರಣೆಗಳನ್ನು ಹಿಂದಿನ ಅಧ್ಯಾಯಗಳಲ್ಲಿ ಸಮಗ್ರವಾಗಿ ವಿವೇಚಿಸಲಾಗಿದೆ. ಈ ಬರವಣಿಗೆಯ ಹಿಂದಿರುವ ಸಂಗತಿಗಳನ್ನು ನೋಡುವಾಗ ಈವೊತ್ತಿನ ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭವನ್ನು ಗಮನದಲ್ಲಿ ಇಟ್ಟುಕೊಂಡು ಅದರ ವಿಶ್ಲೇಷಣೆಯ ಒಟ್ಟು ಆಶಯವನ್ನು ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ.

ಅಡಿ ಟಿಪ್ಪಣಿಗಳು

೧. ಬಿ.ಕೃಷ್ಣಪ್ಪ, 'ಕುವೆಂಪು', ಪುಟ ೧೧೯

೨. ಎಲ್. ಹನುಮಂತಯ್ಯ 'ದಲಿತ ಲೋಕದ ಒಳಗೆ', ಪುಟ ೯

೩. -- ಅದೇ-- ಪುಟ ೯

೪. -- ಅದೇ-- ಪುಟ ೭

೫. ಸಿದ್ಧಲಿಂಗಯ್ಯ 'ಹಿಕ್ಕಿನೋಟ', ಪುಟ ೩೦

೬. ದೇವಯ್ಯ ಹರವೆ, 'ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು', ಪುಟ ೫

೭. ಸಿದ್ಧಲಿಂಗಯ್ಯ 'ಹಕ್ಕಿನೋಟ', ಪುಟ ೩೧

೮. ಮೊಗಳ್ಳಿ ಗಣೇಶ, 'ದೇಶಿ' 'ನನ್ನ ಸೊಲ್ಲು'ವಿನಿಂದ

೯. ದೇವಯ್ಯ ಹರವೆ, 'ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು', ಪುಟ ೧೩೦

೧೦. 'ದಲಿತ ಸಾಹಿತ್ಯ ಚಳುವಳಿ', ಪುಟ ೩೩

೧೧. ಬಿ. ಕೃಷ್ಣಪ್ಪ, 'ಶ್ರೀಕುವೆಂಪು', ಪುಟ ೧೧೬

೧೨. -- ಅದೇ-- ಪುಟ ೧೫೯

೧೩. ಮೊಗಳ್ಳಿ ಗಣೇಶ 'ಸೊಲ್ಲು', ಪುಟ ೧೫೭

೧೪. ಎಲ್. ಹನುಮಂತಯ್ಯ, 'ದಲಿತ ಲೋಕದೊಳಗೆ', ಪುಟ ೨೯

೧೫. -- ಅದೇ-- ಪುಟ ೨೯

೧೬. ಗಂಗಾರಾಂ ಚಂಡಾಳ, 'ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್', ಪುಟ ೧೬೭

೧೭. ಶಿವರಾಮ ಕಾಡನ ಕುಪ್ಪೆ 'ದಲಿತ ಪ್ರಜ್ಞೆ ಏಳು ಬೀಳು' 'ಇಬ್ಬನಿ' ಪತ್ರಿಕೆ ನವೆಂಬರ್ - ಡಿಸೆಂಬರ್ ೧೯೯೭ ಪುಟ ೨೪

೧೮. ಮೊಗಳ್ಳಿ ಗಣೇಶ್, 'ನನ್ನೊಳಗೆ'ಯಲ್ಲಿ 'ಕಥನ'

೧೯. ಸಂ. ದೊಡ್ಡಹುಲ್ಲೂರು ರುಕ್ಕೋಜಿ, 'ಹಿನ್ನೆಲೆಯ ಮಾತು' 'ಸದನದಲ್ಲಿ ಸಿದ್ದಲಿಂಗಯ್ಯ'

೨೦. ಬಿ.ಎಂ.ಪುಟ್ಟಯ್ಯ, 'ಅಲಕ್ಷಿತ ವಚನಕಾರರ ಲೋಕ ದೃಷ್ಟಿ', ಪುಟ ೨೫

೨೧. ಸಿದ್ಧಲಿಂಗಯ್ಯ 'ಗ್ರಾಮದೇವತೆಗಳು', ಪುಟ ೧೧೬

## ಕನ್ನಡ ದಲಿತ ನಾಟಕಗಳು

ಈ ಅಧ್ಯಾಯದಲ್ಲಿ ಕನ್ನಡದ ದಲಿತ ನಾಟಕಗಳನ್ನು ಕುರಿತು ಚರ್ಚಿಸಲಾಗುವುದು. ಕನ್ನಡದಲ್ಲಿ ದಲಿತ ನಾಟಕಗಳು ಬಂದಿರುವುದು ಬಹಳ ಕಡಿಮೆ. ದಲಿತ ಸಾಹಿತ್ಯ ಪ್ರಕಾರದಲ್ಲಿ ಕಾವ್ಯ, ಕಥೆ, ಕಾದಂಬರಿಗಳು ಕಂಡುಬಂದಷ್ಟು ನಾಟಕಗಳು ಕಂಡುಬರಲಿಲ್ಲ. ಆದ್ದರಿಂದ ಈ ನಾಟಕಗಳ ಬಗೆಗಿನ ಚರ್ಚೆಯು ತೀರಾ ಕಡಿಮೆ. ಇಲ್ಲಿ ಡಾ. ಸಿದ್ಧಲಿಂಗಯ್ಯನವರ 'ಏಕಲವ್ಯ', 'ಪಂಚಮ', 'ನೆಲಸಮ' ಮತ್ತು ಡಾ. ಮನಜವರಯ್ಯನವರ 'ಜಲ' ನಾಟಕಗಳನ್ನು ಕೇಂದ್ರವಾಗಿಟ್ಟುಕೊಂಡು ಚರ್ಚೆಯನ್ನು ಮಾಡಲಾಗುವುದು.

ಕನ್ನಡದ ನಾಟಕಗಳ ಹಿನ್ನೆಲೆಯನ್ನು ಗಮನಿಸುವಾಗ ದಲಿತ ಪ್ರಜ್ಞೆಯನ್ನು ಹೊಂದಿದ ಕೆಲವು ನಾಟಕಗಳು ಕಂಡು ಬಂದರೂ ದಲಿತ ಅನುಭವವನ್ನು ಹೊಂದಿದ ನಾಟಕಗಳು ಕಂಡುಬರಲಿಲ್ಲ. ಆದರೂ ಶೂದ್ರ ಜಗತ್ತಿನ ಬದುಕಿನ ಕೆಲವು ಸೂಕ್ಷ್ಮತೆಗಳು ಕನ್ನಡದ ನಾಟಕಗಳಲ್ಲಿ ಕಂಡುಬಂದವು. ಅವುಗಳಲ್ಲಿನ ಕೆಲವು ನಾಟಕಗಳು ಗೋವಿಂದ ಪೈಯವರ 'ಹೆಬ್ಬೆರಳು', ಕೈಲಾಸಂ ಅವರ 'ಏಕಲವ್ಯ', ಕುವೆಂಪು ಅವರ 'ಬೆರಳ್‌ಗೆ ಕೊರಳ್', 'ಶೂದ್ರತಪಸ್ವಿ' ಲಂಕೇಶರ 'ಸಂಕ್ರಾಂತಿ' ಗಿರೀಶ್ ಕಾರ್ನಾಡರ 'ತಲೆದಂಡ', ಎಚ್.ಎಸ್.ಶಿವಪ್ರಕಾಶರ 'ಮಹಾಚೈತ್ರ' ಮುಂತಾದವುಗಳು. ಈ ನಾಟಕಗಳಲ್ಲಿ 'ದಲಿತ ಪ್ರಜ್ಞೆ'ಯ ಅಂಶಗಳು ಅಲ್ಲಲ್ಲಿ ಕಂಡು ಬಂದರೂ ಅವು ದಲಿತತ್ವವನ್ನು ಹೊಂದಿದ ನಾಟಕಗಳಾಗಲಿಲ್ಲ.

ದಲಿತ ಬದುಕಿನ ವಸ್ತುವನ್ನು ಆಯ್ದುಕೊಂಡ ಕೆಲವು ನಾಟಕಗಳು ರೂಪಗೊಂಡವು, ಅಂದರೆ ಈ ನಾಟಕಗಳು ದಲಿತ ಚಳುವಳಿಯ ಸಂದರ್ಭದಲ್ಲಿ, ಸಾಕ್ಷರತೆಯ ಸಂದರ್ಭದಲ್ಲಿ ಅಥವ ಜನ ಜಾಗೃತಿಯ ಸಂದರ್ಭಗಳಲ್ಲಿ ಕಂಡುಬಂದವು. ಇವುಗಳಲ್ಲಿ ಬೀದಿನಾಟಕಗಳು ಕಂಡುಬಂದವು. ಬೀದಿ ನಾಟಕಗಳಲ್ಲಿನ ವಸ್ತು ವಿಷಯವು ಪ್ರಾದೇಶಿಕ ಜನಜೀವನ ಸ್ಥಿತಿಯ ಮೇಲೆ ನಿರ್ಧರಿಸಿರುತ್ತದೆ. ಇಂಥ ಅನೇಕ ನಾಟಕಗಳು ಕೃತಿ ರೂಪದಲ್ಲಿ ದಾಖಲೆಗೊಳ್ಳಲಿಲ್ಲ. ಇಲ್ಲಿ ದಲಿತರಿಗೆ ಸಾಮಾಜಿಕ ಅರಿವನ್ನು ಮೂಡಿಸುವುದು ಮುಖ್ಯವಾಗಿತ್ತು. ಈ ಬೀದಿನಾಟಕಗಳು ಬಹುವಾಗಿ ದಲಿತರನ್ನು, ಶೋಷಿತರನ್ನು, ಬಡವರನ್ನು, ಅನಕ್ಷರಸ್ಥರನ್ನು ಕೇಂದ್ರವಾಗಿಟ್ಟುಕೊಂಡು ಪ್ರದರ್ಶನಗೊಂಡವು. ಅಲ್ಲದೆಯೂ ಇದು ದಲಿತೇತರಿಗೆ ತಮ್ಮ ಬದುಕಲ್ಲಿನ ಸಾಮಾಜಿಕ ತಪ್ಪಿನ ಎಚ್ಚರದ ಸೂಚನೆಯನ್ನು ನೀಡುವುದೂ ಆಗಿತ್ತು.

ಮತ್ತೆ ಕೆಲವು ನಾಟಕಗಳು ರಂಗಭೂಮಿಯ ಮೇಲೆ ದೃಶ್ಯೀಕರಿಸಿದವು. ಅವುಗಳಲ್ಲಿ ಕೆಲವು ಅಂಬೇಡ್ಕರ್ ಅವರ ಚಿಂತನೆಯನ್ನು ಹೊಂದಿ, ಸಮಾಜದ ಬಗೆಗಿನ ಪ್ರಸ್ತುತತೆಯನ್ನು ಹೊಂದಿದ್ದವು. ಈ ನಾಟಕಗಳು ಪ್ರದರ್ಶನಗೊಂಡು

ಯಶಸ್ಸನ್ನು ಪಡೆದವು. ಬೆಲ್ಚಿ, ಪಂಚಮ, ನೆಲಸಮ ಮುಂತಾದ ನಾಟಕಗಳನ್ನು ಸಮುದಾಯ, ರಂಗಾಯಣ, ನೀನಾಸಂ ನಂತಹ ರಂಗಭೂಮಿಯ ನಾಟಕ ತಂಡಗಳು ಆಡಿದವು. ಇವುಗಳು ದಲಿತ ಸಾಹಿತ್ಯದ ಕಥೆ ಕಾದಂಬರಿಯನ್ನು ಎತ್ತಿಕೊಂಡು ರಂಗಭೂಮಿಯಲ್ಲಿ ಪ್ರದರ್ಶಿಸಿದರು. "ನಮ್ಮಲ್ಲಿ ನಾಟಕಗಳು ಬಂದದ್ದು ೪೦-೪೫ ವರ್ಷಗಳಿದೀಚೆಗೆ. ತುಂಬಾ ಪ್ರಾಚೀನ ಕಾಲದಿಂದಲೂ ಸಂಸ್ಕೃತ ನಾಟಕಗಳು ರಚನೆಗೊಂಡಿವೆಯಾದರೂ ಅವು ಪ್ರದರ್ಶನಗೊಂಡಿರಲಿಲ್ಲವೆಂದು ಕಾಣುತ್ತದೆ. ನಾಟಕ ಪ್ರದರ್ಶನಕ್ಕೆ ಜೀವಾಳವೆಂದರೆ ಪ್ರೇಕ್ಷಕರು. ಸಂಸ್ಕೃತ ಆಡುಭಾಷೆಯಾಗಿರಲಿಲ್ಲ ಎಂದ ಮೇಲೆ ಸಂಸ್ಕೃತ ನಾಟಕಗಳು ಪ್ರದರ್ಶನಗೊಂಡಿದ್ದು ಯಾರಿಗಾಗಿ? ಅಂದರೆ ಇವುಗಳಿಗೆ ಮೂಲದಲ್ಲಿ ಜನಪದ ರಂಗಕಲೆಗಳು ಪ್ರದರ್ಶನ ಗೊಳ್ಳುತ್ತಿದ್ದದ್ದು ನಿಜ. ಜನಪದ ಕಲೆಗಳನ್ನು ಹುಟ್ಟು ಹಾಕಿದವರು ಕೆಳವರ್ಗದ ಜನರು ಇಂದಿಗೂ ಜನಪದ ರಂಗಕಲೆಗಳ ವೃತ್ತಿಕಲಾವಿದರ ಮನೆತನಗಳು ಉಳಿದುಕೊಂಡು ಬಂದಿವೆ. ನೂರಾರು ಕಲೆಗಳನ್ನು ಕೆಳವರ್ಗದ ಜನರು ಅನಾದಿಕಾಲದಿಂದಲೂ ಇಂದಿನವರೆಗೆ ಉಳಿಸಿಕೊಂಡು ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ಚಿಂತನೆ ಶುರುವಾಗಬೇಕು. ಇದುವರೆಗಿನ ನಾಟಕ ಸಾಹಿತ್ಯದಲ್ಲಿ ದಲಿತ ಪ್ರಪಂಚದ ದಾಖಲು ಎಷ್ಟು? ಯಾವ ನೆಲೆಯಲ್ಲಿ ದಾಖಲುಗೊಂಡಿದೆ ? ಯಾಕೆ ದಾಖಲುಗೊಂಡಿಲ್ಲ ಎಂಬುದನ್ನು ಕಂಡುಕೊಳ್ಳಬೇಕಿದೆ? "[೪]. ಇಂತಹ ಪ್ರಶ್ನೆಗಳನ್ನು ಎತ್ತಿಕೊಂಡು ಸುಪ್ರಸಿದ್ಧ ರಂಗ ನಿರ್ದೇಶಕರಾದ ಸಿ. ಬಸಲಿಂಗಯ್ಯನವರು ವಿವರಣೆಯನ್ನು ನೀಡಿದ್ದಾರೆ. ದಲಿತರ ಕಲೆಗಳು ಅವರ ಬದುಕಿನ ಒಂದು ಭಾಗ. ಅವುಗಳನ್ನು ಅವರ ಬದುಕಿನ ಹಿನ್ನೆಲೆಯಿಂದ ನೋಡಬಹುದು. ಈಗಲೂ ದಲಿತರಲ್ಲಿ ಆಚರಣಾತ್ಮಕ ಕಲೆಗಳು ಇದ್ದು ಅವುಗಳು ಸಂಪ್ರದಾಯದಡಿಯಲ್ಲಿ ಸೇರಿಕೊಂಡಿವೆ. ಇವು ದಲಿತ ಬದುಕಲ್ಲಿ ಅವಿಬಾಜ್ಯ ಅಂಗಗಳೆಂಬಂತೆ ಸೇರಿಕೊಂಡಿವೆ. ದಲಿತರ ಬದುಕಲ್ಲಿ ಸಂಪ್ರದಾಯಗಳು, ಆಚರಣೆಗಳು ಎಷ್ಟು ಅಮಾನುಷವೋ ಅಶ್ಲೀಲವೋ ಎಂಬುದಕ್ಕೆ ಸಂಪ್ರದಾಯಗಳ ಹಿನ್ನೆಲೆಯಿಂದ ಅರ್ಥಮಾಡಿಕೊಳ್ಳಬಹುದು. ಅವುಗಳು ದಲಿತರನ್ನು, ದಲಿತ ಹೆಣ್ಣು ಮಕ್ಕಳನ್ನು ಶೋಷಿಸಿವೆ. ಬೆತ್ತಲೆ ಸೇವೆ, ದೇವದಾಸಿ, ಜೋಗತಿ, ಎಂಬ ಪದ್ಧತಿಯಿಂದ ದಲಿತ ಹೆಣ್ಣು ಮಕ್ಕಳನ್ನು ಬೋಗದ ವಸ್ತುವಾಗಿ ಮೇಲು ವರ್ಗದವರು ನಡೆಸಿಕೊಂಡು ಬಂದದಕ್ಕೆ ಸಾಕಷ್ಟು ನಿದರ್ಶನಗಳಿವೆ. "ಬಳ್ಳಾರಿ ಜಿಲ್ಲೆಯ ಕಲ್ಲುಕಂಬ ಮತ್ತು ಮುದ್ದಟನೂರು ಗ್ರಾಮಗಳಲ್ಲಿ ಆಚರಣೆಯಾಗಿದ್ದ 'ಓಕಳಿಯಾಟ'ವು ಇದೇ ಮಾದರಿಯದು. ಇಲ್ಲಿ ಹೆಣ್ಣುಮಕ್ಕಳಿಗೆ ಹನುಮಂತ ದೇವರ ಗುಡಿಯ ಆವರಣದಲ್ಲಿ ಮೇಲು ಜಾತಿಯ ಗಂಡುಗಳು ಓಕಳಿ ಎರಚುತ್ತಾರೆ. ಎರಚಿದ ಓಕಳಿಯಿಂದ ಮೈಮೇಲಿನ ವಸ್ತ್ರವೆಲ್ಲ ತೊಯ್ದುಹೋದರೂ ಅವುಗಳ ಪರಿವೇ ಇಲ್ಲದೆ ಓಕಳಿ ಎರಚುವುದರ ಮೇಲೆ ಹುಣಸೇ ಸಬ್ಬೆಯಿಂದ ಹೊಡೆಯುವ ಕ್ರಿಯೆಯಲ್ಲಿ ಈ ಹೆಣ್ಣು ಮಕ್ಕಳು ಮಗ್ನರಾಗುವಂತೆ ಈ ಆಚರಣೆಯನ್ನು ಸೃಷ್ಟಿಸಲಾಗಿದೆ. ಓಕಳಿಯಿಂದ ತೊಯ್ದುಹೋದ ಹೆಣ್ಣುಮಕ್ಕಳ ಅಂಗಾಂಗಗಳನ್ನು ನೋಡಿ ಆನಂದಿಸಲು ಮೇಲು ಜಾತಿಯ ಗಂಡುಗಳೆಲ್ಲಾ ಅಲ್ಲಿ ಸೇರುವ ಸಂದರ್ಭವೇ ಅಮಾನುಷವಾದದ್ದು, ಅಶ್ಲೀಲದ್ದು. ಇಂಥ ಮೋಜಿನ ದೃಶ್ಯಗಳನ್ನು ಆಚರಣೆಯ ಹೆಸರಲ್ಲಿ ಮುಂದುವರೆಸಿಕೊಂಡು ಹೋಗುವುದು ಎಷ್ಟರ ಮಟ್ಟಿಗೆ ಸರಿ?

ದಲಿತ ಸಂಸ್ಕೃತಿಯನ್ನು ಉಳಿಸಿಕೊಳ್ಳಬೇಕು ಎಂದು ಹೊರಡುವಾಗ ಉಳಿಸಿಕೊಳ್ಳಬೇಕಾದ ಸಾಮಗ್ರಿ ಕುರಿತ ಎಚ್ಚರ ಅಗತ್ಯ. ಇಲ್ಲವಾದಲ್ಲಿ ಮೇಲುವರ್ಗದ ಆನಂದಕ್ಕಾಗಿ ತಮ್ಮನ್ನು ಬಲಿಕೊಟ್ಟುಕೊಳ್ಳುವ ಆಚರಣೆಗಳನ್ನು ಸಂಸ್ಕೃತಿಯ ಹೆಸರಲ್ಲಿ ರಕ್ಷಿಸುವ ದುರಂತದ ಅಂಚಿಗೆ ಬಂದು ನಿಲ್ಲುತ್ತದೆ"[೨].

ದಲಿತ ಸಂಸ್ಕೃತಿಯ ಬಗ್ಗೆ ಮಾತನಾಡುವಾಗ ದಲಿತ ಸಂಸ್ಕೃತಿಯನ್ನು ಉಳಿಸಬೇಕು, ಕಾಪಾಡಬೇಕು ಎಂಬುದರ ಬಗ್ಗೆ ಎಚ್ಚರ ವಹಿಸಬೇಕು. ಸಂಪ್ರದಾಯಗಳು, ಆಚರಣೆಗಳು, ಕಲೆಗಳನ್ನು ಪ್ರದರ್ಶನಗೊಂಡು ಇವುಗಳ ಹೆಸರಲ್ಲಿ ನಡೆಯುವ ದಲಿತ ಶೋಷಣೆಯು ಬಿಂಬಿಸುವುದು ಮುಖ್ಯವಾಗುತ್ತದೆ. ಇದರಿಂದ ಸಮಾಜದ ಸಂಪ್ರದಾಯಗಳಡಿಯ ಶೋಷಣೆಗಳು ಗೊತ್ತಾಗುತ್ತವೆ. ಮುಲತಃ ಜಾತಿವ್ಯವಸ್ಥೆಯನ್ನು ಹೊಂದಿದ ಹಿಂದೂ ಸಮಾಜವು ಅಸಮಾನತೆಯನ್ನು ಹೊಂದಿದೆ. ಇಲ್ಲಿ ಜಾತಿ ಜಾತಿಗಳ ನಡುವಿನ ಭಿನ್ನತೆಯೊಂದಿಗೆ ಏರುಪೇರಿನ ಸಂಘರ್ಷದ ಬದುಕು ಸಾಗುತ್ತಿದೆ. ಇಲ್ಲಿ ಜಾತಿಗಳ ನಡುವೆ ಶ್ರೇಷ್ಠತೆ, ಕನಿಷ್ಠತೆ ಕಂಡುಬಂದು ಕೆಳಜಾತಿಗಳನ್ನು ಮೇಲುಜಾತಿ ಮತ್ತು ಮೇಲುವರ್ಗಗಳು ಶೋಷಣೆಯನ್ನು ಮಾಡುತ್ತಾ ಬಂದಿವೆ. ಅವುಗಳಿಗೆ ಧರ್ಮಗಳು, ಆಚರಣೆಗಳು, ನಂಬಿಕೆಗಳು ಪೋಷಣೆಯನ್ನು ನೀಡಿವೆ. ಇವುಗಳನ್ನು ಒಡೆಯುವ ಪ್ರಯತ್ನವು ದಲಿತ ಚಳುವಳಿ ಮತ್ತು ದಲಿತ ಸಾಹಿತ್ಯಗಳ ತಾತ್ವಿಕ ಚರ್ಚೆ ಮತ್ತು ಪ್ರಶ್ನೆಯಲ್ಲಿ ಕಂಡು ಬಂದವು. ಈ ಪ್ರತಿಭಟನಾತ್ಮಕ ಚಳುವಳಿ ಮತ್ತು ಸಾಹಿತ್ಯವು ದಲಿತಕೇಂದ್ರವಾಗಿದ್ದು ಏಕಮುಖವಾಗಿ ಸಾಗುತ್ತಾ ಬಂದಿದೆ. ಇವರ ವೈಚಾರಿಕ ಮತ್ತು ಸಮಾನತೆಯ ಕಾಳಜಿಗಳು ತಮ್ಮ ಎದುರಿಗಿದ್ದ ದಲಿತೇತರರಲ್ಲಿ ಕಂಡುಬರಲಿಲ್ಲ. ಸಮಾಜವು ಸಂಪೂರ್ಣವಾಗಿ ದಲಿತ ಚಳುವಳಿಯನ್ನಾಗಲಿ, ದಲಿತ ಸಾಹಿತ್ಯವನ್ನಾಗಲಿ ಒಪ್ಪಿಕೊಳ್ಳಲಿಲ್ಲ. ಸಮಾನತೆಯ ವೈಚಾರಿಕ ಸತ್ಯತೆಗಳಿಗಿಂತ ಸಾಮಾಜಿಕ ನಂಬಿಕೆಗಳು ಪಟ್ಟಭದ್ರಹಿತಾಸಕ್ತರಿಗೆ ಮುಖ್ಯವಾದವು. ವ್ಯಕ್ತಿ, ವ್ಯಕ್ತಿಗಳ ನಡುವೆ ಸಾಮಾಜಿಕ, ಆರ್ಥಿಕ, ಧಾರ್ಮಿಕ ಬದುಕಲ್ಲಿ ಸಮಾನತೆಯನ್ನು ಸ್ಥಾಪಿಸಲು ಬಹುತೇಕರ ಮನಸ್ಸು ಒಪ್ಪಲಿಲ್ಲ. ಆಳುವ ಪ್ರವೃತ್ತಿಯು ವ್ಯಕ್ತಿ, ವ್ಯಕ್ತಿಗಳ ನಡುವೆ ಬೇರೂರಿ ಭದ್ರಗೊಂಡಂತೆ ಇವುಗಳಿಂದ ಹೀನಗೊಂಡವರನ್ನು ಶೋಷಿಸಲು ತೊಡಗಿದವು. ಜಗತ್ತು ಆಧುನಿಕಗೊಳ್ಳುತ್ತಿದ್ದಂತೆಯೇ ಜನರು ವೈಚಾರಿಕತೆ ಹೊಂದುತ್ತಿದ್ದಾರೆ ಎಂಬುದನ್ನು ಸಾರ್ವತ್ರಿಕಗೊಳಿಸಲು ಬರುವುದಿಲ್ಲ. ಭಾರತದಂತಹ ಮೂರನೇ ಜಗತ್ತಿನ ದೇಶದಲ್ಲಿ ವ್ಯಕ್ತಿಗಳು ಯಾವುದಕ್ಕೆ ಪ್ರಾಧ್ಯಾನತೆಯನ್ನು ಕೊಡುತ್ತಿದ್ದಾರೆ ಎಂಬುದು ಮುಖ್ಯವಾಗುತ್ತದೆ. ಇಲ್ಲಿ ವ್ಯಕ್ತಿಯು ಊಳಿಗಮಾನ್ಯಶಾಹಿ ವ್ಯವಸ್ಥೆಯಿಂದ ಬಂಡವಾಳಶಾಹಿ ವ್ಯವಸ್ಥೆಗೆ ಬದಲಾಗುವ ಗುಣವನ್ನು ಹೊಂದುತ್ತಾ ಬಂದು ತನ್ನ ಧರ್ಮಗಳಲ್ಲಿನ ಅದರ ತಾರತಮ್ಯ ಬದುಕನ್ನು ಪ್ರಶ್ನಿಸುವುದಕ್ಕಿಂತ ತನ್ನ ಕೇಂದ್ರದಿಂದ ನಿರ್ವಚಿಸಿಕೊಳ್ಳಲು ಪ್ರಯತ್ನಪಡುತ್ತಾನೆ. ಇದರಿಂದ ಸಂಪನ್ಮೂಲಗಳನ್ನು, ಶಕ್ತಿರಾಜಕಾರಣ ಮತ್ತು ಅಧಿಕಾರದ ಕೇಂದ್ರಗಳನ್ನು ಪಡೆಯುವತ್ತ ಯಾರು ಹೊರಟರೋ ಅವುಗಳು ಅವರ ಪಾಲಾಯಿತು. ಇಂತಹ ಶಕ್ತಿಯನ್ನು ಹೊಂದಿದವರು ದುರ್ಬಲರನ್ನು ಆಳತೊಡಗಿದರು. ಈ ಶತಮಾನ ಮುಗಿದು ಹೊಸ ಶತಮಾನದ ಯುಗ ಆರಂಭವಾಗುವ ಹೊತ್ತಿನಲ್ಲಿ ಕಂಡುಬರುತ್ತಿರುವ ಆಧುನೀಕರಣ, ಜಾಗತೀಕರಣ, ಉದಾರೀಕರಣ, ಖಾಸಗೀಕರಣದ ಒಳಿತಿಗೆ ಮತ್ತು ಕೆಡಕಿಗೆ ಒಳಗಾಗುವುದು ಕಂಡುಬಂತು.

ಶಿಕ್ಷಣ ಹೊಂದಿದ ದಲಿತರು ಶಿಕ್ಷಣದ ಪ್ರತಿಫಲದಿಂದ ಆಶ್ರಯ ಪಡೆಯಲು ಹೆಣಗಾಡುತ್ತಾರೆ. ಅವರಿಗೆ ಉದ್ಯೋಗ ಪಡೆಯುವುದು ಅನಿವಾರ್ಯವಾಗಿರುತ್ತದೆ. ತಮ್ಮ ಹಿರಿಯ ತಲೆಮಾರಿನವರು ಗಳಿಸಿರುವುದು ಇಲ್ಲವಾದುದರ ಕಾರಣವು ಸರ್ಕಾರಿ ನೌಕರಿಯನ್ನು ಅಪೇಕ್ಷಿಸುತ್ತದೆ. ಶಿಕ್ಷಣ ಹೊಂದಿದ ಮೊದಲ ದಲಿತ ತಲೆಮಾರಿನವರು ಉದ್ಯೋಗಕ್ಕೆ ಸಂಬಂಧಪಟ್ಟ ತಮ್ಮ ವರ್ತನೆಯನ್ನು; ಅವರ ಅಭಿಪ್ರಾಯವನ್ನು 'ಪಂಚಮ' ನಾಟಕದಲ್ಲಿ ಐದು ಜನರು ಸಂದರ್ಶನಕ್ಕೆ ಬಂದಿರುತ್ತಾರೆ. ಈ ಐವರಿಗೆ ಹಯವದನ್ ರಾವ್ ಎಂಬ ಐ.ಎ.ಎಸ್ ಅಧಿಕಾರಿ ಸಂದರ್ಶನ ತೆಗೆದುಕೊಳ್ಳುತ್ತಾನೆ. ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ 'ಹರಿಜನೋದ್ಧಾರ ಮಂಡಲಿ' ಎಂಬ ಯೋಜನೆಯಡಿಯಲ್ಲಿ ದಲಿತ

ನಿರುದ್ಯೋಗಿ ಪದವೀದರರಿಗೆ ತಾತ್ಕಾಲಿಕವಾಗಿ ಉದ್ಯೋಗ ವ್ಯವಸ್ಥೆಗೋಸ್ಕರ ಸಂದರ್ಶನ ನಡೆಯುತ್ತದೆ. ಸಂದರ್ಶನದ ಸಮಯದಲ್ಲಿ ಹಯವದನ್ ರಾವ್ ಎತ್ತುವ ಪ್ರಶ್ನೆಗಳು ಮತ್ತು ಸಂದರ್ಶನಕ್ಕೆ ಬಂದಿರುವ ದಲಿತ ಸಂದರ್ಶನಕಾರರ ಉತ್ತರಗಳು ದಲಿತ ಬದುಕಿನ ಚಿತ್ರಣಗಳನ್ನು ಹಿಡಿದಿಡುತ್ತವೆ. ಇಲ್ಲಿ ಸ್ವಾತಂತ್ರ್ಯ ನಂತರದ ಸವಲತ್ತುಗಳು ಅನುಕೂಲಗಳು ದಲಿತರಿಗೆ ಯಾವ ಪ್ರಮಾಣದಲ್ಲಿ ಉಪಯುಕ್ತವಾಗಿವೆ ಎಂಬವುಗಳು ಮುಖ್ಯವಾಗುತ್ತವೆ.

"**ಹಯವದನ್ ರಾವ್** : ಊರಿಗೆ ಲೈಟ್ ಬಂದಿದೆಯೋ? (ವ್ಯಂಗ್ಯವಾಗಿ)

**ಪುಟ್ಟ ಲಕ್ಷ್ಮಿ** : ಇನ್ನೂ ಇಲ್ಲ ಸಾರ್

**ಹಯವದನ್ ರಾವ್**: ನೋಡ್ರೀ ನಿಮ್ಮೂರಿಗೆ ಲೈಟ್ ಬಂದಿಲ್ಲ, ಸ್ವಾತಂತ್ರ್ಯ ಬಂದು ಮುವತ್ತೊಂದು ವರ್ಷ ಆದ್ರೂ ಲೈಟ್ ಬಂದಿಲ್ಲ. ಇದೇ ತೋರ್ಸುತ್ತೆ ಹರಿಜನ ಗಿರಿಜನರು ಭಾರತ ದೇಶದಲ್ಲಿ ಕತ್ತಲೆಯಲ್ಲಿ ಭೂತ ಪ್ರೇತಗಳಂತೆ ವಾಸ ಮಾಡ್ತ ಇದ್ದಾರೆ ಅನ್ನೋದನ್ನ. ಅವುರ್ಗೆ ಹಿಡಿದಿರುವಂತ ಘೋರಾಂಧಕಾರದ ಭೂತವನ್ನು ಬಿಡುಸ್ಬೇಕು ಅವುರನ್ನ ಮನುಷ್ಯರನ್ನಾಗಿ ಮಾಡ್ಬೇಕು ಅಂಥಾ ಈ ಇಂಟ್ರೂವ್ಯೂ ಕರೆದಿದ್ದೀವಿ"[೩] ಶಿಕ್ಷಣ, ಅದರಿಂದ ಪಡೆಯುವ ಉದ್ಯೋಗವು ದಲಿತರಿಗೆ ಹೊಸದನ್ನು ಕೊಡುವಂತಹದು. ಅದರ ಹಲವು ಹಂತಗಳ ಸೂಕ್ಷ್ಮತೆಗಳು ಹಲವು ರೀತಿಯಲ್ಲಿ ಇಲ್ಲಿ ಕಾಣಸಿಗುತ್ತವೆ.

**ಹಯವದನ್ ರಾವ್** : ರೀ ನೀವು ಸ್ಕೂಲ್‌ಗೋಗ್ತಾ ಇದ್ದಾಗ ಸ್ಕೂಲ್‌ಗೋಗದು ಇಷ್ಟಾ ಇತ್ತಾ?

**ಪುಟ್ಟಲಕ್ಷ್ಮಿ**: ಪ್ರೈಮರಿ ಸ್ಕೂಲ್‌ನಲ್ಲಿ ಒಂಥರಾ ಇಷ್ಟ ಇತ್ತು ಸಾರ್.

**ಹಯವದನ್ ರಾವ್** : ಅದೆಂಥಾದ್ರೀ ಒಂಥರಾ ಇಷ್ಟ? ವಾಟ್ ಡು ಯು ಮೀನ್?

**ಪು.ಲ.** : ಉಪ್ಪಿಟ್ಟು ಕೊಡ್ತಿದ್ರು ಸಾರ್.

**ಹ.ರಾ** : ಹೈಸ್ಕೂಲ್‌ನಲ್ಲಿ ಕಾಲೇಜ್‌ನಲ್ಲಿ?

**ಪು.ಲ.**: ಆವಾಗ್ಲೂ ಇಷ್ಟ ಇತ್ತು ಸಾರ್. ಗಂಡ್ ಹುಡುಗ್ರು ಬರ್ತಿದ್ರು, ಮೇಷ್ಟ್ರು ಬರ್ತಿದ್ರು. ಜೊತೆಗೆ ಸರ್ಕಾರದವರು ಸ್ಕಾಲರ್ ಷಿಪ್ ಕೊಡ್ತಿದ್ರು ಸಾರ್.

**ಹ.ರಾ** : ಕಾಲೇಜಿಗೆ ಹೋದ್ ಮೇಲೆ ಏನ್ ಕಲತ್ರೀ?

**ಪು.ಲ** : ಬಟ್ಟೆ ಚೆನ್ನಾಗಿ ಹಾಕಬೇಕು ಹಣವಂತರಾಗಬೇಕು ಅನ್ನೊದನ್ನ ಕಲ್ತೆ ಸಾರ್.

**ಹ.ರಾ** : ಬಟ್ಟೆ ಚೆನ್ನಾಗಿ ಹಾಕಿದ್ರೋ, ಹಣವಂತರಾದ್ರೋ?

**ಪು.ಲ** : ಇಲ್ಲ ಸಾರ್ ",[೪]

ಶಿಕ್ಷಣದಿಂದ ಕಂಡ ಆಧುನಿಕ ಜಗತ್ತಿನ ಹೊಸ ಪರಿಚಯವು ದಲಿತ ಯುವಕ, ಯುವತಿಯರಲ್ಲಿ ಬದಲಾವಣೆಯ ಮನಃಸ್ಥಿತಿಯನ್ನು ತಂದಿತು. ಇದು ದಲಿತ ಜಗತ್ತಿಗೇ ಹೊಸ ಪ್ರವೇಶ, ಅದರಲ್ಲೂ ದಲಿತ ಮಹಿಳೆಯರಲ್ಲಿ ಶಿಕ್ಷಣವನ್ನು ಕಾಣುವುದು ಆಧುನಿಕ ಸಂದರ್ಭದ ಕೊಡುಗೆಯೇ.

ಶೇಷಾದ್ರಿಯ ಪಾತ್ರದಲ್ಲಿ ಅತಿ ವಿನಯ, ಅತಿಭಕ್ತಿ, ಮತ್ತು ಸೆಂಟಿಮೆಂಟಲ್‌ನ್ನು ತುಂಬಿಕೊಂಡಿರುವುದು ಇದೆ. ತಮ್ಮ ಬದುಕಿನ ಹಿನ್ನೆಲೆಯಿಂದ ಹೊರಬಂದ ಶೇಷಾದ್ರಿಗೆ ಅಧಿಕಾರಿಯ ಎದುರು ಕೂರುವುದೇ ದೊಡ್ಡ ವಿಚಾರವಾಗುತ್ತದೆ. ಸಮಾನತೆಯ ಕಲ್ಪನೆಯನ್ನು ಕಾಣದೆ ದಲಿತರು ಬದುಕನ್ನು ಅನುಭವಿಸುತ್ತಿರುವಂತವರು. ಇವರು ಅಸಮಾನತೆಯನ್ನು ತಪ್ಪೆಂದು ಎಂದೂ ಅರಿತವರಲ್ಲ. ಅದು ತಮ್ಮ ಪಾಲೆಂದು, ತಮ್ಮ ಕರ್ತವ್ಯವೆಂದು ಮನಗಂಡವರು ಆಗಿದ್ದಾರೆ. ಅಸಮಾನತೆಯು ತಪ್ಪೆಂದು ಪರಿಗಣಿಸಿ ಅದರ ವಿರುದ್ಧ ಪ್ರಖರವಾಗಿ ದನಿ ಎತ್ತಿದ್ದು ಆಧುನಿಕ ಶಿಕ್ಷಣದ ಮೂಲಕವೆ. ದೇಶಿಯತೆಯನ್ನು ಉಳಿಸುವ ಈ ಹೊತ್ತಲ್ಲಿ ದಲಿತರು ಬಹುವಾಗಿ ದೇಶೀಯತೆಯನ್ನು ವಿರೋಧಿಸುವ ಹಾಗೂ ಆಧುನಿಕತೆಗೆ ಸ್ಪಂದಿಸುವ ಅಥವಾ ಅದರ ಪರವಾಗಿ ವಾಲುವುದು ಕಾಣುತ್ತಿದೆ. ಇದು ಹಯವದನ್ ರಾವ್ ಹಾಗೂ ಗಾಂಧಿದಾಸರ ಪಾತ್ರಗಳ ಸಂಭಾಷಣೆಯಲ್ಲಿ ನೋಡಬಹುದು.

"**ಹಯವದನ್ ರಾವ್** : ಏನ್ರಿ ಗಾಂಧೀಜಿಗೆ ಅವಮಾನ ರೀ! ಗಾಂಧಿದಾಸ್ ಅಂಥ ಯಾಕ್ರಿ ನಿಮಗೆ ಹೆಸರಿಟ್ರು, ಯಾರ್ರಿ ಹೆಸರಿಟ್ರು?

**ಗಾಂಧಿದಾಸ್** : ನಾವು ದಾಸ್ರು ಜನ ಸಾರ್, ಕಾಲಾನುಕಾಲದಿಂದ ನಾವು ದಾಸರು ಸಾರ್. ಹಿಂದೆ ಇದ್ದ ಗಾಂಧಿಗೆ ಈಗೀನ ಗಾಂಧಿಗೆ, ಮುಂದಿನ ಗಾಂಧಿಗೆ ಹಾಗೇ ನಾವು ಸದಾ ದಾಸರು ಸಾರ್. ಮಹಾತ್ಮಗಾಂಧಿ ನಮ್ಮೂರಿಗೆ ಬಂದಿದ್ದಾಗ ನಮ್ಮ ತಾತ ಅವರ್ನ ಖುದ್ದಾಗಿ ಕಂಡು ಹೆಂಡ ಮುಟ್ಟಲ್ಲ ಅಂತ ಬಲಗೈ ಭಾಷೆ ಕೊಟ್ರಂತೆ ಸಾರ್. ಅದರ ಗುರ್ತಾಗಿ ನನ್ ಹೆಸರು ಗಾಂಧಿದಾಸ್ ಅಂತ ಇಟ್ಟಿದ್ದಾರೆ ಸಾರ್.

**ಹಯವದನ್ ರಾವ್** : ನೀವು ನಿಮ್ಮ ತಾತನ ಮಾತ್ನ ಇನ್ನೂ ನಡೆವಳಿಕೇಲ್ ತರ್ತಾ ಇದ್ದೀರೋ?

**ಗಾಂಧಿದಾಸ್** : ಅಯ್ಯೋ ನಿಮ್ ಹತ್ರ ಸುಳ್ ಯಾಕ್ ಹೇಳ್ಲಿಸಾರ್. ನಮ್ಮ ತಾತನ ಮಾತು ತಾತನ ಜೊತೇನೇ ಹೋಯ್ತು ಸಾರ್. ನಾವು ಈಗ ಮಾಡ್ರನ್ ಸಾರ್. ಮಟನ್ ಡ್ರಿಂಕ್ಸ್ ಇಂಟರ್ ನ್ಯಾಷನಲ್ ಪುಡ್ ಆಗಿರೋದ್ರಿಂದ ನಾವು ಇಂಟರ್‌ನ್ಯಾಷನಲ್ ಸಿಟಿಜನ್ಸ್ ಆಗ್‌ಬೇಕು ಅಂತ ಈಗ ಅವುನ್ನೆಲ್ಲಾ ಪ್ರಾಕ್ಟೀಸ್ ಮಾಡ್ತ ಇದ್ದೀವಿ ಸಾರ್. ಆದ್ದರಿಂದ ನಮ್ಮ ಹರಿಜನಗಳೆಲ್ಲಾ ಈಗ ಇಂಟರ್ ನ್ಯಾಷನಲ್ ಸಿಟಿಜನ್ಸ್ ಸಾ"[7].

ದಲಿತರ ಬದುಕಲ್ಲಿ ಸ್ವದೇಶೀಯತೆ, ಅವರ ಸಂಸ್ಕೃತಿಯಲ್ಲಿ ಒಂದೆಡೆ ಇದ್ದರೆ ಅದನ್ನು ತಿರಸ್ಕರಿಸುವ ಮನೋಧರ್ಮವು ಶಿಕ್ಷಿತ ದಲಿತರಲ್ಲಿದೆ. ಇಲ್ಲಿ ಆಧುನಿಕತೆಯ ಸಂದರ್ಭದಲ್ಲಿ ಜಾಗತಿಕ ವಿದ್ಯಾಮಾನಕ್ಕೆ ಒತ್ತುಕೊಡುವುದು ಮುಖ್ಯವಾಗುತ್ತದೆ. ಇದು ಬದಲಾವಣೆಗೆ ಒಳಗೊಳ್ಳುವುದು ಆಗಿರುತ್ತದೆ. ಆಧುನಿಕತೆಗೆ ಶಿಕ್ಷಣ ಕಲಿತ ದಲಿತರು ಒಳಗೊಳ್ಳುವುದು ಮುಖ್ಯವಾದದ್ದು. ಏಕೆಂದರೆ ಜಾಗತಿಕ ವಿದ್ಯಮಾನವು ಹೊಸ ಬಗೆಯದು. ಇದರಲ್ಲಿ ತಮ್ಮ ಸಂಸ್ಕೃತಿಯಲ್ಲಿ ಕಂಡ ಜಾತಿ ಹಿನ್ನೆಲೆಯ, ಧರ್ಮದ ಹಿನ್ನೆಲೆಯ ದೋಷಗಳನ್ನು ತಿರಸ್ಕರಿಸುವುದು ಮುಖ್ಯವಾಗಿ ಕಂಡುಬರುತ್ತದೆ. ದಲಿತರ ಪರಿಸರ, ಅವರ ಬದುಕು ಬದಲಾವಣೆಗೊಂಡಂತೆ ಅವರ ಸಾಂಸ್ಕೃತಿಕ ಬದುಕು ಜಟಿಲಗೊಂಡಿರುತ್ತದೆ. ತಮ್ಮ ಸಂಸ್ಕೃತಿ ಕಾಣದ್ದನ್ನು ಆಧುನಿಕ ಸಂದರ್ಭದಲ್ಲಿ ಕಾಣುವುದು ದಲಿತ ಸಮುದಾಯಗಳಿಗೆ ಮುಖ್ಯವಾಗುತ್ತದೆ. ಪಂಚಮ ನಾಟಕದ ಕೊನೆಯ ಸಂದರ್ಶಕನು ತಮ್ಮ ಜಾತಿಯ ಹೆಸರನ್ನು ಹೇಳಿಕೊಳ್ಳುವುದೇ

ಆತ್ಮಸ್ಥೈರ್ಯದ ಮಾತಾಗಿರುತ್ತದೆ. ಇಲ್ಲಿ ಹರಿಯ ಮಕ್ಕಳು ಎಂಬುದಕ್ಕೆ ವಿರುದ್ಧದ ಮಾತಿದೆ. "ನಾವು ಖಂಡಿತವಾಗಿಯೂ ದೇವರ ಮಕ್ಕಳಲ್ಲ ನಾವು ನಮ್ ತಂದೆ, ತಾಯಿರ, ಮಕ್ಕಳು ಆದ್ದರಿಂದ ನಾವು ಹರಿಜನರಲ್ಲ. ಹರಿಜನ ಅನ್ನೊ ಹೆಸರನ್ನ ನೀವು ನಮಗೆ ಇಟ್ಟಿದ್ದೀರ. ಆದರೆ ಇವತ್ತು ನಮ್ಮ ಜನರ ಹೆಸರನ್ನ ನಿಮಗೇ ವಾಪಸ್ ಕೊಡ್ತೀನಿ ನೀವೇ ಇಟ್ಕಳಿ"[೬] ಹಯವದನ್‌ರಾವ್‌ಗೆ ವಿರುದ್ಧವಾದ ಮಾತುಗಳನ್ನು ಪಂಚಮ ಆಡುತ್ತಾನೆ. "ನಿಮ್ಮ ಬಿಕ್ಷೆ ರಾಜ್ಯ ಹೋಗ್‌ಬೇಕು ಸಮತಾ ರಾಜ್ಯ ಬರಬೇಕು ಅನ್ನೋದೆ ನಮ್ಮ ಗುರಿ. ಆದ್ರೆ ನಿಮ್ಮಂಥೋರು ನಮ್ಮ ಜನರಿಗೆ ಸುಳ್ಳು ಭರವಸೆ ಕೊಟ್ಟು ಭ್ರಮೇಲಿ ಮುಳುಗಿಸಿದ್ದೀರ. ನಿಮ್ಮ ಸುಳ್ಳು ನಿಲ್ಲಬೇಕಾದ್ರೆ ನಿಮ್ಮ ಉಸಿರಾಟ ನಿಲ್ಲಬೇಕು. ನಿಮ್ಮ ಕಬ್ಬಿಣದ ಬೇಲಿಯಿಂದ ತಪ್ಪಿಸಿಕೊಂಡು ಹೊರಗೆ ಬರೋವರ್ಗೂ ನಮ್ಗೆ ಸಮಾಧಾನ ಇಲ್ಲ. ನಮ್ಗೆ ಬಿಕ್ಷೆ ಬೇಡ ಆರ್ಥಿಕ ಸಮಾನತೆ ಬೇಕು. ಸಾಮಾಜಿಕ ಸಮಾನತೆ ಬೇಕು ಎಲ್ಲೆಲ್ಲೂ ಎಲ್ಲದರಲ್ಲೂ ಬದಲಾವಣೆ ಬೇಕು".[೭]

ಈ ನಾಟಕದ ಮುಖ್ಯ ಉದ್ದೇಶ ಸಾಮಾಜಿಕ ಬದಲಾವಣೆಯನ್ನು ತರುವುದು ಆಗಿದೆ. ಹರಿಜನೋದ್ಧಾರ, ದಲಿತೋದ್ಧಾರಗಳ ಹೆಸರಲ್ಲಿನ ಕಾರ್ಯಕ್ರಮಗಳು ದಲಿತರನ್ನು ಉದ್ಧಾರ ಮಾಡುತ್ತವೆಂತಲೂ, ಉದ್ಧಾರ ಮಾಡಲು ಅಸಾಧ್ಯವೆಂತೆಲೂ, ಅದು ಕೆಲವೇ ಕೆಲವರಿಗೆ ಸೀಮಿತಗೊಂಡಿದೆ ಎಂತಲೂ ಇಲ್ಲಿ ಕಂಡುಬಂದಿವೆ. ಸಮತಾ ರಾಜ್ಯದ ಕಲ್ಪನೆ, ಆರ್ಥಿಕ, ಸಾಮಾಜಿಕ ಸಮಾನತೆಯ ಕಲ್ಪನೆಯು ಈ ನಾಟಕದಲ್ಲಿ ಮುಖ್ಯ ವಸ್ತು. ಇದು 'ಪಂಚಮ' ನಾಟಕದ ತಾತ್ವಿಕ ವಿವರವಾಗಿರುತ್ತದೆ. ಇಲ್ಲಿ ಅಧಿಕಾರಿ ವರ್ಗ ಮತ್ತು ಆಳುವ ವರ್ಗಗಳೇ ಇರಕೂಡದು ಎಂಬುದು ಪ್ರಧಾನವಾದ ವಸ್ತುವಿಷಯ.

'ನೆಲಸಮ' ನಾಟಕವು ಬಡವರು ಮತ್ತು ಶೋಷಿತರ ನಡುವಿನ ಸಂಘರ್ಷವನ್ನು ಹೊಂದಿದ ನಾಟಕ. ಶೋಷಿತರ ಕಲ್ಪನೆಯಲ್ಲಿ ಬಡವರು ಮನುಷ್ಯರೇ ಅಲ್ಲ ಎಂಬಂತೆ ದುಡಿಸಿಕೊಂಡಿದ್ದಾರೆ. ಆಳುವ ವರ್ಗ ತಮ್ಮ ಸ್ವಾರ್ಥಕ್ಕೆ ಬಡವರನ್ನು ಬಲಿ ತೆಗೆದುಕೊಂಡಿರುವುದು ಇಲ್ಲಿ ಕಂಡುಬರುತ್ತದೆ. ಶ್ರೀಮಂತರ ದರ್ಪದಿಂದ ಕೊಳಗೇರಿಗಳಲ್ಲಿ ಬದುಕುತ್ತಿರುವರನ್ನು, ಅವರ ಗುಡಿಸಲುಗಳನ್ನು ನೆಲಸಮ ಮಾಡುವುದು ಇಲ್ಲಿದೆ. ಆಳುವ ವರ್ಗಗಳು ತಮ್ಮ ಹಿತಕ್ಕೆ ಬಡವರನ್ನು ಬಲಿತೆಗೆದುಕೊಳ್ಳುವುದು ಈ ನಾಟಕದ ಮುಖ್ಯ ವಸ್ತು ವಿಷಯವಾಗಿದೆ. ಅಸಹಾಯಕತೆಯನ್ನು ಹೊಂದಿದ ಶೋಷಿತಶಕ್ತಿಯ ದನಿಯು ಶೋಷಕವರ್ಗಕ್ಕೆ ಮುಟ್ಟುವುದಿಲ್ಲ. ಇದು 'ನೆಲಸಮ' ನಾಟಕದ ವಸ್ತು.

ಸಿದ್ಧಲಿಂಗಯ್ಯನವರ ಮತ್ತೊಂದು ನಾಟಕ 'ಏಕಲವ್ಯ'. ಇದು ಪುರಾಣದ ವಸ್ತುವಿಷಯವನ್ನು ಹೊಂದಿದೆ. ಈ ನಾಟಕವು ಇಂದಿನ ಸಮಕಾಲೀನ ವಸ್ತುಸ್ಥಿತಿಯ ನೆಲೆಯಲ್ಲಿ ಅರ್ಥಮಾಡಿಕೊಳ್ಳಬಹುದು. 'ಏಕಲವ್ಯ'ನನ್ನು ಕುರಿತು ಕನ್ನಡದಲ್ಲಿ ಹಲವು ನಾಟಕಗಳು ಬಂದಿವೆ. ಅವುಗಳು ತಮ್ಮದೆ ಆದ ಸಮಕಾಲೀನ ಬಂಧವನ್ನು ಹೊಂದಿವೆ. ಹಾಗೆಯೇ ಸಿದ್ಧಲಿಂಗಯ್ಯನವರ ಏಕಲವ್ಯ ನಾಟಕವು ತನ್ನದೇ ಆದ ವೈಶಿಷ್ಟತೆಯ ನಿಲುವನ್ನು ಹೊಂದಿದೆ. ಮತ್ತೊಂದು ನಾಟಕವಾದ ಮ.ನ. ಜವರಯ್ಯನವರ 'ಜಲ' ನಾಟಕವು ಐತಿಹಾಸಿಕ ವ್ಯಕ್ತಿಯಾದ ಗೌತಮನನ್ನು ಕುರಿತದ್ದಾಗಿದೆ. ಇಲ್ಲಿ ಜಲ ಸಮಸ್ಯೆ, ಅದಕ್ಕೆ ಗೌತಮನ ಪ್ರತಿಕ್ರಿಯೆ ಮತ್ತು ಅವನ ನಿರ್ಧಾರಗಳು ಇಲ್ಲಿ ಮುಖ್ಯವಾಗುತ್ತವೆ. 'ಜಲ' ಮತ್ತು 'ಏಕಲವ್ಯ' ನಾಟಕಗಳು ಎರಡೂ ಬೇರೆ ಬೇರೆ ನೆಲೆಯನ್ನು ಹೊಂದಿವೆ. 'ಏಕಲವ್ಯ' ನಾಟಕ ಸಮುದಾಯ ಕೇಂದ್ರಿತವಾದರೆ; 'ಜಲ' ನಾಟಕ ಒಂದು ಸಮಸ್ಯೆಯನ್ನು, ಅದರ ತೊಡಕುಗಳನ್ನು ಎರಡು ರಾಜ್ಯಗಳ ಆಂತರಿಕ ಬಿಕ್ಕಟ್ಟುಗಳನ್ನು ಎತ್ತಿ ಒಡಿಯುವುದು ಆಗಿದೆ.

ಹಿಂದೆ ಇಂಡಿಯಾವನ್ನು ಒಂದು ಕಡೆ ರಾಜಪ್ರಭುತ್ವಗಳು ಆಳುತ್ತಿದ್ದರೆ ಮತ್ತೊಂದು ಕಡೆಯಲ್ಲಿ ಊಳಿಗಮಾನ್ಯ ಶಾಹಿಯ ವ್ಯವಸೆಯು ಆಳುತ್ತಿತ್ತು. ಇವರ ಹಿತಾಸಕ್ತಿಯು ತಮ್ಮ ಸ್ವಾರ್ಥಕ್ಕಾಗಿ ಇತ್ತೇ ಹೊರತು ಜಾತಿ ವ್ಯವಸ್ಥೆಯ ಜನ ಸಮುದಾಯಗಳಲ್ಲಿನ ಸಮಾನತೆಯ ಮತ್ತು ಸಮಸ್ಯೆಗಳನ್ನು ಕುರಿತಂತೆ ಇರಲಿಲ್ಲ. ಹಾಗೆಯೇ ಈ ಹೊತ್ತಲ್ಲಿ ರಾಜಪ್ರಭುತ್ವದ ಬದಲಾಗಿ ಶಕ್ತಿ ರಾಜಕಾರಣವಿದೆ. ಹಿಂದೆ ರಾಜಪ್ರಭುಗಳು ಹೇಗೆ ತಮ್ಮ ದೇಶವನ್ನು ಆಳುತ್ತಿದ್ದರೋ ಹಾಗೆಯೇ ಶಕ್ತಿ ರಾಜಕಾರಣ ಇಂದು ಆಳುತ್ತಿದೆ. ರಾಜರ ಮುಂದೆ ರಾಜ್ಯವನ್ನಾಳಲು ಯುದ್ಧ ಮಾಡಬೇಕಿತ್ತು. ಇಂದು ರಾಜಕಾರಣಗಳು ಚುನಾವಣೆಗಳಲ್ಲಿ ಗೆದ್ದು ರಾಜ್ಯವನ್ನು ಆಳುತ್ತಿದ್ದಾರೆ. 'ಏಕಲವ್ಯ' ನಾಟಕದಲ್ಲಿ ಆಳುವ ವರ್ಗಗಳು ಯಾವುವು? ಇದರಿಂದ ದಲಿತರಿಗೆ, ಬಡವರಿಗೆ, ಶೋಷಿತರಿಗೆ ಏನು ಪ್ರಯೋಜನ ಎಂಬುದು ಮುಖ್ಯವಾಗಿ ಪ್ರಶ್ನೆಯಾಗುತ್ತಿದೆ. ಪುರಾಣಗಳ ವಸ್ತುವಿಷಯವನ್ನು ಸಮಕಾಲೀನಗೊಳಿಸುವುದು; ಮತ್ತು ಅಲ್ಲಿನ ನಿರ್ಧಾರಗಳು ಇಲ್ಲಿ ಮುಖ್ಯವಾಗುತ್ತವೆ.

ಸಿದ್ದಲಿಂಗಯ್ಯನವರ 'ಏಕಲವ್ಯ' ನಾಟಕವು 'ಕಾಡು' ಮತ್ತು 'ನಾಡಿ'ಗೆ ಸಂಬಂಧಪಟ್ಟ ವಸ್ತುವಿಷಯವನ್ನು ಒಳಗೊಂಡಿದೆ. ಈ ನಾಟಕ ಪ್ರಾರಂಭವಾಗುವುದೇ ಸಂಘರ್ಷದಿಂದ. ಕಾಡಿನ ಮತ್ತು ನಾಡಿನ ಜನರ ನಡುವೆ ನಡೆಯುವ ಘರ್ಷಣೆಯು ಏಕಲವ್ಯ, ಅವನ ಕಾಡಿನ ಜನ ಮತ್ತು ರಾಜ, ಅವನ ಸಹಚರರ ನಡುವೆ ವಾಗ್ವಾದ ನಡೆಯುತ್ತದೆ. ಸ್ವಾರ್ಥ ಕ್ರೌರ್ಯ ಅಹಂಕಾರ ತುಂಬಿದ ನಾಗರಿಕರು ಮತ್ತು ಕಾಡಿನ ಜನರ ನಡುವೆ ವಾಗ್ವಾದ ಮತ್ತು ಕಾಡಿನ ವೀರನಾದ ಏಕಲವ್ಯನ ಪರಾಕ್ರಮವನ್ನು ದುರುಪಯೋಗಕ್ಕೆ ಪ್ರಯತ್ನಿಸುವುದು ಈ ನಾಟಕದಲ್ಲಿ ಕಂಡುಬರುತ್ತದೆ. ಈ ನಾಟಕದಲ್ಲಿ ಏಕಲವ್ಯನು ತೆಗೆದುಕೊಳ್ಳುವ ನಿರ್ಧಾರವು ಬಹಳ ಮುಖ್ಯವಾಗುತ್ತದೆ.

ಕಾಡಿನ ಜನತೆಗೆ ಕಾಡು ಯಾವ ರಾಜನಿಗೂ ಸೇರಬೇಕಾದುದಲ್ಲ; ಅಲ್ಲೇ ಹುಟ್ಟಿ ಅಲ್ಲೇ ಬೆಳದು ಅದರ ಜೊತೆಗಿನ ಒಡನಾಟವು ಹಕ್ಕುದಾರಿಕೆಯನ್ನು ತರುತ್ತದೆ. ಅದು ಬೋರಣ್ಣನ ಪಾತ್ರದಲ್ಲಿ ವ್ಯಕ್ತವಾಗುತ್ತದೆ. "ಬೋರಣ್ಣ: ಲೇ ಮರ್ಯಾದೆ ಕೊಟ್ಟು ಮಾತಾಡು ನಮ್ ಕಾಡಿಗೆ ಬಂದಿದಲ್ದೆ ನಮ್ಮ ಹೆದುರುಸ್ತಿಯ? ನಿನ್ ಹೆಣ ಹೊರ್ತೀನಿ ಹೊರುತು ಮರ ಕಡಿಯಿಕೆ ಬುಡಲ್ಲ"[೮] ಕಾಡಿನ ಜನರಾದ ಬೋರಣ್ಣನಿಗಾಗಲಿ, ಅಥವಾ ಗಾಳಣ್ಣನಿಗಾಗಲಿ ಆಳುವ ವರ್ಗದವರ ಕ್ರೌರ್ಯ, ದಬ್ಬಾಳಿಕೆ ಮುಖ್ಯವಾಗುವುದಿಲ್ಲ. ತಾವು ಬದುಕುವ ಪರಿಸರ ಮತ್ತು ಅದರ ಮೇಲಿನ ತಮ್ಮ ಹಕ್ಕನ್ನು ತಾವೇ ಪಡೆದುಕೊಳ್ಳುವುದು ಇಲ್ಲಿ ಕಂಡುಬರುತ್ತದೆ. ಇದು ಮಾನವನ ಬದುಕಿನಲ್ಲಿ ಪರಿಸರವು ಸಮಾನವಾದದ್ದು ಎಂಬುದರ ಅರಿವನ್ನು ಹೊಂದಿದೆ. ಸಮಾನತೆಯ ಕಲ್ಪನೆಯಲ್ಲಿ ಮತ್ತು ಸಾಮಾಜಿಕ ಏರುಪೇರಿನ ತರ್ಕಗಳ ತಾತ್ವಿಕತೆಯಲ್ಲಿ ಕಂಡುಬಂದ ಈ ನಾಟಕವು ಸಾಮಾಜಿಕ ವಾಸ್ತವವನ್ನು ಬಿಂಬಿಸಿ ಜನಪರವಾದ ನಿಲುವನ್ನು ಹೊಂದಿದೆ.

ಬಿಲ್ಲು ವಿದ್ಯೆಯನ್ನು ಕಲಿಯಲು ತಾಯಿಯ ಮತ್ತು ಮಾವನ ಅಪ್ಪಣೆಯನ್ನು ಪಡೆದು ಏಕಲವ್ಯ ಹಸ್ತಿನಾವತಿಗೆ ಬರುತ್ತಾನೆ. ಅಲ್ಲಿ ದ್ರೋಣರು ಕೌರವ-ಪಾಂಡವರಿಗೆ ಬಿಲ್ಲು ವಿದ್ಯೆ ಕಲಿಸುತ್ತಿರುತ್ತಾರೆ. ಈ ಸಂದರ್ಭದಲ್ಲಿ ಬಿಲ್ಲು ವಿದ್ಯೆಯನ್ನು ಅಪೇಕ್ಷಿಸಿದ ಏಕಲವ್ಯ ಭೀಮ ಅರ್ಜುನರಿಂದ ಅವಮಾನಕ್ಕೆ ಒಳಗಾಗುತ್ತಾನೆ. ತನ್ನ ಜನ್ಮಕ್ಕೆ ಧಿಕ್ಕಾರ ಹಾಕಿಕೊಳ್ಳುತ್ತಾನೆ. ದ್ರೋಣಾಚಾರ್ಯರು ಅಸಹಾಯಕರಾಗುತ್ತಾರೆ. ದ್ರೋಣ ಅಶ್ವತ್ಥಾಮನಿಗೆ ಬಿಲ್ಲು ವಿದ್ಯೆಯನ್ನು ಕಲಿಸುವುದನ್ನು ನೋಡಿದ ಏಕಲವ್ಯನಿಗೆ ಅದನ್ನು ಅನುಕರಣೆ ಮಾಡಿಕೊಳ್ಳುವುದೇ ಲಾಭವಾಗುತ್ತದೆ.

ಮುಂದೆ 'ಏಕಲವ್ಯ'ನು ದ್ರೋಣರ ಪ್ರತಿಮೆಯನ್ನು ಮುಂದೆ ಇಟ್ಟುಕೊಂಡು ಅದನ್ನೇ ಗುರುವನ್ನಾಗಿ ಮಾಡಿಕೊಂಡು ಬಿಲ್ಲು ವಿದ್ಯೆಯನ್ನು ಅಭ್ಯಾಸಮಾಡಿ ಪರಿಣಿತನಾಗುತ್ತಾನೆ. ಒಂದು ದಿನ ಕಾಡಿಗೆ ದ್ರೋಣ ಅರ್ಜುನ ಬರುತ್ತಾರೆ. ಅವರ ಬೇಟೆ ನಾಯಿ ಬೊಗಳಿದ್ದನ್ನು ಕೇಳಿ ಏಕಲವ್ಯನು ಶಬ್ದವೇದಿ ಬಾಣವನ್ನು ಬಿಡುತ್ತಾನೆ. ಶಬ್ದವೇದಿ ಬಾಣವನ್ನು ಬಿಟ್ಟವರನ್ನು ಕಂಡು ಅರ್ಜುನ ದ್ರೋಣರು ಆಶ್ಚರ್ಯಚಕಿತರಾಗುತ್ತಾರೆ. ಈ ಬಾಣವನ್ನು ಬಿಟ್ಟವರನ್ನು ಹುಡುಕುತ್ತಾ ಬರುತ್ತಾರೆ. ಈ ಸಂದರ್ಭದಲ್ಲಿ ಶಬ್ದವೇದಿ ಬಾಣವನ್ನು ಬಿಟ್ಟ ಏಕಲವ್ಯನು, ಅವನ ಪ್ರತಿಮಾಗುರುವಾದ ದ್ರೋಣ ಮತ್ತು ವಿದ್ಯೆಯನ್ನು ಕಲಿಯಲು ಅಸಹಕಾರವನ್ನು ನೀಡಿದ ಅರ್ಜುನ ಭೇಟಿಯಾಗುತ್ತಾರೆ. ಏಕಲವ್ಯನ ಗುರುವಿನ ಪ್ರಶ್ನೆಯು ದ್ರೋಣರಿಗೆ ಎದುರಾಗುತ್ತದೆ. ಆಗ ಏಕಲವ್ಯನು ನೀವೇ ನನ್ನ ಗುರುಗಳು ಎಂದು ದ್ರೋಣರಿಗೆ ವಿವರಿಸುತ್ತಾನೆ. ಏಕಲವ್ಯನ ಬಿಲ್ಲುವಿದ್ಯೆಯ ಸಿದ್ಧಿಯ ಗುರುಗಳಾದ ದ್ರೋಣರು ಸಂಕಟಕ್ಕೆ ಗುರಿಯಾಗುತ್ತಾರೆ. ದ್ರೋಣರು ಅರ್ಜುನನಿಗೆ ಕೊಟ್ಟ 'ಶಬ್ದವೇದಿ' ವಿದ್ಯೆಯ ವಚನವು ಭಂಗವಾಗುತ್ತದೆ. ಪರಿಣಾಮವಾಗಿ ದ್ರೋಣರು ಗುರುದಕ್ಷಿಣೆಯಾಗಿ ಏಕಲವ್ಯನ ಬಲಗೈ ಹೆಬ್ಬೆರಳನ್ನು ಕೇಳುತ್ತಾರೆ. ಧನ್ಯಗೊಂಡ ಏಕಲವ್ಯನು ಬಲಗೈ ಹೆಬ್ಬೆರಳನ್ನು ಕತ್ತರಿಸಿ ಕೊಡುತ್ತಾನೆ. ಆದರೆ ಏಕಲವ್ಯನು ಎಡಗೈಯಲ್ಲಿಯೂ ಬಲಗೈನಷ್ಟೇ ಪ್ರಮಾಣದಲ್ಲಿ ಬಾಣ ಪ್ರಯೋಗ ಮಾಡುವುದನ್ನು ಕಲಿತಿರುತ್ತಾನೆ. ವಿದ್ಯೆಯು ಕೆಲವರದೇ ಸ್ವತ್ತಾಗಿರುವುದು ಈ ಹಿಂದೆ ಕಂಡುಬಂದಿದೆ. ಅದನ್ನು ಮೀರಿ ಕಲಿತರೆ ಅದರ ಪರಿಹಾರಕ್ಕೆ ಏಕಲವ್ಯನಂತೆ ಗುರಿಯಾಗಬೇಕಿತ್ತು. ಆದರೆ ಇದರ ಪ್ರತಿಯಾಗಿ ಏಕಲವ್ಯನು ಮುಂಜಾಗ್ರತೆಯಿಂದ ಎಡಗೈನಲ್ಲೂ ಬಿಲ್ಲುವಿದ್ಯೆ ಕಲಿತಿರುವುದು ಶತ್ರುಪಾಳಯದವರ ಎದುರು ಜಾಗ್ರತೆಯನ್ನು ವಹಿಸುವುದು ಆಗಿರುತ್ತದೆ. ಕಲಿತ ವಿದ್ಯೆಯನ್ನು ಯಾರೂ ಕಸಿದುಕೊಳ್ಳಲು ಆಗುವುದಿಲ್ಲ ಎಂಬುದಕ್ಕೆ ಮಾದರಿಯಾಗಿ ಏಕಲವ್ಯನ ಬಿಲ್ಲುವಿದ್ಯೆಯು ಇಲ್ಲಿ ಕಂಡು ಬರುತ್ತದೆ.

ಕರುಕ್ಷೇತ್ರ ಯುದ್ಧದ ಸಂದರ್ಭದಲ್ಲಿ ಕೌರವರು ಮತ್ತು ಪಾಂಡವರು ಯುದ್ಧಕ್ಕೆ ಸಹಾಯವನ್ನು ಕೋರಿ ಯುದ್ಧ ಪರಿಣತಿಯನ್ನು ಹೊಂದಿದ ಏಕಲವ್ಯನಲ್ಲಿಗೆ ಬರುತ್ತಾರೆ. ಆಗ ಏಕಲವ್ಯನ ಭಿನ್ನ ನಿಲುವನ್ನು ವ್ಯಕ್ತಪಡಿಸುತ್ತಾನೆ. ಏಕಲವ್ಯನ ದೃಷ್ಟಿಯಲ್ಲಿ ಕರ್ಣನೂ ಕೂಡ ಹಂಗಿನಲ್ಲಿ ಬದುಕುವವನಾಗಿ ಕಾಣುತ್ತಾನೆ. "ಏಕಲವ್ಯ : ಕೌರವರಿಗೆ ಹತ್ತಿರವಾದ ಅಂಗಾಧಿಪತಿ ಕರ್ಣ ನಾನು ನಿಷಾಧನೆಂದು ಯಾರೇ ಹಿಯ್ಯಾಳಿಸಿ ನೋಯಿಸಿದರೂ ನಾನು ಯಾರ ಹಂಗಿಗೂ ಒಳಗಾಗಿಲ್ಲ ನಿನ್ನ ಹಾಗೆ"[೯] ಶೂದ್ರರ, ದಲಿತರ, ಬದುಕು ಬೇರೆಯ ರೀತಿಯದು. ಅದು ಅವರವರ ಸಮುದಾಯದೊಂದಿಗಿನ ಹಲವು ಬಗೆಯ ಕರ್ತವ್ಯಗಳಲ್ಲಿರುತ್ತವೆ. ಇದು ಏಕಲವ್ಯನ ದೃಷ್ಟಿಕೋನದಲ್ಲಿ ವಿದ್ಯೆಕಲಿತ ಶೂದ್ರರ ಕರ್ತವ್ಯಗಳು ಬೇರೆಯ ರೀತಿಯವುಗಳೇ ಆಗಿರುತ್ತವೆ. ಶೂರನಾದ ಏಕಲವ್ಯನನ್ನು ಆಳುವ ಎರಡು ರಾಜ ಗುಂಪುಗಳು ಸಹಾಯಕ್ಕೆ ಕರೆಯುವುದು ಇಲ್ಲಿ ಮುಖ್ಯವಾಗುತ್ತದೆ. "ಅರ್ಜುನ : ನೀನು ನಿಜವಾದ ವೀರ, ತಿರಸ್ಕೃತನಾದರೂ ಯಾರ ಸಹಾಯವೂ ಇಲ್ಲದೆ ವಿದ್ಯೆಯನ್ನು ಕಲಿತ ಛಲಗಾರ. ಬಲಗೈಯಲ್ಲಿ ಹೋದದನ್ನು ಎಡಗೈಯಲ್ಲಿ ಸಾಧಿಸಿದೆ. ಹೆಬ್ಬೆರಳು ಹೋದದ್ದು ಮಹಾಪ್ರಮಾದಕ್ಕೆ ಎಡೆಕೊಡಲಿಲ್ಲವಲ್ಲ. ಏಕಲವ್ಯ : ಆದರೂ ನನಗೆ ನೋವಾಗಿದೆ ಅರ್ಜುನ, ಬಲಗೈ ಹೆಬ್ಬೆರಳು ಕತ್ತರಿಸಿದ ಗಾಯ ಮಾಗಿದ್ದರೂ ಹೃದಯದಲ್ಲಿ ಗಾಯ ಮಾಯಲು ಯುಗ ಯುಗಗಳೇ ಬೇಕೆನಿಸುತ್ತದೆ."[೧೦] ಸ್ವಪ್ರಯತ್ನದಿಂದ ಗುರುಗಳ ನೆನಪಲ್ಲಿ ಅಸಾದಾರಣ ಬಿಲ್ಲು ವಿದ್ಯೆಯನ್ನು ಕಲಿತದ್ದು; ಅದರ ಪರಿಣಾಮವಾಗಿ ಆಳುವ ವರ್ಗಗಳು ತಮ್ಮ ಸ್ವಾರ್ಥಕ್ಕೆ ಬಲಿ ತೆಗೆದುಕೊಳ್ಳಲು ಪ್ರಯತ್ನಿಸುವುದು ಇಲ್ಲಿಯ

ವಿಷಾದ. ಅದು ದೈಹಿಕ ಸಂಬಂಧಕ್ಕೆ ಸೀಮಿತಗೊಳ್ಳದೆ ಮಾನಸಿಕವಾಗಿ ಬಹಳಷ್ಟು ಯಾತನೆಯನ್ನು ಕೊಡುತ್ತದೆ. ಕರ್ಣನು ದುರ್ಯೋಧನನ ಪರವಾಗಿ ಯುದ್ಧದಲ್ಲಿ ಸಹಾಯಕನಾಗು ಎಂದು ಕೇಳಿದ್ದಕ್ಕೆ "ಕರ್ಣ ನನಗೂ ನಿನಗೂ ಹೋಲಿಕೆ ಎಲ್ಲಿ? ನೀನೀಗ ಸೂತಪುತ್ರನಲ್ಲ. ಅದನ್ನು ಮೀರಿ ಬೆಳೆದಿದ್ದೀಯ ಈಗ ನೀನು ಅಂಗಾಧಿಪತಿ, ಆದರೆ ನಾನಿನ್ನೂ ಬೇಡ. ಅದಕ್ಕಾಗಿ ಕೌರವರು ಪಾಂಡವರಿಬ್ಬರ ಹಿತಾಸಕ್ತಿಗಳು ನನಗೆ ಬೇರೆಯಾಗಿ ಕಾಣುತ್ತಿಲ್ಲ. ಸುಯೋಧನ ನಿನ್ನನ್ನು ಒಪ್ಪಿಕೊಂಡಿದ್ದಾನೆ. ಇಡೀ ಸೂತಕುಲವನ್ನಲ್ಲ. ಸೂತ ಕುಲ ಹಿಂದೆ ಇದ್ದ ಸ್ಥಿತಿಯಲ್ಲಿಯೇ ಇದೆ. ದುರ್ಯೋಧನನ ಆಶ್ರಯದಲ್ಲಿ ನೀನು ಬೆಳೆದೆ, ಆದರೆ ನೀನು ನಿನ್ನ ಕುಲದವರನ್ನು ಕಣ್ಣ ತುಂಬಾ ನೋಡಿಲ್ಲ. ಅವರೊಡನೆ ಒಡನಾಟ ಮಾಡಿಲ್ಲ. ಬೆಸ್ತನ ಮೈ ವಾಸನೆಯಿಂದ ದುರ್ಯೋಧನ ಹತ್ತು ಗಾವುದ ದೂರ ಓಡಿದರೆ ನೀನು ನೂರು ಗಾವುದ ದೂರ ಓಡುವ ಸ್ಥಿತಿಯಲ್ಲಿದ್ದೀಯ. ನನ್ನ ಮಾತು ಸುಳ್ಳೆ ದಾನಶೂರ!; ನನಗೆ ಎರಡೂ ಶಕ್ತಿಗಳು ಒಂದೇ. ಅವರವರ ಸ್ವಾರ್ಥಕ್ಕಾಗಿ ಬಡಿದಾಡುತ್ತಿದ್ದಾರೆ. ಇವರಿಬ್ಬರ ಕಚ್ಚಾಟದಲ್ಲಿ ನಾವೇಕೆ ಬಲಿಪಶುಗಳಾಗಬೇಕು"[೧೧]. ಇದು ಏಕಲವ್ಯನ ಬಹುಮುಖ್ಯವಾದ ಪ್ರಶ್ನೆಯಾಗುತ್ತದೆ. ಯುದ್ಧದಲ್ಲಿ ಕೌರವರು ಗೆಲ್ಲಬೇಕು ಇಲ್ಲವೆ ಪಾಂಡವರು ಗೆಲ್ಲಬೇಕು; ಇಬ್ಬರಲ್ಲಿ ಯಾರಾದರೂ ಒಬ್ಬರು ರಾಜ್ಯವನ್ನು ಗೆದ್ದು ಆಳುತ್ತಾರೆ. ಅದರಿಂದ ನಮಗೆ ಸಿಗುವ ಲಾಭವಾದರೂ ಏನು? ಎಂಬುದು ಏಕಲವ್ಯನ ಪ್ರಶ್ನೆಯಾಗುತ್ತದೆ. "ಅರ್ಜುನನ ಕುಲಮದ ಮಾತ್ರ ಅಳಿಯಬೇಕು. ಇದರಿಂದ ಈ ಲೋಕದ ಮೇಲು ಕೀಳು ನಾಶವಾಗಬೇಕು. ನಿನಗೆ ಸ್ವಾರ್ಥವೇ ಮುಖ್ಯ ಕುಲಪ್ರತಿಷ್ಠೆಯ ವಿನಾಶವಲ್ಲ. ಕುರು ಪಾಂಡವರಲ್ಲಿ ಒಂದು ಪಕ್ಷ ವಹಿಸಿ ಯಾರೊಬ್ಬರ ದಾಳ ನಾನಾಗಲಾರೆ ಎಲ್ಲೆಲ್ಲೂ ಇರುವ ಅನ್ಯಾಯದ ವಿರುದ್ಧ ನನ್ನ ಯುದ್ಧ. ಮೇಲು ಕೀಳೆಂಬ ವಂಚನೆಯನ್ನು ಅಳಿಸಲು ನನ್ನ ಸಮರ. ಕುರುಕ್ಷೇತ್ರ ಕೇವಲ ಉಳ್ಳವರ ನಡುವಿನ ಕಚ್ಚಾಟ. ನನ್ನದು ಇಲ್ಲದವರ ಪರವಾದ ಹೋರಾಟ. ಈ ಸಂಘರ್ಷ ಕುರು ಪಾಂಡವರಿಬ್ಬರ ವಿರುದ್ಧವೂ ಸಾಗಬೇಕು. ಆಗ ಮಾತ್ರ ತುಳಿತಕ್ಕೆ ಸಿಕ್ಕವರ ಬಾಳಿಗೆ ಬೆಳಕು ಮೂಡುತ್ತದೆ"[೧೨].

ದಲಿತರ / ಶೋಷಿತರ ಹೋರಾಟವು ಕುರು ಪಾಂಡವರಂತೆ ವ್ಯವಸ್ಥೆಯ ವಿರುದ್ಧ ಹೋರಾಡಬೇಕು ಎಂಬುದರ ಅರಿವಿನ ಕಡೆಗೆ ಸಾಗುತ್ತದೆ. ಈ ಹೊತ್ತಲ್ಲಿ ಈ ನಾಟಕವು ಪ್ರಸ್ತುತವಾಗುತ್ತದೆ. ಅದು ದಲಿತರು ಯಾವುದೇ ಶಕ್ತಿರಾಜಕಾರಣದೊಂದಿಗೆ ತಮ್ಮ ಬೆಂಬಲವನ್ನು ನೀಡಿ ಅಥವಾ ಯಾವುದೇ ಆಡಳಿತ ಪಕ್ಷದೊಂದಿಗೆ ಸಹಕಾರ ನೀಡಿದರೆ ಸಾಲದು. ವಾಸ್ತವದ ಬದುಕಲ್ಲಿ ದಲಿತ ವಿದ್ಯಾವಂತರು ದಲಿತ ಹೋರಾಟಗಾರರು, ದಲಿತ ಚಿಂತಕರು ಏಕಲವ್ಯನಂತೆ ತನ್ನ ಸಮುದಾಯದ ಒಳತಿಗೆ ಹೋರಾಟಕ್ಕೆ ನಿಲ್ಲಬೇಕು ಎಂಬುದು ಆಗಿದೆ.

ಪ್ರರಾಣದ ವಸ್ತುವು ಸಿದ್ಧಲಿಂಗಯ್ಯನವರ 'ಏಕಲವ್ಯ' ನಾಟಕದಲ್ಲಿ ಸಮಕಾಲೀನ ವಸ್ತುಸ್ಥಿತಿಗೆ ಸಂಬಂಧಿಸಿದ್ದಾಗಿದೆ. ಇದು ಈವೊತ್ತಿನ ದಲಿತ ಶಿಕ್ಷಿತ ಸಮುದಾಯಗಳಿಗೆ ಏಕಲವ್ಯನ ನಿರ್ಧಾರವು ಪ್ರಸುತ್ತವಾಗುತ್ತದೆ ಎಂಬುದು ಈ ನಾಟಕಕಾರನ ಅಭಿಪ್ರಾಯವಾಗಿದೆ.

ಮ.ನ. ಜವರಯ್ಯನವರ 'ಜಲ' ನಾಟಕವು ಗೌತಮ ಬುದ್ಧನನ್ನು ಕುರಿತ ಒಂದು ಅಜ್ಞಾತ ಕಥಾವಸ್ತುವನ್ನು ಹೊಂದಿದ ನಾಟಕ. ಈ ನಾಟಕವು ಎರಡು ರಾಜ್ಯಗಳ ನಡುವಿನ 'ಜಲ' ಸಮಸ್ಯೆಯನ್ನು ಎತ್ತಿಕೊಂಡು ಅದರ ಪರಿಹಾರಕ್ಕೆ ಸಾಧ್ಯಾಸಾಧ್ಯತೆಯನ್ನು ಕುರಿತಂತೆ ಇದೆ. ಇಲ್ಲಿ ಗೌತಮನ ವ್ಯಕ್ತಿತ್ವವು ಮುಖ್ಯವಾಗುತ್ತದೆ. ಅದು ಜೀವ ಸಂಕುಲಗಳ

ಜೀವ ಪ್ರಶ್ನೆಯಾಗಿರುತ್ತದೆ. ಬೇಟೆಯ ಸಂದರ್ಭದಲ್ಲಿ ಅದನ್ನು ನೋಡಬಹುದು.

"**ರಣತುಂಗ :** ಕ್ಷತ್ರಿಯರಿಗೆ ತುಂಬ ಪ್ರಿಯವಾದ ಬೇಟೆ ಆಡೋ ಕ್ರೀಡೆ ಮೊದಲೇ ಆಡ್ಬೇಕು. ಯಾಕಂದ್ರೆ ಬಾಣ ಪ್ರಯೋಗ ಮಾಡಿ ಗುರಿ ಸಾಧಿಸೋ ಕ್ರೀಡೆ ಬಾರಿ ಮುಖ್ಯ.

**ಗೌತಮ :** ಆದರೆ ನಾನಿದನ್ ಒಪ್ಪೋದಿಲ್ಲ. ನೀವು ಬೇಟೆ ಆಡೋದು ಅಂದ್ರೆ ಯಾರ್ಮೇಲೆ ಗುರಿ ಇಡೋದು.

**ರಣತುಂಗ :** ಇನ್ಯಾರ್ ಮೇಲೆ ಪ್ರಾಣಿಗಳ ಮೇಲೆ ಪಕ್ಷಿಗಳ ಮೇಲೆ ......

**ಗೌತಮ :** ಆದರೆ ನೀವು ಬೇಟೆ ಆಡೋ ಕೇವಲ ಆಟಕ್ಕೆ ಆ ಮಾತಿಲ್ಲದ ಮೂಕ ಪ್ರಾಣಿ-ಪಕ್ಷಿಗಳ ಪ್ರಾಣ ಯಾಕ್ ತಗೀಬೇಕು ?..... ಯಾರ್ ಪ್ರಾಣಾನ್ ಯಾರೂ ತಗೀಬೇಕಾಗಿಲ್ಲ ಆದರೆ ಬಾಣ ಪ್ರಯೋಗ ಮಾಡಿ ಗುರಿ ಇಡೋದನ್ನ ಕಲಿಯಲ್ಲಿಕ್ಕೆ ಬೇರೆ ವಿಧಾನಗಳಿವೆ. ಒಂದು ಮಣ್ಣಿನ ಮೂರ್ತಿ ಮಾಡಿಟ್‌ಕೊಂಡು ಗುರಿ ಸಾಧನೆ ಕಲಿಯಬಹುದಲ್ಲ"[೧].

ಬೇಟೆಯ ಸಂದರ್ಭದ ಪ್ರಶ್ನೆಯನ್ನು ಎತ್ತಿಕೊಂಡು ಅದಕ್ಕೆ ಬಲಿಯಾಗುವ ಮುಗ್ಧ ಪ್ರಾಣಿ-ಪಕ್ಷಿಗಳ ಸಾವನ್ನೂ ಕಾಣುವುದು, ಅದಕ್ಕೆ ತಿಳಿವನ್ನು ಹೇಳುವುದು ಇಲ್ಲಿ ಮುಖ್ಯವಾಗುತ್ತದೆ. ಮನುಷ್ಯ ಬುದ್ಧಿಜೀವಿ ಅವನು ಸರಿ ತಪ್ಪುಗಳನ್ನು ಯೋಚಿಸುವ ಅರಿವನ್ನು ಹೊಂದಿರುವುದರಿಂದ ಇಲ್ಲಿ ಗೌತಮನ ತೀರ್ಮಾನವು ಮುಖ್ಯವಾಗುತ್ತವೆ.

ಜಲದ ವಿವಾದಕ್ಕೆ ಸಂಬಂಧಪಟ್ಟಂತೆ ಎರಡು ರಾಜ್ಯಗಳೂ ಕುಳಿತು ಮುಖಾಮುಖಿ ಮಾತನಾಡುವುದರಿಂದ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದು ಎಂಬುದು ಈ ನಾಟಕದ ವಸ್ತುವಾಗಿದೆ. ಇದು ಗೌತಮನ ಉದ್ದೇಶವಾಗಿರುತ್ತದೆ. ಆದರೆ ಗೌತಮನ ಮಾತುಗಳು ಸಭೆಗೆ ಒಪ್ಪಿತವಾಗುವುದಿಲ್ಲ. ಆದ ಕಾರಣ ಇಲ್ಲಿಯ ತೀರ್ಮಾನವು ಯುದ್ಧ ನಡೆಯುಬೇಕೆಂದು ಆಗುತ್ತದೆ. ಆದ್ದರಿಂದ ಅವನು ಅದರ ಪರಿಹಾರಕ್ಕೆ ಸನ್ಯಾಸವನ್ನು ಸ್ವೀಕರಿಸುತ್ತಾನೆ. ಇದರಿಂದ ಅವನಿಗೆ ವಾಸ್ತವವನ್ನು ಎತ್ತಿಹಿಡಿಯಲು ಅನುವಾಗುತ್ತದೆ. 'ಜಲ' ವಿವಾದರಲ್ಲಿ ಗೌತಮನ ತೀರ್ಮಾನವು ಶಾಂತಿ ಕಾಪಾಡುವುದು ಮುಖ್ಯವಾಗಿದೆ. ಕೋಲಿಯ ದೇಶದ ಮೇಲೆ ಯುದ್ಧ ಘೋಷಿಸುವುದು ಗೌತಮನಿಗೆ ಸರಿಯಾಗಿ ಕಾಣುವುದಿಲ್ಲ. ಇವನ ತೀರ್ಮಾನ ರೋಹಿಣಿ ನದಿಯ ನೀರನ್ನು ಎರಡೂ ದೇಶಗಳು ಮಾತುಕತೆಯಿಂದ ಜಲವಿವಾದವನ್ನು ಬಗೆಹರಿಸಿಕೊಳ್ಳಬೇಕು. ಶಾಕ್ಯ ಸಾಮ್ರಾಜ್ಯ ಮತ್ತು ಕೋಲಿಯ ಎರಡೂ ದೇಶಗಳೂ ಕೃಷಿಗೆ ಎಷ್ಟೆಷ್ಟು ನೀರನ್ನು ಬಳಸುತ್ತಾರೆ ಹಾಗೂ ಎಷ್ಟೆಷ್ಟು ನೀರನ್ನು ಉಪಯೋಗಿಸಬೇಕು ಅನ್ನುವುದು ಇದುವರೆಗೂ ಚರ್ಚೆಗೆ ಒಳಗೊಂಡಿಲ್ಲ, ಆದ ಕಾರಣ ಯುದ್ಧ ನೀತಿಗೆ ನನ್ನ ವಿರೋಧವಿದೆ ಎಂಬ ಮಾತನ್ನು ಗೌತಮ ವ್ಯಕ್ತ ಪಡಿಸುತ್ತಾನೆ. ರಾಜ್ಯ ಆಡಳಿತವರ್ಗ ಅದಕ್ಕೆ ಸಮ್ಮತಿಸುವುದಿಲ್ಲ ಪರ್ಯಾಯವಾಗಿ ಸನ್ಯಾಸವನ್ನು ಸ್ವೀಕರಿಸುತ್ತಾನೆ. ಇಲ್ಲಿಗೆ ನಾಟಕ ಮುಗಿಯುತ್ತದೆ.

ಈ ನಾಟಕದಲ್ಲಿ ರಾಜ್ಯದ ಒಳಿತು ಮುಖ್ಯವಾಗುತ್ತದೆ. ಅಂತಸ್ತು ಅಧಿಕಾರ ಇವು ಎರಡನೆಯದಾಗುತ್ತದೆ. ರಾಜ್ಯದ ಹಿತಕ್ಕೆ ಮತ್ತು ಜೀವ ಸಂಕುಲದ ಹಿತಕ್ಕೆ ಇಲ್ಲಿ ಆದ್ಯತೆಯನ್ನು ನೀಡಲಾಗಿದೆ. ಗೌತಮನ ಸನ್ಯಾಸತ್ವವು ಇಂದಿನ ಸಮಕಾಲಿನ ಸಂದರ್ಭದಲ್ಲಿ ಒಂದು ನೆಪವಷ್ಟೆ. ಜೀವ ಸಂಕುಲದ ಒಳಿತಿಗೆ ಇಂತಹ ಸನ್ಯಾಸವು ಬಹಳ ಮುಖ್ಯವಾಗುತ್ತದೆ ಎಂಬುದು ಈ ನಾಟಕದ ಒಟ್ಟು ಆಶಯವಾಗಿದೆ. ಇದುವರೆಗೆ ಕನ್ನಡದ ದಲಿತ ನಾಟಕಗಳನ್ನು ಕುರಿತು ಅವುಗಳ ವಿವಿಧ ಆಯಾಮಗಳಲ್ಲಿ ಚರ್ಚಿಸಲಾಯಿತು.

## ಅಡಿಟಿಪ್ಪಣಿಗಳು

೦೧. ಸಿ. ಬಸಲಿಂಗಯ್ಯ, ದಾಖಲಿಸಿದವರು ಕೆ.ಆರ್ ದುರ್ಗಾದಾಸ್, ಜಿ.ವಿ. ಆನಂದ ಮೂರ್ತಿ, 'ಮೂರು ದಲಿತ ಕಮ್ಮಟಗಳು', ಪುಟ ೭-೮

೦೨. -- ಅದೇ -- ಪುಟ ೧೬

೦೩. ಸಿದ್ಧಲಿಂಗಯ್ಯ, 'ಪಂಚಮ ಮತ್ತು ನೆಲಸಮ', ಪುಟ ೩-೪

೦೪. -- ಅದೇ -- ಪುಟ ೬-೭

೦೫. -- ಅದೇ -- ಪುಟ ೧೭-೧೮

೦೬. -- ಅದೇ -- ಪುಟ ೨೫

೦೭. -- ಅದೇ -- ಪುಟ ೨೭

೦೮. ಸಿದ್ಧಲಿಂಗಯ್ಯ, 'ಏಕಲವ್ಯ' ಪುಟ ೫

೦೯. -- ಅದೇ -- ಪುಟ ೫೫

೧೦. -- ಅದೇ -- ಪುಟ ೫೬

೧೧. -- ಅದೇ -- ಪುಟ ೫೬

೧೨. -- ಅದೇ -- ಪುಟ ೫೯

೧೩. ಮನಜ, 'ಜಲ' ಪುಟ ೫೭

# ರಾಜಕೀಯ ನೆಲೆ

ಈ ಅಧ್ಯಾಯದಲ್ಲಿ ಕರ್ನಾಟಕ ದಲಿತ ಚಳುವಳಿಯನ್ನು ರಾಜಕೀಯ ನೆಲೆಯ ವಿಶ್ಲೇಷಣೆಗೆ ಒಳಪಡಿಸಲಾಗುವುದು. ಅಥವಾ ಕರ್ನಾಟಕ ದಲಿತ ಚಳುವಳಿಯೊಳಗಿನ ರಾಜಕೀಯ ಹಿತಾಸಕ್ತಿಯ ಸ್ವರೂಪಗಳನ್ನು ಕುರಿತು ಚರ್ಚಿಸಲಾಗುವುದು. ಯಾವುದೇ ಚಳುವಳಿಗೆ ಒಂದು ಸಿದ್ಧಾಂತವಿರುತ್ತದೆ. ಆ ಸಿದ್ಧಾಂತಕ್ಕೆ ಒಂದು ರಾಜಕೀಯ ಚೌಕಟ್ಟಿರುತ್ತದೆ. ರಾಜಕೀಯ ಚಿಂತನೆ ಇಲ್ಲದ ಸಿದ್ಧಾಂತವಿರುವುದಿಲ್ಲ. ಸಿದ್ಧಾಂತವಿಲ್ಲದ ಚಳುವಳಿ ಇರುವುದಿಲ್ಲ. ಹಾಗಾಗಿ ಚಳುವಳಿ ಮತ್ತು ರಾಜಕೀಯ ಚಿಂತನೆಗಳನ್ನು ಕುರಿತು ಚರ್ಚಿಸುವ ಈ ಅಧ್ಯಾಯದಲ್ಲಿ ಅಂತಿಮವಾಗಿ ದಲಿತ ಚಳುವಳಿಯ ಮೌಲ್ಯಮಾಪನವನ್ನು ಮಾಡಲಾಗುತ್ತದೆ. ಇದಿಷ್ಟು ಈ ಅಧ್ಯಾಯದ ಒಟ್ಟು ಸ್ವರೂಪ.

## ೪.೧ ಪ್ರಜಾಪ್ರಭುತ್ವದಲ್ಲಿ ಶಕ್ತಿರಾಜಕಾರಣ ಮತ್ತು ದಲಿತ ಚಳುವಳಿ

ಇಂಡಿಯಾದಲ್ಲಿ ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯು ಈಗ ಜಾರಿಯಲ್ಲಿದೆ. ಇದರ ಸ್ಥಾಪಿತ ಗ್ರಹಿಕೆಯ ನೆಲೆಯಲ್ಲೇ ಶಕ್ತಿ ರಾಜಕಾರಣವನ್ನು ಮತ್ತು ದಲಿತ ಚಳುವಳಿಯನ್ನು ನೋಡಬೇಕಾಗಿದೆ.

ದಲಿತ ಜನಾಂಗದ ರಾಜಕೀಯ, ಆರ್ಥಿಕ, ಸಾಮಾಜಿಕ ವಿಮೋಚನೆಗಾಗಿ ಹೋರಾಡಿದವರು ಡಾ.ಬಿ.ಆರ್. ಅಂಬೇಡ್ಕರ್ ಅವರು. ಅಂಬೇಡ್ಕರರು ದಲಿತರ ವಿಮೋಚನೆಗಾಗಿ ಮತ್ತು ಅದರ ಒಂದು ಪ್ರಧಾನ ಭಾಗವಾಗಿ ದಲಿತರಿಗೆ ಪ್ರತ್ಯೇಕ ಚುನಾವಣಾ ವ್ಯವಸ್ಥೆಯ ಬೇಡಿಕೆಯನ್ನು ಮುಂದಿಟ್ಟಿದ್ದರು. ದುಂಡುಮೇಜಿನ ಪರಿಷತ್ತಿನಲ್ಲಿ ಇದು ಪ್ರಧಾನ ಚರ್ಚೆಗೆ ಒಳಗಾಯಿತು. ಅಂಬೇಡ್ಕರರ ಬೇಡಿಕೆಯನ್ನು ಗಾಂಧೀಜಿಯವರು ಪ್ರಬಲವಾಗಿ ವಿರೋಧಿಸಿದರು. ಆದರೆ ಅಂಬೇಡ್ಕರರು ತಮ್ಮ ಬೇಡಿಕೆಯನ್ನು ಸಶಕ್ತ ಕಾರಣಗಳನ್ನು ಕೊಟ್ಟು ಧೀಮಂತ ನೆಲೆಯಲ್ಲಿ ಮಂಡಿಸಿದರು. ಗಾಂಧೀಜಿಯವರಿಗೆ ಅದನ್ನು ವಿರೋಧಿಸುವ ದಾರಿ ಕಾಣಲಿಲ್ಲ. ಹಾಗಾಗಿ ಅವರು ಅಂಬೇಡ್ಕರರು ತಮ್ಮ ಬೇಡಿಕೆಯನ್ನು ಹಿಂತೆಗೆದುಕೊಳ್ಳಬೇಕೆಂದು ಉಪವಾಸ ಸತ್ಯಾಗ್ರಹವನ್ನು ಆರಂಭಿಸಿದರು. ಇಡೀ ದೇಶದ ಗಮನ ಆ ಕಡೆಗೆ ಕೇಂದ್ರೀಕೃತವಾಯಿತು. ಆಗ ಅಂಬೇಡ್ಕರರು ಒಂದು ರೀತಿಯ ಇಕ್ಕಟ್ಟಿಗೆ ಒಳಗಾದರು ಮತ್ತು ಅವರ ಮುಂದೆ ನಿರ್ಣಾಯಕವಾಗಿ ಎರಡು ಆಯ್ಕೆಗಳು ಬಂದವು. ಒಂದು ದಲಿತರ ಸಮಗ್ರ ವಿಮೋಚನೆಗಾಗಿ ದಲಿತರಿಗೆ ಪ್ರತ್ಯೇಕ ಚುನಾವಣಾ ವ್ಯವಸ್ಥೆಯ ಬೇಡಿಕೆ ಹಾಗೂ ಗಾಂಧೀಜಿಯ ಪ್ರಾಣ. ಅದು ಸ್ವಾತಂತ್ರ್ಯ ಚಳುವಳಿಯು ಅತಿ ಬಿರುಸಿನಿಂದ

ನಡೆಯುತ್ತಿದ್ದ ಕಾಲವಾಗಿದ್ದರಿಂದ ಗಾಂಧೀಜಿಯ ಪ್ರಾಣದ ಕಡೆಗೆ ಒಂದು ಸಾಮಾನ್ಯ ಅಭಿಪ್ರಾಯ ಕೇಂದ್ರೀಕೃತವಾಯಿತು. ಆದರೆ ದಲಿತರ ಹಿತಾಸಕ್ತಿಯ ಕಡೆಗಾಗಲಿ, ಅಂಬೇಡ್ಕರರ ಬೇಡಿಕೆಯ ಚಾರಿತ್ರಿಕ ಸಮಕಾಲೀನ ಒತ್ತಡಗಳ ಕಡೆಗಾಗಲಿ ಯಾರ ಗಮನವೂ ಹರಿಯಲಿಲ್ಲ. ಇಂಥ ಸಂದಿಗ್ಧ ಪರಿಸ್ಥಿತಿಯೊಂದು ಅಂಬೇಡ್ಕರರ ಮೇಲೆ ಒಂದು ವಿಚಿತ್ರವಾದ ಒತ್ತಡವನ್ನುಂಟುಮಾಡಿತು. ಅಂತಿಮವಾಗಿ ಅಂಬೇಡ್ಕರರು ತಮ್ಮ ಬೇಡಿಕೆಯನ್ನು ಹಿಂತೆಗೆದುಕೊಂಡರು.

ದಲಿತರಿಗೆ ಪ್ರತ್ಯೇಕ ಚುನಾವಣಾ ವ್ಯವಸ್ಥೆಯ ಬದಲಾಗಿ, ಸಾಮಾನ್ಯ ಚುನಾವಣೆಯಲ್ಲಿ ದಲಿತರಿಗೆ ಕೆಲವು ಸ್ಥಾನಗಳನ್ನು ಮೀಸಲಿರಿಸುವ ಕಾನೂನನ್ನು ಅನುಮೋದಿಸಲಾಯಿತು. ಇದು ಅಂಬೇಡ್ಕರರನ್ನು ಸಮಾಧಾನಗೊಳಿಸುವ ಒಂದು ತಂತ್ರವೂ ಆಗಿತ್ತು.

ಸ್ವಾತಂತ್ರ್ಯ ನಂತರದ ಭಾರತದಲ್ಲಿ ಮತ್ತು ಕರ್ನಾಟಕದಲ್ಲಿ ನಡೆಯುವ ಪ್ರತಿಯೊಂದು ಚುನಾವಣೆಯಲ್ಲೂ ದಲಿತ ಸಮುದಾಯದ ಪ್ರತಿನಿಧಿಗಳು ಅವರ ಮೀಸಲು ಕ್ಷೇತ್ರದಿಂದ ಆರಿಸಿ ಬರುತ್ತಿದ್ದಾರೆ. ಈ ಮೀಸಲಾತಿಯು ಈಗ ಜಿಲ್ಲಾ ಪರಿಷತ್ತಿನಿಂದ ಹಿಡಿದು ಗ್ರಾಮ ಪಂಚಾಯಿತಿ ಚುನಾವಣೆಯವರೆಗೂ ಜಾರಿಯಲ್ಲಿದೆ. ಹೀಗೆ ಆರಿಸಿ ಬರುವ ದಲಿತ ರಾಜಕಾರಣಿಗಳಲ್ಲಿ ಒಂದು ಸಾಮಾನ್ಯ ಐಕ್ಯತೆಯಾಗಲಿ, ದಲಿತರ ವಿಮೋಚನೆಗಾಗಿ ಪರಿಣಾಮಕಾರಿಯಾದ ಕಾರ್ಯಕ್ರಮಗಳಾಗಲಿ ಇಲ್ಲ. ಹಾಗಾಗಿ 'ದಲಿತ ರಾಜಕಾರಣಿಗಳಿಂದ ದಲಿತರ ಉದ್ಧಾರ' ಎಂಬುದು ಹುಸಿ ಭ್ರಮೆಯಾಗಿದೆ. ಕಳೆದ ೫೦ ವರುಷಗಳ ಕರ್ನಾಟಕದ ರಾಜಕೀಯದ ಇತಿಹಾಸದಲ್ಲಿ ನಾವಿದನ್ನು ಕಂಡಿದ್ದೇವೆ.

ಇಂದಿಗೆ ಕಾಲುಶತಮಾನದ ಹಿಂದೆ, ಕರ್ನಾಟಕದಲ್ಲಿ ದಲಿತ ಚಳುವಳಿ ಹುಟ್ಟಿದಾಗ ಅದು ಎರಡು ಆಯಾಮದ ಎಚ್ಚರಿಕೆಯನ್ನುಂಟುಮಾಡುವ ಪ್ರಯತ್ನವನ್ನು ಮಾಡಿತು.

ಒಂದು : ಕರ್ನಾಟಕದ ಹಳ್ಳಿ ಹಳ್ಳಿಯ, ಮೂಲೆ ಮೂಲೆಯ ಎಲ್ಲಾ ದಲಿತರನ್ನು ರಾಜಕೀಯವಾಗಿ ಎಚ್ಚರಿಸುವುದು ಅಥವಾ ದಲಿತರಿಗೆ ರಾಜಕೀಯ ತಿಳುವಳಿಕೆಯನ್ನು ನೀಡುವುದು. ಆ ಮೂಲಕ ದಲಿತ ವಲಯದಲ್ಲಿ ಒಂದು ಪ್ರಭಾವ ಶಾಲಿಯಾದ ಸಂಘಟನೆಯನ್ನು ಹುಟ್ಟುಹಾಕುವುದು.

ಎರಡು : ದಲಿತರ ಹಿತಾಸಕ್ತಿಗೆ ವಿಮುಖರಾಗಿ (ಬೆನ್ನುಮಾಡಿ) ಜಡಗೊಂಡು ಹೋಗಿರುವ, ದಲಿತ ಚುನಾಯಿತ ಅಭ್ಯರ್ಥಿಗಳು ದಲಿತರ ಹಿತಕ್ಕಾಗಿ ದುಡಿಯುವಂತೆ ಅವರನ್ನು ಪ್ರಚೋದಿಸುವುದು ಮತ್ತು ವಿಶ್ವಾಸಕ್ಕೆ ತೆಗೆದುಕೊಳ್ಳುವುದು. ಕರ್ನಾಟಕದ ಯಾವುದೇ ಭಾಗದಲ್ಲಿ ಅತ್ಯಾಚಾರ, ಕೊಲೆ ಮುಂತಾದ ಅಮಾನವೀಯ ಕೃತ್ಯಗಳು ನಡೆದಾಗ, ತಪ್ಪಿತಸ್ಥರಿಗೆ ಶಿಕ್ಷೆಯಾಗುವಂತೆ ದಲಿತ ಸಂಘರ್ಷ ಸಮಿತಿ ಒತ್ತಾಯಿಸುತ್ತಿತ್ತು. ಅದರ ಜೊತೆಗೇ ಇಂಥ ಪ್ರಕರಣಗಳಿಗೆ ಸಂಬಂಧಿಸಿ ದಲಿತ ರಾಜಕಾರಣಿಗಳಿಂದ ಮಹತ್ವದನ್ನು ನಿರೀಕ್ಷಿಸಲಾಗುತ್ತಿತ್ತು. ಆದರೆ ಯಾವುದೇ ಪ್ರಕರಣದಲ್ಲಿ ದಲಿತ ರಾಜಕಾರಣಿಗಳಿಂದ ಪರಿಣಾಮಕಾರಿಯಾದ ಪ್ರತಿಕ್ರಿಯೆ ಬರುತ್ತಿರಲಿಲ್ಲ. ಇದು ದಲಿತ ಸಂಘರ್ಷ ಸಮಿತಿಯು ಕಂಡುಂಡ ಸತ್ಯ. ಇದರಿಂದ ಬೇಸತ್ತ ದಲಿತ ಸಂಘರ್ಷ ಸಮಿತಿ ಸಂಸದೀಯ ಚುನಾವಣೆಗಳನ್ನೇ ಬಹಿಷ್ಕರಿಸುವ ಒಂದು ಮಹತ್ವದ ರಾಜಕೀಯ ತೀರ್ಮಾನಕ್ಕೆ ಬಂದಿತು. ಕರ್ನಾಟಕದಲ್ಲಿ ದಲಿತ ಚಳುವಳಿ ಹುಟ್ಟಿದಂದಿನಿಂದ ೧೯೮೫ರವರೆಗೂ ಸಂಸದೀಯ ಚುನಾವಣೆಗಳನ್ನು ಬಹಿಷ್ಕರಿಸುತ್ತಾ ಬಂದಿತು. ಅದೇ ಕಾಲದಲ್ಲಿ

ಕರ್ನಾಟಕದಲ್ಲಿ ಬೇರೆ ಕೆಲವು ಚಳುವಳಿಗಳು ಚುನಾಚಣೆಯಲ್ಲಿ ಸ್ಪರ್ಧಿಸಿ ತಮ್ಮ ಪರಿಣಾಮಕಾರಿಯಾದ ಕಾವನ್ನೇ ಕಳೆದುಕೊಂಡಿದ್ದವು. ಇದರಿಂದಾಗಿ ದಲಿತ ಸಂಘರ್ಷ ಸಮಿತಿಗೆ ಚುನಾವಣೆಯಲ್ಲಿ ಸ್ಪರ್ಧಿಸದಿರಲು ಇಂಥ ವಾಸ್ತವಗಳು ಕಾರಣವಾಗಿದ್ದವು.

ದಲಿತ ರಾಜಕಾರಣಿಗಳಿಂದ ನಿರೀಕ್ಷಿತ ಪ್ರಮಾಣದ ಯಾವ ಪರಿಣಾಮಕಾರಿ ಪ್ರಯೋಜನವೂ ದಲಿತರಿಗೆ ಆಗಲಿಲ್ಲ. ಜೊತೆಗೆ ದಲಿತೇತರ ರಾಜಕಾರಣಿಗಳಂತೂ ದಲಿತರ ಪಾಲಿಗೆ ಗಗನ ಕುಸುಮವಾಗಿದ್ದರು. ಇಂಥಾ ಪರಿಸ್ಥಿತಿಯಲ್ಲಿ ದಲಿತ ಸಂಘರ್ಷ ಸಮಿತಿಗೆ ಶಕ್ತಿ ರಾಜಕಾರಣವನ್ನು ಎದುರಿಸುವುದೇ ಬಹುದೊಡ್ಡ ಸಮಸ್ಯೆಯಾಗಿತ್ತು. ಶಕ್ತಿರಾಜಕಾರಣದೊಳಗೆ ಪ್ರವೇಶ ಮಾಡಿ ಗೆದ್ದು ಬಂದರೆ, ಅಲ್ಲಿದ್ದುಕೊಂಡು ದಲಿತರ ಎಲ್ಲಾ ಬಗೆಯ ಸಮಸ್ಯೆಗಳನ್ನು ಬಗೆಹರಿಸುವುದು ಸುಲಭದ ಕೆಲಸವಾಗಿರಲಿಲ್ಲ. ಅದರಿಂದ ಸಂಸದೀಯ ಚುನಾವಣೆಗಳಲ್ಲಿ ಭಾಗವಹಿಸುವುದೇ ಒಂದು ಬಗೆಯ ರಾಜಕೀಯ ಅಪಮಾನ ಎಂಬ ಭಾವನೆ ಆಗ ದಲಿತ ಸಂಘರ್ಷ ಸಮಿತಿಯಲ್ಲಿತ್ತು. ಮತ್ತು ಅಂದು ದಲಿತ ಸಂಘರ್ಷ ಸಮಿತಿಯು ಶಕ್ತಿರಾಜಕಾರಣವನ್ನು ಮೇಲುಜಾತಿಯವರ, ಶ್ರೀಮಂತರ, ಭೂಮಾಲೀಕರ ಒಂದು ಭಾಗವೆಂದು ಪರಿಗಣಿಸಿತ್ತು. ಚುನಾವಣೆಯಲ್ಲಿ ನಿಂತು ಗೆಲ್ಲುವುದೆಂದರೆ, ಶೋಷಕ ವರ್ಗದ ಭಾಗವಾಗುವುದು ಎಂದೇ ಅರ್ಥ ಎಂದು ದ.ಸಂ.ಸ. ಅಂದು ಭಾವಿಸಿತ್ತು. ಹಾಗಾಗಿ ೧೯೮೫ರವರೆಗೆ ಎಲ್ಲಾ ಚುನಾವಣೆಗಳನ್ನು ಬಹಿಷ್ಕರಿಸುತ್ತಾ ಬಂದಿತು. ಚುನಾವಣೆಗಳನ್ನು ಬಹಿಷ್ಕರಿಸುವುದು ಒಂದು ಸಾಂಕೇತಿಕ ಕಾರ್ಯಕ್ರಮವಾಗಿರಲಿಲ್ಲ. ಅದೊಂದು ರಚನಾತ್ಮಕ ಕಾರ್ಯಕ್ರಮವಾಗಿತ್ತು. ಗೋಡೆ ಬರಹ, ಕರಪತ್ರ, ಜಾಥಾ, ಬಹಿರಂಗ ಸಭೆ, ಪತ್ರಿಕಾ ಹೇಳಿಕೆ ಮುಂತಾದವುಗಳ ಮೂಲಕ ಚುನಾವಣೆಯ ಮೋಸ ಕಪಟಗಳನ್ನು ಬಯಲಿಗೆಳೆಯುವ ಕೆಲಸ ನಡೆಯುತ್ತಿತ್ತು. ಯಾರೇ ಗೆದ್ದರೂ - ಯಾರೇ ಸೋತರು ದಲಿತರ ಬದುಕು ಬದಲಾಗಲಿಲ್ಲ ಎಂಬ ವಿಚಾರವನ್ನು ಜನರಿಗೆ ಕೊಡಲಾಗುತ್ತಿತ್ತು. ಜೊತೆಗೆ ಓಟು ಹಾಕುವುದರ ಬದಲು ಶೋಷಿತ ದಲಿತರೆಲ್ಲ ಸೇರಿ ಹೋರಾಟ ಮಾಡಿದಾಗ ಮಾತ್ರ ದಲಿತರ ಸಮಸ್ಯೆಗಳು ಬಗೆಹರಿಯುತ್ತವೆ; ಅಲ್ಲಿ ದಲಿತರ ಉದ್ಧಾರವಿದೆ ಎಂಬ ಶಿಕ್ಷಣವನ್ನೂ ಜನರಿಗೆ ಕೊಡಲಾಗುತ್ತಿತ್ತು.

ಮೇಲಿನ ವೈಚಾರಿಕ ಹಿನ್ನೆಲೆಯಲ್ಲಿ ದಲಿತ ಕಲಾಮಂಡಳಿಯೂ ಕೂಡ ಕ್ರಿಯಾಶೀಲವಾಗಿತ್ತು.

ಸಂಘದವರು ಬಂದಿದ್ರು ಮಾವ
ನಮಗೆ ಸಂಗತಿಗಳ ಹೇಳೋದ್ರು ಮಾವ
ಶ್ರೀಮಂತರು ಭೂಮಾಲೀಕರು ಕಾಂಗ್ರೆಸ್ಸಿನವರಂತೆ
ಜನತಾದವರು ಕಮ್ಯುನಿಷ್ಟರು ಜಾತಿವಾದಿಗಳಂತೆ ‖ ಸಂಘ‖

ಮತ್ತೆ ಬಂತು ನೋಡಿರೋ ಮಾಯದಂತ ಎಲೆಕ್ಷನ್
ಮತ್ತೆ ಬಂತು ನೋಡಿರೋ ಮೋಸಗಾರ ಎಲೆಕ್ಷನ್

ಓಟು ಕೇಳೋ ಕಾರು ಬಂತಣ್ಣ - ಓ ರಾಮಣ್ಣ
ಮೆಟ್ಟು ತೆಗೆದು ಮೂತಿಗೆ ಹೊಡೆಯಣ್ಣ
ಓಟ್ಹಾಕಿ ಗೆಲಿಸಿ ನಾವು ಡಿಲ್ಲಿಗೆ ಕಳಿಸಿದರೆ

ಓಟರುಗಳೇನಾದರೋ - ಕನಕಣ್ಣಾ
ಓಟುಹಾಕಿದ್ಯಾರಿಗೋ - ಓ ಯಣ್ಣಾ || ಮನೆ ಮನೆಯು ||

ಓಟು ಕೇಳಲು ಬಂದವರಲ್ಲ ನೋಟು ಕೇಳಲು ಬಂದವರಲ್ಲ
ರಾಜಿ ಮಾಡುವ ರಾಜಕೀಯದವರಲ್ಲೊ.....

ಐದು ವರುಷಕ್ಕೊಂದು ಬಾರಿ ಗೆದ್ದು ಹೋದ ದಣ್ಣರಿಂದ
ಮೋಸ ಹೋದ ಮೊಂಡಾದ ಜೀವ ಅಣ್ಣಾ ಕೂಲ್ಯಣ್ಣಾ
ಆ ಮೊಂಡಾದ ಜೀವಕೆ ಸಾಣೆ ಬೇಡವೆ ? || ಅಣ್ಣಾ ರೈತಣ್ಣಾ ||

ಬಡವರ ಬಂಧುಗಳೆಂದು ಹೇಳಿದರು
ಬೀರು ಬ್ರಾಂದಿಯಲಿ ಮುಳುಗಿ ಹೋದರು
ಹೋರಾಟ ದಾರಿಯ ಬಿಟ್ಟು ವಿಧಾನ ಸೌಧವ ಸೇರಿದರೋ

ದಲಿತ ಕಲಾಮಂಡಳಿಯು ಹಳ್ಳಿ ಹಳ್ಳಿಗಳಲ್ಲಿ ಕಾರ್ಯಕ್ರಮಗಳನ್ನು ನಡೆಸುತ್ತಿತ್ತು. ಇಂಥ ಹತ್ತಾರು ಹಾಡುಗಳ ಮೂಲಕ ಜನರಿಗೆ ಜನತಾ ಶಿಕ್ಷಣವನ್ನು ನೀಡುತ್ತಿತ್ತು. ರಾಜಕೀಯ ಪಕ್ಷ ಯಾವುದೇ ಇರಲಿ, ರಾಜಕಾರಣಿ ಯಾರೇ ಇರಲಿ, ದಲಿತರ ದು:ಖ ದುಮ್ಮಾನಗಳನ್ನು ಅವರು ಬಗೆಹರಿಸುವುದಿಲ್ಲ. ರಾಜಕಾರಣಿಗಳು ಮತ್ತಷ್ಟು ಶೋಷಕರು. ಹಾಗಾಗಿ ಅವರು ಬಡವರ ಶತ್ರುಗಳು. ಬಡವರ ಶತ್ರುಗಳಿಗೆ ಓಟು ಹಾಕುವುದೆಂದರೆ, ದಲಿತರನ್ನು ಶೋಷಣೆ ಮಾಡಲು ಮುಕ್ತ ಪರವಾನಗಿ ಕೊಟ್ಟಂತೆ. ಅದರಿಂದ ಯಾರೂ ಓಟು ಹಾಕಬಾರದು. ದಲಿತರು ಸಂಘಟಿತರಾಗಿ ಹೋರಾಟ ಮಾಡಬೇಕು. ಹೋರಾಟದ ಮೂಲಕ ಉದ್ಧಾರವಾಗಬೇಕು ಎಂಬ ರಾಜಕೀಯ ತಿಳುವಳಿಕೆಯನ್ನು ಕೊಡುತ್ತಿತ್ತು. ಈ ನಿಟ್ಟಿನಲ್ಲಿ ದಲಿತ ಸಂಘರ್ಷ ಸಮಿತಿ ದಲಿತರಿಗೆ ಕೊಟ್ಟ ರಾಜಕೀಯ ಶಿಕ್ಷಣ ತುಂಬಾ ಪರಿಣಾಮಕಾರಿಯಾದುದು. ಅದು ಪ್ರಜಾಪ್ರಭುತ್ವ ವ್ಯವಸ್ಥೆಯನ್ನೇ ಪ್ರಶ್ನೆ ಮಾಡುತ್ತಿತ್ತು. ಪ್ರಜಾಪ್ರಭುತ್ವದ ಶಕ್ತಿರಾಜಕಾರಣವನ್ನು ಕಟುವಾಗಿ ವಿಮರ್ಶಿಸುತ್ತಿತ್ತು. ಇಂಥ ವಿಮರ್ಶಾತ್ಮಕ ರಾಜಕೀಯ ತಿಳುವಳಿಕೆಯನ್ನು ದ.ಸಂ.ಸ. ಮೈಗೂಡಿಸಿಕೊಂಡಿತ್ತು. ಅದರ ಪ್ರಭಾವದಲ್ಲಿ

ಸರಕಾರ ಕಳ್ಳರದೋ ಅಣ್ಣಾ
ಓ ಅಣ್ಣಂದಿರೆ ನಮ ಮಾತು ಕೇಳಿರೋ ಕೂಲ್ಯಣ್ಣಾ

ಕಾಂಗ್ರೆಸ್‌ನವನು ಬಂದು ಓಣೋಣಿ ತಿರುಗ್ಯಾನವ್ವ ||
ಜನತಾದವನು ಬಂದು ಕೇರಿಕೇರಿ ಅಲೆದಾನವ್ವ
ನಿನ್ನ ಓಟು ಪಡೆದು ಅವರು ಡೆಲ್ಲಿಗೆ ಹೋದರಮ್ಮ||
ಓಟು ಹಾಕಿದ ನೀನು ಕೂಳಿಲ್ಲದೆ ಸತ್ತೆ ತಾಯಿ || ಗುಡಿಸಲಲ್ಲಿ||

ಈ ಮುಂತಾದ ಪರಿಣಾಮಕಾರಿಯಾದ ಹಾಡುಗಳು ರಚನೆಯಾದವು. ದಲಿತ ಸಂಘರ್ಷ ಸಮಿತಿಗೆ ತನ್ನ ವಿಚಾರಗಳನ್ನು ಜನರಿಗೆ ಮುಟ್ಟಿಸಲು ಹಾಡುಗಳು ಪ್ರಭಾವಪೂರ್ಣವಾದ ಮಾಧ್ಯಮವಾಗಿತ್ತು. ಹಾಡುಗಳ ಮೂಲಕ ಮತ್ತು ನಿರೂಪಣೆಯ ಮೂಲಕ ಶಕ್ತಿ ರಾಜಕಾರಣದ ಕಪ್ಪು ಮುಖಗಳನ್ನು ಜನರಿಗೆ ನೇರವಾಗಿ ಸರಳವಾಗಿ ಮನವರಿಕೆ ಮಾಡಲಾಯಿತು. ಚಳುವಳಿಯ ಈ ಆಯಾಮವು ದ.ಸಂ.ಸ.ಗೆ ಒಂದು ಮಹತ್ವದ ಶಕ್ತಿಯನ್ನೂ - ಅದಕ್ಕಿಂತ ಹೆಚ್ಚಾಗಿ ರಾಜಕೀಯ ಸ್ವಾಭಿಮಾನವನ್ನೂ ತಂದುಕೊಟ್ಟಿತ್ತು. ಇದು ಚಳುವಳಿಗೆ ಒಂದು ರಾಜಕೀಯ ಶಕ್ತಿಯನ್ನು - ಏಕಕಾಲಕ್ಕೆ ಒಂದು ನೈತಿಕ ಶಕ್ತಿಯನ್ನು ತಂದುಕೊಟ್ಟಿತ್ತು. ದಲಿತ ಸಂಘರ್ಷ ಸಮಿತಿಗೆ ಯಾವುದು ಶಕ್ತಿಯಾಗಿತ್ತೋ ಅದನ್ನು ಕಂಡು ಶಕ್ತಿರಾಜಕಾರಣವು ಭಯಪಡುತ್ತಿತ್ತು. ದಿನೇ ದಿನೇ ದ.ಸಂ.ಸ. ಶಕ್ತಿ ರಾಜಕಾರಣಕ್ಕೆ ಒಂದು ಪರ್ಯಾಯವೆಂಬಂತೆ ಬೆಳೆಯುತ್ತಿದ್ದುದು ಶಕ್ತಿರಾಜಕಾರಣಕ್ಕೆ ನುಂಗಲಾರದ ತುತ್ತಾಗಿತ್ತು. ಅಲ್ಲದೆ ಪ್ರತೀ ಚುನಾವಣೆಯಲ್ಲಿ ದಲಿತ ಸಂಘರ್ಷ ಸಮಿತಿ ಚುನಾವಣೆಗಳನ್ನು ಬಹಿಷ್ಕರಿಸುತ್ತಿದ್ದುದರಿಂದ, ಅದು ಚುನಾವಣೆಯ ಮೇಲೆ ತೀವ್ರವಾದ ಪರಿಣಾಮವನ್ನು ಬೀರುತ್ತಿತ್ತು. ಇಡೀ ಕರ್ನಾಟಕದ ಯಾವುದೇ ಚುನಾವಣೆಯ ಕ್ಷೇತ್ರದಲ್ಲಿ ದಲಿತರ ಮತಗಳ ಪ್ರಮಾಣ ಗಣನೀಯವಾಗಿದೆ.

ದಲಿತರ ಮತಗಳ ಪ್ರಮಾಣ ಯಾವುದೇ ಕ್ರಮಾಂಕದಲ್ಲಿ ಇರಲಿ. ದಲಿತರ ಮತಗಳು ಮಾತ್ರ ಚುನಾವಣೆಯ ಮೇಲೆ ತೀವ್ರತರ ಪರಿಣಾಮವನ್ನು ಬೀರುತ್ತವೆ. ದಲಿತರು ಚುನಾವಣೆಯನ್ನು ಬಹಿಷ್ಕರಿಸುವುದು ಎಂದರೆ, ಚುನಾವಣಾ ಪೂರ್ವದ ಫಲಿತಾಂಶದ ನಿರೀಕ್ಷೆಯು ಹುಸಿಯಾಗುವ ಸಂಭವ ಜಾಸ್ತಿ ಇತ್ತು. ಈ ಭಯ ಶಕ್ತಿರಾಜಕಾರಣವನ್ನು ಬಲವಾಗಿ ಕಾಡಿತು. ಆಗ ಶಕ್ತಿರಾಜಕಾರಣಕ್ಕೆ ಇದ್ದುದು ಎರಡೇ ಮಾರ್ಗ.

ಒಂದನೇ ಮಾರ್ಗ ದಲಿತ ಸಂಘರ್ಷ ಸಮಿತಿಯು ಚುನಾವಣೆಗಳನ್ನು ಬಹಿಷ್ಕರಿಸುತ್ತಿದ್ದಾಗಲು ಅದರ ಪರಿಣಾಮವು ಚುನಾವಣಾ ಫಲಿತಾಂಶದ ಮೇಲೆ ಗಂಭೀರವಾದ ಪರಿಣಾಮವನ್ನು ಬೀರುತ್ತಿದ್ದಾಗಲೂ ಅದನ್ನು ಎದುರಿಸಿ ಶಕ್ತಿರಾಜಕಾರಣವು ಮುನ್ನಡೆಯುವುದು. ಅಂದರೆ ದ.ಸಂ.ಸ.ಯು ಚುನಾವಣಾ ಬಹಿಷ್ಕಾರವನ್ನು ಲೆಕ್ಕಕ್ಕೇ ತೆಗೆದುಕೊಳ್ಳದೆ ಅದನ್ನು ಉಪೇಕ್ಷೆ ಮಾಡುವುದು. ಇದು ಶಕ್ತಿರಾಜಕಾರಣಕ್ಕೆ ಎಂದೆಂದೂ ಸಾಧ್ಯವಿರಲಿಲ್ಲ. ಯಾಕೆಂದರೆ ದ.ಸಂ.ಸ. ಚುನಾವಣಾ ಬಹಿಷ್ಕಾರವು ಚುನಾವಣೆಯ ಫಲಿತಾಂಶದ ಮೇಲೆ ಪರಿಣಾಮವನ್ನು ಬೀರುತ್ತಿತ್ತು. ಅದಕ್ಕಿಂತ ಮುಖ್ಯವಾಗಿ ದ.ಸಂ.ಸ.ಗೆ ಇದು ಒಂದು ನೈತಿಕ ಶಕ್ತಿಯನ್ನು ತಂದುಕೊಟ್ಟಿತ್ತು. ಅದೇ ಕಾಲಕ್ಕೆ ಶಕ್ತಿರಾಜಕಾರಣವು ನೈತಿಕವಾಗಿ ಭ್ರಷ್ಟಗೊಂಡಿತ್ತು. ಇದರಿಂದ ಪಾರಾಗಲು ಶಕ್ತಿರಾಜಕಾರಣವು ತಂತ್ರ-ಕುತಂತ್ರಗಳನ್ನು ರೂಪಿಸತೊಡಗಿತು.

ಎರಡನೇ ಮಾರ್ಗ: ದಲಿತ ಸಂಘರ್ಷ ಸಮಿತಿಯೂ ಚುನಾವಣೆಯಲ್ಲಿ ಭಾಗವಹಿಸುವಂತೆ ಮಾಡುವುದು. ದಲಿತರ ಓಟುಗಳನ್ನು ಬಳಸಿಕೊಳ್ಳುವುದು. ಅದಕ್ಕೂ ಮುಖ್ಯವಾಗಿ ದಲಿತ ಸಂಘಟನೆಗಿದ್ದ ನೈತಿಕಶಕ್ತಿಯನ್ನು ಪೂರ್ತಿಯಾಗಿ ಭ್ರಷ್ಟಗೊಳಿಸುವುದು. ಅಥವಾ ದಲಿತ ಸಂಘರ್ಷ ಸಮಿತಿಯನ್ನು ರಾಜಕೀಯವಾಗಿ ಅನೈತಿಕಗೊಳಿಸುವುದು. ಈ ಎರಡನೇ ಮಾರ್ಗದಲ್ಲಿ ಶಕ್ತಿರಾಜಕಾರಣವು ಯಾಶಸ್ವಿಯಾಯಿತು.

೧೯೮೩ನೇ ಇಸವಿಯಲ್ಲಿ ನಡೆದ ಕರ್ನಾಟಕದ ವಿಧಾನ ಸಭೆ ಚುನಾವಣೆಯಲ್ಲಿ ದ.ಸಂ.ಸ. ಇದ್ದಕ್ಕಿದ್ದಂತೆ ಚುನಾವಣೆಯಲ್ಲಿ ಧುಮುಕಿತು. ಅದು ಅಂದಿನ ರಾಮಕೃಷ್ಣ ಹೆಗಡೆ ನೇತೃತ್ವದ ಜನತಾ ಪಕ್ಷದೊಂದಿಗೆ ಚುನಾವಣಾ

ಮೈತ್ರಿ ಮಾಡಿಕೊಂಡಿತು. ಆರಂಭಿಕ ಹಂತದ ಮಾತುಕತೆಗಳ ಪ್ರಕಾರ ದ.ಸಂ.ಸ. ಬಯಸುವ ಚುನಾವಣಾ ಕ್ಷೇತ್ರಗಳನ್ನು ದ.ಸಂ.ಸ. ಅಭ್ಯರ್ಥಿಗಳಿಗೆ ಜನತಾ ಪಕ್ಷವು ಬಿಟ್ಟುಕೊಡಬೇಕಿತ್ತು. ದ.ಸಂ.ಸ. ಸಹಜವಾಗಿ ದಲಿತರ ಮತಗಳು ಬೃಹತ್ ಪ್ರಮಾಣ ಇರುವ ಕ್ಷೇತ್ರಗಳನ್ನೇ ಆರಿಸಿಕೊಳ್ಳುತ್ತಿತ್ತು. ಜನತಾ ಪಕ್ಷಕ್ಕೆ ದ.ಸಂ.ಸ. ಈ ರೀತಿಯ ಕ್ಷೇತ್ರವಾರು ಆಯ್ಕೆ ಬೇಕಿರಲಿಲ್ಲ. ಹಾಗಾಗಿ ಮಾತುಕತೆಗಳ ಅಂತಿಮ ಹಂತದ ಹೊತ್ತಿಗೆ ಈ ಲೆಕ್ಕಾಚಾರಗಳು ತಲೆಕೆಳಗಾದವು. ದ.ಸಂ.ಸ.ಯ ಯಾವ ಅಭ್ಯರ್ಥಿಯೂ, ಎಲ್ಲಿಯೂ ಗೆಲ್ಲಲಿಲ್ಲ.

೧೯೮೫ ರವರೆಗೂ ಸಂಸದೀಯ ಚುನಾವಣೆಗಳನ್ನು ಬಹಿಷ್ಕರಿಸುತ್ತಿದ್ದ ದ.ಸಂ.ಸ. ಒಮ್ಮಿಂದೊಮ್ಮೆಲೇ ಚುನಾವಣೆಯಲ್ಲಿ ಧುಮುಕಿದ್ದು, ಕೆಳಹಂತದ ಸಾವಿರಾರು ಕಾರ್ಯಕರ್ತರಿಗೆ ತೀವ್ರವಾದ ಅಸಮಾಧಾನ, ಅನುಮಾನ, ಅತೃಪ್ತಿಗಳನ್ನುಂಟುಮಾಡಿತು. ಸಂಬಂಧಪಟ್ಟ ನಾಯಕರನ್ನು ವಿಚಾರಿಸಿದಾಗ 'ನಾವು ಇದುವರೆಗೆ ವಿಧಾನಸೌಧದ ಹೊರಗೆ ಕೂಗಾಡಿದ್ದೇವೆ; ಇನ್ನು ಮುಂದೆ ವಿಧಾನಸೌಧದ ಒಳಗಡೆ ಕೂಗಾಡಬೇಕಾಗಿದೆ; ಕೂಗಾಡುತ್ತೇವೆ. ಹೊರಗೆ ಇದುವರೆಗೆ ಕೂಗಾಡಿದ್ದರಿಂದ ನಾವು ನಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಆಗಲಿಲ್ಲ'(*) ಎಂಬಂತೆ ಹಾರಿಕೆ ಉತ್ತರ ಕೊಡುತ್ತಿದ್ದರು. ಇದು ದ.ಸಂ.ಸ.ಯ ಕೆಳಹಂತದ ಕಾರ್ಯಕರ್ತರ ಚುನಾವಣೆ ವಿಷಯದ ಅನುಮಾನವನ್ನು ಸರಿಯಾಗಿ ಬಗೆಹರಿಸಲಿಲ್ಲ. ಜೊತೆಗೆ ಇವರಿಗೆ ಪರ್ಯಾಯದ ಒಂದು ಮಾರ್ಗವನ್ನೂ ತೋರಿಸಲಿಲ್ಲ. ದ.ಸಂ.ಸ.ಯ ಈ ತೀರ್ಮಾನವು ಇಡೀ ದ.ಸಂ.ಸ.ನ ಇತಿಹಾಸದಲ್ಲಿ ಒಂದು ಮಹತ್ವದ ತಿರುವು. ಇದು ಇಡೀ ಕರ್ನಾಟಕದಲ್ಲಿ ಮೂಲೆ ಮೂಲೆಯಲ್ಲಿದ್ದ ಸಾವಿರಾರು ಕಾರ್ಯಕರ್ತರನ್ನು ರಾಜಕೀಯವಾಗಿ ಭ್ರಮನಿರಸನಗೊಳಿಸಿತು. ನಿರ್ವೀರ್ಯರನ್ನಾಗಿಸಿತು. ಅಸಹಾಯಕರನ್ನಾಗಿ ಮಾಡಿತು.

ಒಂದು ಕಾಲಕ್ಕೆ ಚುನಾವಣೆಯನ್ನು ಬಹಿಷ್ಕರಿಸುತ್ತಾ, "ಓಟು ಕೇಳೋ ಕಾರು ಬಂತಣ್ಣ - ಓ ರಾಮಣ್ಣ ಮೆಟ್ಟು ತೆಗೆದು ಮೂತಿಗೆ ಹೊಡೆಯಣ್ಣ" ಎಂಬ ಹಾಡಿನ ಮೂಲಕ ಹಳ್ಳಿಯ ಜನರಿಗೆ ರಾಜಕೀಯ ತಿಳುವಳಿಕೆ ಕೊಡುತ್ತಿದ್ದ ಕಾರ್ಯಕರ್ತರಿಗೆ, ಈಗ ಹಳ್ಳಿಗಳಿಗೆ ಹೋಗಿ 'ಓಟು ಹಾಕಿ' ಎಂದು ಕೇಳಿಕೋಳ್ಳುವುದು ಒಂದು ಗಂಭೀರ ಮರ್ಯಾದೆಯ ಪ್ರಶ್ನೆಯಾಯಿತು. ಈ ನೈತಿಕತೆಯ ಬಿಕ್ಕಟ್ಟನ್ನು ಕಾರ್ಯಕರ್ತರ ಹಂತದಲ್ಲಿ ತುಂಬ ಸಂಕಟದಿಂದ ಎದುರಿಸಬೇಕಾಯಿತು.

೧೯೮೭ರಲ್ಲಿ ಕರ್ನಾಟಕದಲ್ಲಿ ಮಂಡಳ ಪಂಚಾಯ್ತಿ, ತಾಲೂಕು ಪಂಚಾಯ್ತಿಗಳಿಗೆ ಚುನಾವಣೆ ನಡೆಯಿತು. ಆ ಹೊತ್ತಿಗೆ ರಾಜ್ಯದಲ್ಲಿ ದ.ಸಂ.ಸ. ಶಕ್ತಿ ಕುಂದಿತ್ತು. ಕಾರ್ಯಕರ್ತರು ದಾರಿಕಾಣದೆ ಅಸಹಾಯಕರಾಗಿದ್ದರು. ನಾಯಕರು ಮತ್ತು ಕಾರ್ಯಕರ್ತರ ನಡುವೆ ತಾತ್ವಿಕ ಅಸಮಾಧಾನ, ಭಿನ್ನಾಭಿಪ್ರಾಯ ನಡೆದೇ ಇತ್ತು. ಕಾರ್ಯಕರ್ತರ ದಟ್ಟವಾದ ವಿಶ್ವಾಸವನ್ನು ನಾಯಕರು ಉಳಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಹಾಗಾಗಿ ರಾಜಕೀಯ ಮತ್ತು ಚುನಾವಣೆಗೆ ಸಂಬಂಧಿಸಿದಂತೆ ನಾಯಕರದೊಂದು ಮಾರ್ಗ ಮತ್ತು ಕಾರ್ಯಕರ್ತರದೊಂದು ಮಾರ್ಗ ಸೃಷ್ಟಿಯಾಯಿತು. ಇಡೀ ಕರ್ನಾಟಕದಲ್ಲಿ ಇದು ಇನ್ನೂ ವಿಚಿತ್ರವಾದ ಬೇರೆ ಬೇರೆ ಆಯಾಮಗಳನ್ನು ಪಡೆದುಕೊಂಡಿತು. ಪರಿಣಾಮವಾಗಿ ಅದೇ ೮೭ರ ಮಂಡಲ್ ಪಂಚಾಯ್ತಿ ಚುನಾವಣೆಯಲ್ಲಿ ದ.ಸಂ.ಸ. ಕಾರ್ಯಕರ್ತರು, ಆಯಾ ಪ್ರದೇಶದಲ್ಲಿ, ತಮಗೆ ಅನುಕೂಲವಿದ್ದ ರಾಜಕೀಯ ಪಕ್ಷಗಳ ಅಭ್ಯರ್ಥಿಗಳಾಗಿ ಸ್ಪರ್ಧಿಸಿದರು. ಚುನಾವಣೆಗೂ ಕೂಡ ಮೀಸಲಾತಿಯನ್ನು ಜಾರಿಗೊಳಿಸಿದ್ದು ಇದಕ್ಕೆ ಮತ್ತಷ್ಟು ಪುಷ್ಟಿ ನೀಡಿತು. ಒಂದೇ ಊರಿನ ಇಲ್ಲವೆ ಒಂದೇ ಕುಟುಂಬದ ಕೆಲವು ಸದಸ್ಯರು

ಬೇರೆ ಬೇರೆ ರಾಜಕೀಯ ಪಕ್ಷಗಳ ಅಭ್ಯರ್ಥಿಗಳಾಗಿ ಸ್ಪರ್ಧಿಸಿದರು. ಮಂಡಲ್ ಪಂಚಾಯ್ತಿಯಂತಹ ಚುನಾವಣೆಯಲ್ಲಿ ಒಂದೊಂದು ಓಟಿಗೂ ಮಹತ್ವದ ಬೆಲೆ ಇರುತ್ತದೆ. ಹಾಗಾಗಿ ಆ ಚುನಾವಣೆ ತುಂಬಾ ಗಂಭೀರವಾಗಿ ನಡೆಯುತ್ತದೆ. ಒಂದೇ ಕುಟುಂಬದ ಸದಸ್ಯರ ಮತಗಳು ಬೇರೆ ಬೇರೆ ಪಕ್ಷಗಳಿಗೆ ಹಂಚಿ ಹೋಗುವಂತಹ ಪರಿಸ್ಥಿತಿಗಳೂ ಕೆಲವು ಕಡೆ ನಿರ್ಮಾಣವಾಗಿದ್ದವು. ಇದು ನಿರ್ದಿಷ್ಟವಾಗಿ ದಲಿತ ಕುಟುಂಬದಲ್ಲಿ ಕೆಲವು ದ್ವೇಷ- ಮತ್ಸರಗಳನ್ನು ಉಂಟುಮಾಡಿತು.

ಹೀಗೆ ಎಲ್ಲಾ ಹಂತದ ಚುನಾವಣೆಗಳಲ್ಲಿ ದ.ಸಂ.ಸ. ಭಾಗವಹಿಸಿದ ನಂತರವೂ, ಕರ್ನಾಟಕದಲ್ಲಿ ಅದೊಂದು ಪ್ರಬಲವಾದ ಶಕ್ತಿರಾಜಕಾರಣವಾಗಿ ಬೆಳೆಯಲಿಲ್ಲ. ಅನಂತರದಲ್ಲಿ ರಾಜ್ಯಮಟ್ಟದ ದ.ಸಂ.ಸ.ಯಲ್ಲಿ ಒಂದು ಗುಂಪು ಜನತಾ ದಳವನ್ನು ಬೆಂಬಲಿಸಿದರೆ, ಮತ್ತೊಂದು ಗುಂಪು ಕಾಂಗ್ರೆಸ್ಸನ್ನು, ಮಗದೊಂದು ಎಡವಾದಿ ಪಕ್ಷವನ್ನು ಬೆಂಬಲಿಸುವ ಸ್ಥಿತಿ ಬಂದಿತು. ಇದು ಕೇವಲ ನಾಯಕರ ಮಟ್ಟಕ್ಕೆ ಮಾತ್ರ ಸೀಮಿತವಾಗಿದ್ದು ಕಾರ್ಯಕರ್ತರ ಸಮೂಹಕ್ಕೆ ಇಳಿಯಲೇ ಇಲ್ಲ. ಹಾಗಾಗಿ ದ.ಸಂ.ಸ.ನ ಯಾವ ಗುಂಪು, ಯಾವ ರಾಜಕೀಯ ಪಕ್ಷವನ್ನು ಬೆಂಬಲಿಸುತ್ತದೆ ಎಂಬುದು ಕೇವಲ ಪತ್ರಿಕೆ ಹೇಳಿಕೆಯ ಮಟ್ಟಕ್ಕೆ ಸೀಮಿತವಾಗಿದೆ. ಕ್ರಿಯಾತ್ಮಕವಾಗಿ ಅದರ ಪರಿಣಾಮ ಪ್ರಭಾವಶಾಲಿಯಾಗಿಲ್ಲ. ದಲಿತ ಸಂಘರ್ಷ ಸಮಿತಿಗೆ ಕರ್ನಾಟಕದ ಯಾವುದೇ ಭಾಗದಲ್ಲಿ ಸಂಪೂರ್ಣ ಬದ್ಧರಾದ ಕಾರ್ಯಕರ್ತರು ಇಲ್ಲದ ಕಾರಣದಿಂದ ದಲಿತ ಸಮೂಹದ ಮತಗಳು ದ.ಸಂ.ಸ.. ಯಾರನ್ನು ಬೆಂಬಲಿಸುತ್ತದೆ ಎಂಬುದನ್ನು ಪರಿಗಣಿಸುವುದೇ ಇಲ್ಲ.

ದ.ಸಂ.ಸ. ಚುನಾವಣೆಗೆ ಇಳಿದ ನಂತರ ಇಡೀ ರಾಜ್ಯಾದ್ಯಂತ ಅದೊಂದು ಏಕಘಟಕವಾದ ಶಕ್ತಿಶಾಲಿ ಜನಪರ ಸಂಘಟನೆಯಾಗಿ ಉಳಿಯಲಿಲ್ಲ. ರಾಜ್ಯಸಮಿತಿಯ ರಾಜಕೀಯ ನಿಲುವಿನ ಅಪೇಕ್ಷೆಗಳಿಗೂ - ಜಿಲ್ಲಾ ಸಮಿತಿಗಳ ರಾಜಕೀಯ ನಿಲುವಿನ ಅಪೇಕ್ಷೆಗಳಿಗೂ ಕೆಲವೊಮ್ಮೆ ಸಹಮತವಿರುತ್ತಿರಲಿಲ್ಲ. ಹೀಗಾಗಿ ರಾಜಕಿಯ ಭಿನ್ನಾಭಿಪ್ರಾಯಗಳು ಸಹಜವಾಗಿ ಬೆಳೆದವು. ಕೆಲವರು ಕಾಂಗ್ರೆಸ್ ಪರ, ಕೆಲವರು ಜನತಾದಳದ ಪರ ಮತ್ತೆ ಕೆಲವರು ಸಿ.ಪಿ.ಐ ಪರ ಈ ವಿನ್ಯಾಸದಲ್ಲಿ ರಾಜಕೀಯ ಆಸಕ್ತಿ ಹರಿದುಹಂಚಿ ಹೋಗಿತ್ತು. ಈ ಬೆಳವಣಿಗೆ ಚಳುವಳಿಗೆ ಒಂದು ಬಗೆಯ ರಾಜಕೀಯ ಅನೈಕ್ಯತೆಯನ್ನು ಮತ್ತು ಅಭದ್ರತೆಯನ್ನು ತಂದಿತು. ಚಳುವಳಿಯು ಹೇಗಾದರೂ ಮಾಡಿ ಇದನ್ನು ಹೋಗಲಾಡಿಸುವ ಪ್ರಯತ್ನಕ್ಕೆ ಕೈಹಾಕಿತು. ಆಗ ಡಿ.ಎಸ್.ಎಸ್.ಗೆ ಹೊಳೆದದ್ದು ದಲಿತರದ್ದೇ ಆದ ಒಂದು ಸಂಸದೀಯ ರಾಜಕೀಯ ಪಕ್ಷವನ್ನು ಕಟ್ಟಬೇಕೆಂಬುದು. ಅದರ ಫಲವಾಗಿ ಕರ್ನಾಟಕದಲ್ಲಿ ಬಹುಜನ ಸಮಾಜವಾದಿ ಪಕ್ಷವನ್ನು ಕಟ್ಟಲಾಯಿತು. ಇದಕ್ಕೆ ಸ್ಫೂರ್ತಿ ಮತ್ತು ಪ್ರೇರಣೆ ಉತ್ತರ ಪ್ರದೇಶ ಮತ್ತು ಮಧ್ಯಪ್ರದೇಶದಲ್ಲಿ ಪ್ರಬಲವಾಗಿದ್ದ ಬಹುಜನ ಸಮಾಜವಾದಿ ಪಕ್ಷವೇ ಆಗಿತ್ತು. ಅಲ್ಲಿ ಬಿ.ಜೆ.ಪಿ. ಆಳ್ವಿಕೆಯಿಂದ ನಲುಗಿ ಹೋಗಿದ್ದ ಮತದಾರರು ಅದಲ್ಲದ ಮತ್ತೊಂದು ಪಕ್ಷಕ್ಕೆ ಬೆಂಬಲಿಸಲೇಬೇಕಿತ್ತು. ಇದರ ಫಲವಾಗಿ ಬಿ.ಎಸ್.ಪಿ. ಉದಯವಾಗಲು ಕಾರಣವಾಯಿತು. ಆದರೆ ಕರ್ನಾಟಕದಲ್ಲಿ ಆ ಪಕ್ಷವನ್ನು ಹುಟ್ಟುಹಾಕುವಾಗ ಮುಂಚೂಣಿಯಲ್ಲಿದ್ದ ನಾಯಕರು ಒಂದು ವಿಚಿತ್ರವಾದ ಭಾವನಾತ್ಮಕತೆಗೆ ಒಳಗಾದರು. ಇಂದಲ್ಲ ನಾಳೆ ದಲಿತರದ್ದೇ ಆದ ರಾಜಕೀಯ ಪಕ್ಷ ಅಸ್ತಿತ್ವಕ್ಕೆ ಬರುತ್ತದೆ. ಅದೊಂದು ಆಳುವ ಪಕ್ಷವಾಗಿ ಅಭಿವೃದ್ಧಿಯಾಗುತ್ತದೆ ಎಂಬಂತಹ ಕನಸುಗಳನ್ನು ಕಟ್ಟಿಕೊಂಡರು. ಆದರೆ ಈ ನಿಟ್ಟಿನಲ್ಲಿ ಇಡೀ ರಾಜ್ಯಾದ್ಯಂತ ಒಂದೇ ಪ್ರಮಾಣದ ಪ್ರಯತ್ನವನ್ನು ಹಾಕಲಿಲ್ಲ. ಹಾಕಲಾಗಲಿಲ್ಲ. ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ರೂಪದಲ್ಲಿ ಬಿ.ಎಸ್.ಪಿ.ಯು ರೂಪುಗೊಳ್ಳುತ್ತಾ ಬಂತು. ಇದರ ಜೊತೆಯಲ್ಲೇ ಜನತಾ ದಳವನ್ನು ದ.ಸಂ.ಸ.ಯ ಒಂದು ಗುಂಪು ಬೆಂಬಲಿಸುತ್ತಿತ್ತು. ಹಾಗಾಗಿ ಬಿ.ಎಸ್.ಪಿ.ಯು ಒಂದು ರಾಜ್ಯವ್ಯಾಪ್ತಿಯ ಪ್ರಬಲ ಶಕ್ತಿಯಾಗಿ ಬೆಳೆಯಲಾಗಲಿಲ್ಲ.

ಚುನಾವಣೆ ಘೋಷಣೆಯಾದ ಸಂದರ್ಭದಲ್ಲಿ ಬಿ.ಎಸ್.ಪಿ.ಯ ನಾಯಕರು ತಮ್ಮ ಕಲ್ಪನೆಯ ಜಗತ್ತಿನಲ್ಲಿ ಬಿ.ಎಸ್.ಪಿ. ಯ ಸೋಲು-ಗೆಲುವನ್ನು ಲೆಕ್ಕಹಾಕುತ್ತಾರೆ. ಆದರೆ ಅವರ ಲೆಕ್ಕಾಚಾರಕ್ಕೆ ಅನುಗುಣವಾಗಿ ವಾಸ್ತವ ಪರಿಸ್ಥಿತಿ ಇಲ್ಲ. ಅದರಿಂದಲೇ ಅವರದು ಕಲ್ಪನೆಯ ಲೆಕ್ಕಾಚಾರವೆಂದು ಹೇಳಿದ್ದು. ಹೇಗೆಂದರೆ ಅವರ ಲೆಕ್ಕಾಚಾರದ ವಿಧಾನವು ಮತದಾರರನ್ನು ಜಾತಿವಾರು ವಿಂಗಡಣೆ ಮಾಡುತ್ತದೆ. ಯಾವ ಕ್ಷೇತ್ರದಲ್ಲಿ ಯಾವ ಜಾತಿಯ ಮತಗಳು ಜಾಸ್ತಿ ಇವೆಯೋ ಅದೇ ಜಾತಿಯ ಚುನಾವಣಾ ಅಭ್ಯರ್ಥಿ ಗೆಲ್ಲುತ್ತಾನೆ ಎಂಬ ಅತಿ ಸರಳ ಲೆಕ್ಕಾಚಾರ ಅವರದು. ಆದರೆ ಚುನಾವಣೆ ನಡೆದು ಫಲಿತಾಂಶ ಪ್ರಕಟವಾದ ನಂತರ ಪರಿಸ್ಥಿತಿ ಬೇರೆ ಆಗಿರುತ್ತದೆ. ಯಾವ ಜಾತಿಯ ಮತದಾರರು ಹೆಚ್ಚಿರುತ್ತಾರೋ ಅದೇ ಜಾತಿಯ ಅಭ್ಯರ್ಥಿ ಸರಳವಾಗಿ ಗೆಲ್ಲುತ್ತಿಲ್ಲ. ಮತ್ತು ಒಂದೇ ಜಾತಿಯ ಅಭ್ಯರ್ಥಿಗಳು ಎರಡು ಮೂರು ಪಕ್ಷಗಳಲ್ಲಿ ಒಂದೇ ಕ್ಷೇತ್ರದಲ್ಲಿ ಸ್ಪರ್ಧಿಸುತ್ತಿದ್ದಾರೆ. ಅದೇ ರೀತಿ ದಲಿತ ಕೋಮಿನ ಅಭ್ಯರ್ಥಿಗಳು ಮೀಸಲು ಕ್ಷೇತ್ರಗಳಲ್ಲಿ ಸ್ಪರ್ಧಿಸಿದ್ದರೆ, ಅದೇ ಕ್ಷೇತ್ರದಲ್ಲಿ ಬಿ.ಎಸ್.ಪಿ.ಅಭ್ಯರ್ಥಿ ಸ್ಪರ್ಧಿಸಬೇಕಾಗುತ್ತದೆ. ಆಗ ಸ್ಪರ್ಧೆಯು ನಿರ್ದಿಷ್ಟವಾಗಿ ದಲಿತ ಅಭ್ಯರ್ಥಿಗಳ ನಡುವೆಯೇ ನಡೆಯುತ್ತದೆ. ಅಂತಹ ಸಂದರ್ಭದಲ್ಲಿ ಬಿ.ಎಸ್.ಪಿ.ಅಭ್ಯರ್ಥಿಯೇ ಆಯ್ಕೆಯಾಗುತ್ತಾನೆ ಎಂಬುದೊಂದು ಭ್ರಮೆಯಾಗಿ ಬಿಡುತ್ತದೆ. ಹಾಗಾಗಿ ಆರಂಭಿಕ ಹಂತದಲ್ಲಿ ಕರ್ನಾಟಕದಲ್ಲಿ ಬಿ.ಎಸ್.ಪಿ.ಯನ್ನು ರೂಪಿಸುವಾಗ ಇದ್ದ ಉತ್ಸಾಹ, ಹುರುಪು ಇಂದು ಉಡುಗಿ ಹೋಗಿದೆ. ಬಿ.ಎಸ್.ಪಿ.ಯು ಸಮಗ್ರ ದಲಿತರ ಪರ್ಯಾಯ ರಾಜಕೀಯ ಪಕ್ಷವಾಗಿ ಬೆಳೆಯುವ ಯಾವ ಭರವಸೆಯ ಸೂಚನೆಗಳೂ ನಮ್ಮ ಮುಂದಿಲ್ಲ.

ಹೀಗೆ ಸರಿಸುಮಾರು ಕಾಲು ಶತಮಾನದ ಇತಿಹಾಸವನ್ನು ಹೊಂದಿರುವ ಕರ್ನಾಟಕದ ದ.ಸಂ.ಸ. ಕರ್ನಾಟಕದ ಸಮಸ್ತ ದಲಿತರ ಸ್ವಾಭಿಮಾನಿ ಜನಪರ ಸಂಘಟನೆಯಾಗಿಯೂ ಉಳಿದಿಲ್ಲ. ಇಲ್ಲವೆ ಸಂಸದೀಯ ಚುನಾವಣೆಯಲ್ಲಿ ಸ್ಪರ್ಧಿಸಿ ಕನಿಷ್ಠ ಹತ್ತಾರು ಸೀಟುಗಳನ್ನು ಪಡೆಯುವ ಸ್ಥಿತಿಯಲ್ಲೂ ಇಲ್ಲ. ಚುನಾವಣೆಯ ಸಂದರ್ಭದಲ್ಲಿ ಹೆಸರಿಗೆ ಮಾತ್ರ ಒಂದು ಕಡೆ ಬಿ.ಎಸ್.ಪಿ. ಮತ್ತೊಂದು ಕಡೆ ಜನತಾದಳ ಮಗದೊಂದು ಕಡೆ ಕೋಮುವಾದ ವಿರೋಧಿ ಎಂದು ತೋರಿಸಿಕೊಳ್ಳುತ್ತಿದ್ದರೂ ಅದು ಕೇವಲ ನಾಯಕರ ಮಟ್ಟದ ಪತ್ರಿಕಾ ಹೇಳಿಕೆಗೆ ಸೀಮಿತವಾಗಿದೆ. ಕಾರ್ಯಕರ್ತರ ಮಟ್ಟಕ್ಕೆ ಇಳಿದಿಲ್ಲ. ಇಳಿಯುವುದೂ ಇಲ್ಲ. ಹಾಗಾಗಿ ಒಂದು ಕಾಲದಲ್ಲಿ 'ವಿಧಾನಸೌಧದ ಒಳಗೆ ಕೂಗಾಡಬೇಕು' ಎಂದು ಹೇಳಿದ್ದ ಹೇಳಿಕೆ ಕಾರ್ಯರೂಪಕ್ಕೆ ಬರುವುದಿಲ್ಲ. ಅದಕ್ಕೆ ಬೇಕಾದ ಯಾವ ರಚನಾತ್ಮಕ ಪ್ರಯತ್ನವನ್ನೂ ದ.ಸಂ.ಸ.ಮಾಡುತ್ತಿಲ್ಲ. ಮುಂದಿನ ಅಧ್ಯಾಯದಲ್ಲಿ ಈ ಚರ್ಚೆಯನ್ನು ಇನ್ನಷ್ಟು ಮುಂದುವರಿಸಲಾಗುವುದು.

---

(*) ಮಾಹಿತಿ ಮತ್ತು ವಿವರಕ್ಕೆ ನೋಡಿ:ಗಂಗಾರಾಂ ಚಂಡಾಳ, 'ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್'.

## ೪.೨ ದಲಿತ ಚಳುವಳಿ ಮತ್ತು ರಾಜಕೀಯ ಚಿಂತನೆಗಳು

ಹಿಂದಿನ ಅಧ್ಯಾಯದಲ್ಲಿ ಸಂಸದೀಯ ರಾಜಕೀಯವನ್ನು ಮತ್ತು ದಲಿತ ಸಂಘರ್ಷ ಸಮಿತಿಯ ಸ್ಥೂಲವಾದ ರಾಜಕೀಯ ನಿಲುವನ್ನು ಚರ್ಚೆಗೆ ಒಳಪಡಿಸಲಾಯಿತು. ಈ ಅಧ್ಯಾಯದಲ್ಲಿ ದಲಿತ ಸಂಘರ್ಷ ಸಮಿತಿಯ ಸ್ಥೂಲವಾದ ರಾಜಕೀಯ ಚೌಕಟ್ಟಿನೊಳಗೇ ಕಾಲಕಾಲಕ್ಕೆ ಉದ್ಭವಿಸಿದ ಬೇರೆ ಬೇರೆ ಸ್ವರೂಪದ ರಾಜಕೀಯ ಹಿತಾಸಕ್ತಿಗಳನ್ನು ಕುರಿತು ಚರ್ಚಿಸಲಾಗುವುದು. ಇಲ್ಲಿ ದಲಿತ ಸಂಘರ್ಷ ಸಮಿತಿಯ ಬೆಳವಣಿಗೆಯನ್ನು, ಅದರ ಒಳಗೆ ಉಂಟಾದ ಕೆಲವು ವೈರುಧ್ಯಗಳನ್ನು, ಅವುಗಳಿಂದ ಚಳುವಳಿ ಹಿಡಿದ ದಾರಿಯನ್ನು, ಬೇರೆ ಬೇರೆ ಹೆಸರುಗಳಲ್ಲಿ ಸಂಘಟನೆ ಛಿದ್ರವಾದುದನ್ನೂ ಅತ್ಯಂತ ಸೂಕ್ಷ್ಮವಾಗಿ ಚರ್ಚೆಗೊಳಪಡಿಸಲಾಗುವುದು.

ದಲಿತ ಸಂಘರ್ಷ ಸಮಿತಿ ಹುಟ್ಟಿದಾಗಿನಿಂದ ೧೯೮೯ರವರೆಗೂ ಅದು ಪಾರ್ಲಿಮೆಂಟರಿ ಚುನಾವಣೆಗಳನ್ನು ಬಹಿಷ್ಕರಿಸುತ್ತಿತ್ತು. ೧೯೮೯ರಲ್ಲಿ ಆಗಿನ ಜನತಾ ಪಕ್ಷದೊಂದಿಗೆ ಚುನಾವಣಾ ಮೈತ್ರಿ ಮಾಡಿಕೊಂಡು ಪಾರ್ಲಿಮೆಂಟರಿ ರಾಜಕೀಯವನ್ನು ಪ್ರವೇಶಿಸಿತು. ಅನಂತರದ ಬೆಳವಣಿಗೆಯಲ್ಲಿ ಒಂದು ಗುಂಪು ೧೯೯೫ರ ಕರ್ನಾಟಕದ ವಿಧಾನಸಭೆ ಚುನಾವಣೆಯಲ್ಲಿ ಬಿ.ಎಸ್.ಪಿ.ಯಾಗಿ ಸ್ಪರ್ಧಿಸಿತು. ಈ ಎರಡೂ ಅಂಶಗಳನ್ನು ಈ ಹಿಂದಿನ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಬೆಳವಣಿಗೆಗಳನ್ನು ಒಳಗೊಂಡಂತೆ ಇಲ್ಲಿ ಇನ್ನಷ್ಟು ವಿಸ್ತೃತ ಚರ್ಚೆಯನ್ನು ಬೆಳೆಸಲಾಗುವುದು.

೧೯೮೯ರಲ್ಲಿ ದಲಿತ ಸಂಘರ್ಷ ಸಮಿತಿ ಪಾರ್ಲಿಮೆಂಟರಿ ಚುನಾವಣೆಗೆ ಇಳಿಯಿತು. ಆದರೆ ಅದು ಇಡೀ ಚಳುವಳಿಯನ್ನೇ ಒಟ್ಟಾರೆಯಾಗಿ ಪಾರ್ಲಿಮೆಂಟರಿ ಚುನಾವಣೆಗೆ ಧುಮುಕಿಸಲಾಗಲಿಲ್ಲ. ಪಾರ್ಲಿಮೆಂಟರಿ ಮಾರ್ಗವನ್ನು ಬಲವಾಗಿ ವಿರೋಧಿಸುವ ಒಂದು ಗುಂಪು ದ.ಸಂ.ಸ.ಯ ಒಳಗೆ ಶಕ್ತಿಶಾಲಿಯಾಗಿತ್ತು. ಈ ಗುಂಪು ದ.ಸಂ.ಸ.ಯ ಆ ಹಿಂದಿನ 'ಹೋರಾಟದಿಂದ ಸಮಗ್ರ ಬದಲಾವಣೆ' ಎಂಬ ಧ್ಯೇಯ ವಾಕ್ಯವನ್ನು ಮುಂದಿಟ್ಟು ಚುನಾವಣೆಗೆ ಹೋಗುವುದನ್ನು ಬಲವಾಗಿ ವಿರೋಧಿಸಿತು. ದ.ಸಂ.ಸ.ಯ ಐತಿಹಾಸಿಕ ಬೆಳವಣಿಗೆಯಲ್ಲೇ ಇದು ಮೊಟ್ಟಮೊದಲ ಮತ್ತು ಅತ್ಯಂತ ಪರಿಣಾಮಕಾರಿಯಾದ ವೈಚಾರಿಕ ಸಂಘರ್ಷವಾಗಿದೆ. ಇದರ ಪರಿಣಾಮದಿಂದ ದ.ಸಂ.ಸ. ಕರ್ನಾಟಕದಲ್ಲಿ ಎರಡು ಬಣಗಳಾಗಿ ಒಡೆದು ಹೋಯಿತು. ಚುಣಾವಣೆಗೆ ಹೋದ ಬಣದವರನ್ನು ' ದ.ಸಂ.ಸ.ಸಂಚಾಲಕ ಸಮಿತಿ' ಎಂತಲೂ, ಚುನಾವಣೆಯನ್ನು ಬಹಿಷ್ಕರಿಸುತ್ತಿದ್ದ ಬಣದವರನ್ನು 'ದ.ಸಂ.ಸ. ಸಂಯೋಜಕ ಸಮಿತಿ' ಎಂತಲೂ ಗುರುತಿಸಲಾಯಿತು. ಮತ್ತು ಸಂಘಟನೆಯ ಒಳಗೆ ಈ ಹೆಸರುಗಳು ಬಹಳ ದಿನಗಳವರೆಗೂ ಬಳಕೆಯಲ್ಲಿದ್ದವು.

ದ.ಸಂ.ಸ.ಯ ಈ ಬೆಳವಣಿಗೆಯನ್ನು ಪ್ರಗತಿಪರರು, ಬೇರೆ ಸಂಘಟನೆಯವರು ಬೇರೆ ಬೇರೆ ಬಗೆಯಲ್ಲಿ ಗ್ರಹಿಸಿದರು; ವ್ಯಾಖ್ಯಾನಿಸಿದರು. ೧೯೮೨ರಿಂದಲೇ ಕರ್ನಾಟಕದಲ್ಲಿ ಎಂ.ಎಲ್. ಚಳುವಳಿಯೊಂದಿತ್ತು. ಅದೇ ಇಂದು ಪಿ.ವಿ.ಕೆ. ಆಗಿದೆ. ಈ ಚಳುವಳಿಯು 'ಸಂಯೋಜಕ ಸಮಿತಿ'ಯ ರಾಜಕೀಯ ನಿಲುವನ್ನು ಸಮರ್ಥಿಸಿತು. ಇದರ ಜೊತೆಗೆ ಅನೇಕ ಪ್ರಗತಿಪರ ಸಂಘಟನೆಗಳು, ಪ್ರಗತಿಪರ ಬುದ್ಧಿಜೀವಿಗಳು ತಮ್ಮ ತಮ್ಮ ವ್ಯಾಪ್ತಿಯಲ್ಲಿ ದ.ಸಂ.ಸ.ಯ ಒಂದು ಬಣ ಚುನಾವಣೆಗೆ ಹೋದುದನ್ನು ಪ್ರಬಲವಾಗಿ ಟೀಕಿಸಿದರು; ವಿರೋಧಿಸಿದರು ಮತ್ತು ಸಂಯೋಜಕ ಸಮಿತಿಯನ್ನು ಸಮರ್ಥಿಸಿದರು, ಬೆಂಬಲಿಸಿದರು. ಆದರೆ ಪಾರ್ಲಿಮೆಂಟರಿ ಮಾರ್ಗದ ಮಾಧ್ಯಮಗಳು, ರಾಜಕಾರಣಿಗಳು ಚುನಾವಣೆಗೆ ಇಳಿದ ದ.ಸಂ.ಸ.ಯ ಬಣವಾದ 'ಸಂಚಾಲಕ ಸಮಿತಿ'ಯನ್ನು ಬೆಂಬಲಿಸಿದರು. ಸಂಚಾಲಕ ಸಮಿತಿಯು ರಾಜಕೀಯ ಕೃಪಾಪೋಷಣೆಯಲ್ಲಿ ಮುಂದುವರಿಯಿತು. ಏಪ್ರಿಲ್ ೧೪ರ ಅಂಬೇಡ್ಕರ್ ದಿನಾಚರಣೆ ಮತ್ತು ಡಿಸೆಂಬರ್ ೬ ರ ಅಂಬೇಡ್ಕರ್ ಸ್ಮರಣ ದಿನಾಚರಣೆಗಳನ್ನು ಸರ್ಕಾರವು ಅತಿ ರಂಗು ರಂಗಾಗಿ ಆಚರಿಸಲು ಶುರುಮಾಡಿತು. ಇಂತಹ ಕಾರ್ಯಕ್ರಮಗಳ ಪ್ರಚಾರವು 'ಸಂಚಾಲಕ ಸಮಿತಿ'ಯವರನ್ನು ಭಾವನಾತ್ಮಕವಾಗಿ ಉದ್ದೀಪನಗೊಳಿಸಿತು. ಈ ಸಮಿತಿಯವರು ಸರ್ಕಾರ ಈ ಕಾರ್ಯಕ್ರಮಗಳನ್ನು ಮುತುವರ್ಜಿಯಿಂದ ನಡೆಸುತ್ತಿದೆಯಂತಲೂ, ಇದರ ಹಿಂದೆ ಸರ್ಕಾರಕ್ಕೆ ದಲಿತರ ಮೇಲೆ ಅಪಾರವಾದ ಅನುಕಂಪ, ಸಹಾನುಭೂತಿ, ಕಾಳಜಿ ಇದೆ ಎಂದೂ ಭಾವಿಸಿದರು. ಆದರೆ ವಾಸ್ತವವಾಗಿ ಅಂತಹ ಕಾರ್ಯಕ್ರಮಗಳಿಂದ ದಲಿತರ ಜೀವನದ ಮೇಲೆ ಯಾವ ಭೌತಿಕ ಪರಿಣಾಮಗಳೂ ಆಗಲಿಲ್ಲ.

ಈ ಕಡೆ 'ಸಂಯೋಜಕ ಸಮಿತಿ'ಯವರು ಸರ್ಕಾರವೇ ಮುಂದಾಗಿ ನಡೆಸುತ್ತಿದ್ದ ಆ ಕಾರ್ಯಕ್ರಮಗಳನ್ನು ಕಟುವಾಗಿ ಟೀಕಿಸತೊಡಗಿದರು. ಅವುಗಳನ್ನು ಸರ್ಕಾರಿ ಉತ್ಸವಗಳೆಂದು, ದಲಿತರ ಓಟು ಪಡೆಯುವ ಹುನ್ನಾರವೆಂದೂ ಪರಿಗಣಿಸತೊಡಗಿದರು. ಹಾಗೆಂದು ಇವರು ಸುಮ್ಮನೆ ಕೂರಲಿಲ್ಲ. ಪರ್ಯಾಯವಾಗಿ ಇವರೂ ಇಂತಹ ಕಾರ್ಯಕ್ರಮಗಳನ್ನು ಬೇರೆ ಸ್ವರೂಪದಲ್ಲಿ ಆಚರಿಸತೊಡಗಿದರು. 'ಅಂಬೇಡ್ಕರ್ ವ್ಯಕ್ತಿಪೂಜೆ ಸಲ್ಲದು' 'ಅಂಬೇಡ್ಕರ್ ಭಜನೆ ಸಲ್ಲದು' ಎಂಬ ಶೀರ್ಷಿಕೆಯಡಿ ಕರಪತ್ರಗಳನ್ನು ತಂದರು ಮತ್ತು ಅಂಬೇಡ್ಕರ್ ವಿಚಾರಗಳನ್ನೂ ಕುರಿತು ವಿಚಾರ-ವಿಮರ್ಶೆ ನಡೆಸಿದರು. ಮುಂದೆ ಇದೇ ಸಂಯೋಜಕ ಸಮಿತಿಯವರು 'ಅಂಬೇಡ್ಕರ್ ವಿಚಾರ ಸ್ಫೂರ್ತಿಯಾಗಲಿ ಮಾರ್ಕ್ಸ್‌ವಾದ ಮಾರ್ಗವಾಗಲಿ' ಎಂಬ ಶೀರ್ಷಿಕೆಯಲ್ಲಿ ಕರಪತ್ರಗಳನ್ನು ತಂದರು. ಮತ್ತು ಆ ನಿಟ್ಟಿನಲ್ಲಿ ವಿಚಾರ ವಿಮರ್ಶೆ ನಡೆಸಿದರು.

'ಸಂಚಾಲಕ ಸಮಿತಿ'ಯವರು 'ನಾವು ಪ್ರಜಾ ಪ್ರಭುತ್ವವಾದಿಗಳು, ಅಹಿಂಸಾವಾದಿಗಳು, ನಾವು ಬ್ಯಾಲೆಟ್‌ನಿಂದಲೇ ಬದಲಾವಣೆ ತರುತ್ತೇವೆ. ಬುದ್ಧ-ಬಸವ-ಅಂಬೇಡ್ಕರ್ ಮಾರ್ಗವೇ ನಮ್ಮ ಮಾರ್ಗ' ಎನ್ನ ತೊಡಗಿದರು. ಮತ್ತು 'ಸಂಯೋಜಕ ಸಮಿತಿ'ಯವರನ್ನು ಇವರು 'ಬುಲೆಟ್ ಮಾರ್ಗದವರು, ಹಿಂಸಾವಾದಿಗಳು, ಅಂಬೇಡ್ಕರ್ ವಿರೋಧಿಗಳು, ಮಾರ್ಕ್ಸ್‌ವಾದದಿಂದ ದಲಿತರ ವಿಮೋಚನೆ ಸಾಧ್ಯವಿಲ್ಲ, ಮಾರ್ಕ್ಸ್‌ವಾದ ಹೊರ ದೇಶದ್ದು' ಮುಂತಾಗಿ ಟೀಕಿಸತೊಡಗಿದರು.

ಇದಕ್ಕೆ ವಿರುದ್ಧವಾಗಿ ಸಂಯೋಜಕ ಸಮಿತಿಯವರು 'ಚುನಾವಣಾ ರಾಜಕೀಯದಿಂದ ದಲಿತರ ವಿಮೋಚನೆ ಸಾಧ್ಯವಿಲ್ಲ. ಅದು ಕ್ರಾಂತಿಕಾರಿ ಹೋರಾಟದಿಂದ ಮಾತ್ರ ಸಾಧ್ಯ, ಹಾಗಾಗಿ ಅಂಬೇಡ್ಕರರ ಎಲ್ಲಾ ವಿಚಾರಗಳೂ

ಕ್ರಾಂತಿಕಾರಿಯಾಗಿಲ್ಲ, ಆದರಿಂದ ಅನಿವಾರ್ಯವಾಗಿ ಮಾರ್ಕ್ಸ್‌ವಾದದ ಅಗತ್ಯವಿದೆ. ಮಾರ್ಕ್ಸ್‌ವಾದ ಮಾತ್ರವೇ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಬದಲಾವಣೆ ತಂದಿದೆ' ಎಂಬುದಾಗಿ ಚರ್ಚಿಸತೊಡಗಿದರು.

೧೯೯೦-೯೧ರ ಅವಧಿಯ ಹೊತ್ತಿನಲ್ಲಿ ಸಂಯೋಜಕ ಸಮಿತಿಯ ಒಳಗೇ ಪಿ.ವಿ.ಸಿ. (ಪ್ರಜಾ ವಿಮೋಚನಾ ಚಳುವಳಿ) ಎಂಬ ಸಂಘಟನೆ ಹುಟ್ಟಿಕೊಂಡಿತು. ಈ ಸಂಘಟನೆಯ ಒಲವು ಸಂಪೂರ್ಣವಾಗಿ ಅಂಬೇಡ್ಕರರ ವಿಚಾರಗಳ ಕಡೆಗಿತ್ತು. ಆದರೆ ಅದು ಕೊಡುತ್ತಿದ್ದ ಕಾರಣ ಬೇರೆ ಇತ್ತು. ' ದ.ಸಂ.ಸ.ಸಂಯೋಜಕ ಸಮಿತಿ' ಎಂಬ ಹೆಸರಿನಲ್ಲಿ 'ದಲಿತ' ಎಂಬ ಪದವಿರುವುದರಿಂದ ದಲಿತರಲ್ಲದ ಶೋಷಿತರು ಯಾರು ಕೂಡ ಸಂಘಟನೆಯಲ್ಲಿ ಸೇರಲು ಇಷ್ಟಪಡುತ್ತಿಲ್ಲ. ದಲಿತೇತರ ಶೋಷಿತರನ್ನು ಸಂಘಟಿಸಲು 'ದಲಿತ' ಎಂಬ ಪದ ಅಡ್ಡಿಯಾಗಿದೆ. ಹಾಗಾಗಿ ದಲಿತ ಎಂಬುದನ್ನು ಬಿಟ್ಟು 'ಪ್ರಜಾ ವಿಮೋಚನಾ ಚಳುವಳಿ' ಎಂಬ ಹೆಸರು ಸೂಕ್ತವಾದುದು' ಎಂಬ ತೀರ್ಮಾನಕ್ಕೆ 'ದ.ಸಂ.ಸ. ಸಂಯೋಜಕ ಸಮಿತಿ' ಯೊಳಗಿನ ಒಂದು ಸಣ್ಣ ಗುಂಪು ಬಂತು. ಇದು ಕರ್ನಾಟಕದಲ್ಲಿ ಒಂದು ಪ್ರಬಲವಾದ ಸಂಘಟನೆಯಾಗಿ ಬೆಳೆಯಲಿಲ್ಲ.

ಸರಿಸುಮಾರು ಇದೇ ಅವಧಿಯಲ್ಲಿ ದ.ಸಂ.ಸ. ಸಂಚಾಲಕ ಸಮಿತಿಯಾಗಲಿ, ಸಂಯೋಜಕ ಸಮಿತಿಯಾಗಲಿ ಅಂಬೇಡ್ಕರರ ವಿಚಾರಗಳನ್ನು ಸಂಪೂರ್ಣವಾಗಿ ಅನುಷ್ಠಾನಕ್ಕೆ ತರುವಲ್ಲಿ ವಿಫಲವಾಗಿವೆ ಎಂಬ ನೆಲೆಯಲ್ಲಿ ದ.ಸಂ.ಸ.ಗೆ ನಿಜವಾಗಿ ಅಂಬೇಡ್ಕರ್ ವಿಚಾರಗಳು ತಳಹದಿಯಾಗಬೇಕೆಂದು ಮತ್ತು ದ.ಸಂ.ಸ.ಯ ಒಳಗೆ ದಲಿತೇತರರು ಇರಬಾರದು. ಅಸ್ಪೃಶ್ಯರು ಮಾತ್ರ ದಲಿತರು ಎಂಬ ವಿಚಾರದಡಿಯಲ್ಲಿ 'ಕರ್ನಾಟಕದ ಸಮತಾ ಸೈನಿಕ ದಳ' ಹುಟ್ಟಿಕೊಂಡಿತು. ದ.ಸಂ.ಸ. ಸಂಚಾಲಕ ಸಮಿತಿಯು 'ಜಾತಿ ಬಿಟ್ಟು ದೇಶ ಕಟ್ಟು' ಎಂಬುದಾಗಿ ಜಾತಿ ನಾಶಕ್ಕೆ ಕರೆಕೊಡುತ್ತಿದ್ದರೆ ಎಸ್.ಎಸ್.ಡಿ.ಯು (ಸಮತಾ ಸೈನಿಕ ದಳ) 'ದೇಶ ಬಿಟ್ಟು ಜಾತಿಕಟ್ಟು' ಎಂಬುದಾಗಿ ಜಾತಿ ವಿನಾಶಕ್ಕೆ ಕರೆಕೊಡುತ್ತಿತ್ತು. ಪಿ.ವಿ.ಸಿ., ಎಸ್.ಎಸ್.ಡಿ. ಮತ್ತು ಸಂಚಾಲಕ ಸಮಿತಿಗಳು ಪಾರ್ಲಿಮೆಂಟರಿ ವ್ಯವಸ್ಥೆಯನ್ನು ಒಪ್ಪಿಕೊಂಡವುಗಳಾಗಿವೆ ಮತ್ತು ಅಂಬೇಡ್ಕರರನ್ನು ಆರಾಧನಾ ಭಾವದಿಂದಲೇ ಗ್ರಹಿಸುತ್ತವೆ. ಹಾಗಾಗಿ ಅವು ಎಂದೆಂದೂ ಅಂಬೇಡ್ಕರರ ವಿಚಾರಗಳನ್ನು ಅವರ ಹೋರಾಟದ ಸ್ವರೂಪಗಳನ್ನು ಗಂಭೀರವಾಗಿ ವಿಮರ್ಶೆ ಮಾಡುವುದಿಲ್ಲ. ಹಾಗಾಗಿ ಈ ಮೂರಕ್ಕೂ ಸೈದ್ಧಾಂತಿಕವಾಗಿ ಒಂದು ಬಗೆಯಲ್ಲಿ ಸಾಮ್ಯವಿದೆ. ಈ ಮೂರೂ ಸಂಘಟನೆಗಳು ದಲಿತರಿಗೆ ಸರ್ಕಾರಿ ಸೌಲಭ್ಯಗಳು ಸರಿಯಾಗಿ ದಕ್ಕುವಂತಾಗಬೇಕು. ಇವರ ಸೌಲಭ್ಯಗಳನ್ನು ಮೇಲು ಜಾತಿಯವರು ಅಕ್ರಮವಾಗಿ ಪಡೆಯಬಾರದು ಎಂಬುದರ ಬಗ್ಗೆ ಕಾಳಜಿ ವಹಿಸಿದವು. ಇವರು ವಸ್ತುಸ್ಥಿತಿಯನ್ನು ಬ್ರಾಹ್ಮಣ ಮತ್ತು ಶೂದ್ರ ನೆಲೆಯಲ್ಲಿ ವಿಂಗಡಿಸಿಕೊಂಡಿವೆ. ಇದರಿಂದಾಗಿ ಇವರ ಪ್ರಕಾರ ದಲಿತರ ಶತ್ರುಗಳು ಬ್ರಾಹ್ಮಣರು ಮತ್ತು ಪುರೋಹಿತಶಾಹಿಗಳು.

ಈ ಮೂರೂ ಸಂಘಟನೆಗಳ ರಾಜಕೀಯ ಚಿಂತನೆಯ ಮುಖ್ಯ ನೆಲೆಗಳನ್ನು ಈ ಕೆಳಗಿನಂತೆ ಕ್ರೋಢೀಕರಿಸಬಹುದು.

* ಭಾರತದಲ್ಲಿ ಪ್ರಜಾಪ್ರಭುತ್ವ ಮಾದರಿಯ ರಾಜಕೀಯ ಆಡಳಿತವಿದೆ. ಹಾಗಾಗಿ ಇಲ್ಲಿ ಪಾರ್ಲಿಮೆಂಟರಿ ಚುನಾವಣೆಗಳ ಪಾತ್ರ ಬಹಳ ಮುಖ್ಯವಾದುದು. ಆದರಿಂದ ಸಂಸದೀಯ ಚುನಾವಣೆಗಳನ್ನಾಗಲಿ, ಪ್ರಜಾಪ್ರಭುತ್ವ ವ್ಯವಸ್ಥೆಯನ್ನಾಗಲಿ ವಿರೋಧಿಸಬಾರದು. ಅವನ್ನು ಒಪ್ಪಿಕೊಂಡು ಅವುಗಳ ಮಾರ್ಗದಲ್ಲಿ ದಲಿತರು ಮುನ್ನಡೆಯಬೇಕು.

* ಬ್ರಾಹ್ಮಣಶಾಹಿಗಳು, ಪುರೋಹಿತಶಾಹಿಗಳು ದಲಿತರ ಶತ್ರುಗಳು. ಚರಿತ್ರೆಯಲ್ಲಿ ಇವರು ಶೂದ್ರರಿಗೆ ಅಕ್ಷರ

ಕಲಿಸಲಿಲ್ಲ. ವೇದ ಅಧ್ಯಯನ ಮಾಡಿಸಲಿಲ್ಲ. ಶೂದ್ರರನ್ನು ಅಕ್ಷರದಿಂದ, ಜ್ಞಾನದಿಂದ, ಅಧಿಕಾರದಿಂದ ವಂಚಿಸಿದರು. ವರ್ತಮಾನದಲ್ಲಿಯೂ ಕೂಡ ಅವರೇ ಶತ್ರುಗಳು.

* ರಾಜಕೀಯದಲ್ಲಿ, ಅಧಿಕಾರದಲ್ಲಿ (ಐ.ಎ.ಎಸ್ ಮತ್ತು ಕೆ.ಎ.ಎಸ್ ಹುದ್ದೆಗಳಲ್ಲಿ) ಮತ್ತು ನೌಕರಿಯಲ್ಲಿ ಬ್ರಾಹ್ಮಣಶಾಹಿಗಳೇ ಬಹುಸಂಖ್ಯೆಯಲ್ಲಿದ್ದಾರೆ. ಇದರಿಂದ ದಲಿತರಿಗೆ ಸಿಗಬೇಕಾದ ಸೌಲಭ್ಯಗಳು ಸಿಗುತ್ತಿಲ್ಲ. ಸರ್ಕಾರದ ಎಲ್ಲಾ ಸೌಲಭ್ಯಗಳನ್ನು ಅವರೇ ಅನುಭವಿಸುತ್ತಿದ್ದಾರೆ. ಭಾರತದ ಒಟ್ಟು ಜನಸಂಖ್ಯೆಯಲ್ಲಿ ಅವರ ಪ್ರಮಾಣ ಅತ್ಯಂತ ಕಡಿಮೆ ಇದೆ. ಆದರೆ ರಾಜಕೀಯ ಮತ್ತು ಅಧಿಕಾರದಲ್ಲಿ ಅವರು ಬಹುಸಂಖ್ಯೆಯಲ್ಲಿದ್ದಾರೆ. ಅದರಿಂದ ಇದು ಅಕ್ರಮ. ಇದನ್ನು ವಿರೋಧಿಸುವುದಕ್ಕಾಗಿ ಬ್ರಾಹ್ಮಣೇತರ ಶೂದ್ರರೆಲ್ಲರೂ ಒಂದಾಗಬೇಕು. ಬ್ರಾಹ್ಮಣರು ಕೂತು ಉಣ್ಣುವ ವರ್ಗ. ಶೂದ್ರರದು ದುಡಿದು ಉಣ್ಣುವ ವರ್ಗ.

* ಶಿಕ್ಷಣವಿಲ್ಲದೆ ದಲಿತರು ಹಿಂದುಳಿದಿದ್ದಾರೆ. ಸ್ವಾಭಿಮಾನ ಮತ್ತು ಸಾಮಾಜಿಕ ಸ್ಥಾನಮಾನ ದಲಿತರಿಗೆ ಮುಖ್ಯ. ಶಿಕ್ಷಣವು ಮಾತ್ರ ಇವನ್ನು ತಂದುಕೊಡುತ್ತದೆ. ದಲಿತರು ಶಿಕ್ಷಣವನ್ನು ಕಲಿತು ಸ್ವಾಭಿಮಾನ ಮತ್ತು ಸಾಮಾಜಿಕ ಎಚ್ಚರಿಕೆಯನ್ನು ರೂಪಿಸಿಕೊಳ್ಳಬೇಕು. ಶಿಕ್ಷಣ ಪಡೆದು ದಲಿತರು ಉನ್ನತ ಹುದ್ದೆಗಳಿಗೆ ಹೋಗಬೇಕು.

* ಬ್ರಾಹ್ಮಣಶಾಹಿ ಒಂದು ಶೋಷಕ ಶಕ್ತಿ. ಅದನ್ನು ಸೋಲಿಸಲು ಶೂದ್ರರೆಲ್ಲ ರಾಜಕೀಯವಾಗಿ ಒಂದಾಗಬೇಕು. ಎಲ್ಲಾ ಬಗೆಯ ಮೀಸಲಾತಿ ಕಡ್ಡಾಯವಾಗಿರಬೇಕು.

ಮೇಲೆ ಗುರುತಿಸಿದ ಅಷ್ಟೂ ಚಿಂತನೆಗಳು ಜಾತಿ ನೆಲೆಯಿಂದಲೇ ಹುಟ್ಟಿಕೊಂಡಿವೆ. ಅದರಿಂದಾಗಿ ವರ್ತಮಾನದಲ್ಲಿ ಅವುಗಳಿಗೆ ಅನೇಕ ಮಿತಿಗಳಿವೆ. ಇಡೀ ವ್ಯವಸ್ಥೆಯನ್ನು ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು ಎಂದು ವಿಂಗಡಿಸುವುದರಿಂದ, ಬ್ರಾಹ್ಮಣೇತರರಲ್ಲೇ ಬರುವ ನೂರಾರು ಬಗೆಯ ಜಾತಿ ಶ್ರೇಣೀಕರಣಗಳನ್ನು ಮುಚ್ಚಿಟ್ಟಂತಾಗುತ್ತದೆ. ಬ್ರಾಹ್ಮಣೇತರ ವರ್ಗದಲ್ಲೇ ದಲಿತರನ್ನು ಶೋಷಿಸುವ, ತುಳಿಯುವ, ಅವಮಾನಿಸುವ ಪ್ರಬಲವಾದ ಜಾತಿಗಳಿವೆ. ಇವರ ತುಳಿತವನ್ನು ಮುಚ್ಚಿಟ್ಟಂತಾಗುತ್ತದೆ.

ಕೇವಲ ಜಾತಿಯ ಪ್ರಶ್ನೆ ಮಾತ್ರ ಮುಂಚೂಣಿಗೆ ಬರುವುದರಿಂದ, ಭೂಮಿಯ ಬಗ್ಗೆ ಪ್ರಸ್ತಾಪವೇ ಬರುವುದಿಲ್ಲ. ಹಾಗಾಗಿ ಬ್ರಾಹ್ಮಣೇತರ ವರ್ಗದಲ್ಲಿ ಮಿತಿಮೀರದ ಭೂಮಿ ಆಸ್ತಿ-ಸಂಪತ್ತನ್ನು ಹೊಂದಿದ ಜನರಿದ್ದಾರೆ. ಇವರ ಮಿತಿಮೀರಿದ ಆಸ್ತಿಯ ಒಡೆತನದಿಂದಾಗಿಯೇ ದಲಿತರು ಆಸ್ತಿ-ಭೂಮಿಗಳಿಂದ ವಂಚಿತರಾಗಿದ್ದಾರೆ. ಈ ಅಂಶವು ಸಂಪೂರ್ಣ ಗೌಣವಾಗಿ ಬಿಡುತ್ತದೆ.

ದಲಿತರಿಗೆ ಶಿಕ್ಷಣ ಬೇಕೆಂಬುದು ನಿಜ. ಈ ಮಾತನ್ನು ಯಾರೂ ನಿರಾಕರಿಸಲಾರರು. ಆದರೆ ಶಿಕ್ಷಣ ಒಂದೇ ಮಾತ್ರ ಏಕಕಾಲಕ್ಕೆ ದಲಿತರಿಗೆ ಸ್ವಾಭಿಮಾನವನ್ನು - ಸಾಮಾಜಿಕ ಸ್ಥಾನಮಾನವನ್ನು ತಂದು ಕೊಡಲಾರದು. ಶಿಕ್ಷಣ ಪಡೆದ ಎಷ್ಟೋ ದಲಿತ ಯುವ ಜನಾಂಗ ಇಂದು ನಿರುದ್ಯೋಗದ ಕುದಿಯಲ್ಲಿ ಬೇಯುತ್ತಿದೆ. ಅವರ ಭೌತಿಕ ಜೀವನ ಬದಲಾಗದೆ ಅವರಿಗೆ ಸಾಮಾಜಿಕ ಸ್ಥಾನಮಾನ ದಕ್ಕಲಾರದು ಅದೊಂದು ಕನಸಿನ ಮಾತು.

ದಲಿತರಿಗೆ ಸಿಗಬೇಕಿದ್ದ ಸೌಲಭ್ಯಗಳನ್ನು ದಲಿತೇತರ ವರ್ಗದ ಎಲ್ಲರೂ ಅಕ್ರಮವಾಗಿ ಪಡೆಯುತ್ತಿದ್ದಾರೆ. ಇದರಲ್ಲಿ ಕೇವಲ ಬ್ರಾಹ್ಮಣರ ಪಾಲು ಮಾತ್ರವಿಲ್ಲ. ಉದಾ : ಪ.ಜಾತಿ ಮತ್ತು ಪ.ವರ್ಗಕ್ಕೆ ಸಿಗಬೇಕಿದ್ದ ಯಾವುದೋ ಒಂದು ಸರ್ಕಾರಿ ಹುದ್ದೆಯನ್ನು ಬೇರೆಯವರು ಅಕ್ರಮವಾಗಿ ಪಡೆದಿದ್ದರೆ, ಅದನ್ನು ಕೇವಲ ಬ್ರಾಹ್ಮಣರು ಮಾತ್ರ ಅಕ್ರಮವಾಗಿ ಪಡೆದಿರುವುದಿಲ್ಲ. ಬ್ರಾಹ್ಮಣರಲ್ಲದ ಜಾತಿಯವರೂ ಅಕ್ರಮವಾಗಿ ಪಡೆದಿರುತ್ತಾರೆ. ಅದರಿಂದ ನೌಕರಿಗೆ ಸಂಬಂಧಿಸಿದಂತೆ ಬ್ರಾಹ್ಮಣ ಮತ್ತು ಶೂದ್ರ ಎಂಬ ವಿಂಗಡಣೆಯು ವರ್ತಮಾನದಲ್ಲಿ ಉಪಯೋಗಕ್ಕೆ ಬರುವುದಿಲ್ಲ.

ಇನ್ನು ಈ ಸಂಘಟನೆಗಳಲ್ಲಿ ದಲಿತರ ಬಗ್ಗೆ ಇರುವ ಕಳಕಳಿ, ಕಾಳಜಿ, ಮುಂತಾದವುಗಳನ್ನೂ ಒಪ್ಪಿಕೊಳ್ಳಬಹುದು. ಆದರೆ ಅವೆಲ್ಲ ಒಂದು ಶ್ರೀಮಂತವಾದ ರಾಜಕೀಯ ಚಿಂತನೆಯಲ್ಲಿ ಅರಳಿ ಸಾಮಾಜಿಕವಾಗಿ ಅನುಷ್ಠಾನಕ್ಕೆ ಬರಬೇಕಾಗಿದೆ.

ಮೇಲೆ ಸೂಚಿಸಿದ ಮೂರು ಸಂಘಟನೆಗಳಲ್ಲಿ ರಾಜಕೀಯ ಚಿಂತನೆಯಲ್ಲಿ ಸಾಮ್ಯತೆ ಇದೆ. ಸಂಘಟನೆಯ ಶೀರ್ಷಿಕೆ ಮಾತ್ರ ಬೇರೆ ಬೇರೆ ಇದೆ. ಹಾಗಾಗಿ ಇವುಗಳ ನಡುವೆ ರಾಜಕೀಯ ಚಿಂತನೆಗಳ ನೆಲೆಯಲ್ಲಿ ವೈಚಾರಿಕ ಸಂಘರ್ಷಗಳಿಲ್ಲ. ವೈಚಾರಿಕ ಸಂಘರ್ಷಗಳಿಲ್ಲದೇ ಇರುವುದರಿಂದ ಇವುಗಳ ನಡುವೆ ಪರಸ್ಪರ ಮೈತ್ರಿ ಸಾಧ್ಯವಾಗಿದೆ. ಹಾಗಾಗಿ ಬೇರೆ ಬೇರೆ ಹೆಸರುಗಳನ್ನು ಹೊತ್ತುಕೊಂಡು ಹುಟ್ಟುವಾಗಲೇ ಒಂದು ಗಂಭೀರವಾದ ರಾಜಕೀಯ ಭಿನ್ನಾಭಿಪ್ರಾಯದಿಂದ ಇವು ಹುಟ್ಟಿಲ್ಲವೆಂಬುದು ತಿಳಿಯುತ್ತದೆ. ಮತ್ತು ಹಾಗೆ ಬೇರೆ ಬೇರೆ ಹೆಸರುಗಳಲ್ಲಿ ಸಂಘಟನೆಗಳು ಅಸ್ತಿತ್ವಕ್ಕೆ ಬಂದ ಮೇಲೆಯೂ ರಾಜಕೀಯ ಚಿಂತನೆಯ ನೆಲೆಯಲ್ಲಿ ಯಾವುದೇ ಕ್ರಾಂತಿಕಾರಿಯಾದ ಬದಲಾವಣೆ ಹಾಗೂ ಬೆಳವಣಿಗೆ ಆಗಿಲ್ಲ. ಇವುಗಳಿಂದಾಗಿ ಇವು ಹೆಸರಿನ ಮಟ್ಟಕ್ಕೆ ಮಾತ್ರ ಬೇರೆ ಬೇರೆಯಾಗಿ ಕಂಡರೂ ರಾಜಕೀಯ ಚಿಂತನೆಗೆ ಸಂಬಂಧಿಸಿದಂತೆ ಒಂದು ಸಾಮ್ಯತೆ ಇದೆ. ಇದರ ಪರಿಣಾಮವಾಗಿಯೇ ಪಿ.ವಿ.ಎಸ್. ಮತ್ತು ಎಸ್.ಎಸ್.ಡಿ.ಗಳು 'ಕರ್ನಾಟಕ ಜನಾಂದೋಲನ' ಎಂಬ ಹೆಸರಿನಲ್ಲಿ ಒಂದಾಗಲು ಸಾಧ್ಯವಾಯಿತು.

ಇನ್ನು ಈಗ ಪುನಃ ಸಂಯೋಜಕ ಸಮಿತಿಯ ವಿಷಯಕ್ಕೆ ಬರೋಣ. ೧೯೯೨ರವರೆಗೂ ದ.ಸಂ.ಸ. ಸಂಯೋಜಕ ಸಮಿತಿಗೆ ಸಂಚಾಲಕ ಸಮಿತಿಗಿಂತ ಭಿನ್ನವಾದ ಮತ್ತು ಪರ್ಯಾಯವಾದ ರಾಜಕೀಯ ಸೈದ್ಧಾಂತಿಕ ಪಥ ಸಿಕ್ಕರಲಿಲ್ಲ. ೧೯೯೨ರಲ್ಲಿ ದ.ಸಂ.ಸ. ಸಂಯೋಜಕ ಸಮಿತಿಯು ಸಿ.ಪಿ.ಐ. (ಎಂ.ಎಲ್.) ರೆಡ್ ಫ್ಲಾಗ್‌ನ ರಾಜಕೀಯ ಸೈದ್ಧಾಂತಿಕ ಪಥವನ್ನು ಅಧಿಕೃತವಾಗಿ ಸ್ವೀಕರಿಸಿತು. ಅಂದಿನಿಂದ ಅದು ದ.ಸಂ.ಸ. ಸಂಯೋಜಕ ಎಂಬ ಹೆಸರನ್ನು ಬಿಟ್ಟುಕೊಟ್ಟು ತನ್ನ ವರ್ಗಸಮೂಹ ಸಂಘಟನೆಗೆ ಆರ್.ವೈ.ಎಫ್. (ಕ್ರಾಂತಿಕಾರಿ ಯುವಜನ ರಂಗ) ಎಂಬ ಹೆಸರನ್ನು ಜಾರಿಗೆ ತಂದಿತು. ಸಂಯೋಜಕ ಸಮಿತಿಯ ಐತಿಹಾಸಿಕ ಬೆಳವಣಿಗೆಯಲ್ಲಿ ಇದೊಂದು ಸೈದ್ಧಾಂತಿಕವಾದ ಗುಣಾತ್ಮಕ ನೆಗೆತವಾಗಿದೆ.

ಮಾರ್ಕ್ಸ್‌ವಾದ, ಲೆನಿನ್‌ವಾದ ಮತ್ತು ಮಾವೋ ವಿಚಾರಧಾರೆಯಡಿಯಲ್ಲಿ ಕರ್ನಾಟಕದಲ್ಲಿ ಸಂಘಟನೆಯನ್ನು ಕ್ರಿಯಾಶೀಲಗೊಳಿಸುವ ಗುರಿಯನ್ನು ಸಂಯೋಜಕ ಸಮಿತಿ ಹೊತ್ತುಕೊಂಡಿತು. ಮತ್ತು ಸಂಚಾಲಕ ಸಮಿತಿಗಿಂತ ಭಿನ್ನವಾದ ಕ್ರಾಂತಿಕಾರಿ ರಾಜಕೀಯ ಪಥಕ್ಕಾಗಿ ನಿರಂತರವಾಗಿ ಕಾಯುತ್ತಿದ್ದ ಅದಕ್ಕೆ ಅದರ ಎಂದಿನ ನಿರೀಕ್ಷೆ ಕೈಗೂಡಿತು. ಇದರ ರಾಜಕೀಯ ಚಿಂತನೆಯನ್ನು ಹೀಗೆ ಕ್ರೋಡೀಕರಿಸಬಹುದು.

ಮಾರ್ಕ್ಸ್‌ವಾದವು ಜಗತ್ತಿನ ವಸ್ತುಸ್ಥಿತಿಯನ್ನು ವರ್ಗದೃಷ್ಟಿಕೋನದಿಂದ ಪರಿಭಾವಿಸುತ್ತದೆ. ಹಾಗಾಗಿ ರೆಡ್ ಫ್ಲಾಗ್ ಇದರಿಂದ ಹೊರತೇನು ಅಲ್ಲ. ಸಾಮ್ರಾಜ್ಯಶಾಹಿ, ಊಳಿಗಮಾನ್ಯಶಾಹಿ ಮತ್ತು ಆಳುವ ದಲ್ಲಾಳಿ ಬಂಡವಾಳಶಾಹಿಗಳಿಂದಾಗಿ ಶ್ರಮಜೀವಿಗಳ ಬದುಕು ಸಂಕಟಕ್ಕೆ ಈಡಾಗಿದೆ. ಇತಿಹಾಸದಲ್ಲಿ ಮತ್ತು ವರ್ತಮಾನದಲ್ಲಿ ಶೋಷಿತರೆಂದರೆ ಕೇವಲ ದಲಿತರಲ್ಲ. ಶ್ರಮವನ್ನು ಮಾರಿಕೊಳ್ಳುವ ಎಲ್ಲಾ ಬಗೆಯ ಜನರೂ ಶೋಷಿತರೇ. ಇವರ ಶ್ರಮದಿಂದಲೇ ಬಂಡವಾಳ ಬೆಳೆಯುತ್ತಿದೆ.

ಆಳುವ ಸರ್ಕಾರಗಳು ಸಾಮ್ರಾಜ್ಯಶಾಹಿ, ಊಳಿಗಮಾನ್ಯಶಾಹಿಗಳ ವಕಾಲತ್ತುದಾರರೇ ಆಗಿರುತ್ತಾರೆ. ಆದುದರಿಂದ ಅವರಿಂದ ಯಾವುದೇ ಬದಲಾವಣೆಯನ್ನು ನಿರೀಕ್ಷಿಸಲಾಗದು. ಚರಿತ್ರೆಯಲ್ಲಿ ಯಾವುದೇ ಬದಲಾವಣೆಯು ಶ್ರಮಜೀವಿಗಳ ಸಂಘಟನಾತ್ಮಕ ಹೋರಾಟದಿಂದ ಮಾತ್ರವೇ ಘಟಿಸಿದೆ. ಶ್ರಮಜೀವಿಗಳ ಕ್ರಾಂತಿಕಾರಿ ವರ್ಗಹೋರಾಟ ಸೃಷ್ಟಿಯಾದಾಗಲೆಲ್ಲಾ ಪ್ರಭುತ್ವವು ಅವುಗಳನ್ನು ಜಾತಿ ಹೋರಾಟಗಳನ್ನಾಗಿ, ಮತಧರ್ಮದ ಹೋರಾಟಗಳನ್ನಾಗಿ ಪರಿವರ್ತಿಸಿದೆ. ತನ್ನ ಅನುಕೂಲಕ್ಕೆ ತಕ್ಕಂತೆ ಮಾರ್ಪಡಿಸಿದೆ. ಹಾಗಾಗಿ ಜಾತಿ ಹೋರಾಟಗಳು ಅಂತಿಮವಾಗಿ ಶೋಷಕ ಪ್ರಭುತ್ವಕ್ಕೆ ಸಹಾಯಕವಾಗಿರುತ್ತವೆ. ಇವು ವರ್ಗ ಹೋರಾಟಗಳಿಗೆ ಅಡ್ಡಿಯಾಗಿರುತ್ತವೆ. ಹಾಗಾಗಿ ಎಲ್ಲಾ ಬಗೆಯ ಹೋರಾಟಗಳನ್ನು ವರ್ಗ ಹೋರಾಟಗಳನ್ನಾಗಿ ಮಾರ್ಪಡಿಸಬೇಕು.

ಇಂದಿನ ಜಾಗತೀಕರಣದಿಂದಾಗಿ, ಯುವಜನತೆ, ವಿದ್ಯಾರ್ಥಿ ಸಮೂಹ, ಮಹಿಳಾ ವರ್ಗ, ರೈತಾಪಿವಲಯ, ಕಾರ್ಮಿಕರು ತಮ್ಮದೇ ಆದ ನಿರ್ದಿಷ್ಟ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಹಾಗಾಗಿ ಆಯಾಯ ವರ್ಗದಲ್ಲೆ ನಿರ್ದಿಷ್ಟ ಕ್ರಾಂತಿಕಾರಿ ರಾಜಕೀಯ ಸಿದ್ಧಾಂತದಡಿಯಲ್ಲಿ ಸಂಘಟಿತರಾಗಬೇಕು. ಜೊತೆಗೆ ಆ ಎಲ್ಲ ವರ್ಗಗಳಿಗೂ ಇರುವ ಒಂದು ಸಾಮಾನ್ಯ ಅಂಶದಿಂದಾಗಿ ಆ ಎಲ್ಲ ಬಗೆಯ ಬಿಡಿ ಬಿಡಿ ಸಂಘಟನೆಗಳು ಒಟ್ಟಾಗಿ, ಒಂದು ಕ್ರಾಂತಿಕಾರಿ ಸಂಘಟನೆಯ ವ್ಯಾಪ್ತಿಗೆ ಬರಬೇಕು. ಸಮರಶೀಲವಾದ ವೀರೋಚಿತವಾದ ಹೋರಾಟದಿಂದ ಮಾತ್ರ ಶೋಷಿತ ಜನರ ವಿಮೋಚನೆ ಸಾಧ್ಯ.

ಈ ಮೇಲೆ ಉಲ್ಲೇಖಿಸಿದ ರಾಜಕೀಯ ಚಿಂತನೆಗಳು ರೆಡ್ ಫ್ಲಾಗ್ ಪಾರ್ಟಿಯವು. ಅವು ದ.ಸಂ.ಸ.ಯ ರಾಜಕೀಯ ಚಿಂತನೆಗಳಿಗಿಂತ ಸಂಪೂರ್ಣ ತದ್ವಿರುದ್ಧ ದಿಕ್ಕಿನಲ್ಲಿವೆ.

ದಲಿತರ ಸಮಸ್ಯೆಗಳಲ್ಲಿ ಜಾತಿ ಸಮಸ್ಯೆಯೂ ಮುಖ್ಯವಾದುದೇ. ಆದರೆ ಅದನ್ನು ಜಾತಿ ಹೋರಾಟದಿಂದಲೇ ಹೋಗಲಾಡಿಸಲು ಸಾಧ್ಯವಿಲ್ಲ. ಈ ವಾಸ್ತವ ಸತ್ಯವನ್ನು ಇಲ್ಲಿಯವರೆಗೆ ನಡೆದಿರುವ ಹೋರಾಟಗಳ ಇತಿಹಾಸದಿಂದಲೇ ತಿಳಿಸಿದ್ದೇವೆ. ಇನ್ನು ಮಾರ್ಕ್ಸ್‌ವಾದಿಗಳದು ಮೂಲಭೂತವಾಗಿ ಭೂಮಿಯ ಪ್ರಶ್ನೆ ಮತ್ತು ಅಧಿಕಾರದ ಪ್ರಶ್ನೆ. ಅಥವಾ ರಾಜಕೀಯ ಆರ್ಥಿಕ ಪ್ರಶ್ನೆ. ಶ್ರಮ ಜೀವಿಗಳಿಗೆ ಕೇವಲ ಆರ್ಥಿಕ ಸ್ಥಿತಿಗತಿ ಬಂದರೆ ಸಾಲದು ಅದರ ಜೊತೆಗೆ ರಾಜಕೀಯ ಅಧಿಕಾರವೂ ಬೇಕು. ಆದರೆ ಈ ಎರಡನ್ನೂ ಒಟ್ಟೊಟ್ಟಿಗೇ ಪಡೆಯುವುದು ಸುಲಭವಿಲ್ಲ. ಮತ್ತು ಇಂತ ಹೋರಾಟವು ದೀರ್ಘ ಗುರಿಯ ಹೋರಾಟವಾಗಿರುತ್ತದೆ. ಅದರೆ ಶೋಷಿತ ಜನತೆ ಮಾತ್ರ ದೈನಂದಿನ ತೀರಾ ಸಾಮಾನ್ಯ ಅವಶ್ಯಕತೆಗಳನ್ನು ಬಯಸುತ್ತಿರುತ್ತದೆ. ಇವುಗಳನ್ನೂ ಕೂಡ ನಿರ್ಲಕ್ಷಿಸಲು ಸಾಧ್ಯವಿಲ್ಲ. ಹಾಗಾಗಿ ಇವತ್ತಿನ ಸಂಕೀರ್ಣ ಸ್ಥಿತಿಯಲ್ಲಿ ಇವೆಲ್ಲವನ್ನೂ ಒಟ್ಟಿಗೆ ಸುಲಭವಾಗಿ ನಿಭಾಯಿಸಲು ಆಗುತ್ತಿಲ್ಲ. ಈ ಬಗೆಯ ಸಮಸ್ಯೆಗಳನ್ನು ದೀರ್ಘಕಾಲೀನ ಗುರಿ ಇಟ್ಟುಕೊಂಡು ಹೋರಾಡುತ್ತಿರುವ ಅನೇಕ ಸಂಘಟನೆಗಳು ಎದುರಿಸುತ್ತಿವೆ.

ಕಳೆದೆರಡು ವರ್ಷಗಳಿಂದ ಕರ್ನಾಟಕದಲ್ಲಿ 'ಮಾದಿಗ ದಂಡೋರ' ಎಂಬ ಸಂಘಟನೆ ಹುಟ್ಟಿಕೊಂಡಿದೆ. ಹೆಸರೇ ಸೂಚಿಸುವಂತೆ ಅದು ಮಾದಿಗರ ಹಿತಾಸಕ್ತಿಯನ್ನು ಮಾತ್ರ ಪರಿಗಣಿಸುತ್ತದೆ. ಸರ್ಕಾರ ಕೊಡುತ್ತಿರುವ ಮೀಸಲಾತಿಯ

ಪ್ರಮಾಣವಾರು ಅನುಷ್ಠಾನದ ಪ್ರಶ್ನೆಯೇ ಇದರ ಹುಟ್ಟಿಗೆ ಕಾರಣವಾಗಿದೆ. ದಲಿತರಿಗೆ ಇರುವ ಸೌಲಭ್ಯದ ಪ್ರಮಾಣವನ್ನು ಕುರಿತು ಮಾದಿಗ ದಂಡೋರ ಈ ಮುಂದಿನಂತೆ ಲೆಕ್ಕ ಹಾಕುತ್ತದೆ. ಮತ್ತು ಅದುವೇ ಅದರ ರಾಜಕೀಯ ಚಿಂತನೆಯಾಗಿದೆ.

ಸರ್ಕಾರ ಪರಿಶಿಷ್ಟಜಾತಿಯವರಿಗೆ ಕೊಡುತ್ತಿರುವ ಮೀಸಲಾತಿಯ ಬಹುಪ್ರಮಾಣವನ್ನು ಹೊಲೆಯರು ಪಡೆದಿದ್ದಾರೆ; ಪಡೆಯುತ್ತಿದ್ದಾರೆ. ಪರಿಶಿಷ್ಟ ಜಾತಿಯ ವ್ಯಾಪ್ತಿಯಲ್ಲಿ ಮಾದಿಗರದು ಬಹುದೊಡ್ಡ ಸಂಖ್ಯಾ ಪ್ರಮಾಣ. ಮಾದಿಗರ ಸಂಖ್ಯಾ ಪ್ರಮಾಣಕ್ಕೆ ಹೋಲಿಸಿಕೊಂಡರೆ, ಹೊಲೆಯರ ಪ್ರಮಾಣ ಕಡಿಮೆ. ಆದರೆ ಮೀಸಲಾತಿಯಲ್ಲಿ ಹೊಲೆಯರು ಮಾದಿಗರಿಗಿಂತ ಹೆಚ್ಚು ಪಡೆದಿದ್ದಾರೆ. ರಾಜಕೀಯದಲ್ಲಿ, ಮಂತ್ರಿ ಪದವಿಗಳಲ್ಲಿ, ಸರ್ಕಾರದ ಉನ್ನತ ಹುದ್ದೆಗಳಲ್ಲಿ ಎಲ್ಲೆಲ್ಲಿಯೂ ಹೊಲೆಯರೇ ತುಂಬಿದ್ದಾರೆ. ಮಾದಿಗರಿಗೆ ಸಿಗಬೇಕಾಗಿದ್ದ ಸೌಲಭ್ಯಗಳನ್ನೂ - ಅವಕಾಶಗಳನ್ನೂ ಹೊಲೆಯರು ಪಡೆದಿದ್ದಾರೆ. ಆದರಿಂದ ಮಾದಿಗರು ಸಂಘಟಿತರಾಗಬೇಕು. ತಮಗೆ ಸಿಗಬೇಕಾಗಿದ್ದ ಸೌಲಭ್ಯ ಮತ್ತು ಅವಕಾಶಗಳನ್ನು ಹೊಲೆಯರು ಅಕ್ರಮವಾಗಿ ಪಡೆಯುತ್ತಿರುವುದನ್ನು ತಪ್ಪಿಸುವುದಕ್ಕಾಗಿ ಮತ್ತು ತಮಗೆ ನ್ಯಾಯಬದ್ಧವಾಗಿ ಅವು ಸಿಗುವಂತೆ ಮಾಡಲು ಹೋರಾಟ ಮಾಡಬೇಕು. ಹೊಲೆಯರ ಪ್ರಮಾಣಕ್ಕಿಂತ ಮಾದಿಗರ ಪ್ರಮಾಣ ಜಾಸ್ತಿ ಇರುವುದರಿಂದ, ಪ್ರಮಾಣಕ್ಕೆ ಅನುಗುಣವಾಗಿ ಮೀಸಲಾತಿಯನ್ನು ಸರ್ಕಾರ ಜಾರಿಮಾಡಬೇಕು. ಇದಕ್ಕಾಗಿ ಮಾದಿಗರು ಹೋರಾಟ ಮಾಡಬೇಕು - ಇದಿಷ್ಟು 'ಮಾದಿಗ ದಂಡೋರ'ದ ರಾಜಕೀಯ ಚಿಂತನೆ. ವಾಸ್ತವವಾಗಿ ಇದಕ್ಕೆ ನಿಖರವಾದ ದಾಖಲೆಗಳಿಲ್ಲ.

ಮೀಸಲಾತಿ ಸೌಲಭ್ಯ ಪಡಯುವಲ್ಲಿ ಮಾದಿಗರು ವಂಚಿತರಾಗಿದ್ದಾರೋ - ಹೊಲೆಯರು ವಂಚಿತರಾಗಿದ್ದಾರೋ. ಅಥವಾ ಕೊರಚ, ಕೊರವ, ಭೋವಿ ಮುಂತಾದ ಹತ್ತು ಹಲವು ಜಾತಿಯವರು ವಂಚಿತರಾಗಿದ್ದಾರೋ ಇದು ಮತ್ತೊಂದು ಸಲ ಪರಿಶೀಲಿಸಬೇಕಾದ ಪ್ರಶ್ನೆ. ಮೀಸಲಾತಿಯಲ್ಲಿ ಮಾದಿಗರಲ್ಲೇ ಕೆಲವರಿಗೆ ಮಾತ್ರ ಸಿಕ್ಕಿರುವಂತೆ, ಹೊಲೆಯರಲ್ಲಿಯೂ ಕೆಲವರಿಗೆ ಮಾತ್ರ ಸಿಕ್ಕಿದೆ. ಹೊಲೆಯರಲ್ಲೂ ಮೀಸಲಾತಿಯಿಂದ ವಂಚಿತರಾದ ಜನ ಎಷ್ಟೋ ಇದ್ದಾರೆ. ಮಾದಿಗರಲ್ಲಾದರೆ ಮೀಸಲಾತಿಯ ಸೌಲಭ್ಯ ಪಡೆಯುತ್ತಿರುವುದನ್ನು ಲೆಕ್ಕ ಹಾಕುವಷ್ಟಾದರೂ ಜಾಗ್ರತೆ ಪಡೆದ ಜನರಿದ್ದರೆ ಅದೇ ಕೊರಚ, ಕೊರವ, ಭೋವಿ, ಮುಂತಾದ ಹಲವಾರು ಜಾತಿಗಳಲ್ಲಿ ಮೀಸಲಾತಿಯ ಸೌಲಭ್ಯದ ಮಾತಿರಲಿ, ಕರ್ನಾಟಕದಲ್ಲೇ ಎಷ್ಟೋ ಜಾತಿಯ ಜನರಿಗೆ ಜಾತಿಪತ್ರಗಳೆ ಸಿಗದಿರುವ ದುರಂತ ಪರಿಸ್ಥಿತಿ ಇದೆ. ಒಂದು ಕಾಲಕ್ಕೆ ಈ ಎಲ್ಲಾ ಜಾತಿಗಳೂ ಮಾದಿಗರ ರೀತಿಯಲ್ಲೇ ಮೀಸಲಾತಿ ಕೇಳುವಂತಾದರೆ ಪರಿಸ್ಥಿತಿ ಏನಾಗುತ್ತದೆ? ಅದಿರಲಿ ಸದ್ಯಕ್ಕೆ ಮಾದಿಗ ದಂಡೋರದ ಮುಂದೆ ಮೇಲೆ ಸೂಚಿಸಿದ ಜಾತಿಪತ್ರಗಳೇ ಸಿಗದಿರುವ ಮುಗ್ಧರೂ ಇಲ್ಲಿ ಮತ್ತು ಮಾದಿಗರ ಇಂದಿನ ಪರಿಸ್ಥಿತಿಗೆ ಕಾರಣರಾಗಿರುವ ಜಮೀನ್ದಾರರು, ಶ್ರೀಮಂತರೂ ಇಲ್ಲ. ಹೊಲೆಯರು ಮಾತ್ರ ಅವರ ಪಾಲಿಗೆ ಪರಮಶತ್ರುಗಳಾಗಿದ್ದಾರೆ. ಇದು ಹೊಲೆ-ಮಾದಿಗ ಎಂಬ ಸೋದರ ಸಂಬಂಧದಲ್ಲೇ ಶತ್ರುತ್ವವನ್ನು ಹುಟ್ಟುಹಾಕಿದೆ. ಎಲ್ಲವನ್ನೂ ಮೀಸಲಾತಿಯ ಚೌಕಟ್ಟಿನಲ್ಲೆ ಗ್ರಹಿಸುವ ದ.ಸಂ.ಸ. ಸಂಕುಚಿತ ರಾಜಕೀಯ ಚಿಂತನೆಯೇ ಇದಕ್ಕೆ ಮೂಲಬೀಜವಾಗಿದೆ.

ಮೇಲೆ ವಿವರಿಸಿದಂತೆ ಪ್ರಧಾನವಾಗಿ ಮೂರು ಬಗೆಯ ರಾಜಕೀಯ ಚಿಂತನೆಗಳು ಕರ್ನಾಟಕ ದಲಿತ ಸಂಘರ್ಷ ಸಮಿತಿಯ ವಲಯದಲ್ಲಿವೆ.

# ಸಮಾರೋಪ

ಸಾಹಿತ್ಯ ಮತ್ತು ಸಾಂಸ್ಕೃತಿಕ ಅಧ್ಯಯನಗಳು ೨೦ನೆಯ ಶತಮಾನದ ಕೆಲವು ಮುಖ್ಯ ಅಧ್ಯಯನಗಳಲ್ಲಿ ಸೇರಿವೆ. ಇದರಲ್ಲಿ ಸಾಮಾಜಿಕ ಚಳುವಳಿಗಳೂ ಸೇರುತ್ತವೆ. ಸಾಂಸ್ಕೃತಿಕ ಚಳುವಳಿಯು ಸಮಾಜದ ಒಂದು ಭಾಗವಾಗಿರುತ್ತದೆ. ಅಂತೆಯೇ ಸಾಹಿತ್ಯವು ಸಮಾಜದ ಸಮಕಾಲೀನ ಬದುಕಿಗೆ ತೋರುವ ಪ್ರತಿಬಿಂಬವಾಗಿರುತ್ತದೆ. ಸಾಮಾಜಿಕ ಚಳುವಳಿಯನ್ನು ನೋಡುವಾಗ ಅದು ಸಮಾಜದ ಭೌತಿಕ ಮತ್ತು ಅಭೌತಿಕ ಉತ್ಪಾದನೆಯ ಮೇಲೆ ನಿಂತಿರುತ್ತದೆ. ಅವುಗಳ ಸಂಘರ್ಷ ಮತ್ತು ವೈರುಧ್ಯಗಳು ಸಾಮಾಜಿಕ ಚಳುವಳಿಯ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿರುತ್ತವೆ. ಈ ಚಳುವಳಿಗಳಿಗೆ ಸಮಾಜದ ಸಾಂಸ್ಕೃತಿಕ ಒತ್ತಡಗಳು ಪ್ರಮುಖವಾಗುತ್ತವೆ. ಈ ಸಾಂಸ್ಕೃತಿಕ ಅಧ್ಯಯನಗಳಲ್ಲಿ ಸಾಹಿತ್ಯಿಕ ಬರವಣಿಗೆ ಮತ್ತು ಮೌಖಿಕ ಪರಂಪರೆಗೆ ಸಂಬಂಧಿಸಿದ ಆಕರಗಳು ಕಂಡುಬರುತ್ತವೆ. ಬರವಣಿಗೆಗೆ ಸಂಬಂಧಿಸಿದ ಅಧ್ಯಾಯಗಳು ಲಿಖಿತ ಪರಂಪರೆಯ ಎಲ್ಲಾ ಸಾಮಗ್ರಿಗಳನ್ನು ಹೊಂದಿರುತ್ತವೆ. ಈ ಎರಡು ರೀತಿಯ ಅಧ್ಯಯನ ಕ್ರಮಗಳು ಅಭಿವ್ಯಕ್ತಿಯ ಕ್ರಮಗಳನ್ನು ಹೊಂದಿರುತ್ತವೆ. ಇವುಗಳು ಚಾರಿತ್ರಿಕವಾಗಿ ಆಯಾ ಕಾಲಘಟ್ಟಗಳ ಮಾನವನ ಆರ್ಥಿಕ ಚಟುವಟಿಕೆಗಳ ಆಧಾರದ ಮೇಲೆ ರೂಪುಗೊಳ್ಳುತ್ತವೆ. ಹಾಗಾಗಿ ಆರ್ಥಿಕ ವ್ಯವಸ್ಥೆಗೂ ಸಾಂಸ್ಕೃತಿಕ ಬದುಕಿಗೂ ನೇರವಾದ ಸಂಬಂಧ ಇರುವುದು ಇಂದಿನ ಸಾಂಸ್ಕೃತಿಕ ಅಧ್ಯಯನಗಳಲ್ಲಿ ಪ್ರಧಾನವಾಗಿ ಕಂಡು ಬರುತ್ತವೆ.

ಪ್ರಸ್ತುತ ಅಧ್ಯಯನವು ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಕರ್ನಾಟಕ ದಲಿತ ಚಳುವಳಿ ಮತ್ತು ಸಾಹಿತ್ಯಗಳಿಗೆ ಸಂಬಂಧಿಸಿದ ಹಿನ್ನೆಲೆಯನ್ನು ಸಮರ್ಪಕವಾಗಿ ಗ್ರಹಿಸಲಾಗಿದೆ. ಇದು ತನ್ನ ಬೆಳವಣಿಗೆಯ ಹಾದಿಯಲ್ಲಿ ಪ್ರೇರಣೆ ಮತ್ತು ಪೋಷಣೆಯನ್ನು ನೀಡಿದ ಹಲವು ಸಂಗತಿಗಳನ್ನು ಮತ್ತು ಆಕರಗಳನ್ನು ಆಯಾ ಕಾಲಘಟ್ಟದ ವಸ್ತುಸ್ಥಿತಿಯ ಹಿನ್ನೆಲೆಯಲ್ಲಿ ಗ್ರಹಿಸಲಾಗಿದೆ.

ಕರ್ನಾಟಕ ದಲಿತ ಚಳುವಳಿಯು ೭೦ರ ದಶಕದ ನಂತರದ ಸೃಷ್ಟಿ. ಅದು ದಸಂಸ ಹೆಸರಲ್ಲಿ ಉಗಮಗೊಂಡಿತು. ನಂತರದ ಕಾಲಮಾನದಲ್ಲಿ ಅದರ ಒಡಲೊಳಗೇ ಹುಟ್ಟಿದ ಸಾಂಸ್ಕೃತಿಕ ಬಿಕ್ಕಟ್ಟುಗಳನ್ನು ತಾತ್ವಿಕ ನೆಲೆಯಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಇದು ದಲಿತ ಚಳುವಳಿ ಮತ್ತು ಸಾಹಿತ್ಯವನ್ನು ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಇಟ್ಟು

ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆದ್ದರಿಂದ ದಲಿತ ಚಳುವಳಿಯ ಆಂತರಿಕ ಬಿಕ್ಕಟ್ಟುಗಳನ್ನು ಮತ್ತು ಅವುಗಳ ವೈವಿಧ್ಯತೆ ಹಾಗೂ ವೈರುಧ್ಯಗಳನ್ನು ಇಲ್ಲಿ ಗ್ರಹಿಸುಲಾಗಿದೆ. ಅಧ್ಯಯಿಸಿದ ಪರಿಧಿಯಲ್ಲಿ ಇಲ್ಲಿನ ಸಾಮಗ್ರಿಗಳನ್ನು ಕ್ಷೇತ್ರಕಾರ್ಯದ ಮೂಲಕ ಮತ್ತು ಲಿಖಿತ ದಾಖಲೆಯ ಮಾಹಿತಿಗಳನ್ನು ಅಧ್ಯಯನದಲ್ಲಿ ಒಳಪಡಿಸಲಾಗಿದೆ. ದಲಿತ ಚಳುವಳಿಯ ಒಟ್ಟು ಸ್ವರೂಪವನ್ನು ತಾತ್ವಿಕ ಚರ್ಚೆಗೆ ಒಳಪಡಿಸಿ ಅದರ ಸಾಧಕ ಬಾಧಕಗಳನ್ನು ಚರ್ಚಿಸಲಾಗಿದೆ. ಚಳುವಳಿಯ ಕರಪತ್ರಗಳು, ಸಿದ್ಧಾಂತಗಳು, ಪ್ರೇರಿತ ವ್ಯಕ್ತಿಗಳು, ಕೆಲವು ಪ್ರಚಾರಿಕೆಗಳನ್ನು ಅಧ್ಯಯನದಲ್ಲಿ ಒಳಪಡಿಸಿ ಅವುಗಳಿಗೆ ಒಂದು ತಾತ್ವಿಕ ರೂಪವನ್ನು ಕೊಡಲಾಗಿದೆ. ಈ ಎಲ್ಲಾ ಅಂಶಗಳ ಆಳದಲ್ಲಿ ಹುದುಗಿರುವ ಮಾನವಪರವಾದ ಆಶಯಗಳನ್ನು ಕುರಿತು ವಾಸ್ತವ ನೆಲೆಯಲ್ಲಿ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಹಾಗೆಯೇ ದಲಿತ ಬದುಕಿಗೆ ಸಂಬಂಧಿಸಿದಂತೆ ಅವರ ಸಾಂಸ್ಕೃತಿಕ ಬದುಕಿನ ತೊಳಲಾಟಗಳನ್ನು ಹಲವು ನೆಲೆಯಲ್ಲಿ ಗ್ರಹಿಸಲಾಗಿದೆ.

ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯ ಬದುಕಲ್ಲಿ ದಲಿತರ ಬದುಕಿನ ಸಂದರ್ಭವನ್ನು ಚರ್ಚಿಸುವುದು ಇಲ್ಲಿಯ ಮುಖ್ಯ ಉದ್ದೇಶವಾಗಿದೆ. ಕರ್ನಾಟಕದ ಸಂದರ್ಭದಲ್ಲಿ ದಲಿತ ಬದುಕಿನ ಪ್ರಾದೇಶಿಕ ಭಿನ್ನತೆಯನ್ನು ಮತ್ತು ಈ ಭಿನ್ನತೆಗೆ ಸಂಬಂಧಿಸಿದ ಕಾರಣಗಳನ್ನು ಸೂಕ್ಷ್ಮವಾಗಿ ಅಧ್ಯಯನದಲ್ಲಿ ಕೊಡಲಾಗಿದೆ. ಈ ಹೊತ್ತಿನ ದಲಿತ ಯುವಕ/ಯುವತಿಯರನ್ನು ಅವರ ಶಿಕ್ಷಣವನ್ನು ಮತ್ತು ಅವರ ನೌಕರಿಯ ಸಂಬಂಧದ ತಾಕಲಾಟವನ್ನು ಗ್ರಹಿಸಲಾಗಿದೆ. ದಲಿತ ಬದುಕಿಗೆ ಸಂಬಂಧಿಸಿದ ಸಾಂಸ್ಕೃತಿಕ ಬಿಕ್ಕಟ್ಟುಗಳು ಚರ್ಚೆಗೆ ಒಳಗೊಂಡಿವೆ. ಅವು ರಾಜಕೀಯ, ಭೂಮಿ, ಅಸ್ಪೃಶ್ಯತೆ, ಅತ್ಯಾಚಾರ, ಕಸುಬು, ನಗರ ಜೀವನ ಮುಂತಾದ ಹಲವು ವಿಷಯಗಳು ದಲಿತ ಬದುಕಲ್ಲಿ ಹೇಗೆ ಸೇರಿಕೊಂಡಿವೆ ಎಂಬುದನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ.

ಈ ಶತಮಾನದ ೭೦ರ ದಶಕದ ನಂತರದಲ್ಲಿ (೧೯೭೦) ದಲಿತ ಸಾಹಿತ್ಯದ ಸೃಷ್ಟಿಯಾಯಿತು. ಈ ೭೦ರ ದಶಕದ ಸಂದರ್ಭದಲ್ಲಿ ಸಂಭವಿಸಿದ ಚಾರಿತ್ರಿಕ ಮತ್ತು ಸಾಂಸ್ಕೃತಿಕ ಬಿಕ್ಕಟ್ಟುಗಳು ದಲಿತ ಸಾಹಿತ್ಯದ ಒಡಲಿನಿಂದ ಮೈತಾಳಿತು. ಈ ಸಾಹಿತ್ಯದ ಆಳದಲ್ಲಿ ಹುದುಗಿದ್ದ ಮಾನವಪರವಾದ ಆಶಯವನ್ನು ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಇಲ್ಲಿ ದಲಿತ ಸಾಹಿತ್ಯದ ಪ್ರಕಾರಗಳನ್ನು ಮತ್ತು ದಲಿತ ಸಾಹಿತ್ಯೇತರ ಬರವಣಿಗೆಗಳನ್ನು ಅಧ್ಯಯನದ ಚೌಕಟ್ಟಿನಲ್ಲಿ ಒಳಪಡಿಸಲಾಗಿದೆ. ಈ ಪ್ರಕಾರಗಳ ಒಟ್ಟು ತಾತ್ವಿಕ ಸ್ವರೂಪವನ್ನು ಬದಲಾವಣೆಯ ಸಾಂಸ್ಕೃತಿಕ ಸಂದರ್ಭದಲ್ಲಿ ಹೇಗೆ ಪ್ರಸ್ತುತವಾಗಿವೆ ಎಂಬುದನ್ನು ಇಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ದಲಿತ ಸಾಹಿತ್ಯದ ಮತ್ತು ಬರವಣಿಗೆಯ ಒತ್ತಡಗಳನ್ನು ಸಾಮಾಜಿಕ ವೈರುಧ್ಯಗಳನ್ನು ಗ್ರಹಿಸಲಾಗಿದೆ. ಈ ಒತ್ತಡ, ವೈರುಧ್ಯಗಳಿಗೆ ತಾತ್ವಿಕ ಆಳದಲ್ಲಿನ ದೀರ್ಘವಾದ ಪರಂಪರೆಯನ್ನು ಮತ್ತು ಅದು ಹುಟ್ಟುವುದಕ್ಕೆ ಕಾರಣವಾದ ಬದ್ಧತೆಯನ್ನು ಅಧ್ಯಯನದ ಚೌಕಟ್ಟಲ್ಲಿ ಸಮಗ್ರವಾಗಿ ಚರ್ಚಿಸಲಾಗಿದೆ. ಇಲ್ಲಿ ದಲಿತ ಕಾವ್ಯ, ಕಥಾಸಾಹಿತ್ಯ, ಆತ್ಮಕಥನ, ವಿಮರ್ಶೆ, ನಾಟಕ ಪ್ರಕಾರಗಳನ್ನು ಚರ್ಚೆಗೆ ತರಲಾಗಿದೆ.

ಹಾಗೆಯೇ ಈ ಅಧ್ಯಯನದಲ್ಲಿ ದಲಿತ ಚಳುವಳಿಯ ರಾಜಕೀಯ ನೆಲೆಯನ್ನು ಗ್ರಹಿಸಲಾಗಿದೆ. ಪ್ರಜಾಪ್ರಭುತ್ವದ ಶಕ್ತಿರಾಜಕಾರಣದಲ್ಲಿ ದಲಿತರನ್ನು ಮತ್ತು ದಲಿತ ಚಳುವಳಿಯನ್ನು, ಅವುಗಳು ನಡೆದು ಬಂದ ದಾರಿಯನ್ನು ಚರ್ಚಿಸಲಾಗಿದೆ.

ವಸಾಹತುಶಾಹಿ ಮತ್ತು ನವ ವಸಾಹತುಶಾಹಿಯ ಕಾಲಘಟ್ಟದಲ್ಲಿ ಸಾಮ್ರಾಜ್ಯಶಾಹಿ ಪ್ರಣೀತ ಅನೇಕ ಅಧ್ಯಯನ ವಿಧಾನಗಳು ಈ ಅಧ್ಯಯನ ಮಾದರಿಗಳಾಗಿವೆ. ಇಂಥ ವಿಧಾನಗಳ ಹಿಂದಿರುವ ಐಡಿಯಾಲಜಿ ಮತ್ತು ಮೆಥಡಾಲಜಿಗಳನ್ನು ಚರ್ಚೆಗೆ ತೆಗೆದುಕೊಳ್ಳಬೇಕು. ಅಂದರೆ ಐಡಿಯಾಲಜಿಯು ಮೆಥಡಾಲಜಿಯನ್ನು ರೂಪಿಸುತ್ತದೆ. ಇದನ್ನು ಅರ್ಥ ಮಾಡಿಕೊಂಡರೆ ವಸಾಹತುಶಾಹಿ ಮತ್ತು ನವವಸಾಹತುಶಾಹಿಯ ಹಿಂದಿರುವ ಸಾಮ್ರಾಜ್ಯಶಾಹಿಯ ಧೋರಣೆ ಮತ್ತು ಅದರ ಉದ್ದೇಶ ಅರ್ಥವಾಗುತ್ತದೆ. ಇವುಗಳು ಪರ್ಯಾಯವಾಗಿ ಸಮಾಜವಾದಿ ಅಧ್ಯಯನ ವಿಧಾನಗಳ ಚಿಂತನೆಯನ್ನು ಅಭಿವೃದ್ಧಿಪಡಿಸಲು ಸಹಕಾರಿಯಾಗುತ್ತವೆ. ಏಕೆಂದರೆ ೨೦ನೆಯ ಶತಮಾನದ ಭಾರತವು ನವವಸಾಹತುಶಾಹಿ ಭಾರತ ಮತ್ತು ಊಳಿಗಮಾನ್ಯಶಾಹಿ ಭಾರತವಾಗಿದೆ. ಇದರ ಜೊತೆಯಲ್ಲಿಯೇ ಸಾಮ್ರಾಜ್ಯಶಾಹಿಯ ದಲ್ಲಾಳಿ ಬಂಡವಾಳಶಾಹಿಯು ಭಾರತದ ಮೂಲೆ ಮೂಲೆಗಳಿಗೆ ಜೀವ ವಿರೋಧಿಯಾದ ಸಾಂಸ್ಕೃತಿಕ ಕಪ್ಪು ತೆರೆಯಿಂದ ಆವರಿಸಿದೆ. ಇವುಗಳು ನಮ್ಮ ಶ್ರೇಣೀಕೃತ ವ್ಯವಸ್ಥೆಯ ಜನ ಸಮುದಾಯಗಳ ಬದುಕಲ್ಲಿ ಪರಿಣಾಮ ಬೀರಿವೆ. ಇದಕ್ಕೆ ಸಂಬಂಧಿಸಿದಂತೆ ವೈರುಧ್ಯಗಳನ್ನು ದಲಿತ ಬದುಕಿಗೆ, ದಲಿತ ಚಳುವಳಿಗೆ, ದಲಿತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅದರ ವ್ಯಾಪ್ತಿಯ ಹಿನ್ನೆಲೆಯಲ್ಲಿ ಸಶಕ್ತವಾಗಿ ದಾಖಲುಗೊಳಿಸಿದೆ. ಇಲ್ಲಿ ದಲಿತ ಜಗತ್ತಿನ ಸಮಗ್ರ ಸಂಕೀರ್ಣತೆಗಳನ್ನು ಒಳಪಡಿಸಲಾಗಿದೆ.

ಒಟ್ಟಾರೆ ದಲಿತ ಬದುಕು, ದಲಿತ ಸಾಹಿತ್ಯ, ದಲಿತ ಚಳುವಳಿಯನ್ನು ಸಮಗ್ರವಾಗಿ ಚರ್ಚಿಸಲಾಗಿದೆ. ಚರ್ಚೆ ಮತ್ತು ಅದರ ಚಿಂತನೆಯ ತಾತ್ವಿಕ ವಿನ್ಯಾಸವು ವಾಸ್ತವ ನೆಲೆಯನ್ನು ಒಳಗೊಂಡಿದೆ. ಇವುಗಳನ್ನು ಬದಲಾಗುತ್ತಿರುವ ಸಾಂಸ್ಕೃತಿಕ ಸಂದರ್ಭದ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗಾಗಿ ಇದರ ಸಕಲ ಆಶಯಗಳು ಸೂಕ್ಷ್ಮ ಮತ್ತು ಸಮಗ್ರವಾಗಿ ಬಿಚ್ಚಿಕೊಳ್ಳುತ್ತವೆ. ಇವುಗಳ ಚರ್ಚೆಯು ಕೆಲವು ಕಡೆ ವಿವರಣಾತ್ಮಕವಾಗಿ ಕಂಡುಬಂದಿದೆ. ಇವುಗಳ ಸಾಂಸ್ಕೃತಿಕ ನೆಲೆಯ ಪರಿಕಲ್ಪನೆಯನ್ನು ತಾತ್ವಿಕ ಚರ್ಚೆಗೆ ಒಳಪಡಿಸಲಾಗಿದೆ.

ಈ ಅಧ್ಯಯನವು ದಲಿತ ಬದುಕನ್ನಾಗಲಿ, ಚಳುವಳಿಯನ್ನಾಗಲಿ ಸಾಹಿತ್ಯವನ್ನಾಗಲಿ ಒಮ್ಮುಖ ದೃಷ್ಟಿಯಿಂದಾಗಲಿ ಸಮರ್ಥನೆಯ ಧಾಟಿಯಿಂದಾಗಲಿ ನೋಡದೆ ಚರ್ಚೆಯ ಸಂದರ್ಭದಲ್ಲಿ ಅವುಗಳ ಪ್ರಸ್ತುತತೆ ಮತ್ತು ವಾಸ್ತವವನ್ನು ಬಿಚ್ಚಿಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಇಲ್ಲಿಯ ಒಟ್ಟಾರೆಯ ಸಮಗ್ರ ಚರ್ಚೆಯ ವಸ್ತು ವಿಷಯಗಳು ಅವುಗಳ ಹಂದರವನ್ನು ಬಿಚ್ಚಿ, ತಾತ್ವಿಕತೆಯ ಆಳದಲ್ಲಿನ ವೈರುಧ್ಯಗಳನ್ನು ಗುರ್ತಿಸುವಲ್ಲಿ ಕ್ರಿಯಾಶೀಲವಾಗಿದೆ.

# ಅನುಬಂಧಗಳು

೧. ಪ್ರಶ್ನಾವಳಿಯ ಕೆಲವು ಆಯ್ದ ಉತ್ತರಗಳು
೨. ದಲಿತ ಚಳುವಳಿಯ ಕೆಲವು ಸಂಘಟನೆಗಳ ಪಟ್ಟಿ
೩. ಸಹಾಯಕ ಗ್ರಂಥಗಳು

## ೧. ಪ್ರಶ್ನಾವಳಿಯ ಕೆಲವು ಆಯ್ದ ಉತ್ತರಗಳು

೧. **ದಲಿತ ಚಳುವಳಿಯಿಂದ ದಲಿತರ ಬದುಕಿಗೆ ಆಗಿರುವ ಪ್ರಯೋಜನವೇನು? ಅದು ಯಾವ ರೀತಿಯದು?**

ದಲಿತ ಚಳುವಳಿ ಎಂದು ಇಂದು ನೀವು ಏನನ್ನು ನೋಡುತ್ತಾ ಇದ್ದೀರೋ ಅದು ದಲಿತ ಚಳವಳಿಯಲ್ಲ. ಸ್ವಾರ್ಥ ಕೇಂದ್ರಿತ ಕೆಲವು ಗುಂಪುಗಳ ಚಳುವಳಿ ಅದು. ಮೊದಲು ದ.ಸಂ.ಸ. ದಲಿತರ ಏಕೈಕ ಚಳವಳಿಯಾಗಿತ್ತು. ಈಗ್ಗೆ ಇಪ್ಪತ್ತೈದು ವರ್ಷಗಳ ಹಿಂದೆ ನಾವು ದಲಿತ ಚಳವಳಿಯನ್ನು ಆರಂಭಿಸಿದಾಗ ದಲಿತರ ಬದುಕಿನ ಶತಮಾನಗಳ ಕತ್ತಲೆಯಲ್ಲಿ ಏಕ್‌ದಂ ಸೂರ್ಯೋದಯವಾದಂತಿತ್ತು. ಸಾವಿರಾರು ವರ್ಷಗಳಿಂದ ಜಡವಾಗಿದ್ದ, ಜೀವವಿದ್ದೂ ಮೃತಸ್ಥಿತಿಯಲ್ಲಿದ್ದ ದಲಿತ ಜನಸ್ತೋಮ ಏಕ್‌ದಂ ಎದ್ದು ಕೂತು ಪ್ರವಾಹದಂತೆ, ಚಂಡಮಾರುತದಂತೆ ಅಸಂಖ್ಯ ಪ್ರಶ್ನೆಗಳನ್ನು ಶೋಷಕ ವ್ಯವಸ್ಥೆಯ ಮುಖಕ್ಕೆ ಸವಾಲುಗಳನ್ನು ಎಸೆಯತೊಡಗಿತ್ತು. ದಲಿತರ ಮೇಲೆ ಅನ್ಯಾಯ ಅಕ್ರಮ ದೌರ್ಜನ್ಯಗಳನ್ನು ಎಸಗಲು ಸದಾ ಸಿದ್ಧವಾಗಿರುತ್ತಿದ್ದ ದಲಿತರ ವಿರುದ್ಧ ಅಟ್ಟಹಾಸಗೈಯುತ್ತಿದ್ದ ಸವರ್ಣೀಯ ಸಮಾಜವು ತನ್ನ ಅಕೃತ್ಯಗಳಿಗೆ ತಾನೇ ಅಂಜುವಂತಾದದ್ದು ದಲಿತ ಚಳವಳಿಯ ಸಾಧನೆಯೇ ಹೌದು.

ಸರ್ಕಾರ ಮತ್ತು ದಲಿತರ ನಡುವೆ ಪ್ರತಿಭಟನಾ ಸ್ವರೂಪಿಯಾದ ಕೊಂಡಿಯಾಗಿ, ಸರ್ಕಾರವು ದಮನಿಸಲು ಸಾಧ್ಯವಿಲ್ಲದ ಶಕ್ತಿಯಾಗಿ ದಲಿತ ಚಳವಳಿಯನ್ನು ರೂಪಿಸಿದ್ದು ನಮ್ಮ ಪೂಜ್ಯಗುರುಗಳಾದ ದಿವಂಗತ ಬಿ.ಕೃಷ್ಣಪ್ಪನವರು. ದಲಿತ ಚಳವಳಿಯಿಂದ ದಲಿತ ಜನಾಂಗಕ್ಕೆ ಆತ್ಮಗೌರವ ಮೂಡಿತು. ತುಳಿಯುವ ಕಾಲುಗಳು ದುರ್ಬಲಗೊಂಡವು. ಅಸಂಖ್ಯ ಭೂಹೋರಾಟಗಳು ದಲಿತ ಚಳವಳಿಯ ನೇತೃತ್ವದಲ್ಲಿ ಜರುಗಿತ್ತು. ಧಿಕ್ಕಾರದ ದನಿಗಳು ಸಾಗರರೂಪಿಯಾಗಿ ಮೊಳಗಿದವು.

ಬಿ. ಕೃಷ್ಣನವರನ್ನು ಹೊರತುಪಡಿಸಿ ಉಳಿದ ದಲಿತ ನಾಯಕರು ೧೯೮೫ರಲ್ಲಿ ಜನತಾಪಕ್ಷದ ಬಾಹುಬಂಧನಕ್ಕೆ ಒಳಗಾದರು. ಇದು ಧೃತರಾಷ್ಟ್ರನ ಬಾಹುಬಂಧನಕ್ಕೆ ಒಳಗಾದ ಭಗ್ನ ಭೀಮನ ಸ್ಥಿತಿಯಾಯಿತು. ಅಂದು ಭೀಮನನ್ನು ಧೃತರಾಷ್ಟ್ರನಿಂದ ಕಾಪಾಡಲು ಕೃಷ್ಣನಿದ್ದ. ಇಂದು ಯಾರೂ ಇಲ್ಲ. ಕೆಲವು ದಲಿತನಾಯಕರು ದಲಿತ ಚಳುವಳಿಯನ್ನು ಹಿಡಾ ಮಾಡಿದರು. ಇಂದು ದ.ಸಂ.ಸ.ಕ್ಕೆ ಅನೇಕ ರಂಬೆಕೊಂಬೆಗಳು ಉಂಟಾಗಿವೆ. ಬೆಂಗಳೂರಲ್ಲಿ ಬೀದಿಗೊಬ್ಬ ಗಲ್ಲಿಗೊಬ್ಬ ದಲಿತ ನಾಯಕರಿದ್ದಾರೆ. ಎಲ್ಲರ ಅರ್ಜಿಗಳು ವಿಧಾನಸೌಧದ ವಿವಿಧ ಕಸದ ಬುಟ್ಟಿಗಳಿಗೆ ತುಂಬಿಸಲ್ಪಡುತ್ತಿವೆ. ನಾವು ಯಾವ ಕೋಮುವಾದಿ ಶಕ್ತಿಗಳ ವಿರುದ್ಧ ಹೋರಾಡುತ್ತಿದ್ದೆವೋ ಅದೇ ಕೋಮುವಾದಿ ಶಕ್ತಿಗಳು ದಿಲ್ಲಿಯ ಸಿಂಹಾಸನದ ಮೇಲೆ ಅಮರಿಕೊಂಡಿವೆ. ದಲಿತ ಚಳವಳಿಯ ನಿಷ್ಕ್ರಿಯತೆಗೆ, ಲಂಪಟತೆಗೆ, ಸ್ವಾರ್ಥ ಕೇಂದ್ರಿತ ರಾಜಕಾರಣಕ್ಕೆ ದೂರೆತ ರಾಷ್ಟ್ರೀಯ ಪ್ರಶಸ್ತಿಯಿದು. ದಲಿತ

ಜನಸಮೂಹದೊಳಗೆ ದಲಿತ ಪ್ರಜ್ಞೆಯನ್ನು ಹುಟ್ಟಿಸಿದ ದ.ಸಂ.ಸ. ಇಂದು ವಿವಿಧ ರಾಜಕೀಯ ಪಕ್ಷಗಳ ನಿರಾಶ್ರಿತರ ತಂಗುದಾಣದಂತಿದೆ.

೨. **ದಲಿತ ಸಾಹಿತ್ಯವು ದಲಿತರನ್ನು ಪ್ರಭಾವಿಸಿದೆಯೇ ಹೇಗೆ?**

ದಲಿತ ಸಾಹಿತ್ಯವು ದಲಿತರ ಬದುಕನ್ನು ಪ್ರಭಾವಿಸಿಲ್ಲ. ಸವರ್ಣೀಯ ವಿಮರ್ಶಕರ ಮೇಲೆ ಅದರ ಪ್ರಭಾವವಾಗಿದೆ. ಅವರ ವಿಮರ್ಶೆಯನ್ನು ನಾವು ಒಪ್ಪಬೇಕಾಗಿಲ್ಲ. ಅದು ಸಾಧುವೂ ಅಲ್ಲ. ಸವರ್ಣೀಯ ವಿಮರ್ಶಕರು ದಲಿತ ಸಾಹಿತ್ಯದ ಬಗ್ಗೆ ಒಂದು ರೀತಿಯ ಅಸ್ಪೃಶ್ಯತೆಯನ್ನೇ ಆಚರಿಸಿದ್ದಾರೆ. ಅವರ ಒಣ ಧಿಮಾಕು, ಅವರ ಸಾಹಿತ್ಯದ ಓದು, ಅವರವರ ಜಾತಿಯ ನೆಲೆಯಲ್ಲಿಯೇ ಸೃಷ್ಟಿಯಾಗಿದೆ ಎಂಬ ಸತ್ಯವನ್ನು ದಲಿತ ಲೇಖಕರು ಅರಿಯಬೇಕು. ಸಾಹಿತ್ಯದ ಓದು ಹೃದಯವಂತಿಕೆಯನ್ನು ಹೆಚ್ಚಿಸುವ ಬದಲು ಒಣವಿದ್ವಾಂಸರನ್ನು ಸೃಷ್ಟಿಸಿದೆ. ದಲಿತ ಸಾಹಿತ್ಯದಲ್ಲಿ ಕೇವಲ ಕೆಲವರನ್ನೇ ಗುರುತಿಸುವ, ಮಾನಸಿಕ ಅಸ್ಪೃಶ್ಯತೆಯಲ್ಲಿ ಸದಾ ಸವರ್ಣೀಯ ವಿಮರ್ಶಕರು ನಿರತರಾಗಿದ್ದಾರೆ. ದಲಿತ ಬದುಕಿನೊಡನೆ, ಅಥವಾ ಸಾಹಿತ್ಯದೊಡನೆ ನಿಜಕ್ಕೂ ಮುಖಾಮುಖಿಯಾಗುವ ನೈತಿಕ ಶಕ್ತಿ ಸವರ್ಣೀಯ ಲೇಖಕರಿಗಾಗಲಿ, ವಿಮರ್ಶಕರಿಗಾಗಲಿ ಇಲ್ಲ. ಸವರ್ಣೀಯರ ಪ್ರಾಬಲ್ಯವನ್ನು ಒಪ್ಪುವ, ಅವರೊಡನೆ ಬಲಾತ್ಕಾರದ ಬಾಹುಬಂಧನಕ್ಕೊಳಗಾಗಿರುವ, ಕೋಮುತಾರತಮ್ಯದ ವಿರುದ್ಧ ಕಣ್ಣು ಕಿವಿ ಮೂಗು ಕಳಕೊಂಡ ದಲಿತ ಲೇಖಕರು ಮಾತ್ರ, ಸವರ್ಣೀಯ ವಿಮರ್ಶಕರಿಗೆ ಪ್ರಿಯರಾಗುತ್ತಾರೆ; ಹತ್ತಿರದವರಾಗುತ್ತಾರೆ. ಕೆಲವು ದಲಿತ ಲೇಖಕರನ್ನು ಸವರ್ಣೀಯ ವಿಮರ್ಶೆ ಹೊಗಳಿಕೊಂಡಿದೆ. ಕೆಲವು ದಲಿತ ಲೇಖಕರ ಪಾಲಿಗೆ ಸವರ್ಣೀಯ ವಿಮರ್ಶೆ ಸತ್ತಿದೆ. ಹೀಗಾಗಿ ದಲಿತರ ಪಾಲಿಗೆ ದಲಿತ ಸಾಹಿತ್ಯ ಅಸ್ಪೃಶ್ಯವಾಗಿಯೇ ಉಳಿದಿದೆ. ಅವರನ್ನು ತಲುಪಲು ಅದಕ್ಕೆ ಸಾಧ್ಯವಾಗಿಲ್ಲ.

೩. **ಮುಂದೆ ದಲಿತ ಚಳುವಳಿ ಮತ್ತು ದಲಿತ ಸಾಹಿತ್ಯ ಯಾವ ದಿಕ್ಕನ್ನು ಹಿಡಿಯಬೇಕೆಂದು ನಿರೀಕ್ಷಿಸುತ್ತೀರಿ?**

ದಲಿತ ಚಳುವಳಿ ನಿಜಕ್ಕೂ ದಲಿತ ಚಳವಳಿಯಾಗಬೇಕು. ತನ್ನೊಳಗಿನ ಅನೈಕ್ಯತೆಯ ಬೆಂಕಿಯನ್ನು ಆರಿಸಬೇಕು. ದಲಿತರ ಹಿತಕ್ಕಾಗಿ ದಲಿತೇತರರನ್ನು ಅವಲಂಬಿಸುವುದು ತಪ್ಪಬೇಕು. ದಲಿತ ಚಳುವಳಿ ಜಗತ್ತಿನ ಎಲ್ಲ ಶೋಷಿತರ ಹಾಗೂ ನೊಂದವರ ದನಿಯಾಗಬೇಕು. ದಲಿತರೇ ಮಾಡುವ ಶೋಷಣೆಯ ವಿರುದ್ಧ ಕೂಡಾ ಎತ್ತರದ ದನಿಯಲ್ಲಿ ದಲಿತ ಚಳುವಳಿ ಮಾತಾಡುವಂತಾಗಬೇಕು. ದಲಿತ ಸಾಹಿತ್ಯ ವೈದಿಕ ಕಬಂಧ ಬಾಹುವಿನಿಂದ ಬಿಡುಗಡೆಗೊಂಡು ಪ್ರಕಟವಾಗುವ ಅತ್ಯಂತ ಸೃಜನಶೀಲ ಕ್ರಿಯಾನದಿಯಾಗಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಸವರ್ಣೀಯ ವಿಮರ್ಶಕರ ಹಿಡಿತದಿಂದ ಪಾರಾಗಬೇಕು.

ದಲಿತ ಚಳುವಳಿಯನ್ನು ಕುರಿತು ಇನ್ನೂ ಕೆಲವು ಮಾತುಗಳನ್ನು ಹೇಳಬೇಕು. ಚಳವಳಿಯ ಆದಿಕಾಲದಲ್ಲಿ ನಮ್ಮೊಳಗಿನ ದಲಿತ ಪ್ರೇಮ ಒಂದು ಕ್ರಾಂತಿಕಾರಿ ಶಕ್ತಿಯಾಗಿತ್ತು. ನಮ್ಮ ತಾಯಿ ತಂದೆಯರಿಗಿಂತಲು ನಮಗೆ ಹೆಚ್ಚು ಪ್ರಿಯವಾಗಿತ್ತು. ನಮ್ಮ ಪ್ರೀತಿ ಕನಸು ನಿರೀಕ್ಷೆಗಳೆಲ್ಲವೂ ಅದೇ ಆಗಿತ್ತು. ಈಗ ಆ ಚಳುವಳಿಯ ಪ್ರೇತ ಮಾತ್ರವಿದೆ. ಪ್ರಾರಂಭದಲ್ಲಿ ಚಳುವಳಿಯಲ್ಲಿ ಅಂಬೇಡ್ಕರ್‌ವಾದಿಗಳು, ಲೋಹಿಯಾವಾದಿಗಳು

ಮಾರ್ಕ್ಸ್‌ವಾದಿಗಳು ಮುಪ್ಪುರಿಗೊಂಡಿದ್ದರು. ವಾಸ್ತವದ ನೆಲೆಯಲ್ಲಿ ರಾಜಕೀಯ ಸ್ಪರ್ಶವಾದ ಕೂಡಲೇ ಚಳುವಳಿ ಕರಗಿ ಹೋಯಿತು. ಚಳವಳಿಯಲ್ಲಿ ಏಕತರವಾಗಿದ್ದ ವಿವಿಧ ವಾದಿಗಳು ಒಡೆದು ಹೋಳಾದರು.

ಹಲವು ಹನ್ನೊಂದು ದ.ಸಂ.ಸ.ಗಳು, ಸರಕಾರಿ ದ.ಸಂ.ಸ.ಗಳು. ಇನ್ನೂ ನಾನಾತರವಾದ ಸಂಘಟನೆಗಳು ಇವೆ. ದಲಿತ ಸಾಹಿತ್ಯ ಇವ್ಯಾವುದರ ಪ್ರತಿನಿಧಿಯೂ ಅಲ್ಲ. ಆದಾಗ್ಯೂ ಅದು ಸವರ್ಣೀಯ ಸಾಹಿತ್ಯಕ್ಕೆ ಅಗೋಚರವಾದ ಬದುಕಿನ ಮೇರೆಗಳನ್ನು ಮೀರಿದೆ. ಸಾಹಿತ್ಯವು ಚಳುವಳಿಯಾಗಲು ಸಾಧ್ಯವಿಲ್ಲ; ಅದೇ ರೀತಿ ಚಳುವಳಿಯು ಸಾಹಿತ್ಯವಾಗಲು ಸಾಧ್ಯವಿಲ್ಲ.

ಚಳುವಳಿ ತನ್ನ ಅನೈಕ್ಯತೆಯಿಂದ ಛಿದ್ರವಾಗಿದ್ದು ಹೊಸ ಶತಮಾನದ ಹೊಸ ತಲೆಮಾರುಗಳ ಅಗತ್ಯಕ್ಕೆ ಅನುಗುಣವಾಗಿ ಹೊಸ ರೂಪ ಪಡೆಯಬೇಕಾಗಿದೆ.

**ಮುಳ್ಳೂರು ನಾಗರಾಜು**

೨೧೦, ಎ.ಜೆ.ಬ್ಲಾಕ್, ೧೩ನೇ ಕ್ರಾಸ್

ಎನ್.ಆರ್. ಮೊಹಲ್ಲ, ಮೈಸೂರು -೭.

೧. **ದಲಿತ ಚಳುವಳಿಯಿಂದ ದಲಿತರ ಬದುಕಿಗೆ ಆಗಿರುವ ಪ್ರಯೋಜನವೇನು? ಅದು ಯಾವ ರೀತಿಯದು?**

ಸಾಮಾಜಿಕ ಎಚ್ಚರ, ಆರ್ಥಿಕ ಹಕ್ಕುದಾರಿಕೆ, ರಾಜಕೀಯ ಪಾಲುದಾರಿಕೆ, ಸಾಂಸ್ಕೃತಿಕ ಒಡನಾಟ ಮತ್ತು ಸ್ಥಳೀಯ/ದೇಶೀಯ ಅಸ್ತಿತ್ವ ಸಾಧ್ಯವಾಗಿದೆ.

೨. **ದಲಿತ ಸಾಹಿತ್ಯವು ದಲಿತರನ್ನು ಪ್ರಭಾವಿಸಿದೆಯೇ ಹೇಗೆ?**

ಕನ್ನಡ ಸಾಹಿತ್ಯವನ್ನು ಸಾಂಸ್ಕೃತಿಕ ನೆಲೆಯ ಹತ್ತಿರಕ್ಕೆ ತಂದದ್ದೆ ದಲಿತ-ಬಂಡಾಯ ಚಳುವಳಿ. ವಿದ್ಯಾವಂತ ದಲಿತರು ಸಾಹಿತ್ಯವನ್ನು ರಸ, ಆನಂದ, ಅಥವಾ ಧ್ವನಿಗಾಗಿ ಮಾತ್ರ ಬರೆಯಲಿಲ್ಲ; ಬದುಕುವುದಕ್ಕಾಗಿ ಬರೆದರು. ಆದುದರಿಂದಲೆ ಹಳಬ ವಿಮರ್ಶಕರಿಗೆ ಅದು ಅಬ್ಬರವಾಗಿ ಕಂಡದ್ದು. ಆರಂಭಿಕ ಹಂತದಲ್ಲಿ ದಲಿತ ಸಾಹಿತ್ಯ ಜನರ ಒಳಗೇ ಅಂದರೆ ಪಠ್ಯ ಸಾಹಿತ್ಯದ ಹೊರಗೇ ಮಾತನಾಡಿತು. ಅನಂತರದ ಘಟ್ಟದಲ್ಲಿ ಅದು ಭಾರತೀಯ ಸ್ಥಿತಿ ಸಂಸ್ಕೃತಿಯ ಜೊತೆಗೆ ಘರ್ಷಣೆಗೆ ನೇರವಾಗಿ ಇಳಿಯಿತು. ಅದು ಒಂದು ಅರ್ಥದಲ್ಲಿ ಪ್ರಜ್ಞಾವಂತ ದಲಿತ ಈ ನೆಲದಲ್ಲಿ ನೆಲೆಯನ್ನು ಹುಡುಕಿಕೊಳ್ಳುವ ಕ್ರಮ. ಆಯುಧ, ಸಂಪತ್ತು ಇದ್ದವನು ನೆಲೆಯನ್ನು ಆಕ್ರಮಿಸುತ್ತಾನೆ ಇಲ್ಲವೆ ಕೊಂಡುಕೊಳ್ಳುತ್ತಾನೆ. ಇವೆರಡೂ ಇಲ್ಲದ ದಲಿತ ತನ್ನನ್ನು ಎಂಪವರ್ ಮಾಡಿಕೊಳ್ಳುವ ಮೂಲಕ ನೆಲೆಯನ್ನು ಹುಡುಕಿಕೊಳ್ಳುತ್ತಾನೆ. ಆ ಕೆಲಸವನ್ನು ದಲಿತನಿಗಾಗಿ ದಲಿತ ಸಾಹಿತ್ಯ ಮಾಡಿದೆ.

೩. **ಮುಂದೆ ದಲಿತ ಚಳುವಳಿ ಮತ್ತು ದಲಿತ ಸಾಹಿತ್ಯ ಯಾವ ದಿಕ್ಕನ್ನು ಹಿಡಿಯಬೇಕೆಂದು ನಿರೀಕ್ಷಿಸುತ್ತೀರಿ?**

ಒಂದು ಸಮಾಜವಾದಿ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ದಲಿತ ಚಳುವಳಿ ಮತ್ತು ಸಾಹಿತ್ಯಕ್ಕೆ ವಿಶಿಷ್ಟ ಅರ್ಥ ಮತ್ತು ಅಸ್ತಿತ್ವ ಇರುತ್ತದೆ. ಆದ್ದರಿಂದಲೆ ನಮ್ಮಲ್ಲಿ ಅವು ಸ್ಪೆಷಲ್ ಕ್ವಾಲಿಟಿ. ಜಾಗತೀಕರಣಗೊಳ್ಳುತ್ತಿರುವ ದೇಶದಲ್ಲಿ ಜನರಿಗೆ ನೆಲೆಯೂ, ಬೆಲೆಯೂ ಅಷ್ಟಾಗಿ ಇರುವುದಿಲ್ಲ. ಅಂತ ಸಂದರ್ಭದಲ್ಲಿ ಕೆಳಸ್ತರ ಹಾಗೂ ಕನಿಷ್ಠ ಸೌಲಭ್ಯಗಳ ಸ್ಥಿತಿಯಲ್ಲಿರುವ ದಲಿತರು ನಗಣ್ಯರಾಗುತ್ತಾರೆ. ಆಗ ಅವರ ಅಬ್ಬರ ಮತ್ತು ಸಾವಿನ ನಡುವೆ ಹೆಚ್ಚು ಅಂತರ ಇರುವುದಿಲ್ಲ. ಜಾಗತೀಕರಣದ ಯಾವ ಸೌಲಭ್ಯವೂ ಸೆಕೆಂಡ್ ಹ್ಯಾಂಡ್ ಆಗದೆ ದಲಿತರಿಗೆ ಲಭಿಸುವುದಿಲ್ಲ. ಆದ್ದರಿಂದ ದಲಿತ ಚಳುವಳಿ ಮತ್ತು ಸಾಹಿತ್ಯ ಎಲ್ಲ ದಲಿತ ಪರವಾದ ಒಂದು ಜಗತ್ತಿನ ರೂಪೀಕರಣದ ಕಡೆಗೆ ನೆರವಾಗಬೇಕು. ಪ್ರತ್ಯೇಕ ದಲಿತೀಕರಣ ಹಾಗೂ ಮೀಸಲಾತಿ ಹಿಡಿದು ಅಲುಗಾಡಿಸುತ್ತಾ ಕುಳಿತರೆ ಹಣ್ಣೂ ಉದುರುವುದಿಲ್ಲ, ಬೇರೂ ಅಲುಗಾಡುವುದಿಲ್ಲ.

**ಡಾ. ಹಿ.ಶಿ. ರಾಮಚಂದ್ರೇಗೌಡ**

ಪ್ರಾಧ್ಯಾಪಕ, ಜಾನಪದ,

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ,

ಮೈಸೂರು - ೫೭೦ ೦೦೬

೧. **ದಲಿತ ಚಳುವಳಿಯಿಂದ ದಲಿತರ ಬದುಕಿಗೆ ಆಗಿರುವ ಪ್ರಯೋಜನವೇನು? ಅದು ಯಾವ ರೀತಿಯದು?**

'ದಲಿತರು' ಎಂಬ ಪದಕ್ಕೆ ತುಂಬಾ ವ್ಯಾಪಕವಾದ ಅರ್ಥವಿದೆ. ಹುಟ್ಟಿನಿಂದ ಅಸ್ಪೃಶ್ಯರಾದವರೆಲ್ಲರನ್ನು 'ದಲಿತ'ರೆಂದು ಕರೆದರೆ ಅವರ ಸಂಖ್ಯೆ ಬಹಳ ದೊಡ್ಡದು. ದಲಿತರ ಒಳ ವೈವಿಧ್ಯ ಮತ್ತು ವೈರುದ್ಧ್ಯಗಳು ಹೇರಳವಾಗಿವೆ. ದಲಿತ ಚಳುವಳಿಯು ಈ ಎಲ್ಲಾ ದಲಿತರನ್ನು ಮುಟ್ಟುವಲ್ಲಿ ಅವರನ್ನು ಪ್ರಭಾವಿಸುವಲ್ಲಿ ಸಂಪೂರ್ಣ ಸಫಲವಾಗಿದೆ.

ದಲಿತ ಚಳುವಳಿಯು ಉದೀಯಮಾನ ವಿದ್ಯಾವಂತ ದಲಿತರ (Imerging) ಚಳುವಳಿಯಾಗಿದೆ. ವಿದ್ಯೆ ಮತ್ತು ಆಧುನಿಕ ಅರಿವಿನಿಂದ (ಮಾರ್ಕ್ಸ್‌ವಾದ ಅಂಬೇಡ್ಕರ್‌ವಾದ ಇಲ್ಲ) ಸಾಮಾನ್ಯ ದಲಿತರಿಂದ ಬೇರ್ಪಟ್ಟ ವಿದ್ಯಾವಂತ ದಲಿತರು ಆ ಕಡೆ ಸವರ್ಣೀಯರೊಂದಿಗೆ ಇಲ್ಲ. ಹೀಗಾಗಿ ಇವರಿಗೊಂದು ಪ್ರತ್ಯೇಕ ಸಂಘಟನೆಯು ಅನಿವಾರ್ಯವಾಯಿತು. ದಸಂಸ ಅಂಥ ಅರಕೆಯನ್ನು ತುಂಬಿಕೊಟ್ಟ ವೇದಿಕೆಯಾಗಿದೆ. ಅವರ ನಿಜವಾದ ಪ್ರಯೋಜನ ಆದದ್ದು -ಉದೀಯಮಾನ ದಲಿತ ವಿದ್ಯಾವಂತರಿಗೆ. ಅದು ಅವರ ಸ್ವಾಭಿಮಾನವನ್ನು ಹೆಚ್ಚಿಸಿದೆ. ಸವರ್ಣೀಯರಿಂದಾಗುವ ದೌರ್ಜನ್ಯವನ್ನು ಅದು ಕಡಿಮೆ ಮಾಡಿದೆ. ಬಹುಶಃ ಸ್ವಾಭಿಮಾನವನ್ನು ಹೆಚ್ಚಿಸಿದ್ದೇ ಅದರ ದೊಡ್ಡ ಸಾಧನೆ.

೨. **ದಲಿತ ಸಾಹಿತ್ಯವು ದಲಿತರನ್ನು ಪ್ರಭಾವಿಸಿದೆಯೇ ಹೇಗೆ?**

ದಲಿತ ಸಾಹಿತ್ಯವು ದಲಿತರ ಬದುಕನ್ನು ವ್ಯಾಪಕವಾಗಿ ಪ್ರಭಾವಿಸಿಲ್ಲ. ದಲಿತರಲ್ಲಿ ಇನ್ನೂ ಸಾಕ್ಷರತೆ ೧೫%ನ್ನು ಮೀರಿಲ್ಲ ಎಂದ ಮೇಲೆ ಅವರಲ್ಲಿ ಸಾಹಿತ್ಯ ಓದುವವರು ಯಾರು? ಹೀಗಾಗಿ ದಲಿತ ಸಾಹಿತ್ಯವು ದಲಿತರ ಬದುಕನ್ನು ಪ್ರಭಾವಿಸಿದ್ದು ಇಲ್ಲವೆಂಬಷ್ಟು ಕಡಿಮೆ.

ದಲಿತ ವಿದ್ಯಾವಂತರ ಮೇಲೆ ಅದು ಸಾಕಷ್ಟು ಪ್ರಭಾವ ಬೀರಿದೆ. ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಮಾಲಗತ್ತಿ ಮೊದಲಾದವರ ಬರಹಗಳು ವಿದ್ಯಾವಂತ ದಲಿತರ ಸ್ವಾಭಿಮಾನವನ್ನು ಗಮನಾರ್ಹವಾಗಿ ಎತ್ತರಿಸಿದೆ. ಮೇಲ್ವರ್ಗ ಮೇಲ್ಜಾತಿಯವರ ಕೈಯಲ್ಲಿದ್ದ ಸಾಹಿತ್ಯವನ್ನು ಇದು ಬೀದಿಗೆ ತಂದಿದೆ. ಅನೇಕ ಬಾರಿ ಸಾಹಿತ್ಯದ ಕುರಿತಾದ ಭ್ರಮೆಗಳನ್ನು ಅದು ಒಡೆದಿದೆ.

೩. **ಮುಂದೆ ದಲಿತ ಚಳುವಳಿ ಮತ್ತು ದಲಿತ ಸಾಹಿತ್ಯ ಯಾವ ದಿಕ್ಕನ್ನು ಹಿಡಿಯಬೇಕೆಂದು ನಿರೀಕ್ಷಿಸುತ್ತೀರಿ?**

ಭವಿಷ್ಯ ಹೇಳುವ ಕೆಲಸ ಕಷ್ಟ. ನಮ್ಮ ನಿರೀಕ್ಷೆಗಳೆಲ್ಲ ನಿಜವಾಗಬೇಕೆಂದೇನೂ ಇಲ್ಲ. ಆದರೂ ದಲಿತರು ತಮ್ಮ ಸಾಂಸ್ಕೃತಿಕ ಬದುಕಿನಿಂದ ಪ್ರೇರಣೆ ಪಡೆಯಬೇಕೆಂದು ನಾನು ನಿರೀಕ್ಷಿಸುತ್ತೇನೆ. ದಲಿತರ ಸಾಂಸ್ಕೃತಿಕ ಲೋಕ ಅದರೊಳಗಿನ ಪುರಾಣಗಳು ಐತಿಹ್ಯಗಳು ಕತೆಗಳು ಕಾವ್ಯಗಳೆಲ್ಲ ದಲಿತರ ಬರವಣಿಗೆಗೆ ಆಕರವಾಗಬೇಕು. ದಲಿತರ ಸೃಜನಶೀಲತೆಯ ನೆಲೆಗಳು ಪರಿಸರ ಸಾಂಸ್ಕೃತಿಕ ಲೋಕದಲ್ಲಿ ಇರಬೇಕು. ಅಂತ ಬರಹಕ್ಕೆ ಕಸುವು ಬರುತ್ತದೆ, ಶಕ್ತಿ ಬರುತ್ತದೆ. ವಿದ್ಯಾವಂತ ದಲಿತರಿಗೆ ಈಗ ನೆಲೆಯಿಲ್ಲ. ಅವರು ಹುಟ್ಟಿ ಬಂದ ಲೋಕಕ್ಕೆ ಅವರೇ

ಅಪರಿಚಿತರಾಗಿದ್ದಾರೆ. ಸವರ್ಣೀಯರ ಲೋಕವೂ ಅವರಿಗೆ ಅಪರಿಚಿತವೇ ಆಗಿದೆ. ಹೀಗಾಗಿ ದಲಿತರ ಬರಹಗಳಿಗೆ ಯಾವುದೇ ನಿಟ್ಟಿನ ನೆಲೆ ಇಲ್ಲವಾಗಿದೆ. ಅವರು ತಮ್ಮ ಪರಂಪರೆಯತ್ತ ನೋಡಬೇಕು. ಅದನ್ನು ಆಧುನಿಕ ಅವಶ್ಯಕತೆಗಳಿಗೆ ಅನುಗುಣವಾಗಿ ಪುನರ್‌ನಿರ್ಮಿಸಬೇಕು.

ಡಾ. ಪುರುಷೋತ್ತಮ ಬಿಳಿಮಲೆ
American Institute of Indian Studies,
Archives and Research center for Ethnomusicology,
D.31 Defence colony, NEW DELHI.

೧. ದಲಿತ ಚಳುವಳಿಯಿಂದ ದಲಿತರ ಬದುಕಿಗೆ ಆಗಿರುವ ಪ್ರಯೋಜನವೇನು? ಅದು ಯಾವ ರೀತಿಯದು?

೨. ದಲಿತ ಸಾಹಿತ್ಯವು ದಲಿತರನ್ನು ಪ್ರಭಾವಿಸಿದೆಯೇ ಹೇಗೆ?

೩. ಮುಂದೆ ದಲಿತ ಚಳುವಳಿ ಮತ್ತು ದಲಿತ ಸಾಹಿತ್ಯ ಯಾವ ದಿಕ್ಕನ್ನು ಹಿಡಿಯಬೇಕೆಂದು ನಿರೀಕ್ಷಿಸುತ್ತೀರಿ?

(ಎಲ್ಲಾ ಪ್ರಶ್ನೆಗಳಿಗೆ ಒಟ್ಟಿಗೆ ಉತ್ತರ ನೀಡಿದ್ದಾರೆ.)

ಕರ್ನಾಟಕ ದಲಿತ ಲೇಖಕರು ಪ್ರಾರಂಭದಲ್ಲಿ ಬರವಣಿಗೆಯನ್ನು ತಮ್ಮ ಮಾನಸಿಕ ಬಿಡುಗಡೆಗಾಗಿ ಆರಂಭಿಸಿದರು. ತಮ್ಮ ಸಮಾಜ ಬಾಂಧವರೊಂದಿಗೆ ಪ್ರತಿಕ್ರಿಯಿಸುವ ಮಾದರಿಯಾಗಿ ಬರವಣಿಗೆ ಮೂಡಿ ಬಂತು. ಸಮಾಜದ ಸದಸ್ಯರನ್ನುದ್ದೇಶಿಸಿ ಸಾಹಿತ್ಯ ಮೊದಲ ಬಾರಿಗೆ ಮಾತಾಡಿತು. ಅವರಿಂದ ಬಂದ ಪ್ರತಿಕ್ರಿಯೆಯನ್ನು ಸಾಹಿತ್ಯವಾಗಿಸಿದ್ದೂ ಇದೆ. ಸಮಕಾಲೀನ ನೋವು ನಲಿವು, ಸ್ಥಿತಿಗಳನ್ನು ದಾಖಲಿಸುವ, ಅಂಬೇಡ್ಕರ್ ವಿಚಾರವನ್ನು, ಪ್ರಸಾರದ ದೃಷ್ಟಿಯಿಂದ ಸಾಹಿತ್ಯ ರಚಿಸಿದರು.

ಬರೀ ಸಾಹಿತ್ಯ ರಚನೆಯಿಂದ ದಲಿತ ಸಮಾಜಕ್ಕೆ ಉಪಯೋಗವಾಗದೆಂದು ಸಾಮಾಜಿಕ ಚಟುವಟಿಕೆಗಳಲ್ಲಿ ದಲಿತ ಬರಹಗಾರರು ತೊಡಗಿಕೊಂಡರು. ಸಾಹಿತ್ಯವನ್ನು ಓದಿ ತಿಳಿಸುವ ಕ್ರಿಯೆಯಲ್ಲಿ ನಾವೆಲ್ಲ ಬರಹಗಾರರು ಭಾಗಿಯಾಗಿದ್ದೇವೆ. ಇದರಿಂದ ನಮ್ಮ ದೇಹದ ಮೇಲೆ ಮೂಡಿರುವ ನೋವಿನ ಕಲೆಗಳಿಗೆ ಯಾರು ಕಾರಣ, ನಮ್ಮಗಳ ನೆಮ್ಮದಿಗೆ ಯಾರು ಪೂರಕ ಮುಂತಾದ ಪ್ರಶ್ನೆಗಳಿಗೆ ಜನಾಂಗ ಉತ್ತರ ಪಡೆದುಕೊಳ್ಳುತ್ತಿದೆ. ದಲಿತ ಪಾತ್ರಗಳಾಗಿ ಅವರೇ ಮಾತಾಡಿ ಅವರ ಸಮಸ್ಯೆಗೆ ಅವರೇ ಪರಿಹಾರ ಕಂಡುಕೊಂಡ ಸ್ಥಿತಿ ನಿರ್ಮಾಣವಾಗುತ್ತಿದೆ.

ದಲಿತ ಉದ್ಧಾರಕರೆಂದು ಹೇಳಿಕೊಂಡು ಬಂದವರನ್ನು ಅನುಮಾನದಿಂದ ನೋಡುವ ಪ್ರವೃತ್ತಿ, ಸ್ವಾಭಿಮಾನ ಪ್ರದರ್ಶಿಸುವ ಸಂದರ್ಭಗಳ ನಿರ್ಮಾಣ, ಜಾತಿ, ಅಸ್ಪೃಶ್ಯತೆ ಕೀಳೆಂಬ ಭಾವನೆ ತೊಲಗಿ ವಸ್ತುಸ್ಥಿತಿಯನ್ನು ಒಪ್ಪಿ, ಎದುರಿಸುವ ಮನೋಭಾವ ಒದಗಿ ಬಂದಿದೆ. ಭೂತವನ್ನ ಹಳಿಯದೆ, ನೆನಪಿಸಿಕೊಂಡು ಗರ್ವಪಡದೆ, ಮುಂದಿನ ದಾರಿಯನ್ನು ಪ್ರಜಾಸತ್ತಾತ್ಮಕ ಮೌಲ್ಯಗಳ ಮೂಲಕ ರೂಢಿಸಿಕೊಳ್ಳುವ ಸ್ಥಿತಿ ಅವರಿಗೆ ಅಂಬೇಡ್ಕರ್ ಸಾಹಿತ್ಯಾದಿಯಾಗಿ ಇವತ್ತಿನವರ ಸಾಹಿತ್ಯದವರೆಗೂ ಮುಂದುವರಿದಿದೆ. ಡಾ. ಬಾಬಾಸಾಹೇಬ ಅಂಬೇಡ್ಕರ್ ಅವರ ಧಾರ್ಮಿಕ, ರಾಜಕೀಯ, ಆರ್ಥಿಕ ವಿಚಾರಧಾರೆ ಆಧಾರದ ಮೇಲೆ ಸಮಾಜದ ಪುನರ್‌ಸೃಷ್ಟಿಗೆ ಕೆಲಸ ಮಾಡುವುದೆ ದಲಿತ ಸಾಹಿತ್ಯದ ಕೆಲಸವಾಗುತ್ತದೆ.

**ಗಂಗಾರಾಂ ಚಂಡಾಳ**

ವ್ಯವಸ್ಥಾಪಕ ನಿರ್ದೇಶಕರು

ಆಡಳಿತ ಕಛೇರಿ, ಅಂಬೇಡ್ಕರ್ ಗ್ರಾಮ ಸಮಾಜ

೨೧೫, ಬಾಪೂಜಿ ನಗರ, ಕೆಂಗೇರಿ, ಬೆಂಗಳೂರು ೫೬೦ ೦೬೦

೧. **ದಲಿತ ಚಳುವಳಿಯಿಂದ ದಲಿತರ ಬದುಕಿಗೆ ಆಗಿರುವ ಪ್ರಯೋಜನವೇನು? ಅದು ಯಾವ ರೀತಿಯದು?**

ದಲಿತ ಚಳುವಳಿಯಿಂದ ದಲಿತರ ಬದುಕಿನಲ್ಲಿ ಗಮನಾರ್ಹ ಪರಿವರ್ತನೆಯಾಗಲು ಸಾಧ್ಯವಾಗಿದೆ. ಸಂಘಟನೆ ಮತ್ತು ಹೋರಾಟಗಳು ಎಲ್ಲಿ ಹುಟ್ಟಿ ಬೆಳೆದಿವೆಯೊ ಆ ಪ್ರದೇಶದ ದಲಿತರಲ್ಲಿ ಹಿಂದೆಂದೂ ಕಂಡರಿಯದ ಹೊಸ ಬೆಳಕು ಮೂಡಿದೆ. ಹೊಸ ಕನಸು ಹುಟ್ಟಿವೆ. ಆದರೆ ಸಂಘಟನೆ ನಿರಂತರವಾಗಿ ಬೆಳೆದಿದೆಯೆ? ಅದರ ಸೈದ್ಧಾಂತಿಕ ತಳಹದಿ ಭದ್ರವಾಗಿತ್ತೆ ? ದಲಿತರ ಎಲ್ಲ ನೋವುಗಳಿಗೆ ಅದು ಸ್ಪಂದಿಸಲು ಶಕ್ತವಾಯಿತೆ? ಈ ಬಗೆಯ ಪ್ರಶ್ನೆಗಳಿಗೆ ನಿರಾಶೆಯ ಉತ್ತರಗಳೆ ಸಿಕ್ಕಾವು. ಏಕೆಂದರೆ ದಲಿತ ನೇತಾರರು ಮತ್ತು ಕಾರ್ಯಕರ್ತರಲ್ಲಿ ಸೈದ್ಧಾಂತಿಕ ಬೆಳವಣಿಗೆ ನಿರೀಕ್ಷಿತ ಪ್ರಮಾಣದಲ್ಲಿ ಆಗಿಲ್ಲ. ಅಂಬೇಡ್ಕರ್ ಅವರ ಗ್ರಂಥಗಳ ಎಡವಾದದ ಅಧ್ಯಯನ ವ್ಯವಸ್ಥಿತವಾಗಿ ನಡೆಯಲಿಲ್ಲ. ಹಾಗಾಗಿ ಹುಟ್ಟುತ್ತಿದ್ದ ಹಲವಾರು ಸಮಸ್ಯೆಗಳಿಗೆ ಸಮರ್ಥವಾದ ಪರಿಹಾರ ಕಾಣುವಲ್ಲಿ, ಹೋರಾಟಗಳನ್ನು ಬೆಳೆಸುವಲ್ಲಿ ವೈಫಲ್ಯಗಳೆ ಕಂಡಿವೆ. ದಲಿತರಲ್ಲಿ ಹೋರಾಟದ ಕೆಚ್ಚಿದೆ. ಆದರೆ ಅವರನ್ನು ಮಾರ್ಗದರ್ಶಿಸುವ ಅವರ ಮುಖಂಡತ್ವ ವಹಿಸುವವರ ಕೊರತೆ ತೀವ್ರವಾಗಿದೆ. ದಲಿತರಿಗೆ ಸರಕಾರದ ಕೆಲವು ಸೌಲಭ್ಯಗಳನ್ನು ದೊರಕಿಸಿಕೊಡುವಲ್ಲಿ ದಲಿತ ಚಳುವಳಿ ಸಫಲವಾಗಿದೆ. ವರ್ಗ ವರ್ಣ ಜಾತಿ ವಿರುದ್ಧದ ಹೋರಾಟದಲ್ಲಿ ಮಾತ್ರ ನಿರೀಕ್ಷಿತ ಪ್ರಗತಿ ಕಾಣಲಿಲ್ಲ.

೨. **ದಲಿತ ಸಾಹಿತ್ಯವು ದಲಿತರನ್ನು ಪ್ರಭಾವಿಸಿದೆಯೇ ಹೇಗೆ?**

ದಲಿತ ಸಾಹಿತ್ಯ ವಿದ್ಯಾವಂತ ದಲಿತರ ಕೆಲ ಭಾಗವನ್ನು ಮಾತ್ರ ತಲುಪಿದೆ. ವಿದ್ಯಾವಂತ ದಲಿತರೆಲ್ಲರೂ ದಲಿತ ಸಾಹಿತ್ಯದಿಂದ ಪ್ರಭಾವಿತರಾಗಿದ್ದಾರೆಂದು ಹೇಳಲಾಗದು. ಅವಿದ್ಯಾವಂತ ದಲಿತರಿಗೆ ದಲಿತ ಸಾಹಿತ್ಯದಲ್ಲಿ ಹಾಡು ಕೆಲವು ನಾಟಕ (ಬೀದಿ ನಾಟಕ) ಮಾತ್ರ ಸಂಘಟನೆ ಇರುವಲ್ಲಿ ಮುಟ್ಟಿದೆ. ಸೃಜನೇತರ ಸಾಹಿತ್ಯ ಮುಟ್ಟಿಲ್ಲ. ಕನ್ನಡ ದಲಿತ ಮತ್ತು ಬಂಡಾಯ ಸಾಹಿತ್ಯಕ್ಕಿಂತ ತೆಲುಗು ದಲಿತ ಸಾಹಿತ್ಯ (ಹಾಡು) ನಮ್ಮ ನಾಡಿನ ದಲಿತರನ್ನು ಮುಟ್ಟಿದ್ದು ಹೆಚ್ಚು. ಆದರೆ ಇದರ ಪ್ರಭಾವ ಪ್ರೇರಕ ಮತ್ತು ಪೂರಕ ಮಾತ್ರ.

೩. **ಮುಂದೆ ದಲಿತ ಚಳುವಳಿ ಮತ್ತು ದಲಿತ ಸಾಹಿತ್ಯ ಯಾವ ದಿಕ್ಕನ್ನು ಹಿಡಿಯಬೇಕೆಂದು ನಿರೀಕ್ಷಿಸುತ್ತೀರಿ?**

ಮುಂದೆ ದಲಿತ ಸಾಹಿತ್ಯ ಮತ್ತು ಚಳುವಳಿ ವೈಜ್ಞಾನಿಕ ಎಡವಾದ ಮತ್ತು ದಲಿತವಾದಗಳ ಬೆಸುಗೆಯಿಂದ ಮಾತ್ರ ಸಮರ್ಥವಾಗಿ ಬೆಳೆಯಬಲ್ಲದೆಂದು ನನ್ನ ನಂಬಿಕೆ. ವೈಜ್ಞಾನಿಕ ಎಡವಾದ ಮಾರ್ಕ್ಸ್-ಎಂಗೆಲ್ಸ್, ಲೆನಿನ್, ಮಾವೋ, ಮೊದಲಾದವರ ಸಿದ್ಧಾಂತ ಮತ್ತು ಹೋರಾಟಗಳಿಂದಲೂ, ದಲಿತವಾದ ಭಾರತದ ಅವೈದಿಕ ಚಳುವಳಿಗಳು ಮತ್ತು ಮುಖ್ಯವಾಗಿ ಅಂಬೇಡ್ಕರ್, ಜ್ಯೋತಿಬಾಫುಲೆ, ಪೆರಿಯಾರ್ ಮೊದಲಾದವರ ಅಭ್ಯಾಸದಿಂದಲೂ ದೊರಕುತ್ತವೆ. ಈ ಕುರಿತ ಹೆಚ್ಚಿನ ವಿವರಕ್ಕೆ ನನ್ನ "ಮಾದರ ಚನ್ನಯ್ಯ ನಾಡಿನಲ್ಲಿ" ಕೃತಿಯ ಲೇಖನಗಳನ್ನು ಗಮನಿಸಿ.

ಎಸ್.ಎಸ್. ಹಿರೇಮಠ

ಕನ್ನಡ ಅಧ್ಯಾಪಕ, ಎ.ಡಿ.ಬಿ. ಪ್ರಥಮದರ್ಜೆ ಕಾಲೇಜು

ಹರಪನಹಳ್ಳಿ, ಬಳ್ಳಾರಿ ಜಿಲ್ಲೆ.

## ೨. ಕರ್ನಾಟಕ ದಲಿತ ಚಳುವಳಿಯ ಕೆಲವು ಸಂಘಟನೆಗಳ ಪಟ್ಟಿ

೧. ಕರ್ನಾಟಕ ದಲಿತ ಸಂಘರ್ಷ ಸಮಿತಿ (ಸಂಚಾಲಕ)

೨. ಕರ್ನಾಟಕ ದಲಿತ ಸಂಘರ್ಷ ಸಮಿತಿ (ಸಂಯೋಜಕ)

(ಅ) ಕರ್ನಾಟಕ ದಲಿತ ವಿದ್ಯಾರ್ಥಿ ಒಕ್ಕೂಟ

(ಆ) ಕರ್ನಾಟಕ ದಲಿತ ಮಹಿಳಾ ಒಕ್ಕೂಟ

(ಇ) ಕರ್ನಾಟಕ ದಲಿತ ಕಲಾಮಂಡಳಿ

(ಈ) ಕರ್ನಾಟಕ ದಲಿತ ನೌಕರರ ಒಕ್ಕೂಟ

೩. ಕರ್ನಾಟಕ ಜನಾಂದೋಲನ ಸಂಘಟನೆ.

೪. ಕರ್ನಾಟಕ ದಲಿತ ಕ್ರಿಯಾವೇದಿಕೆ

೫. ಕರ್ನಾಟಕ ಸಮತಾ ಸೈನಿಕದಳ

೬. ಕರ್ನಾಟಕ ದಲಿತ ಒಕ್ಕೂಟ ಸಮಿತಿ

೭. ಕರ್ನಾಟಕ ದಲಿತ ಕ್ರಿಯಾಸಮಿತಿ (೧೯೭೨)

೮. ಪ್ರಜಾ ವಿಮೋಚನಾ ಚಳುವಳಿ.

೯. ದಲಿತ ಹ್ಯೂಮನ್ ರೈಟರ್ಸ್ ಫೋರಮ್

೧೦. ಕರ್ನಾಟಕ ದಲಿತ ಜಾಗೃತಿ ಸಮಿತಿ.

೧೧. ಅಂಬೇಡ್ಕರ್ ಜಾಗೃತಿ ಮಹಾ ಸಮಿತಿ.

೧೨. ಕರ್ನಾಟಕ ರಾಜ್ಯ ಎಸ್.ಸಿ/ಎಸ್.ಟಿ. ಫೆಡರೇಷನ್

೧೩. ಅಖಿಲ ಕರ್ನಾಟಕ ಡೊಂಬರ ಹಿತವರ್ಧಕ ಸಂಘ

೧೪. ಅಖಿಲ ಕರ್ನಾಟಕ ಕರ್ಮಚಾರಿಗಳ ಸಂಘ (ಸಫಾಯಿ)

### ಕರ್ನಾಟಕದಲ್ಲಿರುವ ದಲಿತ ನೌಕರರ ಸಂಘಟನೆಗಳು

೧೫. ದಲಿತ ಕಾರ್ಮಿಕರ ಸಂಘ (ರಿ) ಕರ್ನಾಟಕ ವಲಯ

೧೬. ಅಖಿಲ ಭಾರತ ಕೆನರಾ ಬ್ಯಾಂಕ್ ಪರಿಶಿಷ್ಟ ಜಾತಿ / ವರ್ಗಗಳ ನೌಕರರ ಸಂಘ

೧೭. ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಪರಿಶಿಷ್ಟ ಜಾತಿ / ವರ್ಗಗಳ ನೌಕರರ ಸಂಘ

೧೮. ಎಚ್.ಎ.ಎಲ್ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ನೌಕರರ ಅಧಿಕಾರಿಗಳ ಸಂಘ

೧೯. ಎನ್.ಜಿ.ಇ.ಎಫ್. ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗಗಳ ಕ್ಷೇಮಾಭಿವೃದ್ಧಿ ಸಂಘ

೨೦. ಕೆ. ಇ. ಬಿ ಪರಿಶಿಷ್ಟ ಜಾತಿ / ಪರಿಶಿಷ್ಟವರ್ಗಗಳ ಕಲ್ಯಾಣ ಸಂಸ್ಥೆ

೨೧. ಭಾರತೀಯ ಅಸ್ಟ್ರಿಫಿಜಿಕ್ಸ್ ಸಂಸ್ಥೆಯ ಪರಿಶಿಷ್ಟ ಜಾತಿ / ಪರಶಿಷ್ಟ ವರ್ಗಗಳ ನೌಕರರ ಕಲ್ಯಾಣ ಸಂಸ್ಥೆ (ರಿ)

೨೨. ಎ.ಡಿ.ಎ. ಪರಿಶಿಷ್ಟಜಾತಿ / ಪರಿಶಿಷ್ಟ ವರ್ಗಗಳ ನೌಕರರ ಸಂಘ (ರಿ)

## ೩. ಸಹಾಯಕ ಗ್ರಂಥಗಳು


೧. ಅಂಬೇಡ್ಕರ್ ಬಿ.ಆರ್., ರಾಮಕೃಷ್ಣ, ಸುಬೋಧಿ ಪ್ರಕಟಣೆ, ೧೯೮೮

೨. ಅನಂತಕುಮಾರ ಹೆಬ್ಬಾರ. ಎಂ. (ಅನು), ರಾಮಚಂದ್ರ ಉಡುಪ ಎನ್. (ಅನು) ಮೂಲ : ಶ್ರೀಪಾದ ಅಮೃತ ಡಾಂಗೆ, ಭಾರತ ಸಂಘ ಜೀವನದಿಂದ ಗುಲಾಮಗಿರಿಗೆ, ಅಭಿವ್ಯಕ್ತಿ ಪ್ರಕಾಶನ, ೧೯೮೩

೩. ಅನಂತಮೂರ್ತಿ ಯು.ಆರ್., ಪೂರ್ವಾಪರ, ಅಕ್ಷರ ಪ್ರಕಾಶನ : ಹೆಗ್ಗೋಡು ೧೯೯೦

೪. ಅರವಿಂದ ಮಾಲಗತ್ತಿ, ಮೂಕನಿಗೆ ಬಾಯಿ ಬಂದಾಗ, ಶೈಲ ಪ್ರಕಾಶನ, ಮುದ್ದೇಬಿಹಾಳ ೧೯೮೧

೫. ಅರವಿಂದ ಮಾಲಗತ್ತಿ, ಕಪ್ಪುಕಾವ್ಯ, ಶೈಲ ಪ್ರಕಾಶನ, ಮುದ್ದೇಬಿಹಾಳ, ೧೯೮೫

೬. ಅರವಿಂದ ಮಾಲಗತ್ತಿ, ದಲಿತ ಸಾಹಿತ್ಯ ಪ್ರವೇಶಿಕೆ, ಶೈಲ ಪ್ರಕಾಶನ, ಮುದ್ದೇಬಿಹಾಳ ೧೯೯೭

೭. ಅರವಿಂದ ಮಾಲಗತ್ತಿ, ಡಾ : ಅಂಬೇಡ್ಕರ್ ವಿಚಾರಧಾರೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೧೯೯೧

೮. ಅರವಿಂದ ಮಾಲಗತ್ತಿ, ದಲಿತ ಸಾಹಿತ್ಯ ಚಳುವಳಿಯ ತಾತ್ವಿಕ ಚಿಂತನ, ಹೊಸದಿಕ್ಕು ಪ್ರಕಾಶನ, ಬೆಂಗಳೂರು ೧೯೮೯

೯. ಅರವಿಂದ ಮಾಲಗತ್ತಿ (ಸಂ), ನಾಲ್ಕು ದಲಿತೀಯ ಕಾದಂಬರಿಗಳು, ಕನ್ನಡ ಸಂಘ ಕ್ರೈಸ್ಟ್ ಕಾಲೇಜು, ಬೆಂಗಳೂರು ೧೯೯೧

೧೦. ಅರವಿಂದ ಮಾಲಗತ್ತಿ, ಗೌರ್ಮೆಂಟ್ ಬ್ರಾಹ್ಮಣ, ಅಕ್ಷರ ಪ್ರಕಾಶನ, ಹೆಗ್ಗೋಡು ೧೯೯೪

೧೧. ಅರವಿಂದ ಮಾಲಗತ್ತಿ, ಕಾರ್ಯ, ಶೈಲ ಪ್ರಕಾಶನ : ಮುದ್ದೇಬಿಹಾಳ ೧೯೮೮

೧೨. ಅರವಿಂದ ಮಾಲಗತ್ತಿ, ಅಂತರ್ಜಾತೀಯ ವಿವಾಹ ಎಷ್ಟು ಪ್ರಗತಿಪರ, ಶೈಲಪ್ರಕಾಶನ : ಮುದ್ದೇಬಿಹಾಳ ೧೯೯೭

೧೩. ಅರವಿಂದ ಮಾಲಗತ್ತಿ, ಸಮುದ್ರದೊಳಗಣ ಉಪ್ಪು, ಅಭಿರುಚಿ ಪ್ರಕಾಶನ : ಮೈಸೂರು ೧೯೯೯

೧೪. ಅರವಿಂದ ಮಾಲಗತ್ತಿ, ನಾದ ನಿನಾದ, ಶೈಲಪ್ರಕಾಶನ : ಮುದ್ದೇಬಿಹಾಳ ೧೯೯೯

೧೫. ಅರವಿಂದ ಮಾಲಗತ್ತಿ, ದಲಿತಯುಗ ಮತ್ತು ಕನ್ನಡ ಸಾಹಿತ್ಯ, ಚೇತನ ಬುಕ್ ಹೌಸ್, ಮೈಸೂರು ೨೦೦೦

೧೬. ಆರಾಧ್ಯ ಬಿ.ಎಂ.ಎಂ., ಪರಿಶಿಷ್ಟ ಜನಾಂಗದವರಿಗೆ ಸಂವಿಧಾನದ ಕೊಡುಗೆ, ಅಪ್ಪು ಪ್ರಕಾಶನ ಬೆಂಗಳೂರು ೧೯೮೫

೧೭. ಎಂಗೆಲ್ಸ್, ಕುಟುಂಬ, ಖಾಸಗಿ ಆಸ್ತಿ ಹಾಗೂ ರಾಜ್ಯ ಇವುಗಳ ಉಗಮ, ನವಕರ್ನಾಟಕ ಪ್ರಕಾಶನ ಬೆಂಗಳೂರು ೧೯೮೦

೧೮. ಕೌಂಚ ಐಲಯ್ಯ, ಗೋವಿಂದ ತಳುವಲ್ಕರ್, ಮಂಗ್ಳೂರ ವಿಜಯ, ವೀರಮಣಿ ಕೆ., ಅಂಬೇಡ್ಕರ್ ಮೇಲೆ ಆಕ್ರಮಣ, (ಡಾ. ಅಂಬೇಡ್ಕರ್ ಬಗ್ಗೆ ತಿರುಚಿ ಬರೆದ ಕೃತಿ : ವರ್‌ಷಿಪಿಂಗ್ ಫಾಲ್ಸ್ ಗಾಡ್ಸ್ ) ಸಂಬುದ್ಧ ಪ್ರಕಾಶನ, ಬೆಂಗಳೂರು

೧೯. ಕುಕ್ಕುರಳ್ಳಿ ಬಸವರಾಜು, ಮೊಕಾರ, ಕನ್ನಡ ಸಂಘ ಕ್ರೈಸ್ಟ್ ಕಾಲೇಜು ಬೆಂಗಳೂರು. ೧೯೯೬

೨೦. ಕುಮಾರ ವೆಂಕಣ್ಣ (ಅನು) ಅಸ್ಪೃಶ್ಯರು, ವಸಂತ ಪ್ರಕಾಶನ ಬೆಂಗಳೂರು ೧೯೬೩

೨೧. ಕೃಷ್ಣಪ್ಪ ಬಿ. ರಾಮದೇವರಾಕೆ (ಸಂ), ಮೀಸಲಾತಿ, ಕರ್ನಾಟಕ ದಲಿತ ಸಂಘರ್ಷ ಸಮಿತಿ ಪ್ರಕಟಣೆ, ಅಶೋಕ್ ಪುರಂ ಮೈಸೂರು ೧೯೮೧

೨೨. ಕೃಷ್ಣಪ್ಪ. ಬಿ., ಕೃಷ್ಣಪ್ಪ ಬಿ. ಚಿಂತನೆಗಳು ಮತ್ತು ಬರಹಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ೧೯೯೯

೨೩. ಕೃಷ್ಣಯ್ಯ ಎಂ.ಡಿ., ಛಲವಾದಿ, ಬೃಂದಾವನ ಮುದ್ರಣ, ಸರಸ್ವತಿ ಪುರಂ, ಮೈಸೂರು ೧೯೭೯

೨೪. ಕೇಶವನ್ ಪ್ರಸಾದ್, ಕಪ್ಪೆ ಹೊಲೆಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೩

೨೫. ಕೋಟಗಾನಹಳ್ಳಿ ರಾಮಯ್ಯ, ಸಿಂದ್ ಮಾದಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೨೬. ಗಂಗಾಧರ ಮೂರ್ತಿ (ಅನು) ನಾರ್ಲ ವಿ.ಆರ್, ಭಾರತೀಯ ಸಂಸ್ಕೃತಿಯ ಜಾತಿ ಲಕ್ಷಣ, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಬೆಂಗಳೂರು ೧೯೮೯

೨೭. ಗಂಗಾಧರ ಮೂರ್ತಿ (ಅನು) ಶರತ್ ಪಾಟೀಲ (ಮೂಲ), ಭಾರತದಲ್ಲಿ ಜಾತಿ ಹೋರಾಟಗಳು, ಕರ್ನಾಟಕದ ದಲಿತ ಸಂಘರ್ಷ ಸಮಿತಿ, ಕೋಲಾರ ೧೯೯೪

೨೮. ಗಂಗಾರಾಂ ಚಂಡಾಳ, ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್, ಚೈತ್ರ ಪ್ರಕಾಶನ, ಚಿಕ್ಕತಿರುಪತಿ

೨೯. ಗಂಗಾರಾಮ ಚಂಡಾಳ, ಚಂಡಾಳರ ಕೂಗು, ವಿಮೋಚನಾ ಪ್ರಕಾಶನ, ಮೈಸೂರು ೧೯೯೦

೩೦. ಗಣೇಶನ್ ಎಸ್., ದಲಿತ ಸಾಹಿತ್ಯ ಚಳುವಳಿ, ಪಂಚಮ ಪ್ರಕಾಶನ, ಬೆಂಗಳೂರು ೧೯೮೨

೩೧. ಗಾಡ್ವಿನ್ ಶರಿ, ದಲಿತ ಕ್ರೈಸ್ತರು, ಕ್ರಿಶ್ಚಿಯನ್ ಇನ್ ಸ್ಟಿಟ್ಯೂಟ್ ಫಾರ್ ದಿ ಸ್ಟಡಿ ಆಫ್ ರಿಲಿಜಿಯನ್ ಅಂಡ್ ಸೊಸೈಟಿ, ಬೆಂಗಳೂರು ೧೯೯೭

೩೨. ಗೋಪಾಲಕೃಷ್ಣಯ್ಯ ಕೆ.ಎಲ್. (ಅನು) ಮೂಲ : ಪಾಲ್ ಎಂ.ಸ್ವೀಜಿ, ಇಲಿಯೋ, ಹ್ಯುಬರ್ ಮನ್, ಸಮಾಜವಾದ ಪರಿಚಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

೩೩. ಗೋಪಿನಾಥ.ಎಂ, ಕೋಮುದಳ್ಳುರಿಯ ಮರ್ಮವೇನು ?, ದಲಿತ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೩

೩೪. ಗೋಪಿನಾಥ್ ಎಂ. (ಅನು) ಮೂಲ ಡಾ. ಬಾಬಾಸಾಹೇಬ ಅಂಬೇಡ್ಕರ್, ಬುದ್ಧ ಮಾರ್ಗದಿ ನಡೆಯೋಣ ವಿಮೋಚನೆ ಪಡೆಯೋಣ, ದಲಿತ ಸಾಹಿತ್ಯ ಸಂಘಟನೆ ನಂ.೫, ಉತ್ತರ ಬೀದಿ ನೀಲಸಂದ್ರ ಬೆಂಗಳೂರು ೧೯೯೮

೩೫. ಚಂದ್ರಶೇಖರ್ ಎಸ್., ಅಂಬೇಡ್ಕರ್ ಮತ್ತು ಗಾಂಧಿ, ಅಕ್ಷರ ಪ್ರಕಾಶನ, ಹೆಗ್ಗೋಡು

೩೬. ಚಂದ್ರಶೇಖರ ಕುಕ್ಕಿಕಟ್ಟೆ, ಬದನವಾಳು ಎಮ್ಮತ್ತೂರಿನಲ್ಲಿ ನಡೆದದ್ದೇನು, ಸಂಕ್ರಾಂತಿ ಪ್ರಕಾಶನ, ಮೈಸೂರು ೧೯೯೩

೩೭. ಚಂದ್ರಶೇಖರ ಪಾಟೀಲ (ಸಂ), ಸಂಕ್ರಮಣ ಸಾಹಿತ್ಯ (ಪ್ರಗತಿಶೀಲ-ನವ್ಯ-ದಲಿತ-ಬಂಡಾಯ ವಿಮರ್ಶಾ ಲೇಖನಗಳ ಸಂಗ್ರಹ) ಸಂಕ್ರಮಣ ಪ್ರಕಾಶನ, ಧಾರವಾಡ ೧೯೯೩.

೩೮. ಚಂದ್ರಶೇಖರ ಪಾಟಿಲ (ಸಂ), ಬಂಡಾಯ ಸಾಹಿತ್ಯ ವಿಶೇಷಾಂಕ, ಸಂಕ್ರಮಣ, ಸಂಕ್ರಮಣ ಪ್ರಕಾಶನ ಧಾರವಾಡ ೧೯೭೯
೩೯. ಚಾರುದತ್ತ, ನಕ್ಸಲ್ಬರಿ, ವಿಮುಕ್ತಿ ಪ್ರಕಾಶನ ೧೯೯೭
೪೦. ಚಿದಾನಂದಮೂರ್ತಿ.ಎಂ., ಕರ್ನಾಟಕ ಸಂಸ್ಕೃತಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೯೧
೪೧. ಚಿನ್ನಸ್ವಾಮಿ.ಬಿ., ಕೊಂಡಿಗಳು ಮತ್ತು ಮುಳ್ಳು ಚೀಲಗಳು, ಭಾಗ್ಯಪ್ರಕಾಶನ, ರಾಜಾಜಿನಗರ, ಬೆಂಗಳೂರು ೧೯೮೯
೪೨. ಚಿನ್ನಸ್ವಾಮಿ.ಬಿ., ಗೋಧೂಳಿ, ಶುಭದ ಪ್ರಕಾಶನ ಜರಗನಹಳ್ಳಿ, ಬೆಂಗಳೂರು ೧೯೯೩
೪೩. ಜನಾರ್ದನ ಎರ್ಪಕಟ್ಟೆ, ದಲಿತ ಚಿಂತನೆ, ಸ್ಮೃತಿ ಪ್ರಕಾಶನ
೪೪. ಜವರಯ್ಯ.ಮ.ನ, ಅತ್ತೆಸೊಸೆ ಆತ್ಮಕಥೆ, ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು ೧೯೮೮
೪೫. ಜವರಯ್ಯ.ಮ.ನ, ಕೇಳು ಜಗಮಾದಿಗ ಹೊಲಯ, ಸಿದ್ಧಾರ್ಥ ಗ್ರಂಥ ಮಾಲೆ, ಮೈಸೂರು ೪೦
೪೬. ಜವರಯ್ಯ.ಮ.ನ, ಪ್ರತಿಪಾದನೆ, ಸಿದ್ಧಾರ್ಥ ಗ್ರಂಥ ಮಾಲೆ, ಮೈಸೂರು
೪೭. ಜವರಯ್ಯ.ಮ.ನ, ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ, ಸಿದ್ಧಾರ್ಥ ಗ್ರಂಥ ಮಾಲೆ, ಮೈಸೂರು ೧೯೯೪
೪೮. ಜವರಯ್ಯ.ಮ.ನ, ಮಾಗಿ, ಸಿದ್ಧಾರ್ಥ ಗ್ರಂಥ ಮಾಲೆ, ಕುವೆಂಪು ನಗರ, ಮೈಸೂರು
೪೯. ಜವರಯ್ಯ, ದಲಿತ ವರ್ಗದ ಶರಣರು ಒಂದು ಅಧ್ಯಯನ, ಸಿದ್ಧಾರ್ಥ ಗ್ರಂಥ ಮಾಲೆ, ಕುವೆಂಪು ನಗರ, ಮೈಸೂರು
೫೦. ಜವರಯ್ಯ.ಮ.ನ., ಜಲ, ಸಿದ್ಧಾರ್ಥ ಗ್ರಂಥ ಮಾಲೆ, ಮೈಸೂರು ೧೯೯೮
೫೧. ಜವರಯ್ಯ.ಮ.ನ., ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ, ಸಿದ್ಧಾರ್ಥ ಗ್ರಂಥ ಮಾಲೆ, ಮೈಸೂರು ೧೯೯೬
೫೨. ಜೋಗನ್ ಶಂಕರ್, ದೇವದಾಸಿ ಸಂಪ್ರದಾಯ, ವಿಮೋಚನಾ ಪ್ರಕಾಶನ, ಅಥಣಿ ೧೯೯೩
೫೩. ಜೋಗನ್ ಶಂಕರ್, ಗ್ರಾಮ ಸಮಾಜ, ಜೀವ ಪ್ರಕಾಶನ ಮೈಸೂರು ೧೯೯೫
೫೪. ದುರ್ಗಾದಾಸ್.ಆರ್.ಕೆ, ಮೂರು ದಲಿತ ಕಮ್ಮಟಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ ನೃಪತುಂಗ ರಸ್ತೆ, ಬೆಂಗಳೂರು ೧೯೯೬.
೫೫. ದುದ್ದ ಶ್ರೀನಿವಾಸ, ಹಕ್ಕಿಳವರ ಮಕ್ಕಳ ಹಾಡು, ತೇಜಸ್ವೀ ಪ್ರಕಾಶನ, ಹೊಳೇನರಸೀಪುರ.
೫೬. ದೇವನೂರು ಮಹಾದೇವ, ದ್ಯಾವನೂರು, ನೆಲಮನೆ ಪ್ರಕಾಶನ, ಮೈಸೂರು ೧೯೮೧.
೫೭. ದೇವನೂರು ಮಹಾದೇವ, ಒಡಲಾಳ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೧೯೮೫.
೫೮. ದೇವನೂರು ಮಹಾದೇವ, ದೇವನೂರು ಮಹಾದೇವ ಅವರ ಕೃತಿಗಳು, ಪತ್ರಿಕಾ ಪ್ರಕಾಶನ, ಬೆಂಗಳೂರು ೧೯೯೨.
೫೯. ದೇವಯ್ಯ ಹರವೆ, ದಲಿತ ಸಾಹಿತ್ಯ ಮತ್ತು ಇತರ ಲೇಖನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೧೯೯೧.
೬೦. ದೇವುಡು, ಕರ್ನಾಟಕ ಸಂಸ್ಕೃತಿ, ಬೆಂಗಳೂರು ಪ್ರೆಸ್, ಮೈಸೂರು ರಸ್ತೆ, ಬೆಂಗಳೂರು ಸಿಟಿ ೧೯೩೫
೬೧. ದೇವೇಂದ್ರ ಕುಮಾರ.ಸಿ. ಹಕಾರಿ, ಡೊಂಬರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೬೨. ದೊಡ್ಡ ಹುಲ್ಲೂರು ರುಕ್ಕೋಜಿ (ಸಂ) ಸದನದಲ್ಲಿ ಸಿದ್ದಲಿಂಗಯ್ಯ, ಮೂಲ ಭಾರತಿ ಪ್ರಕಾಶನ, ಬೆಂಗಳೂರು ೧೯೯೭

೬೩. ನಗರಿ ಬಾಬಯ್ಯ, ಕಗ್ಗತ್ತಲ ಜಗತ್ತಲ್ಲಿ ೯೦ ದಿನ, ಪ್ರಿಯದರ್ಶಿನಿ ಪ್ರಕಾಶನ, ವಿಜಯನಗರ ಬೆಂಗಳೂರು ೧೯೮೭

೬೪. ನಾಗರಾಜ್.ಡಿ.ಆರ್, ಅಮೃತ ಮತ್ತು ಗರುಡ, ಪುಸ್ತಕ ಚಂದನ, ಬೆಂಗಳೂರು ೧೯೮೩

೬೫. ನಾಗರಾಜ್.ಡಿ.ಆರ್, ಸಾಹಿತ್ಯ ಕಥನ, ಅಕ್ಷರ ಪ್ರಕಾಶನ, ಹೆಗ್ಗೋಡು ೧೯೯೬

೬೬. ನಾರಾಯಣ ಸ್ವಾಮಿ (ಅನು) ಬೋಯಿ ಭೀಮನ್ನ (ಮೂಲ), ದಲಿತ ಕೈಪಿಡಿ, ನೆಲಮನೆ ಪ್ರಕಾಶನ, ಮೈಸೂರು ೧೯೭೫

೬೭. ಪುಟ್ಟಯ್ಯ.ಬಿ.ಎಂ., ಅಲಕ್ಷಿತ ವಚನಕಾರರ ಲೋಕದೃಷ್ಟಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯

೬೮. ಪುಟ್ಟಯ್ಯ.ಬಿ.ಎಂ., ದೇವನೂರು ಮಹಾದೇವ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೬

೬೯. ಪುರುಷೋತ್ತಮ ಬಿಳಿಮಲೆ, 'ಬಂಡಾಯ-ದಲಿತ ಸಾಹಿತ್ಯ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೦

೭೦. ಪುರುಷೋತ್ತಮ ಬಿಳಿಮಲೆ, ದಲಿತ ಜಗತ್ತು, ಹೊಸದಿಕ್ಕು ಪ್ರಕಾಶನ, ಬೆಂಗಳೂರು, ೧೯೮೯

೭೧. ಪುರುಷೋತ್ತಮ ಬಿಳಿಮಲೆ, ಶಿಷ್ಟ ಮತ್ತು ಪರಿಶಿಷ್ಟ

೭೨. ಬಂಜಗೆರೆ ಜಯಪ್ರಕಾಶ, ವಸಂತ ಮೇಘ ಘರ್ಜನೆ, ಬೆಳ್ಳಿಚುಕ್ಕಿ ಪ್ರಕಟಣೆಗಳು, ಬೆಂಗಳೂರು, ೧೯೯೦

೭೩. ಬರಗೂರು ರಾಮಚಂದ್ರಪ್ಪ, ಸಂಸ್ಕೃತಿ-ಉಪಸಂಸ್ಕೃತಿ, ಭೂಮಿ ಬಳಗ, ಮೈಸೂರು ೧೯೯೪

೭೪. ಬರಗೂರು ರಾಮಚಂದ್ರಪ್ಪ, ಬಂಡಾಯ ಸಾಹಿತ್ಯ ಮೀಮಾಂಸೆ, ಅನ್ವೇಷಣೆ ಪ್ರಕಾಶ ವಿಜಯನಗರ, ಬೆಂಗಳೂರು ೧೯೯೧

೭೫. ಬರಗೂರು ರಾಮಚಂದ್ರಪ್ಪ, ಗೋರೆಗಾಂವ್ ವಿಚಾರ ಭಾರತಿ ಸಮ್ಮೇಳನ, ಅಧ್ಯಕ್ಷ ಭಾಷಣ ಸಂಸ್ಕೃತಿ: ಶ್ರಮ ಮತ್ತು ಸೃಜನಶೀಲತೆ

೭೬. ಭಗವಾನ್.ಕೆ.ಎಸ್, ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ, ಮಹಿಮ ಪ್ರಕಾಶನ, ಮೈಸೂರು ೧೯೯೦

೭೭. ಮನೋಹರ ಚಂದ್ರಪ್ರಸಾದ್.ಡಿ, ದಲಿತ ಕ್ರೈಸ್ತ ಪ್ರಜ್ಞೆ, ರಚನಾ ಪ್ರಕಾಶನ ೧೯೯೨

೭೮. ಮಹೇಶ.ಸಿ.ಕೆ, ಬಹುಜನ ಸಮಾಜ V/S ಬ್ರಾಹ್ಮಣ್ಯ, ವಿಮೋಚನಾ ಪ್ರಕಾಶನ, ಚಿತ್ರದುರ್ಗ ೧೯೯೪

೭೯. ಮಾಧವ.ಕೆ.ಕೆ., ಸಿದ್ದಲಿಂಗಯ್ಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೫

೮೦. ಮುನಿವೆಂಕಟಪ್ಪ.ವಿ., ಸ್ವಾಭಿಮಾನದ ಬೀಡಿಗೆ, ವಿಚಾರವಾದಿ ಪ್ರಕಾಶನ, ಮೈಸೂರು ೧೯೮೮

೮೧. ಮುನಿವೆಂಕಟಪ್ಪ.ವಿ. (ಸಂ), ದಲಿತ ಚಳುವಳಿ ಒಂದು ಅವಲೋಕನ, ವಿಚಾರವಾದಿ ಪ್ರಕಾಶನ, ಮೈಸೂರು ೧೯೯೮

೮೨. ಮುನಿವೆಂಕಟಪ್ಪ, ಕೆಂಡದ ನಡುವೆ, ಪಂಚಮ ಪ್ರಕಾಶನ, ಲಕ್ಷ್ಮಿನಾರಾಯಣಪುರ, ಬೆಂಗಳೂರು ೧೯೮೨

೮೩. ಮುಳ್ಳೂರು ನಾಗರಾಜ್, ಮರಣ ಮಂಡಳ ಮಧ್ಯದೊಳಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೧೯೯೨

೮೪. ಮುಳ್ಳೂರು ನಾಗರಾಜು, ಬದನವಾಳು ದುರಂತ, ಮುಳ್ಳೂರ್ ಪತ್ರಿಕೆ, ನಂಜನಗೂಡು ೧೯೯೪

೮೫. ಮುಳ್ಳೂರು ನಾಗರಾಜ, ನೆಲದ ಜೋಗುಳ, ವಿಚಾರವಾದಿ ಪ್ರಕಾಶನ, ಮೈಸೂರು ೧೯೯೨

೮೬. ಮೂಡ್ನಾಕೂಡು ಚಿನ್ನಸ್ವಾಮಿ, ನಾನೊಂದು ಮರವಾಗಿದ್ದರೆ, ವಿಶ್ವಾಲಯ, ಬೆಂಗಳೂರು ೧೯೯೮

೮೭. ಮೈಲಾರಪ್ಪ ಬಿ.ಸಿ, ಗ್ರಾಮೀಣ ಬದುಕು ಮತ್ತು ಸಾಮಾಜಿಕ ಚಳುವಳಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೯೮

೮೮. ಮೊಗಳ್ಳಿ, ಗಣೇಶ್, ಬುಗುರಿ, ಪತ್ರಿಕೆ ಪ್ರಕಾಶನ, ಬೆಂಗಳೂರು ೧೯೯೨

೮೯. ಮೊಗಳ್ಳಿ, ಗಣೇಶ್, ಕಥನ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು ೧೯೯೮

೯೦. ಮೊಗಳ್ಳಿ, ಗಣೇಶ್, ದೇಶಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೭

೯೧. ಮೊಗಳ್ಳಿ, ಗಣೇಶ್, ಸೊಲ್ಲು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು ೧೯೯೮

೯೨. ಮೊಗಳ್ಳಿ, ಗಣೇಶ್, ಅತ್ತೆ, ವಿಶ್ವಾಲಯ, ಬೆಂಗಳೂರು ೧೯೯೭

೯೩. ಮೊಗಳ್ಳಿ, ಗಣೇಶ್, ಶತಮಾನ, ಲೋಹಿಯಾ ಪ್ರಕಾಶನ, ಬಳ್ಳಾರಿ ೧೯೯೯

೯೪. ಮೊಗಳ್ಳಿ, ಗಣೇಶ್, ದಲಿತರು ಮತ್ತು ಜಾಗತೀಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯

೯೫. ಯಗಟಿ.ವಿ.ಸಿ., ಸಮಾಜ-ಧರ್ಮ-ಸಂಸ್ಕೃತಿ, ವಿಚಾರ ವಿಕಾಸ ಪ್ರಕಾಶನ, ಧಾರವಾಡ ೧೯೭೫

೯೬. ರಂಗನಾಯಕಮ್ಮ, 'ಮಾರ್ಕ್ಸ್‌ವಾದ'ವೆಂದರೆ ಏನು?, ಮಾರ್ಕ್ಸ್‌ವಾದ ಅಧ್ಯಯನ ಕೇಂದ್ರದ ಪ್ರಕಟಣೆ ೧೯೯೮

೯೭. ರಹಮತ್ ತರೀಕೆರೆ, ಪ್ರತಿಸಂಸ್ಕೃತಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು ೧೯೯೩

೯೮. ರಹಮತ್ ತರೀಕೆರೆ, ಮರದೊಳಗಣ ಕಿಚ್ಚು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೬

೯೯. ರಹಮತ್ ತರೀಕೆರೆ (ಅನು), ವಸಾಹತು ಪ್ರಜ್ಞೆ ಮತ್ತು ವಿಮೋಚನೆ, ಬೆಳ್ಳಿ ಚುಕ್ಕಿ ಬುಕ್ ಟ್ರಸ್ಟ್, ಬೆಂಗಳೂರು ೧೯೯೬

೧೦೦. ರಾಜಶೇಖರ್ .ಜಿ (ಅನು) ದಾರು ಪ್ರತಿಮಾನ ಪೂಜಿವೇ, ಅಸ್ಪೃಶ್ಯರ ಧಾರ್ಮಿಕ ದಂಗೆಯ ಅಧ್ಯಯನ, ಅಕ್ಷರ ಪ್ರಕಾಶನ ಹೆಗ್ಗೋಡು ೧೯೯೩

೧೦೧. ರಾಜಶೇಖರಯ್ಯ.ಎ.ಎಂ (ಸಂ), ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳ ಸಂಪುಟ -೭, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ೧೯೯೮

೧೦೨. ರಾಜಶೇಖರಯ್ಯ.ಎ.ಎಂ (ಸಂ) ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು ಸಂಪುಟ - ೯, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ೧೯೯೮

೧೦೩. ರಾಜೇಶ್ವರ ರಾವ್.ಸಿ., ಶಮೀಮ್ ಫೈಜಿ, ಬಾಬ್ರಿ ಮಸೀದಿ ರಾಮಜನ್ಮ ಭೂಮಿ ವಿವಾದ, ನವಕರ್ನಾಟಕ ಪ್ರಕಾಶನ ೧೯೮೯

೧೦೪. ರಾಮಮನೋಹರ ಲೋಹಿಯಾ, ಉತ್ತರ ದಕ್ಷಿಣ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ೧೯೯೮

೧೦೫. ರಾಮಮನೋಹರ ಲೋಹಿಯಾ, ಭಾಷೆ ಮತ್ತು ಇತಿಹಾಸ (ಸಂಪುಟ ೩), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ೧೯೯೮

೧೦೬. ರಾಮ ಮನೋಹರ ಲೋಹಿಯಾ, ಸ್ವಾತಂತ್ರ್ಯದ ಅಂತರ್ಜಲ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು ೧೯೯೬

೧೦೭. ರಾಮಪ್ರಸಾದ್ ಬಿ.ಎಸ್ (ಅನು) ಗಾಂಧೀಜಿ ಮತ್ತು ಅಸ್ಪೃಶ್ಯರ ವಿಮೋಚನೆ, ಎಸ್.ಬಿ.ಎಸ್.ಪಬ್ಲಿಷರ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು ೧೯೯೩

೧೦೮. ರಾವ ಸಾಹೇಬ ಕಸಬೆ, ದಲಿತ ಚಳುವಳಿ ಒಂದು ಒಳನೋಟ, ನೇಗಿಲ ಪ್ರಕಾಶನ, ಪ್ರಸನ್ನ ಆಗ್ರೋ ಏಜನ್ಸೀಸ್ ಆಳಂದ, ಕಲಬುರ್ಗಿ ೧೯೭೮

೧೦೯. ಲಕ್ಷ್ಮಣ್, ಜಡಿಮಳೆ, ಸಮತಾ ಪ್ರಕಾಶನ, ಬೆಂಗಳೂರು ೧೯೯೨

೧೧೦. ಲಕ್ಷ್ಮಣ್, ಬದುಕು, ಸಮತಾ ಪ್ರಕಾಶನ, ಬೆಂಗಳೂರು ೧೯೯೪

೧೧೧. ವಿಕ್ಟರ್ ಎಸ್ ಡಿಸೋಜ, ಭಾರತದಲ್ಲಿ ಜಾತಿ ಪದ್ಧತಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೭೩

೧೧೨. ವೀರಣ್ಣ ಸಿ, ಕನ್ನಡ ಪ್ರತಿಭಟನೆ ಕಾವ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೧೯೮೧

೧೧೩. ವೆಂಕಟೇಶ ಕುಲಕರಣಿ, ಅಸ್ಪೃಶ್ಯತಾ ನಿವಾರಣಾ ಕಾನೂನು, ಜಾಗೃತಿ ಭಾರತ ಪ್ರಕಾಶನ, ಧಾರವಾಡ ೧೯೭೫

೧೧೪. ಶಂಕರ.ಡಿ.ಎ (ಅನು) ಮುಲ್ಕರಾಜ ಆನಂದ (ಮೂಲ) ಅಸ್ಪೃಶ್ಯ, ಗೀತಾ ಬುಕ್ ಹೌಸ್, ಮೈಸೂರು

೧೧೫. ಶಿವರುದ್ರ ಕಲ್ಲೋಳಕರ, ಹೊಲಗೇರಿ ರಾಜಕುಮಾರ, ಅನಾರ್ಯ ಪ್ರಕಾಶನ, ಧಾರವಾಡ ೧೯೯೫

೧೧೬. ಶಿವರುದ್ರಪ್ಪ.ಜಿ.ಎಸ್ (ಸಂ) ಶ್ರೀಕುವೆಂಪು, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೮೦

೧೧೭. ಶ್ರೀಕಂಠ ಕೂಡಿಗೆ (ಸಂ) ಬಂಡಾಯ ಸಾಹಿತ್ಯ ಚಳುವಳಿ ಹತ್ತುವರ್ಷ, ಕುವೆಂಪು ವಿಶ್ವವಿದ್ಯಾಲಯ, ಬಿ.ಆರ್. ಪ್ರಾಜೆಕ್ಟ್

೧೧೮. ಷೇಕ್ ಅಲಿ. ಬಿ. ಚಂದ್ರಶೇಖರ.ಎಸ್ (ಸಂ), ಕರ್ನಾಟಕ ಚರಿತ್ರೆ (ಸಂಪುಟ:೭), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ೧೯೯೭

೧೧೯. ಸಂಸ ಐತಾಳ (ಅನು) ಕೃಷ್ಣ ಅಯ್ಯರ್.ವಿ.ಆರ್., ದುರ್ಬಲ ವರ್ಗಗಳವರಿಗೆ ನುಡಿಯಲ್ಲಿ ನ್ಯಾಯ ನಡೆಯಲ್ಲಿ ಅನ್ಯಾಯ, ಅಕ್ಷರ ಪ್ರಕಾಶನ : ಹೆಗ್ಗೋಡು ೧೯೮೫

೧೨೦. ಸಬೀಹಾ ಭೂಮಿಗೌಡ, ಕಾರ್ಯ : ವಿಮರ್ಶಾಲೋಕ, ನ್ಯೂ ಸ್ಟಾರ್ ಪಬ್ಲಿಕೇಷನ್

೧೨೧. ಸರಜೂ ಕಾಟ್ಕರ್, ಕನ್ನಡ ಮರಾಠಿ ಸಾಹಿತ್ಯ, ವಿಮೋಚನಾ ಪ್ರಕಾಶನ, ಅಥಣಿ ೧೯೯೬

೧೨೨. ಸಿದ್ಧಯ್ಯ.ಕೆ.ಬಿ., ಬಕಾಲ, ಚಲನ ಪ್ರಕಾಶನ ಸಹಕಾರಿ, ತುಮಕೂರು ೧೯೮೮

೧೨೩. ಸಿದ್ಧಯ್ಯ.ಕೆ.ಬಿ., ಗೋವಿಂದಯ್ಯ ಎಚ್, ನಟರಾಜ ಬೂದಾಳ್ (ಸಂ) ದಲಿತ ಕಾವ್ಯ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೬

೧೨೪. ಸಿದ್ಧಲಿಂಗಯ್ಯ, ಪಂಚಮ ಮತ್ತು ನೆಲಸಮ, ಪಂಚಮ ಪ್ರಕಾಶನ, ಬೆಂಗಳೂರು ೧೯೮೦

೧೨೫. ಸಿದ್ಧಲಿಂಗಯ್ಯ, ಏಕಲವ್ಯ, ಅಜಂತ ಪ್ರಕಾಶನ, ಕೆಂಗೇರಿ ಉಪನಗರ, ಬೆಂಗಳೂರು ೧೯೮೬

೧೨೬. ಸಿದ್ಧಲಿಂಗಯ್ಯ, ಹಕ್ಕಿನೋಟ, ಕಲ್ಯಾಣಿ ಪ್ರಕಾಶನ, ಬೆಂಗಳೂರು ೧೯೯೦

೧೨೭. ಸಿದ್ಧಲಿಂಗಯ್ಯ, ಊರುಕೇರಿ, ಅಕ್ಷರ ಪ್ರಕಾಶನ, ಹೆಗ್ಗೋಡು ೧೯೯೬

೧೨೮. ಸಿದ್ಧಲಿಂಗಯ್ಯ, ಸಾವಿರಾರು ನದಿಗಳು, ಸಮುದಾಯ ಪ್ರಕಾಶನ, ಬೆಂಗಳೂರು.

೧೨೯. ಸಿದ್ಧಲಿಂಗಯ್ಯ, **ಕಪ್ಪು ಕಾಡಿನ ಹಾಡು**, ರೂಪಧ್ವನಿ ಪ್ರಕಾಶನ, ಬೆಂಗಳೂರು ೧೯೮೩

೧೩೦. ಸಿದ್ಧಲಿಂಗಯ್ಯ, **ಹೊಲೆಮಾದಿಗರ ಹಾಡು**, ಮೈತ್ರಿ ಪ್ರಕಾಶನ, ಬೆಂಗಳೂರು ೪೦, ೧೯೮೩

೧೩೧. ಸಿದ್ಧಲಿಂಗಯ್ಯ, **ಅವತಾರಗಳು**, ಪ್ರಿಂಟರ್ಸ್ ಪ್ರಕಾಶನ, ೧೬, ಮಹಾತ್ಮ ಗಾಂಧಿ ರಸ್ತೆ, ಬೆಂಗಳೂರು -೧೯೮೨

೧೩೨. ಸಿದ್ಧಲಿಂಗಯ್ಯ, **ಗ್ರಾಮದೇವತೆಗಳು**, ಮೂಲಭಾರತಿ ಪ್ರಕಾಶನ, ಬೆಂಗಳೂರು ೧೯೯೭

೧೩೩. ಸೋಮಣ್ಣ ಹೊಂಗಳ್ಳಿ, **ತಮಟೆ**

೧೩೪. ಹನುಮಂತಯ್ಯ, **ಅವ್ವ**, ಸಾರಾ ಪಬ್ಲಿಕೇಷನ್ಸ್, ಅರಮನೆ ಗುಟ್ಟಹಳ್ಳಿ ೧೯೯೫

೧೩೫. ಹನುಮಂತಯ್ಯ.ಎಲ್, **ದಲಿತ ಲೋಕದೊಳಗೆ**, ಕರ್ನಾಟಕ ದಲಿತ ಪ್ರಕಾಶನ, ಬೆಂಗಳೂರು ೧೯೯೨

೧೩೬. ಹನುಮಂತಯ್ಯ.ಎಲ್ (ಸಂ), **ಅಂಬೇಡ್ಕರ್ ಕವಿತೆಗಳು**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೨

೧೩೭. ಹನುಮಂತಯ್ಯ.ಎಲ್, **ಅಂಬೇಡ್ಕರ್ ಮತ್ತು ಸಮಕಾಲೀನತೆ**, ವಾಹಿನಿ ಪ್ರಕಾಶನ, ಬೆಂಗಳೂರು ೧೯೯೩

೧೩೮. ಹನುಮಂತಯ್ಯ.ಎಲ್, **ಕಪ್ಪು ಕಣ್ಣಿನ ಹುಡುಗಿ**, ಪಂಚಮ ಪ್ರಕಾಶನ, ಬೆಂಗಳೂರು ೧೯೯೧

೧೩೯. ಹನುಮಂತಯ್ಯ.ಎಲ್, ಚಿನ್ನಸ್ವಾಮಿ.ಬಿ. **ದಲಿತ ಕಥೆಗಳು**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಮತ್ತು ಕರ್ನಾಟಕ, ಸಾಹಿತ್ಯ ಅಕಾಡೆಮಿ ಬೆಂಗಳೂರು ೧೯೯೬

೧೪೦. ಹಸನ್ ನಯೀಂ ಸುರಕೊಡ (ಅನು) ರಾಮ ಮನೋಹರ ಲೋಹಿಯ, **ಜಾತಿಪದ್ಧತಿ**, ಪತ್ರಿಕೆ ಪ್ರಕಾಶನ, ಬೆಂಗಳೂರು ೧೯೮೬

೧೪೧. ಹಿರೇಮಠ ಎಸ್.ಎಸ್.,**ಮಾದಾರ ಚನ್ನಯ್ಯನ ನಾಡಿನಲ್ಲಿ**, ಸಮತಾ ಪ್ರಕಾಶನ, ಹರಪನಹಳ್ಳಿ ೧೯೯೭

೧೪೨. ಹಿರೇಮಠ.ಎಸ್.ಎಸ್., **ಹಬ್ಬಗಳು**, ಸಮತಾ ಪ್ರಕಾಶನ, ಹರಪನಹಳ್ಳಿ

೧೪೩. ಹೊಸೂರು ಮುನಿಶಾಮಪ್ಪ, **ದಲಿತ ಜನರ ಕಿರಣ**, ವಾಹಿನಿ ಪ್ರಕಾಶನ, ಬೆಂಗಳೂರು ೧೯೯೧

೧೪೪. ಹೊಸೂರು ಮುನಿಶಾಮಪ್ಪ, **ಮಾದಾರ ತಾಯಿ**, ವಾಹಿನಿ ಪ್ರಕಾಶನ, ಬೆಂಗಳೂರು

**ಪತ್ರಿಕೆಗಳು**

೧. ಅಂಬೇಡ್ಕರ್ ವಾಹಿನಿ

೨. ಅನ್ವೇಷಣೆ

೩. ಇಬ್ಬನಿ

೪. ಈ ಲೋಕ

೫. ಒಡನಾಡಿ

೬. ಒಡಲಾಳ

೭. ಕಂಸಾಳೆ

೮. ದಲಿತ

೯. ದಲಿತ ಸಂಗಾತಿ

೧೦. ಪಂಚಮ
೧೧. ಪುಸ್ತಕ ಮಾಹಿತಿ
೧೨. ಪ್ರಜ್ಞೆ
೧೩. ಬದುಕು
೧೪. ಬಹುಮತ
೧೫. ರುಜುವಾತು
೧೬. ಲಂಕೇಶ್ ಪತ್ರಿಕೆ
೧೭. ವಿಮುಕ್ತಿ
೧೮. ಶೂದ್ರ
೧೯. ಸಂಕ್ರಮಣ
೨೦. ಸಂಬುದ್ಧ
೨೧. ಸಾಹಿತ್ಯ ಸಂಘರ್ಷ
೨೨. ಸಾಹಿತ್ಯ ಸಂಗಾತಿ

## ಇಂಗ್ಲಿಷ್ ಕೃತಿಗಳು

1. Agrawal.C.B., **'The Harijans in Rebellion'**, Taraporwala, Bombay 1934 .
2. Bailey.F.G., **'Politics and Social change'**, Oxford university press, London 1963.
3. Bam Dev Sharda, (Edited with an Introduction) **Tribes castes and Harijans**, Ajanta Publications, Delhi 1991.
4. Banaji.D.A., **'Slavery in British India'**, Tarapoorwala Sons and Company (2nd ed), Bombay-1933.
5. Desai.A.R.,**Social Background Indian Nationalism**, Popular book depot, Bombay 1959.
6. Dharma Kumar, **Land and cast in South India**, Manohar Publishers and Distributors, 2:6 Ansari Road Daryagani, New Delhi 1992.
7. Ghurge.G.S, **Cast, Class and Occupation**, Popular Book Dept. Bomba-1961.
8. James Massey, **Dalits in India, Religion as a Source of Bondage or Luberation with special reference to Christians**, Manohars Publishers, New Delhi 1995.

9. Jatava.D.R, THE INDIAN SOCIAL SYSTEM, Maratawada university, Aurangabad 1979.
10. Kshirasagar.R.K., DALIT MOVEMENT IN INDIAN AND ITS LEADERS, M.D. Publications Private limited, New Delhi 1994.
11. Krishna Bhardwaj, SOCIAL CHANGE IN INDIA, Arihant publishing house, Jaipur 1995.
12. Lata Murugkar, DALITH PANTHER MOVEMENT IN MAHARASHTRA, A socialogical Appraisal, Sangam book limited 1991.
13. Leila Narayanan, ETHNICITY IN URBAN CONTEXT, Rawat publications 1989.
14. Omvedt Gail, DALITS AND THE DEMOCRATIC REVOLUTION, Sage publications, New Delhi 1994.
15. Omvedt Gail (ed), LAND CAST AND POLITICAL IN INDIAN STATES, Aulhors Guild Publications, New Delhi.
16. Omvedt Gail, CULTURAL REVOLT IN A COLONIAL SOCIETY, Scientific Socialist Edutrast Bombay 1976.
17. Peter Robb (ed), DALIT MOVEMENT AND THE MEANING OF LABOUR IN INDIA 1993.
18. Rajashekara setty.V.T., DALIT MOVEMENT IN KARNATAKA, The Christian Literature Society, Madras 1979.
19. Ramanuja.G, INDIAN LABOUR MOVEMENT, Sterling Publications, New Delhi 1986.
20. Satish K.Sharma (Edited), MULTCULTURALISM, and Ethnicity in clobal context Rawat Publications, Jaipur and New Delhi 1996.
21. Sangeetha Rao.R, CAST SYSTEM IN INDIA, MYTH AND REALITY, New Delhi 1989.
22. Srinivas.M.N (edited and Introduction) 'CASTE' ITS TWENTIETH CENTURY AVATAR Viking penguin India, New Delhi 1996.
23. Upadhyay.H.C, SCHEDULED CAST AND SCHEDULED TRIBES IN INDIA (A Socio Econimic profile), Anmol publication, New Delhi.

